# ಶರಣಕವಿ ಅಂಗಡಿ ಕರವೀರಪ್ಪನವರು : ಬದುಕು-ಬರಹ

ಪಿಎಚ್.ಡಿ.ಪದವಿಗಾಗಿ ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರ ಪಡಿಸಿದ ಮಹಾಪ್ರಬಂಧ


ಸಂಶೋಧಕರು

ರಶ್ಮಿ ಅಂಗಡಿ

ಮಾರ್ಗದರ್ಶಕರು

ಡಾ. ವೀಣಾ ಹೂಗಾರ

ಎಂ.ಎ.,ಪಿಎಚ್.ಡಿ., ಡಿಫ್ ಇನ್ ಬಸವ ಅಧ್ಯಯನ

ಸಹ ಪ್ರಾಧ್ಯಾಪಕರು,

ಕನ್ನಡ ವಿಭಾಗ

ಕೆ.ಎಲ್.ಇ ಸಂಸ್ಥೆಯ

ಜಗದ್ಗುರು ತೋಂಟದಾರ್ಯ ಮಹಾವಿದ್ಯಾಲಯ, ಗದಗ.






ಅಧ್ಯಯನಾಂಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ ೫೮೩ ೨೭೬

ಲಿಂಗಾಯತ ಅಧ್ಯಯನ ಸಂಸ್ಥೆಯ

ಸಂಶೋಧನಾ ಕೇಂದ್ರ,

ಶ್ರೀ ಜಗದ್ಗುರು ತೋಂಟದಾರ್ಯ ಸಂಸ್ಥಾನ ಮಠ.

ಗದಗ - ೫೮೨ ೧೦೧

೨೦೧೨

# ಶರಣಕವಿ ಅಂಗಡಿ ಕರವೀರಪ್ಪನವರು : ಬದುಕು-ಬರಹ

(ಪಿಎಚ್.ಡಿ.ಪದವಿಗಾಗಿ ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರ ಪಡಿಸಿದ ಮಹಾಪ್ರಬಂಧ)


ಸಂಶೋಧಕರು

ರಶ್ಮಿ ಅಂಗಡಿ

ಮಾರ್ಗದರ್ಶಕರು

ಡಾ. ವೀಣಾ ಹೂಗಾರ

ಎಂ.ಎ.,ಪಿಎಚ್.ಡಿ., ಡಿಫ್ಇನ್ ಬಸವ ಅಧ್ಯಯನ

ಸಹ ಪ್ರಾಧ್ಯಾಪಕರು,
ಕನ್ನಡ ವಿಭಾಗ
ಕೆ.ಎಲ್.ಇ ಸಂಸ್ಥೆಯ
ಜಗದ್ಗುರು ತೋಂಟದಾರ್ಯ ಮಹಾವಿದ್ಯಾಲಯ, ಗದಗ.





ಅಧ್ಯಯನಾಂಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

ಲಿಂಗಾಯತ ಅಧ್ಯಯನ ಸಂಸ್ಥೆಯ
ಸಂಶೋಧನಾ ಕೇಂದ್ರ,
ಶ್ರೀ ಜಗದ್ಗುರು ತೋಂಟದಾರ್ಯ ಸಂಸ್ಥಾನ ಮಠ.
ಗದಗ – ೫೮೨ ೧೦೧
೨೦೧೨

# ಶ್ರೀ ಅಂಗಡಿ ಕರವೀರಪ್ಪನವರು



ಜನನ : ೭-೭-೧೮೯೭ ಲಿಂಗೈಕ್ಯ : ೬-೭-೧೯೮೬

# ದೃಢೀಕರಣ ಪತ್ರ

**ಶ್ರೀಮತಿ ರಶ್ಮಿ ಅಂಗಡಿ** ಅವರು ಬರೆದು ಸಾದರಪಡಿಸಿದ **"ಶರಣಕವಿ ಶ್ರೀ ಅಂಗಡಿ ಕರವೀರಪ್ಪನವರು: ಬದುಕು-ಬರಹ"** ಎಂಬ ವಿಷಯ ಕುರಿತು ಸಿದ್ಧ ಪಡಿಸಿದ ಮಹಾಪ್ರಬಂಧ ಮೂಲ ಸಂಶೋಧನಾ ಕೃತಿಯಾಗಿದೆ. ಇವರು ನನ್ನ ಮಾರ್ಗದರ್ಶನದಲ್ಲಿ ಹಂಪಿಯ ಕನ್ನಡ ವಿಶ್ವವಿದ್ಯಾಲಯದ ಲಿಂಗಾಯತ ಅಧ್ಯಯನ ಸಂಸ್ಥೆಯ ಸಂಶೋಧನ ಕೇಂದ್ರದಲ್ಲಿ ಸಂಶೋಧನೆ ಕೈಗೊಂಡಿದ್ದಾರೆ. ಈ ಮಹಾಪ್ರಬಂಧವು ಇಡಿಯಾಗಿ ಇಲ್ಲವೆ ಬಿಡಿಯಾಗಿ ಈ ಮೊದಲು ಎಲ್ಲಿಯೂ ಪ್ರಕಟವಾಗಿಲ್ಲವೆಂದು ಹೇಳುತ್ತ ಈ ಪ್ರಮಾಣ ಪತ್ರ ನೀಡುತ್ತೇನೆ.

**(ಡಾ. ವೀಣಾ ಹೂಗಾರ)**
ಮಾರ್ಗದರ್ಶಕರು,
ಲಿಂಗಾಯತ ಅಧ್ಯಯನ ಸಂಸ್ಥೆ,
ಶ್ರೀ ತೋಂಟದಾರ್ಯ ಮಠ, ಗದಗ

ಸ್ಥಳ: ವಿದ್ಯಾರಣ್ಯ
ದಿನಾಂಕ : ೧೬.೦೬.೨೦೨೨

# ಪ್ರಮಾಣ ಪತ್ರ

ನಾನು ಶ್ರೀಮತಿ ರಶ್ಮಿ ಅಂಗಡಿ, **"ಶರಣಕವಿ ಶ್ರೀ ಅಂಗಡಿ ಕರವೀರಪ್ಪನವರು: ಬದುಕು-ಬರಹ"** ಎಂಬ ವಿಷಯ ಕುರಿತು ಸಿದ್ಧ ಪಡಿಸಿದ ಮಹಾಪ್ರಬಂಧವನ್ನು **ಡಾ. ವೀಣಾ ಹೂಗಾರ** ಅವರ ಮಾರ್ಗದರ್ಶನದಲ್ಲಿ ಲಿಂಗಾಯತ ಅಧ್ಯಯನ ಸಂಸ್ಥೆಯ ಮೂಲಕ ಹಂಪಿಯ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸುತ್ತಿದ್ದೇನೆ. ಪ್ರಸ್ತುತ ಮಹಾಪ್ರಬಂಧವು ನನ್ನ ಸ್ವಂತ ಪರಿಶ್ರಮದ ಫಲವಾಗಿದ್ದು, ಇಡಿಯಾಗಿ ಇಲ್ಲವೆ ಬಿಡಿಯಾಗಿ ಈ ಮೊದಲು ಎಲ್ಲಿಯೂ ಪ್ರಕಟವಾಗಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

ಸ್ಥಳ: ವಿದ್ಯಾರಣ್ಯ

ದಿನಾಂಕ : ೧೬.೦೬.೨೦೨೨

**(ರಶ್ಮಿ ಅಂಗಡಿ)**

ಸಂಶೋಧಕರು,

ಲಿಂಗಾಯತ ಅಧ್ಯಯನ ಸಂಸ್ಥೆ,

ಶ್ರೀ ತೋಂಟದಾರ್ಯ ಮಠ, ಗದಗ

## ನುಡಿ ನಿವೇದನೆ

"ಶರಣಕವಿ ಶ್ರೀ ಅಂಗಡಿ ಕರವೀರಪ್ಪನವರು : ಬದುಕು-ಬರಹ" ಎನ್ನುವ ಶೀರ್ಷಿಕೆಯನ್ನು ಹೊತ್ತ ಮಹಾಪ್ರಬಂಧವನ್ನು ಹಂಪಿ ವಿಶ್ವವಿದ್ಯಾಲಯದ ಅನುಮೋದನೆಗಾಗಿ, ಗದುಗಿನ ತೋಂಟದಾರ್ಯ ಮಠದ ಲಿಂಗಾಯತ ಅಧ್ಯಯನ ಸಂಸ್ಥೆಯ ಮೂಲಕ ಡಾ. ವೀಣಾ ಹೂಗಾರ ಅವರ ಮಾರ್ಗದರ್ಶದಲ್ಲಿ ಸಲ್ಲಿಸುತ್ತಿರುವೆ. ಈ ಮೂಲಕ ಉತ್ತರ ಕರ್ನಾಟಕದ ಭಾಗದಲ್ಲಿ ಶರಣ ಸಾಹಿತ್ಯಕ್ಕೆ, ಶಿಕ್ಷಣಕ್ಕೆ, ಸಾಮಾಜಿಕ ಬದಲಾವಣೆಗೆ, ಧಾರ್ಮಿಕ ಸಂವೇದನೆಗಳನ್ನು ಉಳಿಸುವಲ್ಲಿ ಅತ್ಯಮೂಲ್ಯ ಸೇವೆ ಸಲ್ಲಿಸಿದ ಮಹಾಚೇತನರ ಬದುಕು-ಬರಹವನ್ನು ಅನಾವರಣವನ್ನು ಮಾಡಿದಂತಾಗಿದೆ.

ಮೊಮ್ಮಗಳಾಗಿ ನಾನು ಕ.ಬ.ಅಂಗಡಿಯವರನ್ನು ಅತಿ ಹತ್ತಿರದಿಂದ ನೋಡಿದ್ದೇನೆ. ಅವರ ಸಂಜೆಯ ವಚನ-ವಾಚನದ ಸವಿರುಚಿಯನ್ನು ಸವಿದಿದ್ದೇನೆ. ಅವರು ನನ್ನ ಅಜ್ಜನವರು. ಇದೊಂದು ದೊಡ್ಡ ಸುಕೃತ. ಅವರ ಕಿರಿಯ ಮಗ ಹೆಸರಾಂತ ಕವಿಗಳಾದ ಉಮೇಶ ಅಂಗಡಿಯವರು ನನ್ನ ತಂದೆಯವರು. ಅಜ್ಜ-ಅಪ್ಪ ಅವರ ಸಾಹಿತ್ಯಿಕ ಪರಿಸರದಲ್ಲಿ ಬೆಳದ ನಾನು ಅವರ ಕುರಿತು ಪಿಎಚ್.ಡಿ ಅಧ್ಯಯನ ಮಾಡುತ್ತೇನೆ ಎನ್ನುವುದು ಕನಸು ಮನಸಲ್ಲೂ ಇರಲಿಲ್ಲ. ಆದರೆ ಆ ಸುಕೃತ ನನ್ನ ಪಾಲಿಗಿದೆ ಅದು ನನ್ನ ಪೂರ್ವದ ಪುಣ್ಯವೆಂದೇ ಭಾವನೆ.

ಕ.ಬ.ಅಂಗಡಿಯವರು ನನ್ನ ಅಜ್ಜನವರಾದರೂ ನಾನು ಅವರ ಒಡನಾಡಿಯಾಗಿ ಬೆಳೆದ್ದು ತುಂಬಾ ಸಣ್ಣ ವಯಸ್ಸಿನಲ್ಲಿ. ಅವರೊರ್ವ ಭಕ್ತಕವಿ, ಶರಣ-ಸಜ್ಜನನೆಂಬ ತಿಳುವಳಿಕೆ ನನ್ನಲ್ಲಿ ಮೂಡುವಂತಹ ವಯಸ್ಸಲ್ಲದ ಕಾಲದಲ್ಲಿ. ವಿಷಯವನ್ನು ಅಧ್ಯಯನದ ದೃಷ್ಟಿಯಿಂದ ಸಾರಲೇಖದ ರೂಪ ನೀಡಿದಾಗ ನಿಜವಾಗಿಯೂ ನನಗೆ ಅವರ ಬದುಕು ಬರಹಗಳ ಬಗೆಗೆ ಅರಿವು ಮೂಡಲು ಪ್ರಾರಂಭವಾಯಿತು. ಅಜ್ಜನೆಂಬ ಸಂಬಂಧದ ಹೊರತಾಗಿ ನಾನು ಅವರನ್ನು ಬೇರೆ ಬೇರೆ ದೃಷ್ಟಿಕೋನಗಳಿಂದ ನೋಡುವಂತಾಯಿತು. ಅಲ್ಲಿ ಒಂದು ವಿಸ್ಮಯ, ಅಲ್ಲಿ ಒಂದು ಹೆಮ್ಮೆ, ಅಲ್ಲಿ ಒಂದು ಚೈತನ್ಯ ನನ್ನನ್ನು ಸದಾ ಜಾಗೃತಳಾಗಿ ಕಾರ್ಯವನ್ನು ಮಾಡುವಂತೆ ಪ್ರೇರೆಪಿಸುತ್ತಿತ್ತು.

ತೋಂಟದ ಸಿದ್ಧಲಿಂಗನ ಸೇವೆಯಿಂದ ದಿನಂಪ್ರತಿ ಅವರ ಬದುಕು ಪ್ರಾರಂಭವಾಗುತ್ತಿತ್ತು. ಮುರಗೋಡ ಮಹಾಂತನ ಕೈಂಕರ್ಯದಲ್ಲಿ ಸದಾ ನೆಲೆ ನಿಲ್ಲುತ್ತಿತ್ತು. ಅವರ ಪರಮಾಶೀರ್ವಾದ ಪರಿಯೇ ಈ ಮಹಾಪ್ರಬಂಧ ಎನ್ನುವುದು ನನ್ನ ಅನಿಸಿಕೆ. ಲಿಂಗಾಯತ ಅಧ್ಯಯನ ಸಂಸ್ಥೆ ತನ್ನ ಸೇವಾಕಾಂಕ್ಷಿಯ ಬದುಕು-ಬರಹವನ್ನು ದಾಖಲಿಸುವ ಕಾರ್ಯವನ್ನು ತನ್ನಂಗಳದಿಂದಲೇ ಪ್ರಾರಂಭಿಸಿದೆ. ಇದು ಅವರ ಮುಗ್ಧ ಭಕ್ತಿಯ ಫಲಪ್ರದವು. ಮಠದ ಸಾತ್ವಿಕ ಸದ್ಭಕ್ತರಾದ ಅಂಗಡಿಯವರ ಜೀವನ-ಸಾಧನೆ ಬರಹದ ರೂಪದಲ್ಲಿ ಸಿದ್ಧಲಿಂಗ ಯತಿಗಳ ಅನುಷ್ಠಾನ ಸ್ಥಳದಿಂದ ಪ್ರಾರಂಭಗೊಂಡಿದ್ದು ಒಂದು ತಾರ್ಕಿಕಾಂಶವೇ ಸರಿ.

ನನ್ನ ಇಡಿಯಾದ ಬಂಧು-ಬಳಗ ನನ್ನ ಈ ಕಾರ್ಯಕ್ಕೆ ಎಲ್ಲ ರೀತಿಯಿಂದಲೂ ಸ್ಪಂದಿಸಿತು. ಕ.ಬ.ಅಂಗಡಿಯವರ ಜೀವನ ಚರಿತ್ರೆಯ ನಿರೂಪಣೆಯಲ್ಲಿ ಸಮಗ್ರತೆ ಬರಲು ಸಾಧ್ಯವಿದ್ದಷ್ಟೂ ಅವರನ್ನು ಬಲ್ಲ ವ್ಯಕ್ತಿಗಳನ್ನು ಕಂಡು ಮಾತನಾಡಿಸಿ, ಪತ್ರಗಳನ್ನು ಕೂಡಿಸಿ, ಈಗಾಗಲೇ ಅವರ ಕುರಿತು ಪ್ರಕಟವಾದ ಗ್ರಂಥ ಹಾಗೂ ಲೇಖನಗಳನ್ನು ಅಭ್ಯಸಿಸಿ, ಈ ಕಾರ್ಯವನ್ನು ನಾನಿಲ್ಲಿ ನಿರ್ವಹಿಸಿದ್ದೇನೆ. ಅಷ್ಟಾಗಿಯೂ ಅವರ ಬದುಕು ಬರಹವನ್ನು ಪರಿಪೂರ್ಣವಾಗಿ ಸಾದರಪಡಿಸಿದ್ದೇನೆ ಎನ್ನುವ ಶಕ್ತಿ ಸಾಮರ್ಥ್ಯ ನನ್ನಲ್ಲಿಲ್ಲ. ವಿಷಯ ಸಂಗ್ರಹಿಸುವಲ್ಲಿ ನನ್ನ ಬುದ್ಧಿ-ಭಾವಗಳಿಗಿರುವ ಪರಿಮಿತಿ, ಕಾಲದ ಪರಿಮಿತಿ ಮತ್ತು ಅರಿತದ್ದನ್ನು ಭಾಷೆಗೆ ಅಳವಡಿಸುವಲ್ಲಿ ನನಗಿರುವ ಭಾಷಾಜ್ಞಾನದ ಪರಿಮಿತಿಗಳು ಕೂಡ ಇಲ್ಲಿ ಅವ್ಯಕ್ತವಾಗಿವೆ. ಒಂದು ಸಾಹಿತ್ಯ ಪ್ರಕಾರದಲ್ಲಿ ಮೂಡಿ ಬಂದ ವ್ಯಕ್ತಿ ಚಿತ್ರಕ್ಕಿಂತ ಜೀವನವು ಯಾವಾಗಲೂ ದೊಡ್ಡದು ಎಂಬುದರ ಅರಿವು ನನಗಿದೆ.

ಅಂಗಡಿಯವರ ಕೃತಿಗಳ ಅಧ್ಯಯನ ಅಷ್ಟು ಸರಳವಾದುದಲ್ಲ. ಬಸವಾದಿ ಪ್ರಮಥರನ್ನು ಹಿನ್ನೆಲೆಯಾಗಿಟ್ಟುಕೊಂಡು ಆಧ್ಯಾತ್ಮಿಕ ಮತ್ತು ಅನುಭಾವಗಳ ನೆಲೆಯಲ್ಲಿ ಅವರ ಚಿಂತನೆ ಸಾಗಿರುತ್ತದೆ. ಅಲ್ಲಿ ವೀರಶೈವ ತತ್ವಗಳ ವಿಚಾರ ವಿಮರ್ಶೆಗಳನ್ನು ಸ್ಪಂದಿಸಿರುತ್ತವೆ. ಅವರ ಒಂದೊಂದು ಸಾಹಿತ್ಯ ಪ್ರಕಾರಗಳ ಮೇಲೆಯೆ ಒಂದೊಂದು ವಿಮರ್ಶೆ, ತೌಲನಿಕ ಅಧ್ಯಯನಗಳನ್ನು ಕೈಗೊಳ್ಳಬಹುದಾಗಿದೆ. ಹೀಗಾಗಿ ಅವರ ಕೃತಿಗಳನ್ನು ಒಳಹೊಕ್ಕು ನೋಡುವುದು ಸಾಹಸದ ಕೆಲಸವಾಗಿದೆ. ನನ್ನ ಬುದ್ಧಿಮತ್ತೆಯ ಮೇರೆಗೆ ನಿಲುಕಿದಷ್ಟು ಅವರ ಕೃತಿಗಳ ಒಳನೋಟವನ್ನು ವಿಶದಪಡಿಸಿದ್ದೇನೆ. ಆದರೆ ಅವುಗಳ ಹೊರ ನೋಟವನ್ನಷ್ಟೇ ಕಂಡುಕೊಂಡಂತೆ ನನಗೆ ಭಾಸವಾಗುತ್ತದೆ. ಯಾಕೆಂದರೆ ಸಾಧನೆಯ ವಿಷಯ ಬರೀ ಓದಿನಿಂದಲೇ ತಿಳಿದುಕೊಳ್ಳುವಂತಹುದಲ್ಲ. ಅನುಭವ ಮತ್ತು ಅನುಭಾವಗಳ ಸಾಂದ್ರತೆ ಅಲ್ಲಿ ಹೆಚ್ಚು ಕಾರ್ಯ ನಿರ್ವಹಿಸುತ್ತದೆ. ಅವರ ಕೃತಿಗಳ ಸಮೀಕ್ಷೆಯನ್ನು ಪ್ರಾಮಾಣಿಕ ಪ್ರಯತ್ನದಿಂದ ಮಾಡಿದ್ದೇನೆ ಎಂದು ವಿನಮ್ರವಾಗಿ ಹೇಳಬಯಸುತ್ತೇನೆ.

ಈ ಮಹತ್ವದ ಕಾರ್ಯಕ್ಕೆ ಕ.ಬ.ಅಂಗಡಿಯವರನ್ನು ಬಹಳ ಹತ್ತಿರದಿಂದ ನೋಡಿದ ನಮ್ಮ ಗದುಗಿನ ತೋಂಟದಾರ್ಯ ಮಠದ ಡಾ. ಸಿದ್ಧಲಿಂಗ ಮಹಾಸ್ವಾಮಿಗಳು ಮತ್ತು ಮುಂಡರಗಿಯ ಅನ್ನದಾನೀಶ್ವರ ಮಹಾಸ್ವಾಮಿಗಳು ಸಂದರ್ಶನ ನೀಡಿದ್ದು, ಅವರಿಗೆ ನನ್ನ ಭಕ್ತಿ ಪೂರ್ವಕ ಪ್ರಣಾಮಗಳು. ಮುರಗೋಡದ ಮಹಾಂತ ಶಿವಯೋಗಿಗಳ ಸದ್ಭಕ್ತರಾದ ಅಂಗಡಿಯವರು ಮುರಗೋಡದಲ್ಲಿ ಕೈಗೊಂಡ ಹಲವಾರು ಕಾರ್ಯಗಳನ್ನು ಸಾಕ್ಷೀಕರಿಸುವ ಭಾವಚಿತ್ರಗಳನ್ನು ನೀಡಿ, ಅವರ ಬಗೆಗೆ ಮೆಚ್ಚುಗೆಯ ಮಾತುಗಳನ್ನಾಡಿದ ನೀಲಕಂಠ ಮಹಾಸ್ವಾಮಿಗಳಿಗೆ, ಧಾರವಾಡ ಮುರುಘಾಮಠದ ಶ್ರೀಗಳಾದ ಮಲ್ಲಿಕಾರ್ಜುನ ಮಹಾಸ್ವಾಮಿಗಳಿಗೆ, ರೋಣದ ಗುಲಗಂಜಿ ಮಠದ ಶ್ರೀಗಳಾದ ಗುರುಪಾದ ಸ್ವಾಮಿಗಳಿಗೂ, ಹೊಸಳ್ಳಿ ಬೂದಿ ಮಹಾಂತ ಮಠದ ಅಭಿನವ ಬೂದಿ ಮಹಾಂತ ಶ್ರೀಗಳಿಗೂ, ನವಿಲುಗುಂದದ ಗವಿಮಠದ ಶ್ರೀಗಳಿಗೂ, ಗೊಡಚಿ ಶ್ರೀಕ್ಷೇತ್ರದ

ಸಂಚಾಲಕರಿಗೂ, ಶಿವಯೋಗ ಮಂದಿರದ ಸೇವಾಸಕ್ತರಾದ ಚರಂತಿಮಠ ಅವರಿಗೂ ಅವರಿಗೆ ನನ್ನ ಭಕ್ತಿ ಪೂರ್ವಕ ಪ್ರಣಾಮಗಳು.

ನನ್ನ ಮಹಾಪ್ರಬಂಧದ ಕಾರ್ಯಕ್ಕೆ ಸಹಕಾರ ನೀಡಿದ ಹಲವಾರು ವ್ಯಕ್ತಿಗಳನ್ನು, ಶಕ್ತಿಗಳನ್ನು ಇಲ್ಲಿ ನೆನಯುವುದು ಸ್ತುತ್ಯಾರ್ಹ. ಮೊದಲಿಗೆ ನನ್ನ ಮಾರ್ಗದರ್ಶಿಗಳಾದ ಡಾ.ವೀಣಾ ಹೂಗಾರ ಅವರನ್ನು ನಾನು ಸ್ಮರಿಸುತ್ತೇನೆ. ನಾನು ಮೂಲತಃ ವಿಜ್ಞಾನ – ತಂತ್ರಜ್ಞಾನ ಅಭ್ಯಾಸಿ. ನನ್ನಲ್ಲಿದ್ದ ಸಾಹಿತ್ಯದ ಒಲವು ಮತ್ತು ಅಭಿರುಚಿ ನನ್ನನ್ನು ಈ ಕಡೆಗೂ ಕೃಷಿಗೈಯುವಂತೆ ಮಾಡಿತು. ಆದರೆ ಮಣ್ಣಿನ ಮುದ್ದೆಯಂತಿದ್ದ ನನ್ನನ್ನು ಒಂದು ಮೂರ್ತಿಯನ್ನಾಗಿ ಮಾಡಿದ ಶ್ರೇಯಸ್ಸು ಅವರಿಗೆ ಸಲ್ಲುತ್ತದೆ. ನನ್ನಲ್ಲಿದ್ದ ಭಾವನಾತ್ಮಕ ಬರಹವನ್ನೂ, ಕ್ಲಿಷ್ಟ ಶೈಲಿಯನ್ನು ಸರಳೀಕರಿಸಿ, ನನ್ನಲ್ಲಿ ಒಂದು ಬಗೆಯ ಹುಮ್ಮಸ್ಸನ್ನು ಮತ್ತು ಆತ್ಮವಿಶ್ವಾಸವನ್ನು ತುಂಬಿದರು. ತಮ್ಮ ಬಿಡುವಿಲ್ಲದ ಕಾರ್ಯಗಳ ನಡುವೆ ನನ್ನ ದಿನಂಪ್ರತಿ ಕರೆಗಳಿಗೆ ಸಂಯಮವಾಗಿ ಸ್ಪಂದಿಸುತ್ತ, ನನ್ನನ್ನು ತಮ್ಮ ಮನೆಯ ಸದಸ್ಯರಂತೆ ಕಂಡ ಅವರಿಗೆ ನಾನು ಚಿರಋಣಿ. ಅವರೊಂದಿಗೆ ನಡೆಸಿದ ಹಲವಾರು ಬಾರಿಯ ಸಂದರ್ಶನಗಳು ನನ್ನ ಮನದ ಪಟಲದಲ್ಲಿ ಹೊಸ ಆಯಾಮವನ್ನೇ ನೀಡುತ್ತಿದ್ದವು. ನಾನು ಅಧ್ಯಯನದಲ್ಲಿ ಸದಾ ಮಗ್ನವಾಗಿರುವಂತೆ ಪರಿಸರವನ್ನು ನಿರ್ಮಾಣ ಮಾಡಿದರು. ಅವರಿಗೆ ಈ ಮೂಲಕ ಕೃತಘ್ನತೆಗಳನ್ನು ಸಲ್ಲಿಸಲು ಬಯಸುತ್ತೇನೆ.

ಈ ಮೂಲಕ ನಾನು ಲಿಂಗಾಯತ ಅಧ್ಯಯನ ಸಂಸ್ಥೆಯ ಪ್ರತಿಯೊಬ್ಬ ಸದಸ್ಯರನ್ನೂ ಸ್ಮರಿಸುತ್ತೇನೆ. ಅಧ್ಯಯನ ಸಂಸ್ಥೆಯಲ್ಲಿ ಮಾರ್ಗದರ್ಶಿಗಳಾಗಿ ಕಾರ್ಯ ನಿರ್ವಹಿಸುತ್ತಿರುವ ಡಾ. ವೀರಣ್ಣ ರಾಜೂರ ಅವರ ಮಮಕಾರಪೂರ್ಣ ಸಹಕಾರವನ್ನು, ಕಾಲಕಾಲಕ್ಕೇ ನೀಡಿ ನನ್ನ ಗುರಿಯನ್ನು ತಲುಪುವಲ್ಲಿ ಪ್ರೇರಕರಾಗಿರುವ ಅವರಿಗೆ ನನ್ನ ಅಭಿವಂದನೆಗಳು. ಕ.ಬ.ಅಂಗಡಿಯವರ ಬಗೆಗೆ ವಿಶೇಷ ಕಾಳಜಿಯನ್ನು ತೋರಿ ಅವರ ಬದುಕು–ಬರಹಗಳು ಸಮಾಜದ ಮುಖ್ಯವಾಹಿನಿಗೆ ಬರಬೇಕು ಎಂದು ಬಯಸಿದ್ದ ಮತ್ತು ಪ್ರೀತಿ, ವಿಶ್ವಾಸಗಳಿಂದ ಮಗಳಂತೆ ಕಂಡ ಲಿಂ. ಡಾ. ಬಸವರಾಜ ಗೊರವರ ಅವರನ್ನು ಇಲ್ಲಿ ಸ್ಮರಿಸುತ್ತೇನೆ. ನನ್ನನ್ನು ಸಮಯ ಪರಿಪಾಲನೆಯಲ್ಲಿ ಮತ್ತು ಅಧ್ಯಯನ ಸಂಸ್ಥೆಯ ಪ್ರಕ್ರಿಯೆಗಳಲ್ಲಿ ಸದಾ ಜಾಗೃತವಾಗಿರುವಂತೆ ಮಾಡಿದ ಲಿಂಗಾಯತ ಅಧ್ಯಯನ ಸಂಸ್ಥೆಯ ಸಂಯೋಜಕರಾದ ಡಾ. ಅರ್ಜುನ ಗೊಳಸಂಗಿಯವರನ್ನು, ಪ್ರೊ ಚಂದ್ರಶೇಖರ ವಸ್ತ್ರದ ಅವರನ್ನೂ, ಡಾ. ಬಿ.ವ್ಹಿ.ಶಿರೂರ ಅವರನ್ನೂ, ಡಾ. ಪಿ.ಕೆ.ರಾಠೋಡ ಅವರ ಸಕಾಲಿಕ ಸಲಹೆ ಸೂಚನೆಗಳು ನನ್ನ ಈ ಕಾರ್ಯಕ್ಕೆ ಪೋಷಣೆಯನ್ನಿತ್ತಿವೆ. ಅದಕ್ಕಾಗಿ ಅವರಿಗೆ ನಾನು ಚಿರಋಣಿ.

ಪಿಎಚ್.ಡಿ ಪ್ರಬಂಧಕ್ಕೆ ಬೇಕಾಗುವಷ್ಟು ವಸ್ತು–ಪರಿಕರಗಳು ಕ.ಬ.ಅಂಗಡಿಯವರ ಬದುಕಿನಿಂದ ಹೆಕ್ಕಿ ತೆಗೆಯಬಹುದು ಎಂದು ಬಲವಾಗಿ ನಂಬಿದ್ದ ನನ್ನ ತಂದೆ ಉಮೇಶ ಅಂಗಡಿಯವರು ಈ ಕಾರ್ಯಕ್ಕೆ ಮೂಲ ಪುರುಷರೆಂದರೆ ತಪ್ಪಲ್ಲ. ಅವರ ಅಭಿಲಾಶೆಯಂತೆ ಈ ವಿಷಯಕ್ಕೆ ರೆಕ್ಕೆ–ಪುಕ್ಕವನ್ನು ಕೊಟ್ಟವರು ಡಾ.ವೀರಣ್ಣ

ರಾಜೂರ ಅವರು. ಆದರೆ ನಾನು ಈ ವಿಷಯಕ್ಕೆ ನ್ಯಾಯ ಒದಗಿಸಬಲ್ಲೇನೆ ಎಂಬ ಅನುಮಾನದಿಂದ ಈ ವಿಷಯವನ್ನು ನನ್ನ ಅಧ್ಯಯನದ ವಿಷಯವನ್ನಾಗಿ ಆಯ್ಕೆ ಮಾಡಿಕೊಂಡೆನು. ಈ ಪ್ರಬಂಧದ ಆಶಯವನ್ನು ಬದುಕಿನುದ್ದಕ್ಕೂ ಜೀವಂತವಾಗಿಟ್ಟುಕೊಂಡು ಬಂದ, ನನ್ನ ಪ್ರಬಂಧಕ್ಕೆ ಸಾಮಗ್ರಿಯನ್ನು ಒದಗಿಸಿಕೊಟ್ಟ, ಕಾಲಕಾಲಕ್ಕೆ ಸೂಕ್ತ ಸಲಹೆಗಳನ್ನು ನೀಡಿದ ನನ್ನ ತಂದೆಗೆ ನಾನು ಸದಾ ಚಿರಋಣಿ.

ನನ್ನ ಅಸ್ತಿತ್ವ ನನ್ನ ತಾಯಿ ಶ್ರೀಮತಿ ಅಕ್ಕಮಹಾದೇವಿ ಅಂಗಡಿಯವರು. ಅವರ ವಿನಃ ಈ ಕನಸು-ನನಸಾಗುತ್ತಿರಲೇ ಇಲ್ಲ. ಅವರ ಅದಮ್ಯ ಪ್ರೀತಿ, ವಿಶ್ವಾಸ, ಮತ್ತು ತ್ಯಾಗದ ಗುಣಶೀಲವು ನನ್ನ ಈ ಕಾರ್ಯವನ್ನೂ ಯಾವುದೇ ಹಂಗಿಲ್ಲದೆ ಮುಂದುವರೆಸಿಕೊಂಡು ಹೋಗುವಂತೆ ಮಾಡಿತು. ಅವರ ಕಣ್ಣುಗಳಲ್ಲಿ ನಾನು ಈ ಕನಸನ್ನು ದಿನಂಪ್ರತಿಯೂ ಕಾಣುತ್ತಿದೆ. ಒಂದು ರೀತಿ ಅವರು ನನ್ನ ಮನೆಯ ಮತ್ತು ನನ್ನ ಮನದ ಆಲದ ಮರವೇ. ಅವರಿಗೂ ನಾನು ಚಿರಋಣಿ.

ಬದುಕಿನ ನನ್ನ ಎಲ್ಲ ಕನಸುಗಳಿಗೆ ಎರಡು ಕಣ್ಣುಗಳಾಗಿ ನಿಲ್ಲುವವರು ನನ್ನ ಸಹೋದರರಾದ ಸಿದ್ಧಲಿಂಗೇಶ ಅಂಗಡಿ(ಎಂ.ಬಿ.ಎ) ಮತ್ತು ವೀರೇಶ ಅಂಗಡಿ(ಬಿ.ಇ). ನನ್ನ ಈ ಕಾರ್ಯದಲ್ಲಿ ಅವರ ಅಪರಿಮಿತ ಶ್ರಮ ನನಗಷ್ಟೇ ಗೊತ್ತು. ಅವರಿಬ್ಬರು ನನ್ನ ಈ ಕನಸಿಗೆ ಬಲ ನೀಡಿದವರು. ನನ್ನ ಮಾನಸಿಕ ಸ್ಥೈರ್ಯಕ್ಕೆ ಅವರೇ ಕಾರಣರು. ಅವರಿಬ್ಬರೂ ಇಲ್ಲಿ ಸ್ಮರಣೀಯರು.

ಮಹಾಪ್ರಬಂಧದ ಕಾಲಾವಧಿಯಲ್ಲಿಯೇ ನನ್ನ ಜೀವನದ ಬಾಳಸಂಗಾತಿಯಾಗಿ ಕೈಹಿಡಿದ ನನ್ನ ಪತಿ ಸುರೇಶ ಬಳಿಗಾರ್ ಅವರು ನನ್ನ ಈ ಮಹತ್ತರ ಕಾರ್ಯವನ್ನು ಸದಾ ಬೆಂಬಲಿಸಿ, ತಮ್ಮ ಅತ್ಯಮೂಲ್ಯ ಸಮಯವನ್ನು ಈ ಮಹಾಪ್ರಬಂಧಕ್ಕೆ ಮೀಸಲಿರಿಸಿ ನನ್ನ ಬೆಂಗಾವಲಾಗಿದ್ದಾರೆ. ಅವರಿಗೆ ನನ್ನ ಹೃತ್ಪೂರ್ವಕ ನಮನಗಳು.

ಕ.ಬ.ಅಂಗಡಿಯವರ ಹಿರಿಯ ಮಗನಾದ ನಿವೃತ್ತ ಚೀಫ್ ಇಂಜನೀಯರ್ ಎಸ್.ಕೆ.ಅಂಗಡಿಯವರಿಗೂ, ಸೋದರ ಅಳಿಯಂದಿರಾದ ಶಿವಲಿಂಗಪ್ಪ ವಾಲಿಯವರಿಗೂ, ಬಂಧು ಡಾ. ಸಂಗಮೇಶ ಹಂಡಗಿಯವರಿಗೂ, ವಿಶ್ವನಾಥ ಬುಳ್ಳಾ ಅವರಿಗೂ, ಮೃತ್ಯುಂಜಯ ಅಂಗಡಿಯವರಿಗೂ, ಮಹೇಶ ಕಲ್ಯಾಣಿಯವರಿಗೂ, ದ್ರಾಕ್ಷಾಯಣಿ ಮುಕ್ಕುಪ್ಪಿ ಬಾಗಲಕೋಟೆ ಇವರಿಗೂ, ನನ್ನ ಕಾರ್ಯದಲ್ಲಿ ಬೆಂಬಲವಾಗಿ ನಿಂತು ಮಗಳಂತೆ ಮಮಕಾರ ತೋರಿದ ನನ್ನ ಅತ್ತೆಯವರಾದ ಶಿವಮ್ಮ ಬಳಿಗಾರ್ ಅವರ ಸಹಕಾರವನ್ನು ಸ್ಮರಿಸದಿರಲಾರೆ.

ಮೆಣಸಗಿಯ ಅಂಗಡಿಯವರ, ಕಲ್ಯಾಣಿಯವರ ಪರಿವಾರದವರಿಗೂ, ಲಿಂಗಬಸವೇಶ್ವರ ಮಠದ ಸೇವಾಸಕ್ತರಾದ ಹೀರೆಮಠ ಬಂಧುಗಳಿಗೂ, ಜಕ್ಕಲಿಯ ಉಮ್ಮಣ್ಣವರ(ಕರ್ಕಿಕಟ್ಟಿ) ಪರಿವಾರದವರಿಗೂ, ನರೇಗಲ್ಲದ ಪ್ರಾಥಮಿಕ ಶಾಲೆಯ ಸಿಬ್ಬಂದಿ ವರ್ಗಕ್ಕೂ, ಗದುಗಿನ ಸೆಂಟ್ರಲ್ ಸ್ಕೂಲಿನ ಮುಖ್ಯೋಪಾಧ್ಯಾಯರಾದ

ಬಳ್ಳಾರಿಯವರಿಗೂ, ಧಾರವಾಡದ 'ಜೀವನ ಶಿಕ್ಷಣ' ಪತ್ರಿಕೆಯ ಉಪಸಂಪಾದಕರಾದ ಎರೆಗಂಬಳಿಮಠ ಅವರಿಗೂ, ಅಟೆಂಡರ್ ಮಡ್ಡಿಮಠ ಅವರಿಗೂ, ಧಾರವಾಡದ ಡಯೆಟ್ ಆಫೀಸಿನ ಸರ್ವ ಸದಸ್ಯರಿಗೂ ಈ ಮೂಲಕ ದನ್ಯವಾದಗಳನ್ನು ತಿಳಿಸುತ್ತೇನೆ.

ಅ.ದ.ಕಟ್ಟಿಮನಿ, ರತ್ನಾ ಪಾಟೀಲ, ಸುಶೀಲಮ್ಮ ಪವಾಡಶೆಟ್ಟರ, ಬೈಂಡರ್ ಅಶೋಕ ಬಂಡೆಪ್ಪನವರ್, ಆನಂದಾಶ್ರಮದ ಕಾರ್ಯದರ್ಶಿಗಳಾದ ಕೋಟಿಗೌಡರ ಅವರಿಗೂ, ಜೆ.ಟಿ. ಮಹಿಳಾ ಮಹಾವಿದ್ಯಾಲಯದ ಆರಾಧ್ಯಮಠ ಅವರಿಗೂ, ಪ್ರಾಧ್ಯಾಪಕರಾದ ಡಾ. ಅನಸೂಯಾ ದೇವಾಂಗಮಠ ಅವರಿಗೂ ನನ್ನ ಅನಂತ ವಂದನೆಗಳು. ನನ್ನ ಈ ಮಹಾಪ್ರಬಂಧದ ವಿಷಯ ತಿಳಿದು ಹರ್ಷಪಟ್ಟು ಹುಮ್ಮಸ್ಸು ತುಂಬಿದ್ದ ನನ್ನ ತಂದೆ ಸಮಾನರೂ, ಮುಂಡರಗಿಯ ಭಾಗದ ಸುಪ್ರಸಿದ್ಧ ಸಾಹಿತಿಗಳೂ ಆದ ಲಿಂ. ಮಹಾಲಿಂಗ ಯಾಳಗಿಯವರಿಗೆ ನನ್ನ ಕೃತಜ್ಞತಾಪೂರ್ವಕ ನಮನಗಳು.

ನನ್ನ ಈ ಕಾರ್ಯದಲ್ಲಿ ಉತ್ತರ ಕರ್ನಾಟಕದ ಜನರ ಧ್ವನಿಗಳಾದ 'ನವೋದಯ', 'ನಾಗರಿಕ', 'ಕಿತ್ತೂರು ಕರ್ನಾಟಕ' ಪತ್ರಿಕೆಗಳ ಸಹಾಯ ಸಹಕಾರವೂ ಸ್ಮರಣೀಯ. 'ನವೋದಯ'ದ ಕಿದಿಯೂರ ಅವರಿಗೂ, 'ನಾಗರಿಕ'ದ ಹೊಂಬಾಳಿಯವರಿಗೂ, 'ಕಿತ್ತೂರು ಕರ್ನಾಟಕ'ದ ಮಂಜುನಾಥ ಅಬ್ಬೀಗೆರಿ ಮತ್ತು ಕುಲಕರ್ಣಿಯವರಿಗೂ ದನ್ಯವಾದಗಳನ್ನು ಈ ಮೂಲಕ ತಿಳಿಸುತ್ತೇನೆ.

ತೋಂಟದಾರ್ಯ ವಿದ್ಯಾಪೀಠದ ಆಡಳಿತಾಧಿಕಾರಿಗಳಾದ ಎಸ್.ಎಸ್.ಪಟ್ಟಣಶೆಟ್ಟಿಯವರಿಗೂ, ಚೇರಮನ್ನರಾದ ಎಮ್.ಬಿ.ಬಡ್ನಿಯವರಿಗೂ ಈ ಮೂಲಕ ದನ್ಯವಾದಗಳನ್ನು ಸಲ್ಲಿಸುತ್ತೇನೆ. ಈ ನನ್ನ ಮಹತ್ವಾಕಾಂಕ್ಷಿ ಕಾರ್ಯದ ಚಾಲನೆಗೆ ಕಾರಣರಾದ ತೋಂಟದಾರ್ಯ ತಾಂತ್ರಿಕ ಮಹಾವಿದ್ಯಾಲಯದ ಪ್ರಾಂಶುಪಾಲರಾಗಿದ್ದ ಡಾ. ಡಿ.ಆರ್.ಸೋಮಶೇಖರ ಅವರಿಗೂ, ಪ್ರಸ್ತುತ ಪ್ರಾಂಶುಪಾಲರಾಗಿರುವ ಪ್ರಕಾಶ ಹುಬ್ಬಳಿಯವರಿಗೂ, ನನ್ನ ಈ ಕಾರ್ಯಕ್ಕೆ ಹೆಚ್ಚು ಕಾಲಾವಕಾಶ ನೀಡಿ ಪ್ರೋತ್ಸಾಹಿಸಿದ ವಿದ್ಯುನ್ಮಾನ ವಿಭಾಗದ ಮುಖ್ಯಸ್ಥರಾಗಿದ್ದ ಪ್ರೋ. ಶ್ರೀ ರಾಘವೇಂದ್ರ ಪರ್ವತಿಕತರ್ ಅವರಿಗೂ, ಪ್ರೋ. ಎಮ್. ಮನೋಜಕುಮಾರ ಅವರಿಗೂ, ಪ್ರಸ್ತುತ ಮುಖ್ಯಸ್ಥರಾದ ಪ್ರಕಾಶ ಮರಕುಂಬಿಯವರಿಗೂ, ನನ್ನ ಸಹವರ್ತಿ–ಸಹೋದ್ಯೋಗಿಗಳಾದ ಸುಜಾತ ಭಾವಿಕಟ್ಟಿ, ಪಲ್ಲವಿ ಠಕ್ಕರ್, ಶೈಲಜಾ ಮುದೇನಗುಡಿ, ಪ್ರಿಯಾ ಮಿಣಜಗಿ, ಯಾಸ್ಮಿನ್ ಗಡಾದ, ಚಂಬಮ್ಮ ಕೋಟಿ, ವೀಣಾ ಕುಲಕರ್ಣಿ, ಮುಕ್ತಾ ಪಾಟೀಲ, ಮಹೇಶ್ವರಿ ಪಾಟೀಲ, ಕೊಟ್ರೇಶ ಮ್ಯಾಳಾ ಇನ್ನುಳಿದ ಸಿಬ್ಬಂದಿ ವರ್ಗಕ್ಕೂ ನನ್ನ ಅನಂತ ದನ್ಯವಾದಗಳು. ಇವರೆಲ್ಲರ ನಿಸ್ವಾರ್ಥ ಪ್ರೀತಿ ವಿಶ್ವಾಸಗಳು ನನ್ನ ಈ ಕಾರ್ಯವನ್ನು ಅಭಾದಿತವಾಗಿ ನಿರ್ವಹಿಸುವಂತೆ ಮಾಡಿದ್ದನ್ನು ಇಲ್ಲಿ ಸ್ಮರಿಸಬಯಸುತ್ತೇನೆ.

ತೋಂಟದಾರ್ಯ ಮಠದ ನಿರ್ವಾಹಕರಾದ ಶಿವನಗೌಡರನ್ನು ಮತ್ತು ಗ್ರಂಥಾಲಯದ ಗ್ರಂಥಪಾಲರಾದ ಪಿಂಗಳೆಯವರನ್ನು ಇಲ್ಲಿ ಮನಸಾರೆ ಸ್ಮರಿಸದಿರಲಾರೆ. ಈ ಮಹಾಪ್ರಬಂಧದ ಮುದ್ರಣ ಕಾರ್ಯದಲ್ಲಿ ನೆರವಾದ ಸಜ್ಜನ ಝುರಾಕ್ಸನವರಿಗೂ, ಇರಫಾನ್ ಮುನ್ನಿಯವರಿಗೂ, ಕಲಾವಿದ ಶ್ಯಾಂ ಜೈನರ್ ಅವರನ್ನು, ಕಲಾವಿದ ವಿಲ್ಸನ್ ಸೋನಗಾರ್ ಅವರನ್ನು, ಲಕ್ಕುಂಡಿಯ ಈರಣ್ಣ ಕುಂಬಾರ ಅವರನ್ನು, ಧಾರವಾಡದ ಮಹಾಂತೇಶ ಬೈಂಡರ್ಸ ಅವರನ್ನು ಇಲ್ಲಿ ನೆನೆಯಲಿಚ್ಛಿಸುತ್ತೇನೆ.

ನನ್ನ ಮಹಾಪ್ರಬಂಧದ ಪ್ರಾರಂಭದ ಹಂತದಲ್ಲಿ ಅತ್ಯಂತ ಸಂತೋಷಪಟ್ಟ ಕ.ಬ.ಅಂಗಡಿಯವರ ಹಿರಿಯ ಮಗಳು ಮತ್ತು ನನ್ನ ಪ್ರೀತಿಯ ಅಮ್ಮನಾದ ಶ್ರೀಮತಿ ಶಾಂತಕ್ಕ ಕಲ್ಯಾಣಿಯವರು ಪ್ರಬಂಧ ಮುಗಿಯುವ ಹಂತದಲ್ಲಿ ಲಿಂಗೈಕ್ಯರಾಗಿದ್ದು, ಅವರು ತೋರಿದ ಪ್ರೀತಿ, ವಾತ್ಸಲ್ಯ ಮತ್ತು ಸಹಕಾರಗಳು ನನ್ನ ಬರವಣಿಗೆಗೆ ಚೈತನ್ಯವನ್ನಿತ್ತಿದೆ. ಈ ಸಮಯದಲ್ಲಿ ಅವರ ಅನುಪಸ್ಥಿತಿ ಅನಾಥ ಪ್ರಜ್ಞೆಯಾಗಿ ಕಾಡಿದುದು ಸುಳ್ಳಲ್ಲ. ಅವರ ಈ ಕನಸಿನ ಮಹತ್ವಾಕಾಂಕ್ಷೆಯನ್ನು ಅವರಿಗೆ ಸಮರ್ಪಿಸಿದ್ದೇನೆ.

**ರಶ್ಮಿ ಅಂಗಡಿ**

*****

# ಪರಿವಿಡಿ

ಅಧ್ಯಾಯ : ಒಂದು

# ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ

- ಪ್ರಸ್ತಾವನೆ
- ಅಧ್ಯಯನದ ಅಗತ್ಯ
- ಅಧ್ಯಯನದ ಆಕರಗಳು
- ಅಧ್ಯಯನದ ಸ್ವರೂಪ

ಅಧ್ಯಾಯ : ಒಂದು

# ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ

## ಪ್ರಸ್ತಾವನೆ :

ವಿಶ್ವಸಮಾಜದಲ್ಲಿ ೧೨ನೆಯ ಶತಮಾನವು ತನ್ನ ನೈತಿಕ ಸಿದ್ಧಾಂತ, ತಾರ್ಕಿಕ ನಿಲುವುಗಳಿಂದ ಉಳಿದ ಶತಮಾನಗಳಿಂದ ಭಿನ್ನವಾಗುವುದರ ಮೂಲಕ ಕನ್ನಡ ಸಾಹಿತ್ಯ-ಸಂಸ್ಕೃತಿಯನ್ನು ಜಗತ್ತಿಗೆ ಅನಾವರಣಗೊಳಿಸುತ್ತದೆ. ಈ ಪರಂಪರೆಯ ಬೇರುಗಳು ಇಂದಿಗೂ ಜನತೆಯ ಬದುಕಿನಲ್ಲಿ ಆಶಯ ಮತ್ತು ಭಾಷೆಯ ರೂಪಗಲ್ಲಿ ಆಳವಾಗಿ ಬೇರೂರಿಕೊಂಡಿವೆ ಎಂಬುದಕ್ಕೊಂದು ನಿದರ್ಶನ ಶರಣಕವಿ ಅಂಗಡಿ ಕರವೀರಪ್ಪನವರ ಜೀವನ ಮತ್ತು ಸಾಹಿತ್ಯಿಕ ಸಾಧನೆ. ಸಂಸಾರದಲ್ಲಿದ್ದುಕೊಂಡು ಲೌಕಿಕ-ಪಾರಮಾರ್ಥಿಕವೆರಡನ್ನೂ ಸಮದೂಗಿ ಹದವಾದ ಬದುಕನ್ನು, ಬದುಕುವ ಕಲೆಯನ್ನು ಜಗತ್ತಿಗೆ ತೋರಿದವರು. ೨೦ನೆಯ ಶತಮಾನದಲ್ಲೂ ಶಿವಶರಣರ ನೆಲೆಯನ್ನು ತಮ್ಮ ಬದುಕು-ಬರಹ, ಸಂಶೋಧನೆಗಳಿಂದ ತೋರಿದವರು.

## ಅಧ್ಯಯನದ ಅಗತ್ಯ :

ಜಗತ್ತು ಅದೆಷ್ಟೊ ಮುಂದುವರೆದು ತಾಂತ್ರೀಕರಣದ ವ್ಯವಸ್ಥೆಯಲ್ಲಿ ಮುನ್ನುಗ್ಗಿ ಹೋಗುತ್ತಿದ್ದರೂ, ಬದುಕಿನ ನೆಲೆಗಳು ಮತ್ತು ಮೌಲ್ಯಗಳು ಬದಲಾಗುತ್ತಿದ್ದರೂ, ಮನುಷ್ಯ ತನ್ನನ್ನು ತಾನು ಮಾನಸಿಕವಾಗಿ ಬಲಿಷ್ಠವಾಗಿಟ್ಟುಕೊಳ್ಳಲು ಇಂದು ಬದುಕಿನ ಕಲೆಗಳು ಮತ್ತು ಅದರ ನೆಲೆಗಳನ್ನು ಜೀವಂತವಾಗಿಟ್ಟುಕೊಳ್ಳುವುದು ಅವಶ್ಯಕವಾಗಿದೆ. ಅಂತಹ ಜೀವನ ಕಲೆಯು ಎಲ್ಲರಿಗೂ ಸಿದ್ಧಿಸುವುದು ಇಂದಿನ ಅತ್ಯವಶ್ಯಕತೆಗಳಲ್ಲಿ ಒಂದು. ಕಾಲಾನುಕ್ರಮದಲ್ಲಿ ಭಾರತವು ಈ ಕಲೆಯನ್ನು ಜಗತ್ತಿಗೆ ತಿಳಿಸುವ ಪ್ರಕ್ರಿಯೆಯಲ್ಲಿ ತೊಡಗಿಕೊಂಡಿದೆ. ಬಸವ-ಬುದ್ಧ-ಗಾಂಧಿ-ಅಂಬೇಡ್ಕರ್ ಮೊದಲಾದ ಯುಗಪುರುಷರು ಬಾಳಿ-ಬದುಕಿದವರುಂಟು. ಅವರ ನಂತರವೂ ಇಂತಹ ವೈಚಾರಿಕತೆ ಚಿಂತನೆಗಳು ಬರೀ ಭಾರತದಲ್ಲಿ ಅಷ್ಟೇ ಅಲ್ಲ ಜಗತ್ತಿನಾದ್ಯಾಂತ ನಡೆಯುತ್ತಿರುವುದು ಪ್ರಾಕೃತಿಕ ಸತ್ಯ. ಈ ವೈಚಾರಿಕ ಪ್ರಖರತೆಯಿಂದ ಸ್ಫೂರ್ತಿಗೊಂಡು ಅವರನ್ನು ಅನುಕರಿಸುತ್ತ ಅವರಿಗಿಂತ ಹೆಚ್ಚಿನ ಸಾಧನೆಗಳನ್ನು ಮಾಡಿ ಮರೆಯಾದ ವ್ಯಕ್ತಿಗಳು ಸಮಾಜದಲ್ಲಿ ಕಾಣಸಿಗುತ್ತಾರೆ. ರಾಮ ಮನೋಹರ ಲೋಹಿಯಾ, ಜಯಪ್ರಕಾಶ ನಾರಾಯಣ, ಬಾಬು ಜಗಜೀವನರಾಮ, ಬಾಬಾ ಆಮ್ಟೆ, ಮತ್ತು ಅಣ್ಣಾ ಹಜಾರೆಯವರಂತವರ ಉದಾಹರಣೆಗಳು ನಮ್ಮ ಕಣ್ಣೆದುರಿಗಿವೆ. ಈ ರೀತಿಯ ಸಮಾಜ-

ಸಂಸ್ಕರಣ ಸಂಪ್ರದಾಯದಲ್ಲಿ ಬಸವಣ್ಣನವರದು ಮೊಟ್ಟ ಮೊದಲ ದಿಟ್ಟ ಹೆಜ್ಜೆ ಎಂದರೆ ತಪ್ಪಲ್ಲ. ಅದಕ್ಕೆಂದೆ ಅವರನ್ನು ಇಂದಿಗೂ ಭಾರತೀಯ ಸಮಾಜ ಕಂಡ ಮೊದಲ ಸಂವಿಧಾನ ಶಿಲ್ಪಿ ಎಂದೂ ಕರೆಯುವುದುಂಟು. ಜನತಾಂತ್ರಿಕ ವ್ಯವಸ್ಥೆಗಳನ್ನು ಹೇಳುವುದಷ್ಟೇ ಅಲ್ಲ ಅವುಗಳನ್ನು ಪಾರದರ್ಶಕವಾಗಿ ಬದುಕಿದ ವಿಶೇಷ ವ್ಯಕ್ತಿತ್ವ ಬಸವಣ್ಣನವರದು.

ಅಂತಹ ಬಸವ ಬಿತ್ತಿದ ಬೀಜದ ನೆಲೆಗಳು ಅಲ್ಲಲ್ಲಿ ಉತ್ತಿ-ಬಿತ್ತಿ ಬೆಳಕು ಕಂಡಿರುವ ಸತ್ಯದ ಪ್ರತೀಕವಾಗಿ ನಿಲ್ಲುತ್ತಾರೆ ಕ.ಬ.ಅಂಗಡಿಯವರು. ಶಿವಯೋಗ ಮಂದಿರದಲ್ಲಿ ವಟುವಾಗಿ ಬೆಳೆದು, ಮಠವೊಂದರ ಕಾರ್ಯಭಾರವನ್ನು ಹೊರುವುದು ತಪ್ಪಿ, ವೈದ್ಯರಾಗಬಹುದೆಂದುಕೊಂಡವರಲ್ಲಿ ಅಚ್ಚರಿ ಮೂಡಿಸಿ, ನಾಸ್ತಿಕರೂ ಆಗದೇ ಜೀವನ್ಮುಖಿ ಧೋರಣೆಗಳನ್ನು ರೂಢಿಸಿಕೊಂಡು, ಶಿಕ್ಷಣಾಧಿಕಾರಿಯಾಗಿದ್ದುಕೊಂಡೇ ವೀರಶೈವ ಸಮಾಜ, ಸಾಹಿತ್ಯ ಮತ್ತು ಸಿದ್ಧಾಂತಗಳನ್ನು ಮೈಗೂಡಿಸಿಕೊಂಡು, ತ್ರಿವಿಧ ದಾಸೋಹ, ಅಷ್ಟಾವರಣ, ಷಟ್ಸ್ಥಲ, ಪಂಚಾಚಾರ, ಲಿಂಗನಿಷ್ಠೆ, ಶಿವಪಥ, ಬಸವಪಥಗಳತ್ತ ವಾಲಿದರು.

೫೦ಕ್ಕೂ ಹೆಚ್ಚು ತಮ್ಮ ಕೃತಿಗಳಿಂದ ವೀರಶೈವ ನೆಲೆಗಳನ್ನು ವಿಭಿನ್ನವಾಗಿ ಮತ್ತು ಸತ್ಯಾನುಸಂದಾನಗಳಿಂದ ಐತಿಹಾಸಿಕ-ಸಾಮಾಜಿಕ-ಧಾರ್ಮಿಕ ದೃಷ್ಟಿಕೋನದಿಂದ ಮನನ ಮಾಡಿದ್ದಾರೆ. ನಾಟಕ, ದೊಡ್ಡಾಟ, ಗದ್ಯ, ಅಷ್ಟಕ, ಷಟ್ಕ, ಲಾವಣಿ, ಪುರಾಣ ಮತ್ತು ಷಟ್ಪದಿಯಲ್ಲಿ ಅದರಲ್ಲೂ ಭಾಮಿನಿ ಷಟ್ಪದಿಯಲ್ಲಿ ವಿಶೇಷ ಕೃಷಿಗೈದಿದ್ದಾರೆ.

ಅವರ ಬದುಕು ಬರಹವನ್ನು ಕೇವಲ ಧಾರ್ಮಿಕ ದೃಷ್ಟಿಯಿಂದ ನೋಡಲಾಗದು. ಅವರ ಬಹುಮುಖಿ ವ್ಯಕ್ತಿತ್ವದ ಪರಿಧಿಯನ್ನು ಗುರುತಿಸುವುದು ಕಷ್ಟಸಾಧ್ಯ. ಒಬ್ಬ ಕವಿ, ಜನಮಾನ್ಯ, ವಿದ್ಯಾಪ್ರೇಮಿ, ಸಂಘಟಕ, ಶರಣಜೀವಿ, ಶಿಕ್ಷಕ, ಶಿಕ್ಷಣಾಧಿಕಾರಿ, ಸಂಶೋಧಕ, ನಾಟಕಕಾರರಾಗಿಯೂ ಅವರ ವ್ಯಕ್ತಿತ್ವ ವಿಕಾಸಗೊಂಡಿದೆ. ಅವರ ಅಧ್ಯಯನದೊಂದಿಗೆ ಸಮಕಾಲೀನ ಈ ಎಲ್ಲ ಕ್ಷೇತ್ರಗಳ ಪರಿಣಿತರ ವಿಷಯಗಳು, ಮಾಹಿತಿಗಳೂ ಲಭ್ಯವಾಗುತ್ತವೆ. ಕ.ಬ.ಅಂಗಡಿಯವರ ಜೀವನ ಸ್ವಾತಂತ್ರ್ಯ ಆಂದೋಲನದ ದಿನಗಳಲ್ಲಿ ಮತ್ತು ಸ್ವಾತಂತ್ರ್ಯನಂತರದ ಸಾಮಾಜಿಕ ಬದುಕಿಗೆ ಮತ್ತು ಅಲ್ಲಿ ಆದ ಮಹತ್ತರ ಬೆಳವಣಿಗೆಗಳಿಗೆ ಹೇಗೆ ಸ್ಪಂದಿಸಿದೆ ಎಂಬುದನ್ನು ಗುರುತಿಸಬಹುದು.

ಸಮಕಾಲೀನ ವೀರಶೈವ ಧರ್ಮಸಾರದ ಪ್ರಸಾರ ಮತ್ತು ಪ್ರಗತಿಗೆ ಕಾರಣಕರ್ತರಾದವರು. 'ಶಿವಾನುಭವ'ದ ವಿಭಿನ್ನ ಪರಂಪರೆಯೊಂದನ್ನು ಗದುಗಿನ ಶ್ರೀ ತೋಂಟದಾರ್ಯ ಮಠ ಯಶಸ್ವಿಯಾಗಿ ಇಂದಿಗೂ ನಡೆಸಿಕೊಂಡು ಬರುತ್ತಿದೆ. ಶ್ರೀ ಮಠದ ಈ ಕನಸನ್ನು ನಗರದ ಯುವಜನರೊಟ್ಟಿಗೆ ಕೂಡಿಕೊಂಡು ಕಾರ್ಯರೂಪಕ್ಕೆ ತಂದ 'ಶಿವಾನುಭವ' ಕಾರ್ಯಕ್ರಮ ೨೦೦೦ಕ್ಕೂ ಅಧಿಕ ಸಂಖ್ಯೆಯಲ್ಲಿ ಪ್ರಸಾರಗೊಂಡು ದಾಖಲೆಯ ಮುನ್ನಡೆಯನ್ನು ಸಾಧಿಸಿದೆ. ಈ ಸಾಧನೆಯಲ್ಲಿ ಅವರ ಪಾತ್ರ

ಗಣನೀಯವಾದುದು. ಅದೇ ರೀತಿಯಲ್ಲಿ ಗೊಡಚಿ ಶ್ರೀಕ್ಷೇತ್ರದಲ್ಲಿ ಶಿವಾನುಭವ ಪರಂಪರೆಯನ್ನು ರೂಢಿಸಿದ ಕೀರ್ತಿಗೂ ಇವರೇ ಭಾಜನರಾಗುತ್ತಾರೆ. ಮೆಣಸಗಿಯ ಲಿಂಗಬಸಪ್ಪಜ್ಜನವರ ಮಠದಲ್ಲಿ ಕೂಡ ಈ ಪರಂಪರೆಗೆ ಸ್ಪಂದಿಸಿದವರು. ಇವರ ಬದುಕು ಮತ್ತು ಬರಹದತ್ತ ಒಂದು ನೋಟವಿತ್ತಾಗ ಮೇಲಿನ ವಿಶಿಷ್ಟ ಅನುಭವವಾಗುವುದು ಅಷ್ಟೇ ಸತ್ಯ.

ಶಿಕ್ಷಣಾಧಿಕಾರಿಗಳಾಗಿ ಇದ್ದುಕೊಂಡು ಸರಕಾರಿ ಸಂಬಳದಲ್ಲಿ ಆರಾಮಾಗಿ ಜೀವನ ನಡೆಸುತ್ತ ಹತ್ತರಲ್ಲಿ ಹನ್ನೊಂದಾಗಿ ಬದುಕಬಹುದಾದ ಅವರು ಅದನ್ನು ಮಾಡದೆ ತಮಗೆ ದೊರೆತ ಅಮೂಲ್ಯ ಮಾನವ ಜೀವನವನ್ನು ಧಾರ್ಮಿಕ, ಶೈಕ್ಷಣಿಕ, ಸಾಮಾಜಿಕ, ಸಾಹಿತ್ಯಿಕ ಸಾಧನೆಗಳತ್ತ ಹರಿಬಿಟ್ಟು ಹೊಸ ಕಳೆಯನ್ನು ತಂದವರು. ಸಂಶೋಧನೆಯ ಈ ಭಾಗದಲ್ಲಿ ಅವರ ಹಲವಾರು ಮುಖಗಳನ್ನು ಪರಿಚಯಿಸುವ ಅವರ ಸಮಗ್ರ ಸಾಧನೆಯನ್ನು ಅಭಿವ್ಯಕ್ತಿಸಲು ಪ್ರಯತ್ನ ಮಾಡಲಾಗಿದೆ. ಅವರ ನಡೆಯ ನೂರಾರು ಹೆಜ್ಜೆಗಳು ಕಾಲಗತಿಯಲ್ಲಿ ಮಸುಕಾಗಿ ಕಂಡರೂ ಈ ಸಂಶೋಧನೆಯ ಫಲವಾಗಿ ಆ ಹೆಜ್ಜೆಗಳು ಅನಾವರಣಗೊಳ್ಳಲು ಸಾಧ್ಯವಾಗಿದೆ. ಮೊದಲು ಅವರು ರಚಿಸಿರುವ ನಾಟಕಗಳಾದ 'ಕೆಳದಿಯ ಚೆನ್ನಮ್ಮಾಜಿ', 'ಕಿತ್ತೂರ ಕೇಸರಿ', 'ಬೆಳವಡಿ ಮಲ್ಲಮ್ಮ', 'ಶಿವಪಾರಮ್ಯ ಅರ್ಥಾತ್ ಗುಗ್ಗುಳ', 'ಜಕ್ಕಲಿಯ ಶರಣರ ನಾಟಕ' ಇವೆಲ್ಲವೂ ಸಾಮಾಜಿಕವಾಗಿ ಮತ್ತು ಐತಿಹಾಸಿಕವಾಗಿ ಮಹತ್ವ ಪಡೆದಿರುತ್ತವೆ.

ಇವರ ಜೀವನವನ್ನು ಸಂಶೋಧನೆಗೊಳಪಡಿಸುತ್ತ ಹೋದಂತೆ ಅವರೊಳಗಿದ್ದ ಸಂಶೋಧಕ ಅನಾವರಣಗೊಳ್ಳುತ್ತಾನೆ. ಅವರ ಸಂಶೋಧನಾತ್ಮಕ ದೃಷ್ಟಿ ಮತ್ತು ಅವರ ಐತಿಹಾಸಿಕ ಪ್ರಜ್ಞೆಯನ್ನು ಕಂಡುಕೊಳ್ಳಬಹುದಾಗಿದೆ. ಬ್ರಿಟಿಷ್ ಅಧಿಕಾರಿಗಳು ತಮ್ಮ ಅಧಿಕಾರ ಅವಧಿಯಲ್ಲಿ ತಾವು ತಂಗಿದ್ದ ಪ್ರದೇಶಗಳ ಕುರಿತು ಅದರ ಇತಿಹಾಸ, ಅಲ್ಲಿಯ ಶಾಸನಗಳನ್ನು, ಪುರಾತತ್ವಗಳನ್ನು ಅವಲೋಕಿಸಿ ಆ ಪ್ರದೇಶದ ಐತಿಹಾಸಿಕ ಮತ್ತು ಸಾಮಾಜಿಕ ಸತ್ಯಗಳನ್ನು ಹೊರಗೆ ತೆಗೆದು ಇತಿಹಾಸ ಪ್ರಜ್ಞೆಯಿಂದ ವಂಚಿತರಾದ ಭಾರತೀಯರಿಗೆ ಅವರ ಇತಿಹಾಸವನ್ನು ದೊರಕಿಸಿಕೊಟ್ಟರು. ಅದೇ ರೀತಿಯಲ್ಲಿ ತಾವು ಶಿಕ್ಷಕರಾಗಿ ಮತ್ತು ಶಿಕ್ಷಣಾಧಿಕಾರಿಗಳಾಗಿ ಸೇವೆಗೈದಲ್ಲೆಲ್ಲ ಆ ಪ್ರದೇಶದ ಇತಿಹಾಸ, ಶಾಸನ, ಪುರಾತತ್ವಗಳನ್ನು ಪರಾಮರ್ಶಿಸಿ ಅನೇಕ ಐತಿಹಾಸಿಕ ಮತ್ತು ಸಾಮಾಜಿಕ ಸತ್ಯಗಳನ್ನು ಹೊರತರಲು ಪ್ರಯತ್ನಿಸಿದ್ದಾರೆ. ಅವರ ಕೃತಿಗಳಾದ 'ಗೊಡಚಿ ಶ್ರೀಕ್ಷೇತ್ರ ವಸ್ತು ಮಡಿವಾಳ ಮಾಚಿತಂದೆ' ಮತ್ತು 'ಮುತ್ತೈದೆಯರೈವರು' ಕೃತಿಗಳನ್ನು ಉಲ್ಲೇಖಿಸಬಹುದು. ನನ್ನ ಈ ಅಭಿಪ್ರಾಯಗಳಿಗೆ ಈ ಕೃತಿಗಳು ಹೆಚ್ಚು ಸಮರ್ಥನೆಯನ್ನು ನೀಡುತ್ತವೆ. ಗೊಡಚಿಯು ವಿಶೇಷವಾದ ಸಂಸ್ಕೃತಿಯನ್ನು ಹೊತ್ತು ನಿಂತಿರುವುದರಲ್ಲಿ ಶರಣ ಮಡಿವಾಳ ಮಾಚಿದೇವರ

ಪಾತ್ರವನ್ನು 'ಗೊಡಚಿ ಶ್ರೀಕ್ಷೇತ್ರ ಮಡಿವಾಳ ಮಾಚಿ ತಂದೆ' ಕೃತಿಯಲ್ಲಿ ಹೊಸ ರೀತಿಯಲ್ಲಿ ಸಾದರಪಡಿಸಿದ್ದಾರೆ. ೧೯೭೫ರಲ್ಲಿ ಹ.ರಾ.ಕಿದಿಯೂರ ಅವರು ಸಂಪಾದಿಸಿದ 'ನಮ್ಮ ಗದಗ-ಬೆಟಗೇರಿ' ಕೃತಿಯಲ್ಲಿ ಗದುಗಿನ ಹೊನಗುಡಿ ಚೌಕಿಯನ್ನು ಕುರಿತು ವಿವರಣಾತ್ಮಕ ಬರಹ ಬರೆದಿದ್ದಾರೆ. ಅದೇ ಕೃತಿಯಲ್ಲಿ ಗದುಗಿಗೆ ಗದಗ ಎಂಬ ಹೆಸರು ಏಕೆ ಬಂದಿತು ಎಂಬುದರ ಬಗ್ಗೆ ಗದುಗು ಗದ್ದುಗೆಯೇ? ಎಂಬ ವಿವೇಚನಾತ್ಮಕ ಬರಹವೂ ಇದೆ. ಇವೆಲ್ಲವುಗಳು ಅವರ ಐತಿಹಾಸಿಕ ಮತ್ತು ಸಮಾಜಿಕ ಪ್ರಜ್ಞೆಗೆ ಹಿಡಿದ ಕೈಗನ್ನಡಿಗಳು. ಅವರೇ ತಮ್ಮ ಕೃತಿಗಳನ್ನು ಪಟ್ಟಿ ಮಾಡಿದಂತೆ 'ಕೆಳದಿಯ ಚೆನ್ನಮ್ಮಾಜಿ ನಾಟಕ', 'ಬೆಳವಡಿ ಮಲ್ಲಮ್ಮ ನಾಟಕ' ಮತ್ತು 'ಕಿತ್ತೂರ ಕೇಸರಿ ನಾಟಕ'ಗಳು ರಂಗಭೂಮಿಯಲ್ಲಿ ಪ್ರಯೋಗಿಸಲ್ಪಟ್ಟು ಯಶಸ್ವಿಯಾಗಿವೆ. ಇದು ಅವರಲ್ಲಿಯ ಸಾಹಿತಿಯೊಬ್ಬನನ್ನು ಮತ್ತು ಅವರಲ್ಲಿರುವ ಪ್ರತಿಭೆಯನ್ನು ಸಾದರಪಡಿಸಿದರೆ, ಇದೇ ವಿಷಯಗಳನ್ನಿಟ್ಟುಕೊಂಡು ಅವರು ರಚಿಸಿರುವ ಚರಿತ ಪುಸ್ತಿಕೆಗಳು ('ಕಿತ್ತೂರ ಚೆನ್ನಮ್ಮ', 'ಬೆಳವಡಿ ಮಲ್ಲಮ್ಮ', 'ಕೆಳದಿಯ ಚೆನ್ನಮ್ಮಾಜಿ ರಾಣಿ') ಅವರಲ್ಲಿದ್ದ ಶೈಕ್ಷಣಿಕ ತುಡಿತವನ್ನು ತೋರ್ಪಡಿಸುತ್ತದೆ. ಮಕ್ಕಳಲ್ಲಿ ಶೈಕ್ಷಣಿಕವಾಗಿ ಮನೋಸ್ಥೈರ್ಯವನ್ನು ತಂದುಕೊಡುವ ನಿಟ್ಟಿನಲ್ಲಿ ಸಾಕಷ್ಟು ದುಡಿದಿದ್ದಾರೆ.

ಕ.ಬ.ಅಂಗಡಿಯವರು ೧೯೧೨ರಿಂದ ೧೯೮೬ರವರೆಗೂ ಅಂದರೆ ನಿರಂತರ ೭೫ ವರ್ಷಗಳ ಕಾಲ ಅವರ ಭಾವನೆಗಳು ಕಾವ್ಯದ ವಿವಿಧ ರೂಪಗಳಲ್ಲಿ ಪ್ರವಹಿಸಿಕೊಂಡು ಬಂದು ಕಾವ್ಯದ ಬೇರೆ ಬೇರೆ ಆಯಾಮಗಳನ್ನು ಪ್ರಯೋಗಕ್ಕೆ ಒಳಪಡಿಸುತ್ತ ಕಾಲಕಾಲಕ್ಕೆ ಹೊಸತನವನ್ನು ಮೈಗೂಡಿಸಿಕೊಂಡು ಇಂದಿಗೂ ಪ್ರಾತಿನಿಧಿಕವಾಗಿವೆ. ಅವರ ಕೃತಿಗಳು ಕನ್ನಡ ಸಾಹಿತ್ಯಕ್ಕೆ ನೀಡಿದ ಕೊಡುಗೆ ಅಪಾರ. ಅದರ ಆಳ ಅಂತರವನ್ನು ಈ ಅಧ್ಯಯನದಿಂದ ತಿಳಿದುಕೊಳ್ಳುವುದು ಇಲ್ಲಿನ ಮುಖ್ಯ ಉದ್ದೇಶವಾಗಿದೆ.

ಸಮಕಾಲೀನ ಶೈಕ್ಷಣಿಕ ಬೇಕು-ಬೇಡಗಳನ್ನು ಅವರು ಪರಾಮರ್ಶಿಸಿ ಅದನ್ನು ಸಮಾಜದ ಒಳಿತಿಗಾಗಿ ಉಪಯೋಗಿಸುವ ಕಲೆ ಅವರಿಗೆ ಕರಗತವಾಗಿತ್ತು. ಕೈಯಲ್ಲಿ ಶಿಕ್ಷಣಾಧಿಕಾರಿಯ ಅಧಿಕಾರವಿದ್ದುದರಿಂದ ಅದರ ಸರಿಯಾದ ಪ್ರಯೋಗ ಅವರಿಂದ ಸಮಾಜಕ್ಕೆ ದೊರೆಯಿತು. ಈ ಅಧ್ಯಯನದ ಮೂಲಕ ಈ ಎಲ್ಲ ಪ್ರಕ್ರಿಯೆಗಳಿಗೆ ಹೊಸ ಬೆಳಕನ್ನು ನೀಡಲು ಸಾಧ್ಯವಾಗುತ್ತದೆ.

'ವೀರಶೈವ-ಲಿಂಗಾಯತ'ವೆಂಬ ಸುಸಂಸ್ಕೃತ ಸಮಾಜ ನಿರ್ಮಾಣಗೊಳ್ಳುವಲ್ಲಿ ಹಲವಾರು ಮಹಿಮಾತೀತರು ಕಾರ್ಯವನ್ನು ಕೈಗೊಂಡಿದ್ದಾರೆ. ಆ ಸಮಾಜದ ಸಂಕೀರ್ಣತೆಯನ್ನು ಸರಳೀಕರಿಸಿ ಶಿಕ್ಷಣದ ಸಾರ್ವಭೌಮತೆಯನ್ನು ಸಾಧಿಸಿ ಕರ್ನಾಟಕದಲ್ಲಿ ಅಷ್ಟೇ ಅಲ್ಲ ಇಡೀ ಭಾರತೀಯ ಸಮುದಾಯಗಳು ಹುಬ್ಬೇರಿಸುವಂತೆ ಮಾಡಿದ ಕೀರ್ತಿಗೆ ಸಲ್ಲುವವರು ಹಲವರು. ಇವರಿಗೆ ಸಮಕಾಲೀನರಾಗಿ ಕ.ಬ.ಅಂಗಡಿಯವರು ತಮ್ಮದೇ ಆದ

ಗೆಳೆಯರ ಬಳಗವೊಂದನ್ನು ಕೂಡಿಕೊಂಡು 'ಶ್ರೀ ಹಾನಗಲ್ಲ ಕುಮಾರ ಸ್ವಾಮಿ ಸೇವಾ ಶಿಕ್ಷಕರ ಸಂಘ' ಎಂಬ ಸಂಸ್ಥೆಯನ್ನು ಕಟ್ಟಿದರು. ಆ ಸಂಘದ ಮೂಲಕ ಹಲವಾರು ಕೃತಿಗಳು ಹೊರಬಂದವು. ಗದುಗಿನ ಶಹಪೂರ ಪೇಟೆಯ ಶಂಕರಲಿಂಗನ ಗುಡಿಯಲ್ಲಿ 'ರಾಜಶೇಖರ ವಿಳಾಸ'ದಂತಹ ಕೃತಿಗಳ ವಾಚನ, ಹೊಸಮಠದಲ್ಲಿ ಶರಣ ಕಿಣಗಿ ಬಸವಲಿಂಗಪ್ಪನವರಿಂದ ನಡೆಯುತ್ತಿದ್ದ ವಚನ ಶಾಸ್ತ್ರದ ಪ್ರವಚನದಲ್ಲಿ, ಬೆಟಗೇರಿಯ ವೀರಭದ್ರದೇವರ ಹಾಗೂ ಅಂಬಾದೇವಿಯ ಗುಡಿಗಳಲ್ಲಿ ಧಾರ್ಮಿಕ ವ್ಯಾಖ್ಯಾನಗಳನ್ನು ನಡೆಸಿಕೊಡುವ ರೂವಾರಿಗಳಾಗಿದ್ದರು. ತಮ್ಮ ತಾಯಿಯ ತವರೂರಾದ ಜಕ್ಕಲಿಯಲ್ಲಿ ಕೂಡ ಸಮಾಜೋನ್ನತಿಕ ಕಾರ್ಯಗಳನ್ನು ಕೈಗೊಂಡ ಅಂಗಡಿಯವರನ್ನು ಅಲ್ಲಿನ ಜನ ಗುರುತಿಸುವುದೇ 'ಜಕ್ಕಲಿ ಮಾಸ್ತರ'ರೆಂದು. ರೈತರ ಸಮಸ್ಯೆಗಳಿಗೆ ಸ್ಪಂದಿಸಿದ ಅವರು ಆ ಕುರಿತು ಲಾವಣಿ ಪದಗಳನ್ನು ಕಟ್ಟಿ ಹಾಡಿದರು. ಅದು ಹಾನಗಲ್ಲ ಕುಮಾರ ಶಿವಯೋಗಿಗಳ ಮತ್ತು ಅಲ್ಲಿನ ಜನತೆಯ ಮೆಚ್ಚುಗೆಗೆ ಪಾತ್ರವಾಯಿತು. ಜಕ್ಕಲಿ ಗ್ರಾಮ ಹಾನಗಲ್ಲ ಕುಮಾರ ಶಿವಯೋಗಿಗಳ ಕೃಪೆಗೆ ಪಾತ್ರವಾದ ಸ್ಥಳ. ಅಲ್ಲಿ ಅವರ ಧ್ಯೇಯೋದ್ದೇಶಗಳನ್ನು ಕಾರ್ಯಗತವಾಗುವಂತೆ ಮಾಡಿದ ಶ್ರೇಯಸ್ಸು ಅವರಿಗೆ ಸಲ್ಲುತ್ತದೆ.

೧೯೨೯ರಲ್ಲಿ ರಚನೆಗೊಂಡ ಅವರ 'ಶ್ರೀ ಬಸವೇಶ್ವರ ಭಜನಾ ಮಾಲಾ' ಕೃತಿಯು ಮನುಷ್ಯನಿಗೆ ಬೇಕಾದ ಆಧ್ಯಾತ್ಮಿಕ ಹಸಿವನ್ನು ಹಿಂಗಿಸಿಕೊಳ್ಳುವ ಕುರಿತು ಸಾಕಷ್ಟು ವಿಷಯವನ್ನು ವಿವೇಚಿಸುತ್ತದೆ. ಪ್ರಾರ್ಥನೆ, ಪದ್ಯ, ಕೀರ್ತನೆ, ಸಂಗೀತ ಭಕ್ತಿ ನಿವೇದನೆಗೆ ಬಳಸುವ ಅಷ್ಟಕ-ಷಟ್ಕಗಳು ಹೇಗೆ ಮನುಷ್ಯನ ಮನಸ್ಸನ್ನು ವಿಕಾಸಗೊಳಿಸುತ್ತವೆ ಎಂಬುದನ್ನು ತಿಳಿಸುತ್ತವೆ. ಇವುಗಳ ರಸ-ರುಚಿಯು ಪಂಚೇದ್ರಿಯಗಳ ಮೂಲಕ ಫಲ ಮತ್ತು ಪ್ರಯೋಜನವನ್ನು ನೀಡುತ್ತದಾದ್ದರಿಂದ ಈ ಮೂಲಕ ಮನೋವಿಕಾಸಕ್ಕೆ, ಸುಪ್ತ ಮನಸ್ಸನ್ನು ಜಾಗೃತಗೊಳಿಸುವುದಕ್ಕೆ ಇಲ್ಲಿ ಹೆಚ್ಚಿನ ಆಧ್ಯತೆ ದೊರೆಯುತ್ತದೆ. ಈ ಸಂವೇದನೆಗಳು ಇಂದಿನ ನಮ್ಮ ಭಾರತೀಯ ಯುವ ಮನಸ್ಸುಗಳಿಗೆ ಅತ್ಯಂತ ಅವಶ್ಯಕವಾದವುಗಳು. ಆ ದೃಷ್ಟಿಯಿಂದಲೂ ಇವರ ಬದುಕು-ಬರಹವನ್ನು ಅಧ್ಯಯನಗೈಯುವ ಅವಶ್ಯಕತೆಯಿದೆ.

'ಬೊಮ್ಮನ ಬಡಬಡಿಕೆ', 'ಹನುಮಂತನಿಗೆ ಲಿಂಗಧಾರಣೆ' ಎಂಬ ದೊಡ್ಡಾಟಗಳನ್ನು ಬರೆದರು. ಈ ಕೃತಿಗಳು ಸಮಾಜದಲ್ಲಿದ್ದ ಮಡಿ ಮೈಲಿಗೆಗಳನ್ನು ಖಂಡಿಸುತ್ತವೆ. ಸಂಪೂರ್ಣ ಮೌಢ್ಯಗಳನ್ನು ಕಿತ್ತು ಹಾಕುವಲ್ಲಿ ಆಸಕ್ತರಾಗಿದ್ದರು. ಈ ಸಮಸ್ಯೆಗಳಿಗೆ ಬಸವಾದಿ ಶಿವಶರಣರ ಬದುಕು-ಬರಹಗಳೇ ಸೂಕ್ತವಾದ ಪರಿಹಾರವನ್ನು ಒದಗಿಸಬಲ್ಲವು ಎಂಬ ನಂಬಿಕೆ ಅವರಲ್ಲಿತ್ತು. ಹೀಗಾಗಿ ಅವರ ತತ್ತ್ವಗಳ ಪ್ರಸಾರ ಮತ್ತು ಪ್ರಚಾರ ಕಾರ್ಯವನ್ನು ಕೈಗೊಂಡರು.

ಶಿಕ್ಷಕರ ಸಹಕಾರಿ ಸೊಸಾಯಿಟಿ, ಅಖಿಲ ಭಾರತ ವೀರಶೈವ ವಿದ್ಯಾಪೀಠ, ಗೊಡಚಿ ಸೇವಾ ಸಂಘ, ಶಿವಾನುಭವ ಕಾರ್ಯಕ್ರಮಗಳು, ವೀರಶೈವ ಪ್ರಗತಿಶೀಲ ಯುವಕ ಸಂಘ, ತರುಣ ಸಂಘ, ಅನುಭವ ಮಂಟಪ ಗ್ರಂಥಮಾಲೆ, ನಿವೃತ್ತಿಯ ನಂತರ 'ಜಯಬಸವ ಪುಸ್ತಕಾಲಯ'ದ ಸ್ಥಾಪನೆ, ನಂತರ 'ಮಹಾಂತೇಶ ಮುದ್ರಣ'ದ ಸ್ಥಾಪನೆ, ಪಠ್ಯಪುಸ್ತಕ ರಚನಾ ಸಮಿತಿಯನ್ನು ನಿರ್ಮಿಸಿಕೊಂಡು ಹೊಸ ಅಭ್ಯಾಸ ಪತ್ರಿಕೆಗಳಿಗನುಸಾರವಾಗಿ ಪಠ್ಯಪುಸ್ತಕ ರಚಿಸಿದರು. ನಂತರ ಸ್ವತಃ ಪ್ರಕಾಶಕರಾಗಿ, 'ಕರ್ನಾಟಕ ಬಂಧು' ಪತ್ರಿಕಾ ಸಂಪಾದಕರಾಗಿ ಕಾರ್ಯಗೈದರು. ಪ್ರಾಥಮಿಕ ಹಾಗೂ ಮಾಧ್ಯಮಿಕ ಶಾಲೆಗಳಿಗಾಗಿ ಮೈಸೂರು ರಾಜ್ಯದ ವಿದ್ಯಾ ಇಲಾಖೆಗೆ ಪಠ್ಯಪುಸ್ತಕ ರಚನೆ, ಪುರಾಣ ರಚನೆ ಇವೆಲ್ಲವುಗಳ ಮೂಲಕ ಕಾಯಕ ತತ್ವಕ್ಕೆ ಹೊಸ ಬಾಷ್ಯಯನ್ನು ಬರೆದಿದ್ದಾರೆ. ಈ ಅಧ್ಯಯನದಿಂದ ಅವರ ಈ ಎಲ್ಲ ವಿಷಯಗಳ ಮೇಲೆ ಬೆಳಕು ಚೆಲ್ಲಿದಂತಾಗುತ್ತದೆ.

ಜೀವನಾನುಭವ ಮತ್ತು ಅನುಭಾವದಿಂದ ಸಾಮಾನ್ಯನೊಬ್ಬನು ಹೇಗೆ ಶರಣಜೀವಿಯಾಗಿ ಬದುಕನ್ನು ಸಾರ್ಥಕ ಮಾಡಿಕೊಳ್ಳಬಲ್ಲನೆಂಬುದಕ್ಕೆ ಕ.ಬ.ಅಂಗಡಿಯವರು ನಿತ್ಯ ನಿದರ್ಶನವಾಗಿದ್ದಾರೆ. ಈ ನಿಟ್ಟಿನಲ್ಲಿ ಅವರ ಬದುಕು-ಬರಹಗಳನ್ನು ಅಗತ್ಯವಾಗಿ ಅಧ್ಯನಕ್ಕೊಳಪಡಿಸುವುದು ಹೆಚ್ಚು ಸುಸಂಗತ.

ಇಂದು ಸಂಘ-ಸಂಸ್ಥೆಗಳು ರಚನೆಯಾಗಿ ಅಲ್ಲಿಯ ಉದ್ದೇಶಗಳು ಗುರುತಿಸುವ ಹಂತದಲ್ಲಿಯೇ ಮುರುಟಿ ಹೋಗುತ್ತವೆ. ಇದಕ್ಕೆ ಕಾರಣ ಸಂಘಟನೆಯ ಪರಿಭಾಷೆಯನ್ನು ಸರಿಯಾಗಿ ಅರ್ಥೈಸಿಕೊಳ್ಳದಿರುವುದು ಮತ್ತು ಸದಸ್ಯರಲ್ಲಿ ಭಿನ್ನ ರುಚಿ, ಭಿನ್ನ ಆಲೋಚನೆಗಳು. ಆ ಸಂಘಟನೆಗಳಿಂದ ಸ್ವಾರ್ಥಪರ ಹಿತಾಸಕ್ತಿಗಳನ್ನು ಅಪೇಕ್ಷಿಸುವುದೇ ಆಗಿದೆ. ಆದರೆ ಈ ಅಧ್ಯಯದ ಮೂಲಕ ಅವರ ಸಂಘಟನಾತ್ಮಕ ಶಕ್ತಿಯನ್ನು ಅರಿತುಕೊಳ್ಳುವ ಉದ್ದೇಶವೂ ಆಗಿದೆ. ಉತ್ತರ ಕರ್ನಾಟಕದ ಈ ಭಾಗದಲ್ಲಿ ವಿಶೇಷತಃ ಮುಂಬಯಿ ಕರ್ನಾಟಕದ ಭಾಗದಲ್ಲಿ ಪಠ್ಯಪುಸ್ತಕ ರಚನೆ, ಮುದ್ರಣ, ಪ್ರಕಾಶನ ಕಾರ್ಯಗಳನ್ನು ಗೈಯ್ಯುವುದರಲ್ಲಿ ಪ್ರಥಮರೆನ್ನಿಸಿ, ಶಿಕ್ಷಣ ಮತ್ತು ವಿದ್ಯಾರ್ಜನೆಯ ಬಗೆಗೆ ತಮಗಿರುವ ಶುದ್ಧ ಮತ್ತು ಸಿದ್ಧ ದೃಷ್ಟಿಯನ್ನು ತೋರ್ಪಡಿಸಿದ್ದಾರೆ. ಈ ಎಲ್ಲ ವಿಚಾರಗಳು ಅವರ ಬದುಕಿನ ಅವಿಭಾಜ್ಯ ಅಂಗವಾಗಿವೆ. ಹೀಗಾಗಿ ಅವರ ಬದುಕಿನ ಅಧ್ಯಯನವೆಂದರೆ ಅದು ಸಮಕಾಲೀನ ಶಿಕ್ಷಣ ಚರಿತ್ರೆಯೂ ಆಗಿದೆ.

'ಶರಣ'ರನ್ನು ಅರ್ಥೈಸಿಕೊಳ್ಳಲು ಅವರ ಬೆಳಕಿನ ಮಾರ್ಗದಲ್ಲಿ ಸಾಗುವುದು ಅಗತ್ಯವಾದುದು. 'ಶರಣರ ಪ್ರಜ್ಞೆಯೊಂದಿಗೆ ಶರಣರನ್ನು ಅರ್ಥೈಸಿಕೊಳ್ಳುವ ಪ್ರಜ್ಞೆಯ ಹರವನ್ನು ಹೊಂದಬೇಕಾಗುವುದು'. ೧೨ನೇ ಶತಮಾನದಲ್ಲಿ ಆಗಿ ಹೋದ ಬಸವಾದಿ ಶಿವಶರಣರಷ್ಟೇ ಶಿವಶರಣರಲ್ಲ ಅವರನ್ನು ಅವರ ನಡೆ-ನುಡಿಗಳನ್ನು ಮನನ

ಮಾಡಿಕೊಂಡು ಅವರ ಮೌಲ್ಯಗಳನ್ನು ಬದುಕಿ-ಬಾಳಿದವನು ನಿಜಶರಣನಾಗಬಲ್ಲ. ನಡೆ-ನುಡಿಯಲ್ಲಿ ವ್ಯತ್ಯಯಗಳು ಕಂಡರೆ ಅವನೆಂದಿಗೂ ಶರಣನಾಗಲಾರ. ಈ ಮಹತ್ವದ ಸಂಗತಿ ಎಷ್ಟು ಸರಳವಾಗಿ ಕಾಣುವುದೊ ಅಷ್ಟೇ ಕಠಿಣವೂ ಇದೆ. ಕ.ಬ.ಅಂಗಡಿಯವರೊಬ್ಬ ಶ್ರೀಸಾಮಾನ್ಯರಾಗಿ ಮತ್ತು ಶಿಕ್ಷಣಾಧಿಕಾರಿಗಳಾಗಿ ಅವರು ಬದುಕಿ ಬಾಳಿದ ಸಾಧಿಸಿದ ಶರಣತ್ವ ಅರಿಯಲು ವೀರಶೈವ-ಲಿಂಗಾಯತ ಸಮಾಜದ ಭದ್ರವಾದ ಮತ್ತು ಗಟ್ಟಿಯಾದ ತಳಹದಿಯನ್ನು ಅಭ್ಯಾಸ ಮಾಡಬೇಕಾಗುತ್ತದೆ. ಮೌಢ್ಯಗಳ ಜಾಡಿನಲ್ಲಿ ಮನುಷ್ಯ ಮನುಷ್ಯನಾಗಿರದೇ ಅನ್ಯವೆಲ್ಲವೂ ಆಗಿದ್ದಾನೆ. ಮಾನವೀಯ ಮೌಲ್ಯಗಳ ಸರಳ ಸಮರ್ಥನೆಯೆ ವೀರಶೈವ-ಲಿಂಗಾಯತ ಸಮಾಜ. ಅದರ ಅಧ್ಯಯನವೆಂದರೆ ಮಾನವನಲ್ಲಿ ಮಾನವತೆಯ ಪರಂಪರೆಯೊಂದನ್ನು ಅರಿತುಕೊಂಡಂತೆಯೇ. ಹೀಗಾಗಿ ಅವರೊಟ್ಟಿಗೆ ಅವರ ಸಮಕಾಲೀನ ಸಂಸ್ಕೃತಿ ಮತ್ತು ಪರಂಪರೆಯೊಂದನ್ನು ಅಭ್ಯಾಸ ಮಾಡಿದಂತಾಗುತ್ತದೆ. ಅಂದಿನ ಸಾಮಾಜಿಕ ಪರಿಸ್ಥಿತಿಗಳು ಯಾವ ರೀತಿಯಲ್ಲಿ ಬೆಳೆದು ಬಂದಿದ್ದವು ಅನ್ನುವುದು ಕೂಡ ಅಷ್ಟೇ ಪ್ರಮುಖ ಅಧ್ಯಯನ ವಿಷಯವಾಗುತ್ತದೆ.

ನಡೆ-ನುಡಿಗಳನ್ನು ಬಿಡಿ ಬಿಡಿಯಾಗಿಸದೆ ನುಡಿದುದನ್ನೆ ನಡೆದವರು ಶರಣರು. ಅವರ ಜೀವನದ ಪ್ರಖರ ಜ್ಯೋತಿ ಇಂದಿಗೂ ನಮ್ಮ ಮನೆ-ಮನಗಳಲ್ಲಿ ಬೆಳಗುತ್ತಿರಲು ಕ.ಬ.ಅಂಗಡಿಯವರಂಥಹ ವ್ಯಕ್ತಿಗಳು ಕಾರಣರಾಗುತ್ತಾರೆ. ಬದುಕು ಸಾಮಾಜಿಕ, ಶೈಕ್ಷಣಿಕ, ಧಾರ್ಮಿಕ ಉನ್ನತಿಯನ್ನು ಸಾಧಿಸಿ, ಬದುಕಿರುವಾಗ ಕ್ರಿಯಾಶೀಲವಾಗಿದ್ದು, ಬದುಕಿಲ್ಲದಿರುವಾಗಲೂ ಕ್ರಿಯಾಸ್ಪಂದನಕ್ಕೆ ಮನಸ್ಸುಗಳನ್ನು ಅಣಿಮಾಡುವ ಕಾರ್ಯದಲ್ಲಿ ತಲ್ಲೀನವಾಗುವಂತಿದ್ದರೆ ಆ ಬದುಕು ಸಾರ್ವತ್ರಿಕವಾಗುತ್ತದೆ, ಸಾರ್ವಜನಿಕವಾಗುತ್ತದೆ. ಆ ಶಕ್ತಿ ವ್ಯಕ್ತಿಗತವನ್ನು ಮರೆಮಾಚಿ ಸಾಂಘಿಕ ಸೇವೆಗೆ ಸಮರ್ಪಣೆಯಾಗುತ್ತದೆ. ಅಂತಹ ವ್ಯಕ್ತಿತ್ವ ಮತ್ತು ಬದುಕು ಇವರದ್ದಾಗಿದೆ.

ಬಡತನದ ನಡುವೆ ಶಿಕ್ಷಣಕ್ಕೆ ಒತ್ತು ಕೊಟ್ಟು ತಮ್ಮ ಜೀವನಕ್ಕೆ ನವ ಚೈತನ್ಯವನ್ನು ಕೊಟ್ಟುಕೊಂಡು ಅವರು ಬೆಳೆದ ಪರಿಯು ಅದ್ಭುತ. ತಾವು ಬೆಳೆಯುವುದರೊಂದಿಗೆ ತಮ್ಮ ಸಮಾನ ವಯಸ್ಕರನ್ನು ಮತ್ತು ಸಮಾನ ಮನಸ್ಕರನ್ನು ಬೆಳೆಸಿದ ಮತ್ತು ಹೆಚ್ಚು ಹೆಚ್ಚಾಗಿ ಸಂಘಟನಾತ್ಮಕ ಕಾರ್ಯಗಳಲ್ಲಿ ತಮ್ಮನ್ನು ತೊಡಗಿಸಿಕೊಂಡವರು. ಹೀಗಾಗಿಯೇ ಅವರ ಸೇವೆಯನ್ನು ಸಾಂಘಿಕವಾಗಿಯೇ ಗುರುತಿಸಲಾಗುತ್ತದೆ. ಇದಕ್ಕೆ ನಿದರ್ಶನವೆಂದರೆ ಅವರು ತಮ್ಮ ಸಮಾನ ಮನಸ್ಕರಾದ ಶ್ರೀ ನಾಗಭೂಷಣ ಶಾಸ್ತ್ರಿಗಳನ್ನು ಕೂಡಿಕೊಂಡು 'ವೀರಶೈವ ಸಂಸ್ಕೃತಿ ಪ್ರಕಾಶನ ಸಮಿತಿ'ಯ ರಚನಾತ್ಮಕ ಕಾರ್ಯಗಳಲ್ಲಿ ತೊಡಗಿಕೊಂಡರು. ಈ ಸಮಿತಿಯ ಮೂಲಕ 'ಅನುಭವ ಮಂಟಪ ಗ್ರಂಥ ಮಾಲೆ' ಯು ಹುಟ್ಟಿ ಬೆಳೆಯಿತು. ಅದರ ಸಂಪಾದಕ ಮಂಡಳಿಯಲ್ಲಿ ಇವರಿರ್ವರೊಟ್ಟಿಗೆ ಎಸ್.ವಿ.ಕಲ್ಮಠರು ಮತ್ತು

ಕೆ.ಎಚ್.ಓಲಿಯವರೂ ಇದ್ದದ್ದನ್ನು ಇಲ್ಲಿ ಸ್ಮರಿಸಬೇಕು. ಈ ನಾಲ್ಕು ಜನರು ಮಾಡಿದ ಕಾರ್ಯ ಉತ್ತರ ಕರ್ನಾಟಕದ ವೀರಶೈವ ಶಿಕ್ಷಣ ಪ್ರಸಾರದಲ್ಲಿ ಸಂಚಲನ ಮೂಡಿಸಿತ್ತು ಎಂದರೆ ಅತಿಶಯೋಕ್ತಿಯಲ್ಲ. ಈ ಉದಾತ್ತ ವಿಷಯಗಳನ್ನು ಜನಮನಕ್ಕೆ ತಲುಪಿಸುವುದು ಈ ಅಧ್ಯಯನದ ಮುಖ್ಯ ಉದ್ದೇಶಗಳಲ್ಲಿ ಒಂದಾಗಿದೆ.

ಕನ್ನಡದ ಸಂಸ್ಕೃತಿಯ ಮಹತ್ತರವನ್ನು ಉತ್ತರ ಕರ್ನಾಟಕ ವಿಶೇಷ ರೀತಿಯಲ್ಲಿ ಹಿಡಿದಿಡುತ್ತದೆ. ಇಲ್ಲಿಯ ಪ್ರತಿಯೊಂದು ಪದಾರ್ಥಗಳಲ್ಲಿ ಕಲಾಪ್ರಬೇಧಗಳನ್ನು ಕಾಣಬಹುದು. ಇಲ್ಲಿಯ ಬಯಲು ಸೀಮೆಯೆನ್ನಿಸಿಕೊಂಡ ಗದಗ ಕೂಡ ವಿಷೇಶವಾದ ಕೊಡುಗೆಗಳನ್ನು ನೀಡಿದ ಸ್ಥಳವಾಗಿದೆ. ಈ ಹಿನ್ನೆಲೆಯಲ್ಲಿ ಗದುಗಿನ ಅಂದಿನ ಸಾಮಾಜಿಕ ಪರಿಸರವನ್ನು ಒಳಹೊಕ್ಕು ನೋಡುವಾಗ ಕಾಣುವ ಸಹಜವಾದ ಸಂಗತಿಗಳು ಬಹಳ ಸರಳವಾಗಿ ಕಂಡರೂ ಅವುಗಳಲ್ಲಿ ಅಡಗಿರುವ ನೈತಿಕ ಮೌಲ್ಯ ಹಿರಿದಾದುದು. ವ್ಯಕ್ತಿಯೋರ್ವ ಸಮಾಜದ ಪ್ರಬಲವಾದ ಚಳುವಳಿಯ ಮದ್ಯ ಹುಟ್ಟಿ, ಅಂದಿನ ಸಂವೇದನೆಗಳನ್ನು ತನ್ನ ಬೆಳವಣಿಗೆಯ ಜೊತೆ ಜೊತೆಗೆ ಕಂಡುಕೊಳ್ಳುತ್ತಲೇ ತಾನು ಹೇಗೆ ಭಿನ್ನವಾಗಿ ನಿಲ್ಲುತ್ತಾನೆ ಎಂಬುದಕ್ಕೆ ಕ.ಬ.ಅಂಗಡಿಯವರು ನಿದರ್ಶನರಾಗಿದ್ದಾರೆ. ಈ ಅಂಶವನ್ನು ಬಹಿರ್ ಪ್ರಕಟಿಸುವುದು ಕೂಡ ಈ ಅದ್ಯಯನದ ಉದ್ದೇಶಗಳಲ್ಲಿ ಮತ್ತೊಂದಾಗಿದೆ.

ಬಸವಾದಿ ಪ್ರಮಥರ ಚಿಂತನೆಗಳು ಮತ್ತು ಬದುಕು ನಡೆ-ನುಡಿಯಲ್ಲಿ ಲೌಕಿಕ ಮತ್ತು ಪಾರಮಾರ್ಥಿಕ ಜೀವನದ ನಡಿಗೆಗಳನ್ನು ಪ್ರತಿಪಾದಿಸಿದ ಕ.ಬ.ಅಂಗಡಿಯವರನ್ನು ಅವರ ನಿಲುವುಗಳನ್ನು ಅವರ ಚಿಂತನೆಗಳನ್ನು ವಿಮರ್ಶಿಸಹೊರಟರೆ ಅದೊಂದು ಅಳಿಯದ ಬೃಹತ್ ಕಾರ್ಯವಾಗಿ ಪರಿಣಮಿಸುವಂತಿದೆ. ಈ ದೃಷ್ಟಿಯಿಂದ ಅವರ ಚಿಂತನೆ ಮತ್ತು ನಿಲುವುಗಳನ್ನು ಅಧ್ಯಯನಕ್ಕೆ ಒಳಪಡಿಸುವುದು ಇಲ್ಲಿನ ಉದ್ದೇಶವಾಗಿದೆ.

ಯಾವುದೇ ಸ್ವಹಿತಾಸಕ್ತಿ ಬಯಸದೆ ತಮ್ಮ ಜೀವನವನ್ನು ಸಮಾಜ-ಶಿಕ್ಷಣ-ಧರ್ಮ-ಸಂಸ್ಕೃತಿ ಇವುಗಳ ಪುನರುತ್ಥಾನಕ್ಕೆ ನಿರಂತರವಾಗಿ ಸಮರ್ಪಿಸಿಕೊಂಡ ಮತ್ತು ಅದನ್ನೇ ಬದುಕಿನ ಪ್ರಕ್ರಿಯೆಯನ್ನಾಗಿ ಮಾಡಿಕೊಂಡ ಅವರ ಬದುಕು ಮತ್ತು ಬರಹದ ಅಧ್ಯಯನದ ಅವಶ್ಯಕತೆ ಇಂದಿನ ಜಾತಿ-ರಾಜಕಾರಣ-ಭಾಷೆ-ಔದ್ಯೋಗಿಕರಣ-ಜಾಗತೀಕರಣದ ತುತ್ತ ತುದಿಗೆ ನಿಂತ ಸಮಾಜಕ್ಕೆ ಅವಶ್ಯಕವಾದುದು. ನಮ್ಮ ಮುಂದಿನ ಜನಾಂಗ ಈ ದಿಸೆಯಲ್ಲಿ ಹೆಜ್ಜೆ ಇಡುವ ಕುರಿತು ಚಿಂತಿಸುವ ಅವಶ್ಯಕತೆಯೂ ಇಲ್ಲಿ ಮುಖ್ಯವಾದುದು.

ಅವರ ಪ್ರತಿ ನಡೆಯಲ್ಲಿಯೂ ಬಸವಾದಿ ಪ್ರಮಥರ ಆಶಯಗಳ ತುಡಿತವೇ ಕಾಣುವುದನ್ನು ಗುರುತಿಸಬಹುದು. ಸಮಾಜದ ಎರಡನೆಯ ವರ್ಗವಾಗಿ ನಾವು ಬೇಧವೆಣಿಸುವ ಸ್ತ್ರೀಯರನ್ನು ಮುಖ್ಯವಾಹಿನಿಗೆ ತರುವ ಶರಣರ ಹಂಬಲವನ್ನು, ಶಿಕ್ಷಣಕ್ಕೆ

ಅವರು ನೀಡಿದ ಒಲವನ್ನು, ಸಾಮಾಜಿಕ ಸಮತೋಲನವನ್ನು, ಕೌಟುಂಬಿಕ ಸ್ವಾರಸ್ಯವನ್ನು, ದೇವರ ಬಗೆಗಿನ ಅವರ ನಿಲುವುಗಳು, ಕಾಯಕಕ್ಕೆ ಅವರು ನೀಡಿದ ಪ್ರಾಶಸ್ತ್ಯವನ್ನು, ಬದುಕಿನಲ್ಲಿರಬೇಕಾದ ಸರಳತೆಯನ್ನು ಇವೆಲ್ಲವುಗಳು ಕ.ಬ.ಅಂಗಡಿಯವರ ಬದುಕು - ಬರಹಗಳಲ್ಲಿ ಮುಖ್ಯವಾಗಿ ಗುರುತಿಸಬಹುದಾಗಿದೆ. ಇವೆಲ್ಲವುಗಳು ಆರೋಗ್ಯಕರ ಸಮಾಜ ಮತ್ತು ದೇಶ ಕಟ್ಟುವ ಪ್ರಕ್ರಿಯೆಗಳಾಗಿವೆ ಎಂಬುದನ್ನು ಮರೆಯುವಂತಿಲ್ಲ. ಇಂದಿನ ಆಧುನಿಕ ದಿನಗಳಲ್ಲಿ ವಿಶೇಷವಾಗಿ ಸ್ತ್ರೀಯರ ಸಬಲತೆಗೆ ಪ್ರಾಮುಖ್ಯತೆಯನ್ನು ನೀಡಿದ ಅವರು ಭಾರತೀಯ ಪೌರಾಣಿಕತೆಗಳಲ್ಲಿ ಸ್ತುತಿಸುತ್ತ, ಗೌರವಿಸುತ್ತ ಬಂದ 'ಪಂಚ ಕನ್ನೆ'ಯರ ಹಿರಿಮೆ ಗರಿಮೆ ಪಾತಿವ್ರತ್ಯವನ್ನು ಪ್ರತಿಪಾದಿಸದೆ ಇದಕ್ಕೆ ಪೂರಕವಾಗಿ ಬದುಕಿದವರು ಬಸವಾದಿ ಪ್ರಮಥರ ಕಾಲದ 'ಶಿವಶರಣೆ'ಯರು ಎನ್ನುವ ನಿಜ ವೈಚಾರಿಕತೆಗೆ ಮುನ್ನುಡಿ ಬರೆದ ಬದುಕು-ಬರಹ ಅವರದಾಗಿದೆ.

ಕ.ಬ.ಅಂಗಡಿಯವರ ಕೃತಿಗಳೆಷ್ಟು? ಅವುಗಳಲ್ಲಿ ಈವರೆಗೆ ದೊರಕಿರುವ ಕೃತಿಗಳಲ್ಲಿ ತೋರಿ ಬರುವ ವೈಚಾರಿಕತೆಯೇನು? ಅವರ ನಾಟಕ ಕೃತಿಗಳಲ್ಲಿ ರಂಗಮಂದಿರದಲ್ಲಿ ಪ್ರಯೋಗಿಸ್ಪಟ್ಟ ನಾಟಕಗಳೆಷ್ಟು? ಅವರ ಅಷ್ಟಕ-ಷಟ್ಕಗಳ ಕುರಿತು, ಅವರ ಶೈಕ್ಷಣಿಕ ಪಠ್ಯಪುಸ್ತಕಗಳ ಕುರಿತು, ಕಿರುಗ್ರಂಥಗಳ ಕುರಿತು, ಪುರಾಣಗಳ ಕುರಿತು ವಿಶೇಷ ಅಧ್ಯಯನವನ್ನು ಮಾಡಲಾಗುತ್ತದೆ. ಆ ಮೂಲಕ ಅವರ ಸಮಗ್ರ ಕೃತಿಗಳಲ್ಲಿರುವ ಜೀವಸತ್ವವನ್ನು ಇಂದಿನ ಜನತೆಗೆ ಸಾದರಪಡಿಸುವುದು ಅಧ್ಯಯನದ ಉದ್ದೇಶಗಳಲ್ಲೊಂದು.

ಇಂತಹ ಪ್ರಾತಃಸ್ಮರಣೀಯರ ಬದುಕು ಮುಂದಿನ ಪೀಳಿಗೆಗೆ ದಾರೀದೀಪವೂ, ಆದರ್ಶ ಮತ್ತು ಅನುಕರಣೀಯವಾದುದರಿಂದ ಅವರ ಸಾಧನೆ, ಬೋಧನೆಗಳನ್ನು ಅಧ್ಯಯನ ಮಾಡುವುದು ಅತ್ಯಂತ ಅವಶ್ಯಕವೂ, ನಮ್ಮೆಲ್ಲರ ಕರ್ತವ್ಯವೂ ಆಗಿದೆ.

## ಅಧ್ಯಯನದ ಆಕರಗಳು :

ಪ್ರಸ್ತುತ ಮಹಾಪ್ರಬಂಧದ ರಚನೆಗೆ ಆಕರವಾಗಿ ಅನೇಕ ಪ್ರಕಟಿತ ಮತ್ತು ಅಪ್ರಕಟಿತ ಲೇಖನಗಳನ್ನು ಮತ್ತು ಸಾಹಿತ್ಯವನ್ನು ಬಳಸಿಕೊಳ್ಳಲಾಗಿದೆ. ಕ.ಬ.ಅಂಗಡಿಯವರ ಕೃತಿಗಳು ಮತ್ತು ಲೇಖನಗಳು ಪ್ರಮುಖ ಆಕರಗಳಾಗಿವೆ. ತಮ್ಮ ಕೆಲವು ಕೃತಿಗಳಲ್ಲಿ ತಮ್ಮ ವಯಕ್ತಿಕ ವಿಷಯಗಳನ್ನು ಹೇಳಿಕೊಂಡಿದ್ದಾರೆ. ಅವರನ್ನು ಸಮೀಪವರ್ತಿಗಳಾಗಿ ಕಂಡ ಗದುಗಿನ ತೋಂಟದಾರ್ಯ ಮಠದ ಸಿದ್ಧಲಿಂಗ ಶ್ರೀಗಳನ್ನು ಮತ್ತು ಮುಂಡರಗಿಯ ಅನ್ನದಾನೀಶ್ವರ ಶ್ರೀಗಳನ್ನು ಸಂದರ್ಶಿಸಲಾಗಿದೆ. ಅವುಗಳನ್ನು ಕೂಡ ಆಧಾರವಾಗಿಟ್ಟುಕೊಳ್ಳಲಾಗಿದೆ. ಕ.ಬ. ಅಂಗಡಿಯವರನ್ನು ಕುರಿತು ಅವರ ಶಿಷ್ಯರಾದ ಡಾ. ಆರ್.ಸಿ. ಹೀರೆಮಠ ಅಭಿನಂದನಾ ಕೃತಿ 'ಬೆಳುವಲ', ವಿ.ವಿ.ಗಡಾದ ಅವರ 'ಶಿಕ್ಷಣಸಿರಿ', ನಾಗಭೂಷಣಶಾಸ್ತ್ರಿಯವರ

'ನಾಡಭೂಷಣ' ಕೃತಿಯನ್ನು, ಡಾ. ಡಿ.ಎಮ್. ಹಿರೇಮಠ ಅವರ ಮಹಾಪ್ರಬಂಧ 'ನಾಗಭೂಷಣ ಶಾಸ್ತ್ರಿಗಳು', ಮಲ್ಲಿಕಾರ್ಜುನ ಲಕ್ಕೆಯವರ ಲೇಖನವನ್ನು ಆಕರವಾಗಿಟ್ಟುಕೊಳ್ಳಲಾಗಿದೆ. ಡಾ. ವಿ. ಶಿವಾನಂದ ಅವರ, ಕ.ಬ.ಅಂಗಡಿಯವರ ಶಿಷ್ಯಂದಿರಾದ ಗಂಜೀಹಾಳ, ಎಸ್.ಅನ್ನದಾನಿ, ಲಿಂಗಶೆಟ್ಟಿ ಮಾಸ್ತರರು ಬರೆದ ಕವಿತೆಗಳನ್ನು ಆಕರವಾಗಿ ಬಳಸಿಕೊಳ್ಳಲಾಗಿದೆ. ಅವರು ಶಿಕ್ಷಕರಾಗಿ ಮತ್ತು ಮುಖ್ಯೋಪಾದ್ಯಾಯರಾಗಿ ಮತ್ತು ಅಲ್ಲಿಂದಲೇ ಸಹಾಯಕ ಶಿಕ್ಷಣಾಧಿಕಾರಿಗಳಾಗಿ ಉನ್ನತ ಹುದ್ದೆಯನ್ನಲಂಕರಿಸಿದ ಸೆಂಟ್ರಲ್ ಸ್ಕೂಲಿನ ಶತಮಾನೋತ್ಸವದ ಸ್ಮರಣ ಸಂಚಿಕೆಯನ್ನು ಆಕರವನ್ನಾಗಿ ಬಳಸಿಕೊಳ್ಳಲಾಗಿದೆ. ಕ್ಷೇತ್ರ ಕಾರ್ಯಚರಣೆಯ ಸಂದರ್ಭದಲ್ಲಿ ಸೆಂಟ್ರಲ್ ಸ್ಕೂಲಿಗೆ ಭೇಟಿ ನೀಡಿ ಅಲ್ಲಿಯ ಅವರ ಕೆಲವು ದಾಖಲೆಗಳನ್ನು ಪರಾಮರ್ಶಿಸಲಾಗಿದೆ. ಅವರ ೮೦ನೇ ಹುಟ್ಟಹಬ್ಬದ ಸವಿ ನೆನಪಿಗಾಗಿ ಹೊರತಂದ 'ಶರಣ' ಹೆಸರಿನ ಸ್ಮರಣ ಸಂಚಿಕೆಯನ್ನು ಆಕರವಾಗಿಟ್ಟುಕೊಳ್ಳಲಾಗಿದೆ. ತೋಂಟದಾರ್ಯ ಮಠ ಸಾವಿರ ಶಿವಾನುಭವದ ಸಂದರ್ಭದಲ್ಲಿ ಹೊರತಂದ 'ಸಾವಿರ ಶಿವಾನುಭವ' ಎಂಬ ಕೃತಿಯನ್ನು, 'ಶಿವಾನುಭವಿಗಳು' ಎಂಬ ಕೃತಿಯನ್ನು, ವಿಭೂತಿಯವರ 'ಮೆಲುಕು' ಕೃತಿಯನ್ನು ಆಕರವಾಗಿಟ್ಟು ಕೊಳ್ಳಲಾಗಿದೆ. ಗದುಗಿನಲ್ಲಿ ನಡೆದ ೭೬ನೇ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನದ ಸ್ಮರಣ ಸಂಚಿಕೆ 'ಬೆಳವಲ'ದಲ್ಲಿ ಅವರ ಕುರಿತು ಬರೆದ ಲೇಖನವನ್ನು ಆಕರವಾಗಿಟ್ಟು ಕೊಳ್ಳಲಾಗಿದೆ. ಮುಂಡರಗಿಯ ಪ್ರಸಿದ್ಧ ಸಾಹಿತಿಗಳಾದ ಮಹಾಲಿಂಗ ಯಾಳಗಿಯವರು ಬರೆದ ಲೇಖನವನ್ನು, ಡಾ. ಸಂಗಮೇಶ ಹಂಡಗಿಯವರ, ನಾಗಭೂಷಣ ಶಾಸ್ತ್ರಿಗಳ, ತುಪ್ಪದ ಬಸವೇಶ್ವರರ, ಡಾ. ಎಂ.ಎಸ್. ಸುಂಕಾಪುರ, ಬಿ.ಎಸ್. ಶಿವಶಿಂಪಿಗೇರವರ, ಕೌತಾಳ ವೀರಪ್ಪನವರ, ಕೆ.ಜಿ.ಗೋಲಪ್ಪನವರ, ವಿಶ್ವನಾಥ ಬುಳ್ಳಾ, ಕಲ್ಯಾಣಶ್ರೇಷ್ಠಿ, ಕುಂಚ ಕಲಾವಿದ ಸಿ.ಎನ್.ಪಾಟೀಲ, ಮೆಣಸಗಿಯ ಪಾಂಡುರಂಗ ತಮ್ಮಾಜಿ ಕುಲಕರ್ಣಿ, ಎಸ್.ಎಮ್.ವಾಲಿ ಅವರ ಲೇಖನಗಳನ್ನು ಆಕರಗಳನ್ನಾಗಿ ಇಟ್ಟುಕೊಳ್ಳಲಾಗಿದೆ. ತೋಂಟದಾರ್ಯ ಮಠದ ಪ್ರಗತಿಶೀಲ ಯುವಕ ಸಂಘದಿಂದ ಪ್ರಕಟಗೊಂಡ ಶಿವಾನುಭವ ಕಾರ್ಯಕ್ರಮದ ವಿವಿಧ ಕೃತಿಗಳನ್ನು, ಸ್ವತಃ ಕ.ಬ.ಅಂಗಡಿಯವರು ಇಲ್ಲಿಯ ವಿವಿಧ ಶಿವಾನುಭವಗಳಲ್ಲಿ ರಚಿಸಿ ಹೊರತಂದ ಸಮಯೋಚಿತ ಕಿರುಗ್ರಂಥಗಳನ್ನು ಆಕರವಾಗಿ ಬಳಸಿಕೊಳ್ಳಲಾಗಿದೆ.

ಅಂಗಡಿಯವರ ಕುಟುಂಬದ ಹಲವಾರು ಸದಸ್ಯರೊಂದಿಗೆ ಸಂದರ್ಶನ ಮಾಡಲಾಗಿದೆ. ಅವರ ಆತ್ಮೀಯರನ್ನು ಕೂಡ ಸಂದರ್ಶಿಸಲಾಗಿದೆ. ಕ್ಷೇತ್ರಕಾರ್ಯ ಕೈಗೊಂಡಿದ್ದು ಅವರ ಹುಟ್ಟೂರಾದ ರೋಣ ತಾಲ್ಲೂಕಿನ ಮೆಣಸಗಿ ಗ್ರಾಮಕ್ಕೆ ಹೋಗಿ ಅಲ್ಲಿನ ಕೆಲವು ಸಮಕಾಲೀನರನ್ನು ಸಂದರ್ಶಿಸಲಾಗಿದೆ. ಅಲ್ಲಿ ಅವರು ಕಲಿತ ಶಾಲೆ, ಆ ಊರಿನ ಸಂಕ್ಷಿಪ್ತ ಇತಿಹಾಸವನ್ನು ಅದರ ಸಾಮಾಜಿಕ, ಧಾರ್ಮಿಕ ಮತ್ತು ರಾಜಕೀಯ, ಕಲೆ-ಸಾಹಿತ್ಯ-ಮತ್ತು ಸಂಸ್ಕೃತಿಯನ್ನು ಸಂಗ್ರಹಿಸಲಾಗಿದೆ.

ಅವರು ಕಾರ್ಯಗೈದ ಸ್ಥಳಗಳಾದ ರೋಣ ತಾಲ್ಲೂಕಿನ ಮೆಣಸಗಿ, ಜಕ್ಕಲಿ, ಶಿವಯೋಗ ಮಂದಿರ, ನರೇಗಲ್ಲ, ಕಲಕೇರಿ, ಮುಂಡರಗಿ, ಗೊಡಚಿ, ಮುರಗೋಡ, ಗದುಗಿನ ತೋಂಟದಾರ್ಯ ಮಠ, ಅಕ್ಕನ ಬಳಗ, ಹಾಲಕೆರೆ ಅನ್ನದಾನೀಶ್ವರ ಮಠ, ಹಡಗಲಿ ಮಠಗಳನ್ನು ಸಂದರ್ಶಿಸಲಾಗಿದ್ದು ಅಲ್ಲಿಂದ ಉಪಯುಕ್ತ ಮಾಹಿತಿಯನ್ನು ಸಂಗ್ರಹಿಸಲಾಗಿದೆ. ಕಾಲದ ಅಂತರದಿಂದ ಅವರ ಸಮಕಾಲೀನರು ಸಿಗುವುದು ಅಸಾಧ್ಯವಾದರೂ ಅವರ ಕಿರಿಯ ಸಮಕಾಲೀನರನ್ನು ಗುರುತಿಸಿ ಸಂದರ್ಶಿಸಲಾಗಿದೆ. ಅದರೊಟ್ಟಿಗೆ ಅವರ ಸಮಕಾಲೀನರು ಮತ್ತು ಸಮಾನ ಮನಸ್ಕರಾದ ಪಂಡಿತ ನಾಗಭೂಷಣ ಶಾಸ್ತ್ರಿಗಳು, ಎಸ್.ವ್ಹಿ. ಕಲ್ಮಠರು, ಕೆ.ಎಚ್.ಓಲಿಯವರ, ಜಾಡಗೌಡರ, ಕಲ್ಲಿನಾಥಶಾಸ್ತ್ರಿಗಳ, ದ್ಯಾಂಪುರ ಚೆನ್ನಕವಿಗಳ ಜೀವನ ಚಿತ್ರಣವನ್ನು ಅವಲೋಕಿಸಲಾಗಿದೆ.

## ಅಧ್ಯಯನದ ಸ್ವರೂಪ :

ಪ್ರಸ್ತುತ ಶರಣಕವಿ ಶ್ರೀ ಕರವೀರಪ್ಪನವರು : ಬದುಕು-ಬರಹ ಮಹಾಪ್ರಬಂಧವು ಒಟ್ಟು ಆರು ಅಧ್ಯಾಯಗಳ ವ್ಯಾಪ್ತಿಯನ್ನು ಒಳಗೊಂಡಿದ್ದು, ಮೊದಲನೆಯ ಅಧ್ಯಾಯದಲ್ಲಿ ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿಯನ್ನು ಕುರಿತು ಪ್ರಸ್ತಾಪಿಸಲಾಗಿದೆ.

ಎರಡನೆಯ ಅಧ್ಯಾಯವು ಕ.ಬ.ಅಂಗಡಿಯವರ ಜೀವನ ಪರಿಚಯ, ಅವರ ಮೂಲ ನೆಲೆ, ಹುಟ್ಟು-ಬೆಳವಣಿಗೆ, ಊರು ಪರಿಸರ, ಶಿಕ್ಷಣ, ವೃತ್ತಿ, ಕೌಟುಂಬಿಕ ಬದುಕು, ಇರುವು-ಉಡುಗೆ-ತೊಡುಗೆ, ಅವರ ಪರಿಪಕ್ವ ಶರಣ ಬದುಕು, ಶೈಕ್ಷಣಿಕ ಸಾಹಿತ್ಯ-ಸಂಘಟನೆಗಳು-ವೀರಶೈವ ಸಾಹಿತ್ಯ ಪ್ರಚಾರಗಳನ್ನು ವಿವೇಚಿಸಲಾಗಿದೆ.

ಮೂರನೆಯ ಅಧ್ಯಾಯದಲ್ಲಿ ಅವರ ಅನುಭವ-ಅನುಭಾವಗಳ ವಿವೇಚನೆ ಮಾಡಲಾಗಿದೆ, ಸಾಮಾನ್ಯನೊಬ್ಬನು ಹೇಗೆ ಶರಣತ್ವವನ್ನು ಪಡೆದುಕೊಳ್ಳಬಹುದು ಎನ್ನುವುದಕ್ಕೆ ಅವರ ಅಂತರಂಗ-ಬಹಿರಂಗ ಶುದ್ಧಿಗಳನ್ನು ಸಾಧ್ಯಾಂತವಾಗಿ ವಿವೇಚಿಸಲಾಗಿದೆ. ಅನುಭವ-ಅನುಭಾವ, ಪ್ರಜ್ಞೆ-ಅರಿವು, ಆಚಾರ-ವಿಚಾರ-ಸದಾಚಾರ-ಶೀಲಾಚಾರ, ಭಕ್ತಿ-ಜ್ಞಾನ-ಕ್ರಿಯೆ, ಲೌಕಿಕ-ಪಾರಮಾರ್ಥಿಕ ಸಮನ್ವಯ, ಶಿವಾನುಭವ, ಒಡನಾಟ, ಪರಿಸರ ಇವುಗಳ ಮೂಲಕ ಅವರ ಧಾರ್ಮಿಕ ನಿಲುವುಗಳನ್ನು, ಸಾಮಾಜಿಕ ಸಂವೇದನೆಗಳನ್ನು ಗುರುತಿಸುವ ಪ್ರಯತ್ನ ಮಾಡಲಾಗಿದೆ. ಅನುಭವ-ಅನುಭಾವದ ನೆಲೆ ಕಂಡುಕೊಳ್ಳಲು ಅವರಿಗೆ ಒದಗಿ ಬಂದ ಪರಿಸರವನ್ನು ವಿವೇಚಿಸಲಾಗಿದೆ. ಫಲ-ಸಾಫಲ್ಯಗಳ ಮೂಲಕ ಅವರ ಪರಿಪಕ್ವ ಬದುಕಿನ ಸಫಲತೆಗಳನ್ನು ಗುರುತಿಸುವ ಪ್ರಯತ್ನ ಮಾಡಲಾಗಿದೆ.

ನಾಲ್ಕನೆಯ ಅಧ್ಯಾಯದಲ್ಲಿ ಕ.ಬ.ಅಂಗಡಿಯವರ ಕೃತಿಗಳ ಸಮೀಕ್ಷೆಯನ್ನು ಕೈಗೊಳ್ಳಲಾಗಿದೆ. ಅವರು ರಚಿಸಿದ ಲಾವಣಿ, ದೊಡ್ಡಾಟ, ನಾಟಕ, ಅಷ್ಟಕ-ಷಟ್ಕಗಳನ್ನು, ಭಜನಾವಳಿಗಳನ್ನು, ಕಿರುಗ್ರಂಥಗಳನ್ನು, ಪಠ್ಯಪುಸ್ತಕಗಳನ್ನು, ಪುರಾಣ ಗ್ರಂಥಗಳನ್ನು ಗುರುತಿಸಿ, ಕೃತಿಗಳ ವಸ್ತು, ವಿಷಯ, ಶೈಲಿ, ಭಾಷೆ, ಅವುಗಳು ನೀಡುವ ಸಂದೇಶವನ್ನು ಕಂಡುಕೊಳ್ಳಲಾಗಿದೆ. ಅವರ ಅನುಪಲಬ್ಧ ಕೃತಿಗಳ ಬಗೆಗೆ ವಿವೇಚನೆಯನ್ನು ಮಾಡಲಾಗಿದೆ. ವಿಶೇಷವಾಗಿ ಪುರಾಣಗಳನ್ನು ಸಾಂಸ್ಕೃತಿಕ, ಧಾರ್ಮಿಕ, ಸಾಮಾಜಿಕ ಅಂಶಗಳ ಮೇಲೆ ಅಭ್ಯಾಸ ಮಾಡಲಾಗಿದೆ. ಆ ಮೂಲಕ ಆಧುನಿಕ ಪುರಾಣಗಳಿಗೆ ಅವರ ಕೊಡುಗೆಯನ್ನು ಅರ್ಥೈಸುವ ಪ್ರಯತ್ನವನ್ನು ಮಾಡಲಾಗಿದೆ.

ಐದನೆಯ ಅಧ್ಯಾಯದಲ್ಲಿ ಕ.ಬ.ಅಂಗಡಿಯವರ ಬಹುಮುಖ ವ್ಯಕ್ತಿತ್ವದಿಂದ ಸಮಾಜಕ್ಕೆ ದೊರೆತ ಫಲಿತಗಳನ್ನು, ಸಾಧನೆಗಳನ್ನು ವಿಶದಪಡಿಸಲಾಗಿದೆ.

ಆರನೆಯ ಅಧ್ಯಾಯ ಸಮಾರೋಪ, ಇದು ಮಹಾಪ್ರಬಂಧದ ಕೊನೆಯ ಹಂತ. ಕ.ಬ.ಅಂಗಡಿಯವರ ಜೀವನಾವಧಿಯ ಸಾಧನೆ ಕುರಿತು ಅಧ್ಯಯನ ಮಾಡಿದ ಫಲಶೃತಿಯನ್ನು ಇಲ್ಲಿ ನೀಡಲಾಗುವುದು. ಕನ್ನಡ ಸಾಹಿತ್ಯ ಕ್ಷೇತ್ರದಲ್ಲಿ, ವೀರಶೈವ ಸಾಹಿತ್ಯ ಕ್ಷೇತ್ರದಲ್ಲಿ, ಅನುಭಾವ ಸಾಹಿತ್ಯಕ್ಕೆ ಅವರು ಸಲ್ಲಿಸಿದ ಕೊಡುಗೆಯನ್ನು ತಿಳಿಸಲಾಗುತ್ತದೆ.

ಕೊನೆಯ ಭಾಗ ಅನುಬಂಧದಲ್ಲಿ ಮಹಾಪ್ರಬಂಧಕ್ಕೆ ಪೂರಕವಾದ ಅಂಶಗಳನ್ನು ವಂಶವೃಕ್ಷ, ಉಪಲಬ್ಧ ಅವರ ಅಷ್ಟಕ-ಷಟ್ಕಗಳು, ಅವರ ಸಮಗ್ರ ಕೃತಿ ಪರಿಚಯ, ಅವರ ಸಂಘಟನಾತ್ಮಕ ಸ್ಥಳಗಳ ಭಾವಚಿತ್ರ, ಅವರ ಬಿಡಿ ಲೇಖನಗಳು, ಪೂರಕವಾದ ಛಾಯಾಚಿತ್ರಗಳು, ಪತ್ರಿಕೆಗಳಲ್ಲಿ ಅವರ ಕುರಿತು ಬರೆದ ಲೇಖನಗಳು, ಪತ್ರಗಳು, ಕವನಗಳನ್ನು ಒದಗಿಸಲಾಗುತ್ತದೆ. ಅವರ ಬದುಕಿನ ವಿಶೇಷ ಘಟ್ಟಗಳ ಕಿರು ಪರಿಚಯವನ್ನು ನೀಡಲಾಗುತ್ತದೆ.

ಶರಣಕವಿ ಕ.ಬ.ಅಂಗಡಿಯವರ ಬಹುಮುಖ ವ್ಯಕ್ತಿತ್ವ ಅವರ ಬದುಕಿನುದ್ದಕ್ಕೂ ಹೊಸತನವನ್ನು ನೀಡುತ್ತಲೇ ಸಾಗುತ್ತದೆ. ಬಸವಾದಿ ಶರಣರ ಪ್ರಭಾವಕ್ಕೆ ಒಳಗಾಗಿ, ಅವುಗಳ ತತ್ವ ವಿವೇಚನೆಯನ್ನು ಮಾಡಲು ಹಚ್ಚುತ್ತದೆ. ಲೌಕಿಕ-ಪಾರಮಾರ್ಥಿಕ ಬದುಕನ್ನು ಭಿನ್ನವಾಗಿ ನೋಡದೆ ಎರಡರಲ್ಲೂ ಸಮನ್ವಯ ಸಾಧಿಸುವ ಅವರು, ಅವುಗಳನ್ನು ತಮ್ಮ ಬರಹಕ್ಕೂ ವಿಸ್ತರಿಸುತ್ತಾರೆ. ಸಾತ್ವಿಕ, ಪ್ರಾಮಾಣಿಕ ಪರಿಶ್ರಮದೊಂದಿಗೆ ಜನಮಾನ್ಯನಾಗಿ, ಶಿಕ್ಷಕನಾಗಿ, ಶಿಕ್ಷಣಾಧಿಕಾರಿಯಾಗಿ, ಸಂಶೋಧಕರಾಗಿ, ಪ್ರಕಾಶಕರಾಗಿ, ಮುದ್ರಕರಾಗಿ, ಲೇಖಕರಾಗಿ, ಸಾಧಕರಾಗಿ, ಶರಣರಾಗಿ ಯಶಸ್ವಿಯಾದವರು. ಅವರ ಬದುಕು-ಬರಹಗಳ ಅಧ್ಯಯನದಿಂದ ಕನ್ನಡ ನಾಡು-ನುಡಿ-ಸಂಸ್ಕೃತಿ-ಸಾಹಿತ್ಯ-ಸಮಾಜಕ್ಕೆ ಅವರ ಅಪಾರವಾದ ಕೊಡುಗೆಯನ್ನು ನೀಡಿರುವುದು ಸ್ಪಷ್ಟವಾಗುತ್ತದೆ. ಸಮಕಾಲೀನ ಸಂದರ್ಭದಲ್ಲಿ ಅವರ ಬದುಕು-ಬರಹವನ್ನು

ವಿವೇಚಿಸುವುದು ಮತ್ತು ಅವರ ವ್ಯಕ್ತಿತ್ವದ ಮೇಲೆ ಬೆಳಕು ಚೆಲ್ಲುವುದು ಪ್ರಸ್ತುತ ಮಹಾಪ್ರಬಂಧದ ಮುಖ್ಯ ಉದ್ದೇಶವಾಗಿದೆ.

*****

**ಅಡಿಟಿಪ್ಪಣಿಗಳು :**

೧ ಅಹಲ್ಯ, ಸೀತಾ, ತಾರಾ, ದ್ರೌಪದಿ, ಮಂಡೋದರಿ.

೨ ನೀಲಲೋಚನೆ, ಮಲ್ಲಿಗಮ್ಮ, ಅಕ್ಕಮಹಾದೇವಿ, ಮೋಳಿಗೆಯ ಮಹಾದೇವಮ್ಮ, ಆಯ್ದಕ್ಕಿ ಲಕ್ಕಮ್ಮ.

*****

ಅಧ್ಯಾಯ : ಎರಡು

# ಅಂಗಡಿ ಕರವೀರಪ್ಪನವರು : ಒಂದು ಹಿನ್ನೆಲೆ

- ಮೂಲ ನೆಲೆ
- ಹುಟ್ಟು-ಬೆಳವಣಿಗೆ
- ಊರು-ಪರಿಸರ
- ಶಿಕ್ಷಣ
- ಶಿವಯೋಗ ಮಂದಿರದಲ್ಲಿ ಬದಲಾದ ಬದುಕು
- ಶಿಕ್ಷಕ ವೃತ್ತಿ
- ಕೌಟುಂಬಿಕ ಜೀವನ
- ಶಿಕ್ಷಕ ವೃತ್ತಿಯೊಂದಿಗೆ ಕಲಿಯುವ ಹಂಬಲ
- ಇರವು-ಉಡುಗೆ-ತೊಡುಗೆ
- ಪರಿಪಕ್ವತೆ-ಶರಣ ಬದುಕು
- ಶೈಕ್ಷಣಿಕ ಸಾಹಿತ್ಯ
- ಸಂಘಟನೆಗಳು

# ಅಂಗಡಿ ಕರವೀರಪ್ಪನವರು : ಒಂದು ಹಿನ್ನೆಲೆ

## ೨.೧ ಮೂಲ ನೆಲೆ :

ಕಲ್ಯಾಣದ ಕ್ರಾಂತಿಯ ನಂತರ ಶರಣ ಸಂಕುಲವು ಅನೇಕ ಭಾಗಗಳಲ್ಲಿ ನೆಲೆ ನಿಂತು ಬಸವಣ್ಣನ ತತ್ವಗಳನ್ನು ಪಸರಿಸಿದ್ದು, ಅವರು ನೆಲೆನಿಂತ ಆ ಸ್ಥಳಗಳು ಇಂದು ವೀರಶೈವ ಜಾಗೃತ ಕ್ಷೇತ್ರಗಳಾಗಿ ಕರ್ನಾಟಕದ ಇತಿಹಾಸಕ್ಕೆ ಸಾಕ್ಷಿಗಳಾಗಿವೆ. ಉದಾಹರಣೆಗೆ ಗೊಡಚಿ, ಉಳವಿ, ಮುರಗೋಡ, ಕಡಕೋಳ, ಮುಂತಾದವುಗಳು. ಅದರಲ್ಲಿ ವಿಜಾಪುರ ಜಿಲ್ಲೆಯ ಮುದ್ದೇಬಿಹಾಳ ತಾಲೂಕಿನ ಗ್ರಾಮ 'ಕುಂಟೋಜಿ'[೧]ಯು ಸಹ ಒಂದು. ಶರಣರ ನೆಲೆಯಿಂದ ಅಲ್ಲಿಯ ಜನರ ಬದುಕು ಹಸನಾಗಿತ್ತು. ಆ ಊರಿನಲ್ಲಿ ಶರಣ ತತ್ವಗಳ ನೆರಳಲ್ಲಿ, ಚಿಕ್ಕ ತಕ್ಕಡಿಯ ಅಂಗಡಿಯೊಂದನ್ನು ಇಟ್ಟುಕೊಂಡು ಕಾಯಕನಿರತವಾದ ಮನೆತನವೇ ಅಂಗಡಿಯವರದು.

ಕಾಲಾನಂತರ ೧೫೬೫ರಲ್ಲಿ ವಿಜಯನಗರ ಸಾಮ್ರಾಜ್ಯ ಪತನವಾಗಿ ಮತ್ತೊಮ್ಮೆ ಭೀತಿಯಲ್ಲಿದ್ದ ವೀರಶೈವ ಧರ್ಮ ತನ್ನ ನೆಲೆಯನ್ನು ಉಳಿಸಿಕೊಳ್ಳಲು ಏದುಸಿರು ಬಿಡುತ್ತಿತ್ತು. ಸಾಮಾಜಿಕ ಸಂದರ್ಭಗಳು ಹೇಗೆ ಬಂದವೆಂದರೆ ಅಲ್ಲಿನ ಹಲವಾರು ಶರಣ ಮನೆತನಗಳು ಸುರಕ್ಷಿತ ತಾಣವನ್ನರಸಿ ಹೊರಟವು. ಅಂದು ರಾಮದುರ್ಗ ಸಂಸ್ಥಾನದ ಆಧೀನದಲ್ಲಿದ್ದ ಗೊಡಚಿ ವೀರಭದ್ರಕ್ಷೇತ್ರ ಅಂಗಡಿಯವರ ಕುಲದೇವರಾದ ಕಾರಣ ಅಲ್ಲಿಗೆ ಬಂದು ಕೆಲದಿನಗಳು ನಿಂತು, ವ್ಯಾಪಾರ ವಹಿವಾಟಕ್ಕಾಗಿ ಸಮೀಪದ ಹೂಲಿ ಗ್ರಾಮಕ್ಕೆ ಬಂದು ಚಿಕ್ಕ ತಕ್ಕಡಿಯ ಅಂಗಡಿಯೊಂದನ್ನು ಪ್ರಾರಂಭಿಸಿ, ತದನಂತರ ಮಲಪ್ರಭಾ ನದೀ ತೀರದ ವ್ಯವಸಾಯ ಆಧರಿತ ಗ್ರಾಮ ಮತ್ತು ಶರಣ ಲಿಂಗಬಸವೇಶ್ವರನ ಜಾಗೃತ ಸ್ಥಾನವಾದ ಮೆಣಸಗಿ ಗ್ರಾಮಕ್ಕೆ ಸುಮಾರು ೩೫೦ ವರ್ಷಗಳ ಹಿಂದೆಯೇ ಬಂದು ನೆಲೆ ನಿಂತಿದ್ದಾರೆ. ಕ.ಬ.ಅಂಗಡಿಯವರ ಹಿರಿಯ ಮಗನಾದ ಎಸ್.ಕೆ. ಅಂಗಡಿಯವರು ಹೇಳುವಂತೆ ಅವರ ಮೂಲ ನೆಲೆ ಬೆಳಗಾವಿ ಜಿಲ್ಲೆಯ ಸಪ್ಪಲಗಾ ಎಂಬ ಊರು. ಆದರೆ 'ಶರಣ' ಸಂಚಿಕೆಯಲ್ಲಿ ಸ್ವತಃ ಕ.ಬ.ಅಂಗಡಿಯವರು ತಮ್ಮ ಊರಿನ ಮತ್ತು ಮೂಲದ ಬಗೆಗೆ ಹೇಳಿಕೊಂಡಿದ್ದಾರೆ. ಹೀಗಾಗಿ ಅವರು ಮೂಲತಃ ಕುಂಟೋಜಿವರೆಂದು ತಿಳಿಯಬಹುದು. ನಂತರ ಗದಗ ಜಿಲ್ಲೆಯ ರೋಣ ತಾಲ್ಲೂಕಿನ ಮೆಣಸಗಿ ಗ್ರಾಮದವರೆಂದು ಗುರುತಿಸಬಹುದು. ಮೆಣಸಗಿ



ಮೆಣಸಗಿಯಲ್ಲಿರುವ ಕ.ಬ.ಅಂಗಡಿಯವರ ಮೂಲ ಮನೆ

ಗ್ರಾಮದಲ್ಲಿ ವ್ಯಾಪಾರಸ್ಥರಾಗಿ ಕೆಲಸ ಮಾಡುತ್ತ ನೆಲೆ ನಿಂತ ಅವರ ಹಿರಿಯರು ನ್ಯಾಯ, ನಿಷ್ಠೆಯಿಂದ ತಮ್ಮ ಕೆಲಸವನ್ನು ಕೈಗೊಂಡವರು.

### ೨.೨ ಹುಟ್ಟು-ಬೆಳವಣಿಗೆ :

ಚಿಕ್ಕ ತಕ್ಕಡಿಯ ಅಂಗಡಿಯ ವ್ಯವಹಾರ ಅವರ ಮನೆತನದ ಮುಖ್ಯ ಕಾಯಕವಾಗಿದ್ದರೂ ಕೃಷಿಯನ್ನು ಅವಲಂಬಿಸಿ ತಮಗಿದ್ದ ಅಲ್ಪ ಭೂಮಿಯಲ್ಲಿಯೇ ಉತ್ತಮ ರೀತಿಯಲ್ಲಿ ಬೇಸಾಯ ಮಾಡಿ ಸಂಪಾದನೆ ಮಾಡಿಕೊಳ್ಳುತ್ತಿದ್ದರು. ಶರಣ ತತ್ವಗಳಲ್ಲಿ ಸಾತ್ವಿಕವಾದ ಭಕ್ತಿಯನ್ನಿಟ್ಟುಕೊಂಡಿದ್ದ ಮನೆತನವದು. ಇದೇ ಮನೆತನದ ಹಿರಿಯರಾದ ಬಸಪ್ಪನವರು ತಮ್ಮ ಮೂಲ ಉದ್ಯೋಗವನ್ನು ಮುಂದುವರೆಸಿಕೊಂಡು ಸತ್ಯ ಶುದ್ಧ ಕಾಯಕದಿಂದ ಜೀವನ ಸಾಗಿಸುತ್ತಿದ್ದರು. ಬಸಪ್ಪನವರಿಗೆ ರೋಣ ತಾಲೂಕಿನ ಜಕ್ಕಲಿ ಗ್ರಾಮದ ಉಮ್ಮಣ್ಣವರ ಉರ್ಫ ಕರ್ಕಿಕಟ್ಟಿ ಮನೆತನದ ಬಸವ್ವ ಎಂಬ ಕನ್ಯೆಯೊಡನೆ ಮದುವೆಯಾಗಿತ್ತು. ಜಕ್ಕಲಿಯೂ ಸಹ ರಾಷ್ಟ್ರಭಕ್ತಿಗೆ ಹೆಸರಾದ ಸ್ವಾತಂತ್ರ್ಯ ಪ್ರೇಮಿಗಳ ಊರು. ಆ ಊರಲ್ಲಿ ಉಮ್ಮಣ್ಣವರ ಮನೆತನವು ವ್ಯವಸಾಯದೊಂದಿಗೆ ವ್ಯಾಪಾರ ಮಾಡಿಕೊಂಡು ಆಚಾರವಂತರಾಗಿ ಬಾಳುತ್ತಿದ್ದರು. ಬಸಪ್ಪ ಮತ್ತು ಬಸವ್ವ ದಂಪತಿಗಳಿಗೆ ನಾಲ್ವರು ಗಂಡು ಮಕ್ಕಳು ಮತ್ತು ಮೂವರು ಹೆಣ್ಣು ಮಕ್ಕಳು ಜನಿಸಿದರು. ಅವರಲ್ಲಿ ದ್ವಿತೀಯರಾಗಿ ಗೊಡಚಿ ವೀರಭದ್ರ ದೇವರ ಹೆಸರಿನಿಂದ ನಾಮಕರಣ ಪಡೆದವರು ಚರಿತ್ರ ನಾಯಕರಾದ ಕರವೀರಪ್ಪನವರು. ಇವರು ೭-೭-೧೯೪೭ ರಂದು ಜನಿಸಿದರು. ಕರವೀರಪ್ಪನವರನ್ನು ಕ.ಬ.ಅಂಗಡಿಯವರೆಂದೆ ಗುರುತಿಸಲಾಗುತ್ತದೆ.

ಬಡತನದ ನೆರಳಲ್ಲಿಯೇ ಬೆಳೆದ ಅವರು ತಮ್ಮ ತಂದೆ ತಾಯಿಗಳಲ್ಲಿ ಅನನ್ಯ ಭಕ್ತಿಯನ್ನು ಹೊಂದಿದ್ದರು. ತಮ್ಮ ಸಹೋದರ-ಸಹೋದರಿಯರ ಜೊತೆಗೂ ಗಾಢವಾದ ಸಂಬಂಧವನ್ನು ಹೊಂದಿದ್ದರು. ಅವರಿಗೆ ತಮ್ಮ ಬಳಗವೆಲ್ಲವೂ ಪ್ರೀತಿ ಪಾತ್ರವಾಗಿತ್ತು. ಸಂಬಂಧಗಳಿಗೆ ಅವರು ನೀಡಿದ ಮಹತ್ವ ಅವರ ಜೀವನ ಪೂರ್ತಿ ಕಂಡುಬರುತ್ತದೆ. ತಾವು ರಚಿಸಿದ ಕೆಲವು ಪುಸ್ತಕಗಳಲ್ಲಿ ತಮ್ಮ ಬಂಧು-ಬಳಗದ ಹೆಸರುಗಳನ್ನು ಬಳಸಿಕೊಂಡಿರುವುದು ಅವರ ಕೌಟುಂಬಿಕ ಒಲವಿಗೆ ಹಿಡಿದ ಕೈಗನ್ನಡಿ. ಇಂದು ಅವರ ಮೆಣಸಗಿಯ ಮೂಲ ಮನೆಯಲ್ಲಿ ಅವರ ತಮ್ಮನ ಮಕ್ಕಳು ಮತ್ತು ಮೊಮ್ಮಕ್ಕಳು ವಾಸಿಸುತ್ತಿದ್ದಾರೆ. ತಮ್ಮ ಬೀಗರಾದ ಕಲ್ಯಾಣಿಯವರ ಮನೆಗಳನ್ನು ಕೊಂಡುಕೊಂಡು ಅವರ ಸಹೋದರರು ಅಲ್ಲಿಯೇ ವಾಸವಾಗಿದ್ದಾರೆ. ಇಂದಿಗೂ ಅವರ ಮನೆತನದವರು ಚಿಕ್ಕ

ತಕ್ಕಡಿಯ ಅಂಗಡಿಯನ್ನು ಮತ್ತು ಕೃಷಿಯನ್ನೇ ಆಧರಿಸಿ ಬದುಕು ಸಾಗಿಸುತ್ತಿದ್ದಾರೆ. ಬಾಲ್ಯದಲ್ಲಿ ತುಂಬಾ ತುಂಟರಾಗಿದ್ದ ಅಂಗಡಿಯವರು ತಮ್ಮ ತಾಯಿಯ ಊರಾದ ಜಕ್ಕಲಿಗೆ ಹೋದಾಗ ಅಲ್ಲಿ ಆಟವಾಡುತ್ತ ಮನೆಗಳ ಹಂಚನ್ನು ಒಡೆದು ಓಡಿ ಹೋಗುತ್ತಿದ್ದರು. ಅವರ ತಾಯಿಯ ಮನೆಯವರಿಗೆ ಅವರ ದೂರು ಕೇಳಿ ಸಾಕಾಗಿ ಹೋಗುತ್ತಿತ್ತು. ಅವರ ಈ ತೀಕ್ಷ್ಣತೆ ಅವರ ವಿದ್ಯಾಭ್ಯಾಸದಲ್ಲೂ ಕಂಡು ಬರುತ್ತದೆ.

## ೨.೩ ಊರು-ಪರಿಸರ :

ಇಂದಿನ ಗದಗ ಜಿಲ್ಲೆಯ ರೋಣ ತಾಲೂಕಿನ ಪುಟ್ಟ ಗ್ರಾಮ ಮೆಣಸಗಿ. ಹಿಂದುಳಿದ ಪ್ರದೇಶವಾದ ಮತ್ತು ಕಾಡು-ಕಗ್ಗ ಹಳ್ಳಿಯಾದ ಮೆಣಸಗಿ ನಿಧಾನ ಗತಿಯಲ್ಲಿ ಬೆಳವಣಿಗೆಯನ್ನು ಹೊಂದಿ ಇಂದು ಮಾದರಿ ಗ್ರಾಮವಾಗಿ ಗುರುತಿಸಿಕೊಂಡಿದೆ. ಈ ಹಿಂದೆ ಬಸವಾದಿ ಶರಣರು ಅಲ್ಲಿಗೆ ಬಂದಿದ್ದರು ಮತ್ತು ಅವರ ಆಗಮನದೊಂದಿಗೆ ಅಲ್ಲಿನ ಜನರ ಜೀವನದಲ್ಲಿ ತೀವ್ರಗತಿಯಲ್ಲಿ ಪ್ರಗತಿ ಆಯಿತೆಂದು ತಿಳಿದು ಬರುತ್ತದೆ. ಇದರ ಮೂಲಕ ಶರಣರ ಸಾಮಾಜಿಕ ಕಳಕಳಿಯಿಂದ ಅವರು ಹೋದ ಕಡೆಗಳಲ್ಲಿ ಮನುಷ್ಯನ ಜೀವನ ಶುದ್ಧವಾದುದು ಮತ್ತು ಪೂರಕವಾದ ಸಾಧನೆಯ ಸಿದ್ಧಿಯಾದುದು ಕಂಡುಬರುತ್ತದೆ. ಮೆಣಸಗಿ ಒಂದು ಪುಟ್ಟ ಗ್ರಾಮವಾದರೂ ತನ್ನ ಐತಿಹಾಸಿಕ ನಿಲುವುಗಳಿಂದ ಗುರುತಿಸಲ್ಪಡುವ ಪ್ರದೇಶ. ಯಾವುದೆ ಒಂದು ವಸ್ತು, ಪದಾರ್ಥ, ವ್ಯಕ್ತಿ ಮತ್ತು ಸ್ಥಳ ಇವು ಕಾಲಗರ್ಭದಲ್ಲಿ ಸಿಕ್ಕು ಮರೆಯಾದರೂ ಕಾಲಾನಂತರದ ಬದುಕಿನಲ್ಲಿ ಪರಿಚಿತವೂ ಗೋಚರವೂ ಮತ್ತು ಪ್ರಸಿದ್ಧವೂ ಆಗಿ ತೋರುವುದು ಐತಿಹಾಸಿಕ ಸತ್ಯ. ಇಂತಹ ಐತಿಹ್ಯ ಮತ್ತು ಸತ್ಯಾಂಶಗಳು ಇಂದಿನ ಮೆಣಸಗಿಯನ್ನು ಅಭ್ಯಸಿಸುತ್ತ ಹೋದಾಗ ವ್ಯಕ್ತವಾಗದೆ ಇರವು. ಅಲ್ಲಿನ ಲಿಂಗಬಸವೇಶ್ವರ ಮಠ ತನ್ನ ಪವಾಡಗಳಿಂದ ಇಂದಿಗೂ ಜನಪದದಲ್ಲಿ ವಿಶೇಷವಾಗಿದೆ. ಜಕ್ಕಣಾಚಾರ್ಯರು ನಿರ್ಮಿಸಿದ ಕಲ್ಮೇಶ್ವರ ದೇವಸ್ಥಾನವು ಇತಿಹಾಸವನ್ನು ಮೆಲುಕುವಂತೆ ಮಾಡುತ್ತದೆ. ಇಂದಿಗೂ ಶ್ರಾವಣದಲ್ಲಿ ನಡೆಯುವ ಲಿಂಗಬಸವೇಶ್ವರ ಜಾತ್ರೆಯಲ್ಲಿ ಸಾಂಸ್ಕೃತಿಕ-ಸಾಮಾಜಿಕ ಆಚರಣೆಗಳನ್ನು ಮುಂದುವರೆಸಿಕೊಂಡು ಬಂದಿದೆ. ಕಲ್ಮೇಶ್ವರ ದೇವಾಲಯ ಶಿಥಿಲವಾಗಿದ್ದು, ಹೊಸದಾಗಿ ಕಟ್ಟುತ್ತಿರುವ ಮೆಣಸಗಿ ಗ್ರಾಮಕ್ಕೆ ಅದನ್ನು ಸ್ಥಳಾಂತರಿಸಲಾಗುತ್ತದೆ. ಕೃಷಿಯೇ ಇಲ್ಲಿನ ಮುಖ್ಯ ಉದ್ಯೋಗ. ಈ ಗ್ರಾಮ ಭಾವೈಕ್ಯತೆಗೆ ಹೆಸರಾಗಿದೆ. ಗ್ರಾಮದ ಲಿಂಗಬಸವೇಶ್ವರ ಜಾತ್ರೆಯ ಸಮಯದಲ್ಲಿ ನಮಗೆ ಈ ಸಾಮರಸ್ಯ ಕಂಡು ಬರುತ್ತದೆ. ಬಸವಾದಿ ಶಿವಶರಣರ ಪಾದಸ್ಪರ್ಶವಾದ ಕಾರಣ ಅಲ್ಲಿಯ

ಜನರಲ್ಲಿ ಸ್ಪಶ್ಯ-ಅಸ್ಪಶ್ಯರೆನ್ನುವ ಭೇದ-ಭಾವ ಈ ಮೊದಲೇ ತೊಳೆದು ಹಾಕಿದ ಕೀರ್ತಿ ಈ ಗ್ರಾಮಕ್ಕಿದೆ. ಹರಿಜನ, ಬ್ರಾಹ್ಮಣ, ವೀರಶೈವ ಮುಂತಾದ ವರ್ಗವನ್ನು ಪ್ರತಿನಿಧಿಸುವ ಜನರೆಲ್ಲರು ಒಂದೇ ಮನೆಯ ಸದಸ್ಯರಂತೆ ಬದುಕುತ್ತಿರುವುದು ಇದಕ್ಕೆ ಸಾಕ್ಷಿಯಾಗಿದೆ. ಇದನ್ನೆ ಭಾವೈಕ್ಯತೆಯೆಂದಾಗಿ ಕರೆಯುವುದು. ಆದುದರಿಂದ ಕ.ಬ.ಅಂಗಡಿಯವರ ಆರಂಭಿಕ ಜೀವನದ ಪುಟಪುಟಗಳಲ್ಲಿ ಈ ಭಾವದ ತಿರುಳನ್ನು ಸವಿಯಲು ಸಾಧ್ಯವಾಗುತ್ತದೆ. ಈ ವಿಷಯಗಳನ್ನು ಅಧ್ಯಯನದ ದೃಷ್ಟಿಯನ್ನಿರಿಸಿಕೊಂಡು ನಾನು ಸಂಗ್ರಹಿಸುತ್ತಾ ಹೋದಂತೆ ವ್ಯಷ್ಟಿ ಸಮಷ್ಟಿಯಾಗುವ ಮತ್ತು ಸಮಷ್ಟಿ ವ್ಯಷ್ಟಿಗೆ ಪೂರಕವಾಗುವ ಅಂಶಗಳು ಲಭ್ಯವಾಗುತ್ತವೆ.

ಮೆಣಸಗಿ ಗ್ರಾಮವು ತನ್ನ ಕಲೆ, ಕೃಷಿ, ವಾಣಿಜ್ಯಗಳಿಗೆ ಅನಾದಿ ಕಾಲದಿಂದ ಶ್ರೇಷ್ಠ ಸ್ಥಳವಾದ ಪ್ರತೀತಿಯಿದೆ. ಇಂದು ಸರಿಸುಮಾರು ಜನರು ದೊಡ್ಡ ದೊಡ್ಡ ಹುದ್ದೆಗಳನ್ನು ಅಲಂಕರಿಸಿ ಸಮಾಜದಲ್ಲಿ ಕಾರ್ಯನಿರತರಾಗಿದ್ದಾರೆ. ಸಾಂಸ್ಕೃತಿಕವಾದ ದೊಡ್ಡಾಟ, ಜನಪದಗಳನ್ನು, ಸಂಘ, ಸಂಸ್ಥೆಗಳನ್ನು ರಚಿಸಿ ಹಾಡುತ್ತ, ಬರೆಯುತ್ತ ಕಲೆಯನ್ನು ಜೀವಂತವಾಗಿಟ್ಟು, ಅದರ ಮೌಲ್ಯವನ್ನು ವರ್ಧಿಸಿದ್ದಾರೆ. ಮೆಣಸಗಿಯ ವೀರನಗೌಡರ ಪಂಚಾಂಗ, ಬಾಳಂಭಟ್ಟ ಜೋಶಿಯವರ ವೈದ್ಯಕೀಯ ಉಪಚಾರಗಳು ಕೂಡ ಪ್ರಸಿದ್ಧಿ ಪಡೆದ ವಿಚಾರಗಳು. ಇಲ್ಲಿನ ಜನರು ಉದ್ಯಮಶೀಲರೂ, ದೈವಿ ಚಿಂತಕರೂ, ಕಾಯಕನಿಷ್ಠರು ಎನ್ನುವುದನ್ನು ಪ್ರತಿಪಾದಿಸುತ್ತವೆ. ಕಾಯಕ ನಿಷ್ಠೆಯಲ್ಲಿ ಈ ಪ್ರದೇಶದ ಮಹಿಳೆಯರಿಗೂ ಸಹ ಅಗ್ರಪಾಲಿರುವುದನ್ನು ಚರಿತ್ರೆಯು ತಿಳಿಸದೆ ಇರದು. 'ಮೈಸೂರಿನ ಹುಲಿ' ಎಂದೇ ಖ್ಯಾತನಾಗಿದ್ದ ಟಿಪ್ಪು ಸುಲ್ತಾನ ತನ್ನ ಸೈನಿಕರೊಡನೆ ಸಂಪದ್ಭರಿತ ಆ ಚಿಕ್ಕ ಗ್ರಾಮವನ್ನು ಸೂರೆಗೊಳ್ಳಲು ಹವಣಿಸಿದಾಗ ಆ ಗ್ರಾಮದ ಮುತ್ಸದ್ದಿ ವೀರವನಿತೆ ಶಿವಾಗೌಡಶಾನಿಯವರ ಚಾಣಾಕ್ಷತನದಿಂದ ಅವನ ಸೈನಿಕರು ಬೆಣ್ಣೆಹಳ್ಳದಲ್ಲಿ ಸಿಲುಕಿ ಅವಳಿಂದ ಮಾರಕವಾದ ಪೆಟ್ಟು ತಿಂದು ಹಿಂದೆ ಸರಿದರೆಂಬ ಸಂಗತಿಗಳು ಅವರ ಸುಪ್ತ ವೀರಗುಣಕ್ಕೆ ದೃಷ್ಟಾಂತಗಳಂತಿವೆ. ಅದೇ ರೀತಿ ೧೯೧೬ರಲ್ಲಿ ಆ ಊರಿಗೆ ಸುರಿದ ಸ್ವಾತಿ ಮಳೆಯ ಮಹಾಪೂರ ಊರನ್ನೇ ನುಂಗಿ ಹಾಕಿತ್ತು. ಅಂತಹ ಸಂದರ್ಭದಲ್ಲಿ ಪತಿವ್ರತಾ ಶಿರೋಮಣಿಯರ ಪಾತಿವೃತ್ಯ ಮತ್ತು ತ್ಯಾಗದಿಂದ ಹೊಳೆಯ ಪ್ರಭಾವ ಇಳಿದು ಗ್ರಾಮದ ಜನತೆ ಪಾರಾದರೆಂಬ ಸಂಗತಿಗಳು ತಿಳಿದು ಬರುತ್ತದೆ. ಇದು ಅವರಲ್ಲಿರುವ ತ್ಯಾಗ ಗುಣವನ್ನು ಸುವ್ಯಕ್ತಗೊಳಿಸುತ್ತದೆ. ಈ ವಿಷಯಗಳು ಮುಂದೆ ಕ.ಬ.ಅಂಗಡಿಯವರ ಕೃತಿಗಳ ಮೇಲಾದುದನ್ನು ಗಮನಿಸಬಹುದು.



ಮೆಣಸಗಿಯ ಕಲ್ಮೇಶ್ವರ ದೇವಾಲಯ

## ೨.೪ ಕಲ್ಮೇಶ್ವರ ದೇವಾಲಯ :

ನಮ್ಮ ನಾಡು ಸಾಹಿತ್ಯ-ಸಂಗೀತ-ಕಲೆ-ಸಂಸ್ಕೃತಿಗಳ ಬೀಡಾಗಿದೆ. ಪ್ರತಿಯೊಂದು ಊರು-ಕೇರಿ ತನ್ನೊಟ್ಟಿಗೆ ವಿಶೇಷ ಇತಿಹಾಸವನ್ನು ಹೊಂದಿರುತ್ತದೆ. ಆ ಪರಿಸರದಲ್ಲಿ ಜಡ ಕೂಡ ಮೃಡವಾಗಿ ಕಾರ್ಯನಿರ್ವಹಿಸುತ್ತವೆ ಎಂಬುದನ್ನು ಖ್ಯಾತ ವ್ಯಕ್ತಿಗಳ ಜೀವನ ಚಿತ್ರಣದಲ್ಲಿ ಕಂಡುಕೊಳ್ಳುತ್ತೇವೆ. ಊರಿನ ಕಲಾಕೃತಿಗಳು ಕೂಡ ಹಲವಾರು ಅಂಶಗಳನ್ನು ಬೆಳಕಿಗೆ ತರುವಲ್ಲಿ ಸಹಾಯಕವಾಗುತ್ತವೆ. ಮೆಣಸಗಿಯ ಕಲ್ಮೇಶ್ವರ ದೇವಾಲಯ ಊರ ಹೊರಗೆ ಹಳ್ಳದ ಬದಿಯಲ್ಲಿ ಕಂಡು ಬರುತ್ತದೆ. ಮೆಣಸಗಿ ಗ್ರಾಮಕ್ಕೊಂದು ಮುಕುಟಪ್ರಾಯವಾದ ಈ ಶಿಲ್ಪ ಕಲಾಕೃತಿಯನ್ನು ಜಕಣಾಚಾರಿಯು ನಿರ್ಮಿಸಿದ್ದು. ಈ ದೇವಾಲಯವು ಜೀರ್ಣಗೊಂಡಿದ್ದು, ಶಿಥಿಲಾವಸ್ಥೆಯಲ್ಲಿದೆ. ಅದರ ಒಳಗಡೆ ಒಂದು ಬೃಹದಾಕರದ ಲಿಂಗವಿದ್ದು ಅದೂ ಕೂಡ ಶಿಥಿಲಗೊಂಡಿದೆ. ಮುಂದಿನ ದ್ವಾರದಲ್ಲಿ ಗುಡಿಯ ಕಲ್ಲುಗಳು ಪಾಳು ಬಿದ್ದಿವೆ. ಆ ಪಾಳು ಬಿದ್ದಿರುವ ಕಲ್ಲುಗಳ ನಡುವೆ ಕೆಲವು ಶಾಸನಗಳು ಇರುವುದಾಗಿ ತಿಳಿದು ಬರುತ್ತದೆ. ಆ ದೇವಾಲಯವನ್ನು ಹಿಂದಿನಿಂದ ನಿಂತು ಅವಲೋಕಿಸಿದರೆ ಹೂವಿನ ಗುಚ್ಛದಂತೆ ಕಂಡು ಬರುತ್ತದೆ.

ಈ ಪ್ರಾಚೀನ ದೇವಾಲಯದ ವಿಶೇಷತೆಗಳೆಂದರೆ ಅದು "ಲಿಂಗಾಯತ-ವೀರಶೈವ ವಾಸ್ತು ಶಿಲ್ಪದ ಮಾದರಿಯಲ್ಲಿದೆ. ಅಂದರೆ ದೇವಾಲಯದ ಬಾಗಿಲುವಾಡದ ಮೇಲೆ ಗಜಲಕ್ಷ್ಮಿಯ ಬದಲು ನಂದಿಯ(ಕುಳಿತ ಭಂಗಿ) ಉಬ್ಬು ಕೆತ್ತನೆಯಿದೆ. ನಂದಿ ವಾಸ್ತುಶಿಲ್ಪಗಳಲ್ಲಿ ಕಂಡು ಬಂದರೆ ಅದು ಲಿಂಗಾಯತ-ವೀರಶೈವ ಅವಾರ್ಚಿನ ಕಟ್ಟಡಗಳು ಎಂದು ತಿಳಿಯುತ್ತದೆ."[೨] ವೀರಶೈವ ವಾಸ್ತುಶಿಲ್ಪ ತನ್ನ ಪರಿಪೂರ್ಣತೆಯನ್ನು ಕೆಳದಿ ಅರಸರ ಕಾಲದಲ್ಲಿ ಪಡೆದಿತ್ತು. ಕೆಳದಿಯ ರಾಮೇಶ್ವರ ದೇವಾಲಯದಲ್ಲಿ ಮತ್ತು ಇಕ್ಕೇರಿಯ ಅಘೋರೇಶ್ವರ ದೇವಾಲಯಗಳಲ್ಲಿ ಇಂಥ ವಾಸ್ತುಶಿಲ್ಪವನ್ನು ಕಾಣಬಹುದು. ವೀರಶೈವ ವಾಸ್ತುಶಿಲ್ಪದ ಪ್ರಾರಂಭಿಕ ಹಂತವನ್ನು ಬೀದರ ಜಿಲ್ಲೆಯ ಕಲ್ಯಾಣ, ಶಿವಮೊಗ್ಗೆಯ ಬಳ್ಳಿಗಾವಿ, ಅನಿಮಿಷಾರಣ್ಯ, ಉಡುತಡಿ, ಕಾರವಾರ ಜಿಲ್ಲೆಯ ಬನವಾಸಿ, ಮಧಕೇಶ್ವರ(ಹಳೆಯ), ಬಂಕಾಪುರದ ಪ್ರಾಚೀನತಮ ಭಾವಿಯಲ್ಲಿ ಕಾಣಬಹುದು. ಗದುಗಿನ ಮಾನ್ವಿಮಠ, ನಾಲ್ವಾಡ ಚೌಕಿ, ಹೊನಗುಡಿಯವರ ಚೌಕಿಯಲ್ಲಿ ಕಾಣಬಹುದು. ಈ ಕುರಿತು ಕಲ್ಮಠ, ಡಾ. ವಿ. ಶಿವಾನಂದ, ವಿರಕ್ತಮಠ ಇವರ ಲೇಖನದಲ್ಲಿ ಉಲ್ಲೇಖಿಸಿದ್ದಾರೆ.

ಆ ದೇವಾಲಯದ ಬಳಿಗೆ ಈಗ ಯಾರೂ ಹೋಗುವುದಿಲ್ಲವೆಂದೂ ಅದರ ಸುತ್ತ ದೆವ್ವ-ಭೂತಗಳ ಕತೆ ಕಟ್ಟಿರುವ ವದಂತಿಗಳಿವೆ. ಒಂದೊಮ್ಮೆ ಸಾಂಸ್ಕೃತಿಕ ಮತ್ತು ಧಾರ್ಮಿಕ ನೆಲೆಯಾಗಿ ಗುರುತಿಸಲ್ಪಡುವ ಇಂತಹ ಸ್ಥಳಗಳು ಯಾವುದೋ ಒಂದು ಮೌಢ್ಯಕ್ಕೆ ಬಲಿಯಾಗಿ ಕಾಲಕ್ರಮೇಣ ತನ್ನ ಅಸ್ತಿತ್ವವನ್ನು ಕಳೆದುಕೊಳ್ಳುವು ವಿಪರ್ಯಾಸವೇ ಸರಿ. ಮೆಣಸಗಿ ಗ್ರಾಮ ಮಳೆಯ ಅತಿವೃಷ್ಟಿಗೆ ಪದೆ ಪದೆ ಒಳಗಾಗಿ ಪ್ರವಾಹ ಹರಿದು ಬರುವುದರಿಂದ ಆ ಗ್ರಾಮ ಮುಳುಗಿ ಹೋಗಬಹುದಾದ ಕಾರಣ ಹಳ್ಳಿಯನ್ನು ಪ್ರವಾಹದಿಂದ ರಕ್ಷಿಸಲು ಗ್ರಾಮವನ್ನೆ ಸ್ಥಳಾಂತರಿಸಲಾಗುತ್ತಿದ್ದು, ಆ ಸಮಯದಲ್ಲಿ ಪ್ರಾಚ್ಯವಸ್ತು ಇಲಾಖೆ ಕಲ್ಮೇಶ್ವರ ದೇವಾಲಯವನ್ನೂ ಕೂಡ ಸ್ಥಳಾಂತರಿಸಲು ತಯಾರಿ ಮಾಡಿಕೊಂಡಿದೆ. ದೇವಾಲಯದ ಕಲ್ಲುಗಳಿಗೆ ಸಂಖ್ಯೆಯನ್ನು ಬರೆಯಲಾಗಿದ್ದು ಆ ಕಲ್ಲುಗಳನ್ನು ಮರುಜೋಡಣೆ ಮಾಡಲಾಗುತ್ತದೆ. ಬಹುತೇಕ ಎಲ್ಲ ಸಮಾಜಗಳ ಸಂಸ್ಕೃತಿ, ಸಂಸ್ಕಾರ, ಸಂಘಟನೆಯ ಪ್ರತಿನಿಧಿಯಾಗಿ ಮಠ ಮಾನ್ಯಗಳು, ಗುಡಿಗಳು, ದೇವಾಲಯಗಳು ಬಳಕೆಯಾಗುವಂತೆ ಆ ಊರಿನಲ್ಲಿ ಕಾಲಾಂತರದ ವೀರಶೈವ ಸಮಾಜ ಸಂಸ್ಕೃತಿ, ಸಂಸ್ಕಾರ, ಸಂಘಟನೆಯ ಪ್ರತಿನಿಧಿಯಾಗಿ ಕಲ್ಮೇಶ್ವರ ದೇವಾಲಯ ತೋರಿಬರುತ್ತದೆ. ಸಹಜವಾಗಿ ವೀರಶೈವ ಪರಂಪರೆಯ ಈ ದೇವಾಲಯದ ಪ್ರಭಾವಕ್ಕೆ ಕ.ಬ.ಅಂಗಡಿಯವರು ಒಳಗಾಗದೆ ಉಳಿಯಲಿಲ್ಲ.

### ೨.೫ ಲಿಂಗಬಸವೇಶ್ವರ ಮಠ :

ಕ.ಬ.ಅಂಗಡಿಯವರ ಮನೆತನದ ಆರಾಧ್ಯ ದೈವವಾದ ಅಲ್ಲಿಯ ಮತ್ತೊಂದು ಮಹತ್ವದ ಸ್ಥಳ ಲಿಂಗಬಸವೇಶ್ವರ ಮಠ. ಅವರ ಹಿರಿಯರಾದಿಯಾಗಿ ಆ ಮಠಕ್ಕೆ ನಿಷ್ಠಾವಂತ ಭಕ್ತರಾಗಿದ್ದಾರೆ. ಆ ದೈವಭಕ್ತಿಯ ಸಂಕೇತವಾಗಿ ಅವರ ತಂಗಿಯ ಹೆಸರನ್ನು ಲಿಂಗಬಸಮ್ಮ ಎಂದೇ ಕರೆಯಲಾಗುತ್ತಿತ್ತು. ಈ ಮಠವು ಮೆಣಸಗಿಯ ಅವರ ಮನೆಯ ಸಮೀಪದಲ್ಲಿದೆ. ಈ ಮಠವೂ ಕೂಡ ವಿಶೇಷ ಐತಿಹ್ಯವನ್ನು ಹೊಂದಿದೆ. ಹೀರೆಮಠ ಮನೆತನದವರು ಅದರ ಆಡಳಿತ ಕಾರ್ಯವನ್ನು ನಿರ್ವಹಿಸುತ್ತಿದ್ದಾರೆ. ಮಠಕ್ಕೆ ಬೇಟಿ ನೀಡಿದಾಗ ಮಠದ ಪರಿಪೂರ್ಣ ವಿವರ ದೊರೆಯಿತು. ಮಠದ ಇತಿಹಾಸಕ್ಕೆ 'ಶರಣ' ಕೃತಿ ಕೂಡ ಆಕರವಾಗಿದೆ. ಲಿಂಗಬಸವೇಶ್ವರನ ಭಕ್ತರಾದ ಕ.ಬ.ಅಂಗಡಿಯವರು ತಮ್ಮ ಮನೆಯಲ್ಲಿ ಆಸ್ತಿ ವಿವಾದವೆದ್ದ ಸಮಯದಲ್ಲಿ ತಮ್ಮ ಪಾಲಿಗೆ ಬಂದ ಆಸ್ತಿಯನ್ನು ಸಹೋದರರಿಗೆ ನೀಡಿ ಇನ್ನೆಂದೂ ಅದು ತನ್ನದಲ್ಲವೆಂದು ಲಿಂಗಬಸವೇಶ್ವರ ಮಠದಲ್ಲಿ ಆಣೆ



ಮೆಣಸಗಿಯ ಲಿಂಗಬಸವೇಶ್ವರ ಮಠದ ಕರ್ತೃ ಗದ್ದುಗೆ

ಮಾಡಿ ಗದುಗಿನ ಕಡೆ ನಡೆದುಬಂದ ಸಂಗತಿ ಅವರ ಹಿರಿಯ ಮಗಳಾದ ಲಿಂ. ಶಾಂತಕ್ಕ ಕಲ್ಯಾಣಿಯರಿಂದ ತಿಳಿದು ಬರುತ್ತದೆ.

ಇಲ್ಲಿ ಅವರ ಸಾಹಿತ್ಯ ಸೇವೆ ಮೂಡಿಬಂದಿತು. ಮಠದ ಪರಿಸರವನ್ನು ಶರಣರ ಧ್ಯೇಯೋದ್ದೇಶಗಳ ಪ್ರಚಾರಕ್ಕಾಗಿ ಬಳಸಿಕೊಂಡರು. ಸಮಾಜದಲ್ಲಿ ಬೇರೂರಿದ್ದ ಮೌಢ್ಯವನ್ನು ತೆಗೆದು ಹಾಕಲು ಸಾಹಿತ್ಯ ಕೃಷಿಗೈದು ತಮ್ಮಲ್ಲಿದ್ದ ಪ್ರತಿಭೆಯ ಅನಾವರಣ ಮಾಡಿದುದು ಲಿಂಗಬಸವೇಶ್ವರ ಮಠದ ಸಾಂಸ್ಕೃತಿಕ ಕಾರ್ಯಕ್ರಮಗಳಿಂದ. ಲಿಂಗಬಸವೇಶ್ವರರ ಜನಪದ ಕಥೆಯನ್ನು ಸ್ವಾರಸ್ಯಕರವಾಗಿ ಅವರು ಹೇಳುತ್ತಿದ್ದರು. ತಮ್ಮ ಕೊನೆಯ ದಿನಗಳಲ್ಲಿ ಲಿಂಗಬಸವೇಶ್ವರರ ಕುರಿತು ಪುರಾಣ ರಚನೆಯನ್ನು ಮಾಡಬೇಕೆಂದು ಅವರು ಪ್ರಯತ್ನಿಸಿದ್ದಾರೆ. ಆ ಬಗೆಗೆ ಅನೇಕ ಮಾಹಿತಿಗಳನ್ನು ಮತ್ತು ವಿಷಯ ಸಂಗ್ರಹವನ್ನು ಅವರು ಮಾಡಿದ್ದರು.

ಲಿಂಗಬಸವೇಶ್ವರ ಮಠ ಜಾಗೃತ ಸ್ಥಳ. ಲಿಂಗಬಸವೇಶ್ವರರು ಅಲ್ಲಿನ ಮಹಿಮಾ ಪುರುಷರು. "ಮೆಣಸಗಿಯು ರಾಮದುರ್ಗ ಸಂಸ್ಥಾನದ ಭಾಗವಾಗಿದ್ದ ಕಾಲದಲ್ಲಿ ಚಾಂಗದೇವನು(ರಾಜಾ ಭಾಗ)ರಾಜ್ಯಭಾರ ಮಾಡುತ್ತಿದ್ದನೆಂದೂ, ಅವನು ಲಿಂಗಬಸವೇಶ್ವರರ ಪವಾಡಗಳನ್ನು ತಿಳಿದು ದರ್ಪದಿಂದ ಕರೆಯಲು ಕಳಿಸಿದಾದ, ಬರಲು ನಿರಾಕರಿಸಿದ ಲಿಂಗಬಸವೇಶ್ವರರನ್ನು ಮತ್ತೆ ಸಿಂಹವನ್ನೇರಿ ಕರೆಯಲು ಕಳಿಸುತ್ತಾನೆ. ಅದಕ್ಕೆ ಪ್ರತ್ಯುತ್ತರವಾಗಿ ಲಿಂಗಬಸವೇಶ್ವರರು ನಿಂತ ಗೋಡೆಯನ್ನೆ ಕುದುರೆಯಂತೆ ಏರಿ 'ನಡಿ ಹೋಗೋಣ' ಎಂದಾಗ ಗೋಡೆ ಅವರನ್ನು ಚಾಂಗದೇವನ ಬಳಿಗೆ ಕರೆದುಕೊಂಡು ಹೋಗುತ್ತದೆ. ಅದನ್ನು ನೋಡಿದ ಚಾಂಗದೇವನು ತನ್ನ ತಪ್ಪನ್ನು ಅರಿತು ಲಿಂಗಬಸವೇಶ್ವರರಿಗೆ ನಮಸ್ಕರಿಸಿ, ನೀವೆ ನನಗಿಂತ ದೊಡ್ಡವರು ಎಂದು ಶರಣಾದರೆಂಬ ಕಥೆಗಳು ಅಲ್ಲಿ ಜನಜನಿತವಾಗಿವೆ."[೩]

ಪ್ರತಿವರ್ಷ ಶ್ರಾವಣ ಸಮಯದಲ್ಲಿ ಜರಗುವ ಲಿಂಗಬಸಪ್ಪನ ಜಾತ್ರೆಯಲ್ಲಿ ದಲಿತರದೇ ಮೇಲುಗೈ. ಕೋಮುಗಳ ನಡುವೆ ಅನ್ಯೋನ್ಯ ಸೌಹಾರ್ದಕ್ಕೆ ಈ ಊರು ಹೆಸರಾಗಿದೆ. ಅದು ಈ ಗ್ರಾಮದ ವೈಶಿಷ್ಟ್ಯ ಕೂಡ ಆಗಿದೆ. ಈ ಮಾತು ಅಲ್ಲಿಯ ಜನರೆಲ್ಲರು ಹಿಂದಿನಿಂದಲೂ ಬಸವಾದಿ ಶರಣರ ಪ್ರಭಾವಕ್ಕೆ ಒಳಗಾಗಿರುವುದನ್ನು ಪ್ರತಿನಿಧಿಸುತ್ತದೆ. ಇಂದಿಗೂ ಲಿಂಗಬಸವೇಶ್ವರ ಮಠ ಧಾರ್ಮಿಕ-ಸಾಂಸ್ಕೃತಿಕ ಚಟುವಟಿಕೆಗಳಿಗೆ ಕೇಂದ್ರ ಸ್ಥಳವಾಗಿದೆ. ಅಲ್ಲಿ ಜಾತ್ರೆಯ ಸಮಯದಲ್ಲಿ ಕ.ಬ.ಅಂಗಡಿಯವರಿಂದ ಅನೇಕ ಕಾರ್ಯಕ್ರಮಗಳು ಜರುಗಲ್ಪಟ್ಟಿವೆ. ಲಾವಣಿ ಪದಗಳನ್ನು ಕಟ್ಟಿ ಹಾಡುತ್ತಿದರು. ಮಠದಲ್ಲಿ ವೀರಶೈವ ಸಮಾಜದ ಪ್ರಗತಿಗಾಗಿ, ಏಳ್ಗೆಗಾಗಿ ಹತ್ತು-ಹಲವು ಕಾರ್ಯಕ್ರಮಗಳನ್ನು



ಜಕ್ಕಲಿಯಲ್ಲಿ ಕ.ಬ.ಅಂಗಡಿಯವರು ಕಲಿತ ಶಾಲೆ



ಮೆಣಸಗಿಯಲ್ಲಿ ಕ.ಬ.ಅಂಗಡಿಯವರು ಕಲಿತ ಶಾಲೆ

ರೂಪಿಸುತ್ತಿದ್ದರು. ತನ್ಮೂಲಕ ಸಾಂಸ್ಕೃತಿಕ ಸ್ಥಿರತೆಗಳನ್ನು ಗ್ರಾಮೀಣ ರೈತಾಪಿ ಮನೆತನಗಳಲ್ಲಿ ಉಳಿದು ಬೆಳೆಯುವಂತೆ ಮಾಡುವಲ್ಲಿ ಪ್ರೇರಕ ಶಕ್ತಿಯಾಗಿದ್ದರು. ಈ ರೀತಿಯಲ್ಲಿ ಲಿಂಗಬಸವೇಶ್ವರ ಮಠ ಮತ್ತು ಕಲ್ಮೇಶ್ವರ ಗುಡಿಗಳು ಅವರ ಜೀವನದ ಪೂರ್ವಾರ್ಧ ಚರಿತ್ರೆಯನ್ನು ಒದಗಿಸುವಲ್ಲಿ ಅವಿಭಾಜ್ಯ ಅಂಗಗಳಾಗಿವೆ ಮತ್ತು ಅವರ ವ್ಯಕ್ತಿತ್ವ ರೂಪಿಸಿದ ಶಕ್ತಿಗಳಾಗಿವೆ ಎಂದರೆ ಅತಿಶಯೋಕ್ತಿಯಲ್ಲ.

## ೨.೬ ಶಿಕ್ಷಣ :

ಇವರ ಶಿಕ್ಷಣವೆಲ್ಲ ಮೆಣಸಗಿಯ ಸರಕಾರಿ ಪ್ರಾಥಮಿಕ ಶಾಲೆಯಲ್ಲಿ ಜರುಗಿತು. ೭ನೇ ತರಗತಿಗೆ ಬದಾಮಿ ತಾಲೂಕಿನ ಹೆಬ್ಬಳ್ಳಿ ಗ್ರಾಮಕ್ಕೆ ಬಂದು ವಿದ್ಯಾರ್ಜನೆ ಮಾಡಿದರು. ೧೯೧೨ರಲ್ಲಿ ವಿಜಾಪೂರ ಕೇಂದ್ರದಿಂದ ಮುಲ್ಕೀ ಪರೀಕ್ಷೆಯನ್ನು ಅತೀ ಹೆಚ್ಚು ಅಂಕ ಗಳಿಸಿ ಪಾಸಾದ ಹೆಗ್ಗಳಿಕೆ ಇವರದು. ಆದರೆ ಬಡತನದ ಕಾರಣದಿಂದ ವಿಜಾಪುರಕ್ಕೆ ಹೋಗುವಷ್ಟು ಹಣ ಕೂಡ ಅವರ ಬಳಿಗೆ ಇರಲಿಲ್ಲವಂತೆ. ಅಂತಹ ಸಂದರ್ಭದಲ್ಲಿ ಮೆಣಸಗಿ ಗ್ರಾಮದ ಅನೇಕ ಜನರು ಈ ಜಾಣ ವಿದ್ಯಾರ್ಥಿಯ ಹೆಚ್ಚಿನ ಅಧ್ಯಯನಕ್ಕೆ ಹಣ ನೀಡಿ ಸಹಾಯ ಮಾಡಿದರು. ಅದನ್ನು ಅವರು ಬಹುವಾಗಿ ಸ್ಮರಿಸಿದ್ದಾರೆ. ಹೆಚ್ಚಿನ ವ್ಯಾಸಂಗಕ್ಕೆ ಹಣದ ಕೊರತೆಯನ್ನು ಅರಿತ ಅವರು ತಮ್ಮೊಳಗಿದ್ದ ಕಲಾವಿದನನ್ನು ಬಡಿದೆಬ್ಬಿಸಿದರು. ಅವರಲ್ಲಿ ಇದ್ದ ಪದ್ಯ ರಚನಾ ಕಲೆಯು ಅವರ ಸಹಾಯಕ್ಕೆ ಬಂದಿತು. ಚುಟುಕು ಪದ್ಯ ರಚಿಸುವುದು, ಖವಾಲಿ ಪದ್ಯ ರಚಿಸುವುದು, ಗ್ರಾಮದಲ್ಲಿ ನಡೆಯುತ್ತಿದ್ದ ಅನೇಕ ಕಲೆಗಳಲ್ಲಿ ಆಸಕ್ತಿಯಿಂದ ಭಾಗವಹಿಸುತ್ತಿದ್ದರು. ಈ ರೀತಿಯಾಗಿ ಗ್ರಾಮದ ಬಹುತೇಕ ನಾಗರಿಕರಿಗೆ ಚಿರಪರಿಚಿತರಾದರು. ಅವರ ಜೀವನದಲ್ಲಿ ನಡೆಯುವ ಅನೇಕ ಘಟನೆಗಳು ಸಮಾಜದಲ್ಲಿದ್ದ ಮಡಿ ಮೈಲಿಗೆಗಳ ಬಗೆಗೆ ಇರುವ ಮೌಢ್ಯವನ್ನು ಖಂಡಿಸುವಂತೆ ಮಾಡಿದವು. ಮನುಷ್ಯರೆಲ್ಲರೂ ಒಂದೇ ಎಂಬುವ ಸಮಾನತೆಯನ್ನು ಅಶಿಕ್ಷಿತ ಜನಗಳಲ್ಲಿ ಬಿತ್ತಬೇಕೆನ್ನುವ ತವಕ ಹೆಚ್ಚಿತು. ಶಿಕ್ಷಣ ಎಂದಿಗೂ ಸಮಾಜಮುಖಿಯಾಗಿ ಕೆಲಸ ಮಾಡಬೇಕು ಎನ್ನುವುದು ಅವರ ವಾದವಾಗಿತ್ತು. ಶಿಕ್ಷಣದಿಂದ ಅರಿವಿನ ಜೀವನವನ್ನು ಕಟ್ಟಿಕೊಳ್ಳಬೇಕು ಎನ್ನುವ ಮನೋಧರ್ಮ ಅವರಲ್ಲಿ ಬಲವಾಗಿ ನೆಲೆಯೂರಿತು. ಅದಕ್ಕೆ ಸರಿಯಾಗಿ ಶಿವಯೋಗ ಮಂದಿರದಲ್ಲಿ ಅಭ್ಯಾಸ ಮಾಡುವ ಸುಯೋಗವೂ ಒದಗಿ ಬಂದಿತು. ಹಾನಗಲ್ಲ ಕುಮಾರ ಶಿವಯೋಗಿಗಳ ದಿವ್ಯ ಮಾರ್ಗದರ್ಶನದಲ್ಲಿ ಜೀವನ ಪಥ ಬದಲಾಯಿತು. ಶಿವಯೋಗ ಮಂದಿರದಲ್ಲಿ ಒಂದೆರಡು ವರ್ಷಗಳವರೆಗೆ ವೀರಶೈವ ಧರ್ಮ ಹಾಗೂ ಸಂಸ್ಕೃತ ಅಭ್ಯಾಸ

ಮಾಡುವುದರ ಜೊತೆಗೆ ವಟುಗಳೋಪಾದಿಯಲ್ಲಿ ಜೀವನ ಸಾಗಿಸಿದರು. ಅಲ್ಲಿಯ ಒಂದೆರಡು ವರ್ಷಗಳ ಸಂಪರ್ಕ ಸ್ವಾಮಿಗಳವರ ಕೃಪಾಶೀರ್ವಾದದಿಂದ ಇವನೊಬ್ಬ ಮಠದ ಸ್ವಾಮಿಯಾಗಲು ತಕ್ಕವನೆಂಬ ಅಭಿಪ್ರಾಯ ಮೂಡಿ ಬಂದಿತ್ತು. ಶ್ರೀಗಳವರು ಸೂಕ್ಷ್ಮದೃಷ್ಟಿಯಿಂದ ವೀಕ್ಷಿಸಿ ಕೌಪೀನ ಧರಿಸದ ವಟು ಕರವೀರಪ್ಪನವರನ್ನು ಕರೆದು 'ಇನ್ನು ನೀನು ಹೆಚ್ಚಿನ ಅಭ್ಯಾಸ ಮಾಡಿ ಶಿಕ್ಷಕನಾಗಿ ಸಮಾಜ ಸೇವೆಯನ್ನು ಮಾಡು' ಎಂದು ಆಶೀರ್ವದಿಸಿದರು. ನಂತರ ಅವರ ಅಪ್ಪಣೆಯಂತೆ ಶಿವಯೋಗ ಮಂದಿರದಿಂದ ಹೊರಬಂದು ತಮ್ಮ ಮನೆತನದ ಹಿರಿಯರ ಆಪೇಕ್ಷೆಯಂತೆ ರೋಣದ ಗುಲಗಂಜೀ ಮಠದಲ್ಲಿ ೧೯೧೫-೧೬ರಲ್ಲಿ ಇದ್ದು ಕೊಂಡು ಪ್ರವೇಶ ಪರೀಕ್ಷೆಯಲ್ಲಿ ಉತ್ತಮ ಅಂಕಗಳನ್ನು ಪಡೆದು ಧಾರವಾಡದ ಸರಕಾರಿ ತರಬೇತಿಗೆ ಹೋಗುವ ಅರ್ಹತೆ ಸಂಪಾದಿಸಿದರು. ತರಬೇತಿ ಸಂಸ್ಥೆಯಲ್ಲಿ ಮೂರು ವರ್ಷಗಳ ತರಬೇತಿಯನ್ನು ಪಡೆದರು. ತರಬೇತಿಯಲ್ಲಿ ಆಗ ಸಂಸ್ಕೃತ, ಬೀಜಗಣಿತ, ವ್ಯಾಕರಣ ಶಾಸ್ತ್ರಗಳ ವಿಶೇಷ ಅಧ್ಯಯನ ನೀಡಲಾಗುತ್ತಿತ್ತು. ಮೂರನೇ ವರ್ಷದ ತರಬೇತಿ ಪರೀಕ್ಷೆ ಪಾಸಾದ ಶಿಕ್ಷಕರೆಂದರೆ ಆಗಿನ ಕಾಲದಲ್ಲಿ ಕನ್ನಡ ವಿಷಯದಲ್ಲಿ ಹೆಚ್ಚಿನ ಜ್ಞಾನ ಸಂಪಾದಿಸಿದವರು ಎಂಬ ತಿಳುವಳಿಕೆ ಇತ್ತು. ಹಾಗೂ ಅಂದಿನ ಆ ಶಿಕ್ಷಣ ಯೋಗ್ಯವಂತ ಶಿಕ್ಷಕರನ್ನು ನೀಡುತ್ತಿದ್ದವು. ಅಲ್ಲಿನ ತರಬೇತಿ ಕ.ಬ.ಅಂಗಡಿಯವರನ್ನು ಸಮರ್ಥ ಶಿಕ್ಷಕರನ್ನಾಗಿ ತಯಾರು ಮಾಡಿತು.

## ೨.೭ ಧಾರವಾಡದ ಸರಕಾರಿ ತರಬೇತಿ ಸಂಸ್ಥೆ (ತರಬೇತಿ ಕಾಲೇಜು):

ಕ.ಬ.ಅಂಗಡಿಯವರ ಬದುಕು ಮತ್ತು ಬರಹಗಳು ಹತ್ತೊಂಬತ್ತನೆಯ ಶತಮಾನದ ಉತ್ತರಾರ್ಧ ಮತ್ತು ಇಪ್ಪತ್ತನೆಯ ಶತಮಾನದ ಪೂರ್ವಾರ್ಧದ ದಿನಗಳಲ್ಲಿ ಗುರುತಿಸಲ್ಪಡುವುದರಿಂದ ಅವರ ಬದುಕು ಮತ್ತು ಬರಹಗಳು ಆ ಕಾಲದ ಸಾಂಸ್ಕೃತಿಕ ಸದೃಢತೆ, ಶೈಕ್ಷಣಿಕ ಸದ್ಬಳಕೆ ಮತ್ತು ಸಾಹಿತ್ಯಿಕ-ಸಾಮಾಜಿಕ ಸಿದ್ಧ ರಚನೆಗಳಿಂದ ಬಹು ಪ್ರಾಮುಖ್ಯತೆಯನ್ನು ಪಡೆಯುತ್ತವೆ. ಅಂದಿನ ಸಾಮಾಜಿಕ ಮತ್ತು ರಾಜಕೀಯ ಪರಿಸರವನ್ನು ಅವಲೋಕಿಸಿದಾಗ ಅದೊಂದು ಶಿಕ್ಷಣ ಕ್ರಾಂತಿಯ, ಸಾಮಾಜಿಕ ಕ್ರಾಂತಿಯ, ರಾಜಕೀಯ ಕ್ರಾಂತಿಯ ಮತ್ತು ಧಾರ್ಮಿಕ ನೆಲೆಗಟ್ಟುಗಳ ಪಟ್ಟು ಬದಲಾವಣೆಗೊಂಡ ಕಾಲವೆಂದು ನಿರ್ಣಯಿಸಬಹುದು. ಅವರಿಗೆ ದೊರೆತ ಆ ನೈತಿಕ ಮೌಲ್ಯಗಳಿಗೆ ಸಕಾರಣವಾಗಿ ಬಂದ ಈ ಸಂದರ್ಭಗಳು ಅಷ್ಟೇ ಪೂರಕವಾಗಿವೆ.



ಕ.ಬ.ಅಂಗಡಿಯವರು ಧಾರವಾಡದಲ್ಲಿ ಶಿಕ್ಷಣ ಪಡೆದ ಶಿಕ್ಷಕ ತರಬೇತಿ ಕಾಲೇಜು (ಟ್ರೇನಿಂಗ್ ಕಾಲೇಜ್)

"ಹತ್ತೊಂಬತ್ತನೆಯ ಶತಮಾನ ಉತ್ತರ ಕರ್ನಾಟಕದಲ್ಲಿ ಪ್ರಾಥಮಿಕ ಶಿಕ್ಷಣದ ಶೈಕ್ಷಣಿಕ ಚಟುವಟಿಕೆಗಳು ಸಾಗಿಬಂದ ದಾರಿ ಐತಿಹಾಸಿಕವಾಗಿ ಗಮನಾರ್ಹವಾದುದು. ಅನಾದಿ ಕಾಲದಿಂದಲೂ ಮಾನವನ ಜೀವನಕ್ಕಂಟಿಕೊಂಡೇ ಬದುಕಿ ಬೆಳೆದು ಬಂದ ಭಾಷೆ, ಸಂಸ್ಕೃತಿ, ಕಲೆ, ಸಾಹಿತ್ಯಾದಿಗಳ ಆಶ್ರಯ ಮತ್ತು ಪೋಷಕ ತಾಣ."[೪] ಅಂತಹುದೊಂದು ಪರಂಪರೆಯೊಂದನ್ನು ಕಟ್ಟಿ ಬೆಳೆಸಿ, ಜೀವಂತವಾಗಿಡುವ ಕೆಲಸವನ್ನು ಧಾರವಾಡದ ಶಿಕ್ಷಣ ತರಬೇತಿ ವಿದ್ಯಾಲಯದ ಅಸ್ತಿತ್ವದೊಂದಿಗೆ ಪ್ರಾರಂಭವಾಯಿತು. "ಇದು ಉತ್ತರ ಕರ್ನಾಟಕದಲ್ಲಿ ಕನ್ನಡ ಭಾಷೆಯನ್ನು ಉಳಿಸಿ, ಕನ್ನಡಿಗರ ಸಂಸ್ಕೃತಿಯನ್ನು ಮೆರೆಸಿ, ಶ್ರೇಷ್ಠ ವ್ಯಕ್ತಿಗಳ, ಸಾಹಿತಿಗಳ ನಿರ್ಮಾಣಕ್ಕೆ ಕಾರಣೀಭೂತವಾದ ಸಂಸ್ಥೆಯಾಗಿದೆ."[೫] "ಶಿಕ್ಷಕರಿಗೆ ಟ್ರೇನಿಂಗ್ ಕೊಡುವ ನೆಪದೊಂದಿಗೆ ಹುಟ್ಟಿಕೊಂಡ ಈ ಸಂಸ್ಥೆ ಬರೀ ಅಷ್ಟನ್ನು ಮಾತ್ರ ಮಾಡಿಬಿಟ್ಟಿದ್ದರೆ ಇಂದಿಗೂ ಕನ್ನಡಿಗರು ತಲೆ ಎತ್ತುವುದು ಸಾಧ್ಯವಾಗುತ್ತಿರಲಿಲ್ಲ. ಈ ಮೂಲಕ ತರಬೇತಿಗಾಗಿ ಬಂದು-ಹೋಗುವ ಶಿಕ್ಷಕ ವಿದ್ಯಾರ್ಥಿಗಳಿಗೆಲ್ಲ ಸಾಹಿತ್ಯ, ಶಿಕ್ಷಣ, ಇತಿಹಾಸ, ಸಂಸ್ಕೃತಿ, ನಾಡು-ನುಡಿಯ ಅಭಿಮಾನ ಇತ್ಯಾದಿ ಬೀಜಗಳನ್ನು ಬಿತ್ತಿದರು. ಜೊತೆಗೆ ದಕ್ಷತೆ, ಪ್ರಾಮಾಣಿಕತೆ, ಶಿಸ್ತು, ಸಂಯಮಗಳನ್ನು ಬೆಳೆಸಲಾಯಿತು. ಎಲ್ಲದಕ್ಕಿಂತ ಹೆಚ್ಚಾಗಿ ತಮ್ಮ ಭಾಷೆಯನ್ನು ಮರೆತುಬಿಟ್ಟಿದ್ದ ಕನ್ನಡಿಗರಿಗೆ ಕನ್ನಡ ಭಾಷೆಯನ್ನು ಕಲಿಸಲು ನಡೆಸಿದ ಹೋರಾಟವೇ ಒಂದು ಪ್ರತ್ಯೇಕವಾದ ಸಾಧನೆ."[೬]

ಆ ಸಂಸ್ಥೆಯ ಬೆಳವಣಿಗೆಯಲ್ಲಿ ಡೈಪ್ಯೂಟಿ ಚೆನ್ನಬಸಪ್ಪನವರು, ಅರಟಾಳ ರುದ್ರಗೌಡರು, ತುರಮುರಿಯವರಂತಹ ಮಹಾನ್ ವ್ಯಕ್ತಿಗಳ ಆದರ್ಶ, ತ್ಯಾಗ, ಬಲಿದಾನಗಳು ಸ್ಮರಣೀಯವಾದುದು. ಅವರ ಸಾತ್ವಿಕ ಸೇವೆಯಲ್ಲಿ ಈ ಸಂಸ್ಥೆ ಹತ್ತು ಹಲವು ಆದರ್ಶಗಳನ್ನು ಇಟ್ಟುಕೊಂಡು ಕಾರ್ಯ ನಿರ್ವಹಿಸಿತು. ಇಲ್ಲಿ ಗಮನಿಸಬೇಕಾದ ಅಂಶವೆಂದರೆ ಈ ಸಂಸ್ಥೆಯು ಅಲ್ಲಿ ಬಂದು ಹೋಗುವ ಶಿಕ್ಷಕ ವಿದ್ಯಾರ್ಥಿಗಳಿಗೆ ಶುದ್ಧವಾದ, ನಿಚ್ಚಳವಾದ, ಕನ್ನಡಪರ ದೃಷ್ಟಿಯನ್ನಿಟ್ಟುಕೊಂಡು ಸಂಶೋಧನೆ, ಸಂಗ್ರಹ, ಪರಿಷ್ಕರಣೆ, ಸಂಪಾದನೆ, ಟೀಕೆ, ಟಿಪ್ಪಣಿಯಂತಹ ಕಾರ್ಯಕ್ಕೆ ಅನುವು ಮಾಡಿಕೊಟ್ಟಿತು. 'ಮಠ ಪತ್ರಿಕೆ'ಯ ಮೂಲಕ, 'ಜೀವನ ಶಿಕ್ಷಣ' ಮಾಸಿಕ ಪತ್ರಿಕೆಯ ಮೂಲಕ ಈ ಎಲ್ಲ ಧ್ಯೇಯೋದ್ದೇಶಗಳನ್ನು ಪ್ರಚಲಿತಗೊಳಿಸಿದವರು ಡೈಪ್ಯೂಟಿ ಚೆನ್ನಬಸಪ್ಪನವರು. ಒಟ್ಟಾರೆಯಾಗಿ ಟ್ರೇನಿಂಗ್ ಕಾಲೇಜಿನ ಇತಿಹಾಸವನ್ನು ಮೆಲುಕು ಹಾಕಿದಾಗ ಅದೊಂದು ಬರೀ ಶಿಕ್ಷಣ ತರಬೇತಿ ಕೇಂದ್ರವಾಗಿ ಕಾಣದೆ ಉತ್ತರ ಕರ್ನಾಟಕದ ಸಾಂಸ್ಕೃತಿಕ ಚರಿತ್ರೆಯ ಭಾಗವಾಗಿ, ಕನ್ನಡ ನಾಡಿನ ಶಿಕ್ಷಣ, ಸಾಹಿತ್ಯ ಮತ್ತು ಸಾಂಸ್ಕೃತಿಕ ಬೆಳವಣಿಗೆಯ ಅವಿಭಾಜ್ಯ ಅಂಗವಾಗಿ ಗುರುತಿಸಲ್ಪಡುತ್ತದೆ. ಅಂತಹ ಸಂಸ್ಥೆಯಲ್ಲಿ ತಮ್ಮ ಶಿಕ್ಷಣವನ್ನು ಪೂರೈಸಿದ ಕ.ಬ.ಅಂಗಡಿಯವರಲ್ಲಿ ಸಹಜವಾಗಿ



ಶಿವಯೋಗ ಮಂದಿರ

ಈ ಎಲ್ಲ ಆಚಾರಗಳು ಮತ್ತು ವಿಚಾರಗಳು ಅವರ ವ್ಯಕ್ತಿತ್ವವನ್ನು ರೂಪಿಸುವಲ್ಲಿ ತಮ್ಮ ಕಾರ್ಯ ಸಾಧನೆಯನ್ನು ಮಾಡಿವೆ.

## ೨.೮ ಶಿವಯೋಗ ಮಂದಿರದಲ್ಲಿ ಬದಲಾದ ಬದುಕು :

ಇವರ ಜೀವನ ಪಥ ಬದಲಾಗಲು ಹಾನಗಲ್ಲ ಕುಮಾರ ಶಿವಯೋಗಿಗಳು ಮತ್ತು ಅವರ ಕಮ್ಮಟ ಶಾಲೆ ಶಿವಯೋಗ ಮಂದಿರ ಕಾರಣ. ಪ್ರತಿಭೆಯನ್ನು ಗುರುತಿಸಿ ಆ ಪ್ರತಿಭೆ ಸಾಮಾಜಿಕ ಮೌಲ್ಯವಾಗಿ ಬದಲಾಗುವಂತೆ ಮಾಡುವ ಮಹತ್ತರ ಶಕ್ತಿ ಹಾನಗಲ್ಲ ಕುಮಾರ ಶಿವಯೋಗಿಗಳಲ್ಲಿತ್ತು. ಅದು ಪ್ರತಿಭಾ ಸಂಪನ್ನ ಮತ್ತು ಶಿಕ್ಷಣ ಪಡೆಯಲು ಹಾತೊರೆಯುತ್ತಿದ್ದ ಕ.ಬ.ಅಂಗಡಿಯವರನ್ನೂ ಗುರುತಿಸಿತು. ತಮ್ಮ ತಂದೆ ತಾಯಿಗಳೊಂದಿಗೆ ಶಿವಯೋಗ ಮಂದಿರಕ್ಕೆ ಹೋಗುವ ಸದಾವಕಾಶ ಅವರಿಗೊಮ್ಮೆ ದೊರಕಿತು. ಹಾನಗಲ್ಲ ಕುಮಾರ ಶಿವಯೋಗಿಗಳ ದರ್ಶನ ಪಡೆದು ಬರಲು ಹೋದ ಅವರಿಗೆ ಶ್ರೀ ಹಾನಗಲ್ಲ ಕುಮಾರ ಶಿವಯೋಗಿಗಳು ತಲೆಯ ಮೇಲೆ ಕೈಯಿಟ್ಟು "ತಮ್ಮ, ನೀನು ಇನ್ನೂ ಹೆಚ್ಚಿಗೆ ಕಲಿ; ಏನಾದರೂ ಬೇಕಿದ್ದರೆ ಬಂದು ಕೇಳತಾ ಇರು"[೭] ಎಂದು ಆಶೀರ್ವದಿಸಿದರು. "ಆ ಶಿವಯೋಗಿಯ ಕೃಪಾದೃಷ್ಟಿ ನನ್ನ ಮೇಲೆ ಬೀಳಬೇಕೆಂದರೆ ನಾನೇ ಪುಣ್ಯವಂತ" ಎಂದು ಪುಳಕಿತರಾದರು. ಅಲ್ಲಿಂದ ಅವರ ಶಿವಯೋಗ ಮಂದಿರದೊಂದಿಗೆ ಸಂಪರ್ಕ ಗಾಢವಾಯಿತು. ಶಿವಯೋಗ ಮಂದಿರದಲ್ಲಿ ತಮ್ಮ ಶಿಕ್ಷಣವನ್ನು ಪಡೆದ ಫಲವಾಗಿ ಮೊಳಕೆಯಾಗಿದ್ದ ಕವಿ ಹೃದಯದಲ್ಲಿ ಧಾರ್ಮಿಕ ಮತ್ತು ಸಾತ್ವಿಕ ಚಿಂತನೆಗಳು ನೆಲೆಗೊಳ್ಳಲು ಪ್ರಾರಂಭಿಸಿದವು. ಅಲ್ಲಿಯ ಸಂಪರ್ಕ ಮತ್ತು ಅಭ್ಯಾಸದಿಂದ ಅವರ ಜೀವನದ ಗೊತ್ತು-ಗುರಿಗಳು ಹೊಸ ಆಯಾಮವನ್ನು ಪಡೆದವು. ಮನಸ್ಸು ಒಬ್ಬ ತಪಸ್ವಿಯಂತೆ ಸರಳಗೊಂಡಿತು. ಬಸವಾದಿ ಶಿವಶರಣರ ಬದುಕು ಅವರನ್ನು ಪ್ರಭಾವಕ್ಕೆ ಒಳಪಡಿಸಿತ್ತು. ವೀರಶೈವ ತತ್ತ್ವಗಳ ಬಗೆಗೆ ಆಸಕ್ತಿ ಹೆಚ್ಚಾಗುತ್ತಾ ಹೋಯಿತು. ಶಿವಯೋಗ ಮಂದಿರದ ಪರಿಸರ ಅವರನ್ನು ಖಾವಿ ಧರಿಸದ ಅಪ್ರತಿಮ ವಟುವಾಗಿ ಮಾರ್ಪಡಿಸಿತ್ತು. ಇವರಲ್ಲಿದ್ದ ಕಾವ್ಯ ರಚನಾಶಕ್ತಿ, ಆಲೋಚನೆ ಮತ್ತು ಗ್ರಹಣ ಶಕ್ತಿಯ ಹರಿವನ್ನರಿತಿದ್ದ ಹಾನಗಲ್ಲ ಕುಮಾರ ಶಿವಯೋಗಿಗಳು ಅವರನ್ನು ಕರೆದು 'ಸಂಸಾರದಲ್ಲಿ ಸದ್ಗತಿಯುಂಟು ಮಗನೆ' ಎಂಬ ಬಾಲಲೀಲಾ ಮಹಾಂತ ಶಿವಯೋಗಿಗಳ ವಚನವನ್ನು ಉಪದೇಶಿಸಿ, "ಇನ್ನು ನೀನು ಹೆಚ್ಚಿನ ಅಭ್ಯಾಸ ಮಾಡಿ, ಶಿಕ್ಷಕನಾಗಿ ಸಮಾಜ ಸೇವೆಯನ್ನು ಮಾಡು"[೮] ಎಂದು ಆಶೀರ್ವದಿಸಿದರು.




ನರೇಗಲ್ಲದ ಘಂಟಿ ಶಾಲೆ - ಕ.ಬ.ಅಂಗಡಿಯವರು

ವೃತ್ತಿಗೈದ ಮೊದಲ ಶಾಲೆ

## ೨.೯ ಶಿಕ್ಷಕ ವೃತ್ತಿ :

ಧಾರವಾಡದ ಪ್ರಾಥಮಿಕ ಶಿಕ್ಷಕರ ತರಬೇತಿ ಮಹಾವಿದ್ಯಾಲಯದಲ್ಲಿ ತರಬೇತಿ ಪಡೆಯುವುದರೊಂದಿಗೆ ೧೯೨೦ರಲ್ಲಿ ರೋಣ ತಾಲೂಕಿನ ನರೇಗಲ್ಲದ ಕನ್ನಡ ಪ್ರಾಥಮಿಕ ಶಾಲೆಗೆ ಶಿಕ್ಷಕರಾಗಿ ಸೇವೆ ಸಲ್ಲಿಸುವ ಅವಕಾಶ ದೊರೆಯಿತು. ಅಲ್ಲಿ ತಮ್ಮ ಗುರಿಯ ಮೊದಲ ಹೆಜ್ಜೆ ಸಾಕಾರವಾಗಿತ್ತು. ತಮ್ಮಲ್ಲಿ ಚಿಗುರೊಡೆದಿದ್ದ ವೈಚಾರಿಕ ಬೆಳೆಯನ್ನು ಉತ್ತಿ-ಬಿತ್ತಲು ವೇದಿಕೆಯನ್ನು ಸಜ್ಜುಗೊಳಿಸಿಕೊಂಡರು. ಲೌಕಿಕದ ನೆರಳನ್ನು ಅಲೌಕಿಕದ ತಿರುಳನ್ನು ಹದ ಮಾಡಿ ಸಾಮಾಜಿಕ ಜವಾಬ್ದಾರಿಯನ್ನು ನಿರ್ವಹಿಸಲು ಅಣಿಯಾದರು. ಶಿಕ್ಷಣ ಪ್ರೇಮಿಯಾದ ಕಾರಣ ತನ್ನೊಳಗಿನ ಜಾಗೃತ ಶಿಕ್ಷಕನನ್ನು ಸಮಾಜಮುಖಿಯಾಗಿ ಕೆಲಸ ಕೈಗೊಳ್ಳಲು ಪ್ರೇರೆಪಿಸಿದರು. ಆಗಾಗ ಮಹಾತ್ಮರಾದ ಕೋಡಿಕೊಪ್ಪದ ವೀರಪ್ಪಜ್ಜನವರ ದರ್ಶನಕ್ಕಾಗಿ ಹೋಗುವುದನ್ನು ರೂಢಿಸಿಕೊಂಡಿದ್ದರು. ಅಲ್ಲಿ ಹಲವಾರು ಲಾವಣಿ ಪದಗಳನ್ನು ರಚಿಸಿದರು. ಅದರಂತೆ ಅಂದಿನ ದಿನಗಳಲ್ಲಿ ಹತ್ತಿ ವ್ಯಾಪಾರಸ್ಥರು ಹಾನಿಗೊಳಗಾಗಿ ಸಂಕಟ ಪಡುತ್ತಿದ್ದರು. ಅವರ ಮತ್ತು ಅವರ ಕಷ್ಟಗಳ ಕುರಿತು ಅನೇಕ ಲಾವಣಿ ಪದಗಳನ್ನು ಬರೆದರು. ಈ ಲಾವಣಿ ಪದಗಳು ಅನೇಕರನ್ನು ಆಕರ್ಷಿಸಿದವು. ಇವರಲ್ಲಿದ್ದ ಕವಿತ್ವಶಕ್ತಿಗೆ ಮಂತ್ರ ಮುಗ್ಧರಾದರು. ಸಮಾಜದ ಪ್ರಬಲ ವರ್ಗವಾದ ಮಹಿಳೆಯರನ್ನು ಕಡೆಗಣಿಸಿದ್ದ ಕಾಲವದು. ಅಂದು ಮಹಿಳೆಯ ಸ್ವಾಭಿಮಾನವನ್ನು ನೂರ್ಮಡಿಗೊಳಿಸುವ ಗಟ್ಟಿ ನಿರ್ಧಾರವನ್ನು ಮಾಡಿದರು. ಅವರಿಗಾಗಿ ಮಂಗಳ ಪದ್ಯಗಳನ್ನು ರಚಿಸಿದರು. ಈ ಪದ್ಯಗಳು ಮಹಿಳೆಯರನ್ನಷ್ಟೇ ಅಲ್ಲ ಸಮಾಜದ ಅನುಭವಿಗಳನ್ನು, ಶ್ರೀಗಳನ್ನು ಆಕರ್ಷಿಸಿದವು. ಸಮಾಜದಲ್ಲಿ ಪಿಡುಗಿನಂತೆ ಹಬ್ಬಿಕೊಂಡಿದ್ದ ಮಡಿ-ಮೈಲಿಗೆಯ ರೂಢಿ ವಾಡಿಕೆಗಳಿಗೆ ಬೇಸತ್ತು ಅವುಗಳ ದುಷ್ಪರಿಣಾಮಗಳನ್ನು ಪರಿಹರಿಸುವ ಉದ್ದೇಶದಿಂದ 'ಬೊಮ್ಮನ ಬಡಬಡಿಕೆ', 'ಹನುಮಂತನಿಗೆ ಲಿಂಗಧಾರಣೆ' ಎಂಬ ದೊಡ್ಡಾಟಗಳನ್ನು ಬರೆದರು. ಅವು ಬಹಳ ಪ್ರಚಾರಕ್ಕೆ ಬಂದವು. ಇವರ ಈ ಎಲ್ಲ ಸಾಧನೆಗಳನ್ನು ಅವಲೋಕಿಸುತ್ತಿದ್ದ ಹಾನಗಲ್ಲ ಕುಮಾರಸ್ವಾಮಿಗಳು ಅವರನ್ನು ತಮ್ಮಲ್ಲಿಗೆ ಬರಮಾಡಿಕೊಂಡು "ನೀನು ಇಲ್ಲಿ ಶಿಕ್ಷಕನಾಗಿ ಕೆಲಸ ಮಾಡುವುದಕ್ಕಿಂತ ಶಹರವಾಸದಲ್ಲಿ ಶಿಕ್ಷಕನಾಗಿ ಸೇವೆ ಸಲ್ಲಿಸುವುದು ಸೂಕ್ತ." ಅಲ್ಲಿ ನಿನ್ನ ಪ್ರತಿಭೆಗೆ ಮತ್ತು ನಿನ್ನ ವೈಚಾರಿಕತೆಗೆ ನೆಲೆ-ಬೆಲೆ ಸಿಕ್ಕುತ್ತದೆ ಎಂದು ನುಡಿದರು. ಇಲ್ಲಿ ನಾವು ನೆನಪಿಸಿಕೊಳ್ಳಬೇಕಾದ ಅಂಶ ಆಧುನಿಕ ಶಿಕ್ಷಣ ಕ್ರಮದ ಮಹತ್ವವನ್ನು ಮೊಟ್ಟ ಮೊದಲು ಅರಿತವರು ವೀರಶೈವ ಮಠಾಧೀಪತಿಗಳೇ ಎಂಬುದು ಗಮನಾರ್ಹ. ಅವರು ಇಪ್ಪತ್ತನೆಯ ಶತಕದ ಅವಶ್ಯಕತೆಗಳಿಗನುಗುಣವಾಗಿ ತಮ್ಮ ವಿಚಾರಧಾರೆಯನ್ನು ಬದಲಿಸಿ

ಜಾತ್ಯಾತೀತವಾಗಿ ಶಿಕ್ಷಣ ಪ್ರಸಾರ ಕಾರ್ಯ ಕೈಗೊಳ್ಳುವ ದ್ಯೇಯವನ್ನು ಇಟ್ಟುಕೊಂಡರು. ಧರ್ಮ ಗುರುಗಳು ವಿದ್ಯಾ ಪ್ರಸಾರ ಕಾರ್ಯಕ್ಕೆ ತೊಡಗಲು ಶಿಕ್ಷಣ ಸಂಸ್ಥೆಗಳ ಸ್ಥಾನಮಾನಗಳು ಹೆಚ್ಚಿ ಉದಾರ ದೇಣಿಗೆಗಳನ್ನು ಸಲ್ಲಿಸಲು ಜನತೆ ಮುಂದಾಯಿತು. ಇದರಿಂದ ವಿದ್ಯಾ ಸಂಸ್ಥೆಗಳು ಸ್ಥಿರವಾಗಿ ನಿಂತು ಕಾರ್ಯ ಮಾಡುವಂತಾಯಿತು. "ಮಠಗಳು ಕನ್ನಡ ನಾಡಿನ ಶಿಕ್ಷಣ,ಸಂಸ್ಕೃತಿಗಳ ಬೆನ್ನೆಲುಬಾದವು."[೧೦] ಮಠಗಳ ಈ ಕಾರ್ಯಾರ್ಜಣೆಯನ್ನು ಗಮನದಲ್ಲಿಟ್ಟುಕೊಂಡೆ ಇಂತಹ ಸಂಸ್ಥೆಗಳನ್ನು ಅಂದು ಗುರುಮಠ, ಸಾಲಿಮಠ ಮತ್ತು ಐಗಳ ಶಾಲೆ ಎಂಬ ಹೆಸರಿನಲ್ಲಿ ಪ್ರಚಲಿತವಾಗಿದ್ದುದು ವೀರಶೈವರಲ್ಲಿರುವ ಸಾಮಾಜಿಕ ಶೈಕ್ಷಣಿಕ ಕಳಕಳಿಯನ್ನು ಗುರುತಿಸುವಂತಿವೆ. ಅಂಗಡಿಯವರನ್ನು ಹಾನಗಲ್ಲ ಕುಮಾರಸ್ವಾಮಿಗಳು ಗುರುತಿಸಿದ ಸಂಗತಿ ಕೂಡ ಈ ವಿಷಯಕ್ಕೆ ಇಂಬು ನೀಡುತ್ತದೆ. ಇಂತಹ ಅನೇಕ ಕಾರ್ಯಗಳನ್ನು ತಮ್ಮ ಸೂಕ್ಷ್ಮ ಬುದ್ಧಿಮತ್ತೆಯಿಂದ ಗುರುತಿಸಿದ ಶ್ರೇಯಸ್ಸು ವೀರಶೈವ ಮಠಾಧೀಪತಿಗಳಿಗೆ ಸಲ್ಲುತ್ತದೆ ಎಂದರೆ ತಪ್ಪಾಗಲಾರದು ಮತ್ತು ಇಂದಿಗೂ ಈ ಪ್ರಗತಿಪರ ಧೋರಣೆಯು ಕೊನೆಗೊಳ್ಳದ ಗೊನೆಯಂತೆ ಕಂಗೊಳಿಸುತ್ತಿದೆ.

ಹಾನಗಲ್ಲ ಕುಮಾರ ಶಿವಯೋಗಿಗಳು ಗದುಗಿನ ಗಣ್ಯವ್ಯಕ್ತಿಗಳೂ, ಗುರು-ಲಿಂಗ-ಜಂಗಮ ಭಕ್ತರೂ ಆದ ಶಾಂತಪ್ಪ ಕೋಟಿ ಅವರಿಗೂ ಸ್ಕೂಲ ಕಮೀಟಿ ಸದಸ್ಯರಾದ ಹುಬ್ಬಳ್ಳಿ ಶಾಂತಪ್ಪನವರಿಗೂ ಒಂದು ಓಲೆಯನ್ನು ಬರೆದು ಕೊಟ್ಟು ಕ.ಬ.ಅಂಗಡಿಯವರನ್ನು ಶಿಕ್ಷಕರನ್ನಾಗಿ ನೇಮಿಸಿಕೊಳ್ಳಲು ತಿಳಿಸಿದರು. ಶಾಂತಪ್ಪ ಕೋಟಿಯವರಿಗೆ ಶಿವಯೋಗ ಮಂದಿರ ಮತ್ತು ಹಾನಗಲ್ಲ ಕುಮಾರ ಶಿವಯೋಗಿಗಳ ಜೊತೆಗೆ ಅನನ್ಯ ಸಂಬಂಧ ಸಂಪರ್ಕವಿತ್ತು. ಶಿವಯೋಗ ಮಂದಿರಕ್ಕೆ ಬಂದಾಗಲೆಲ್ಲ ಅಲ್ಲಿ ಉತ್ತಮ ವಟುವಾಗಿ ಬೆಳೆಯುತ್ತಿದ್ದ ಇವರನ್ನು ಭೇಟಿಯಾಗುತ್ತಿದ್ದರು. ಕ.ಬ.ಅಂಗಡಿಯವರ ಬಗೆಗೆ ಉತ್ತಮವಾದ ಭಾವನೆ ಅವರಲ್ಲಿತ್ತು. ಧಾರವಾಡದ ತರಬೇತಿ ಕಾಲೇಜಿನಲ್ಲಿ ತರಬೇತಿ ಪಡೆದಿದ್ದ ಇವರ ಕವಿತ್ವಶಕ್ತಿ, ವೀರಶೈವ ಸಿದ್ಧಾಂತಗಳಲ್ಲಿ ಅವರಿಗಿದ್ದ ಶ್ರದ್ಧೆ-ಭಕ್ತಿಯನ್ನು ಅರಿತಿದ್ದ ಮತ್ತು ಶಿವಯೋಗ ಮಂದಿರದ ಶಿಷ್ಯರಾದ ಅವರನ್ನು ಕೂಡಲೇ ಗದುಗಿನ ಶಾಲೆಗೆ ಹಾಜರಾಗಲು ಅಪ್ಪಣೆ ನೀಡಿದರು. ಆ ಕುರಿತು ಜಿಲ್ಲೆಯ ಶಿಕ್ಷಣಾಧಿಕಾರಿಗಳಿಗೆ ಪತ್ರ ಬರೆದರು. ಒಟ್ಟಾರೆಯಾಗಿ ೧೯೨೧ರಲ್ಲಿ ಶಿಕ್ಷಕರಾಗಿ ಗದುಗಿಗೆ ಸೇವಾ ಕಾರ್ಯಕ್ಕಾಗಿ ಬರುವಂತಾಯಿತು.



ಶ್ರೀ ಕ.ಬ.ಅಂಗಡಿ ಮತ್ತು ಶ್ರೀಮತಿ ಚೆನ್ನಮ್ಮ ಅಂಗಡಿಯವರು

## ೨.೧೦ ಕೌಟುಂಬಿಕ ಜೀವನ :

ಶಿವಯೋಗ ಮಂದಿರದಲ್ಲಿ ಅಭ್ಯಾಸಗೈಯುವಾಗ ಸಂಸಾರದಿಂದ ವಿರಕ್ತಭಾವವನ್ನು ತೋರಿಸಿದ ಇವರನ್ನು ಪುನಃ ಹಾನಗಲ್ಲ ಕುಮಾರ ಶಿವಯೋಗಿಗಳು ಮುಳಗುಂದದ ಬಾಲಲೀಲಾ ಮಹಾಂತ ಶಿವಯೋಗಿಗಳು ಉಪದೇಶಿಸಿದ "ಸಂಸಾರದಿಂದ ಸದ್ಗತಿಯುಂಟು ಕೇಳ್ಮಗನೇ ! ಬಸವಾದಿ ಪ್ರಮಥರು ಸಂಸಾರಿಕರಿದ್ದಿಲ್ಲವೇ ಕಾರಣ ನೀನು ಗೃಹಸ್ಥನಾಗು"[೧೧] ಎಂದು ಭೋದಿಸಿದರು. ಅವರ ಹಿರಿಯರನ್ನು ಕರೆದು ಮದುವೆಯ ಪ್ರಸ್ತಾಪವನ್ನು ತಿಳಿಸಿದರು. ಮೆಣಸಗಿಯಲ್ಲಿ ಕಲ್ಯಾಣಿ ಎಂಬ ಮನೆತನವಿದೆ. ಅವರ ಮನೆಯೂ ಕೂಡ ಅಂಗಡಿಯವರ ಮನೆಗೆ ಸಮೀಪದಲ್ಲಿಯೇ. ಕಲ್ಯಾಣಿಯವರ ಮನೆತನ ಕೂಡ ವ್ಯಾಪಾರಸ್ಥರ ಮನೆತನ ಜೊತೆಗೆ ಕೃಷಿಯೂ ಮುಖ್ಯ ಕಾಯಕವಾಗಿತ್ತು. ಆದರೆ ಕಲ್ಯಾಣಿಯವರು ಶ್ರೀಮಂತ ಕುಟುಂಬ ವರ್ಗಕ್ಕೆ ಸೇರಿದವರಾಗಿದ್ದರು. ಈ ಎರಡು ಮನೆತನಗಳ ನಡುವೆ ಗುರುತು ಪರಿಚಯಗಳಿದ್ದವು ವಿನಃ ಯಾವುದೇ ಸಂಬಂಧಗಳಿರಲಿಲ್ಲ. ಕ.ಬ.ಅಂಗಡಿಯವರ ಮದುವೆ ವಿಷಯ ಪ್ರಸ್ತಾಪವಾಗುವುದಕ್ಕೂ ಮತ್ತು ಬಸೆಟ್ಟೆಪ್ಪ ಕಲ್ಯಾಣಿಯವರು ಮಗಳಿಗೆ ಮದುವೆಯ ಯೋಚನೆ ಮಾಡುತ್ತಿದ್ದ ಸಂದರ್ಭದಲ್ಲಿ ತಮ್ಮ ಗ್ರಾಮದ ಸುಶಿಕ್ಷಿತ, ಸರಳ ಸ್ವಭಾವದ ಮತ್ತು ಶಿಕ್ಷಕನಾಗಿ ಸೇವೆಗೈಯುತ್ತಿದ್ದ ಇವರಿಗೆ ತಮ್ಮ ಮಗಳನ್ನು ಮದುವೆ ಮಾಡಲು ಮುಂದಾದರು. ೧೯೨೧ರಲ್ಲಿ ಕಲ್ಯಾಣಿ ಬಸೆಟ್ಟೆಪ್ಪನವರ ಮಗಳಾದ ಚೆನ್ನಮ್ಮನೊಂದಿಗೆ ಮದುವೆಯಾಯಿತು. ಚೆನ್ನಮ್ಮ ಪತಿಗೆ ತಕ್ಕ ಸತಿಯಾಗಿ ಅವರ ನಡೆಯಲ್ಲಿ ಸಾಗುತ್ತ ಅವರ ಗುರು-ಲಿಂಗ-ಜಂಗಮ ಭಕ್ತಿಯನ್ನು ತಾವೂ ಅನುಸರಿಸಿದರು. ತಾವು ಶ್ರೀಮಂತ ಕುಟುಂಬದಿಂದ ಬಂದ ಹೆಣ್ಣಾದರೂ ತಮಗಿಂತ ಬಡವರಾಗಿದ್ದ ಅಂಗಡಿಯವರ ಮನೆತನದಲ್ಲಿ ಯಾವುದೇ ಭೇದ-ಭಾವಗಳಿಲ್ಲದೆ ಅವರ ಕಷ್ಟ-ಸುಖಗಳಿಗೆ ಸ್ಪಂದಿಸಿದರು. ಕರವೀರಪ್ಪನವರ ಜೀವನ ಸಂಗಾತಿಯಾಗಿ, ಅವರ ಸಂಸಾರದ ಚುಕ್ಕಾಣಿಯಾಗಿ ಬದುಕಿದರು. ಮನೆಗೆ ಬರುತ್ತಿದ್ದ ಸಂಬಂಧಿಕರನ್ನು ಮತ್ತು ವಿಶೇಷತಃ ಶಿಕ್ಷಣ ಪಡೆಯಲು ಆರ್ಥಿಕವಾಗಿ ಅನಾನುಕೂಲತೆಯಿರುವವರನ್ನು ತಮ್ಮ ಪತಿ ಕರೆತಂದಾಗ ಅವರಿಗೆ ವಸತಿ, ಆಹಾರ ಮತ್ತು ಶಿಕ್ಷಣದ ಸವಲತ್ತುಗಳನ್ನು ಮಾಡಿಕೊಡುತ್ತಿದ್ದರು. ಮೆಣಸಗಿಯ ಜನ ಇಂದಿಗೂ ಚೆನ್ನಮ್ಮನವರ ಸೇವೆಯನ್ನು ಸ್ಮರಿಸುತ್ತಾರೆ. ತಮ್ಮಿಂದ ಯಾರೇ ಆಗಲಿ ಸಹಾಯ ಬಯಸಿ ಬಂದವರಿಗೆ ಇಲ್ಲ ಎನ್ನುವ ಮನೋಭಾವ ಅವರದಲ್ಲ. ಶರಣರು ನುಡಿದಂತೆ 'ಸತಿ-ಪತಿಗಳೊಂದಾದ ಭಕ್ತಿ ಹಿತವಾಗಿಪ್ಪುದು ಶಿವಂಗೆ' ಎನ್ನುವ ವಚನ ಅವರ ಜೀವನಕ್ಕೆ ಮಾದರಿಯಾಗಿತ್ತು.



ಪತ್ನಿ ಮತ್ತು ಮಕ್ಕಳೊಂದಿಗೆ ಶ್ರೀ ಕ.ಬ.ಅಂಗಡಿಯವರು



ಪುತ್ರ - ಪೌತ್ರರೊಂದಿಗೆ ಶ್ರೀ ಕ.ಬ.ಅಂಗಡಿಯವರು

ಇಂತಹ ಸಮರಸದ ಬದುಕಿನಲ್ಲಿ ಈ ದಂಪತಿಗಳಿಗೆ ನಾಲ್ಕು ಜನ ಗಂಡು ಮಕ್ಕಳು ಮತ್ತು ಇಬ್ಬರು ಹೆಣ್ಣು ಮಕ್ಕಳು ಜನಿಸಿದರು. ಮೊದಲನೆಯ ಮಗನಾದ ಷಣ್ಮುಖಪ್ಪ ಅಂಗಡಿಯವರು ಲೋಕೋಪಯೋಗಿ ಇಲಾಖೆಯಲ್ಲಿ ಇಂಜನಿಯರ್ ಆಗಿ ಸೇವೆ ಸಲ್ಲಿಸಿ, ಹುಬ್ಬಳ್ಳಿಯಲ್ಲಿ ತಮ್ಮ ಕುಟುಂಬದೊಂದಿಗೆ ನಿವೃತ್ತಿಯ ಬದುಕನ್ನು ಸವಿಯುತ್ತಿದ್ದಾರೆ. ಅವರ ಎರಡನೆಯ ಮಗನಾದ ಪಂಚಾಕ್ಷರಪ್ಪನವರು ಗಂಗಾವತಿಯಲ್ಲಿ ವ್ಯಾಪಾರಸ್ಥರಾಗಿ ತಮ್ಮ ಕುಟುಂಬದೊಂದಿಗೆ ಜೀವನ ನಡೆಸುತ್ತಿದ್ದಾರೆ. ಅವರ ಮೂರನೆಯ ಮಗನಾದ ಲಿಂ. ಬಸವಣ್ಣೆಪ್ಪನವರು ಗದುಗಿನಲ್ಲಿರುವ ಕ.ಬ.ಅಂಗಡಿಯವರು ಸಂಸ್ಥಾಪಿಸಿದ 'ಮಹಾಂತೇಶ ಮುದ್ರಣಾಲಯ' ಮತ್ತು 'ಜಯ ಬಸವ ಪುಸ್ತಕಾಲಯ'ಗಳ ಸಂಚಾಲಕರಾಗಿದ್ದರು. ಆ ಕಾರ್ಯಭಾರವನ್ನು ಅವರ ಮಕ್ಕಳು ಮುನ್ನಡೆಸುತ್ತಿದ್ದಾರೆ. ಅವರ ನಾಲ್ಕನೆಯ ಮಗನಾದ ಉಮೇಶ ಅಂಗಡಿಯವರು ಗದುಗಿನ ತೋಂಟದಾರ್ಯ ಮಹಾವಿದ್ಯಾಲಯದಲ್ಲಿ ಕನ್ನಡ ಉಪನ್ಯಾಸಕರಾಗಿ ಸೇವೆ ಸಲ್ಲಿಸಿ, ನಿವೃತ್ತರಾಗಿದ್ದು, ತಂದೆಯಿಂದ ಬಂದ ಸಾಹಿತ್ಯಿಕ ಒಲವನ್ನು ಕೃಷಿಗೊಳಿಸುತ್ತ ತಮ್ಮ ಕುಟುಂಬದೊಂದಿಗೆ ಬದುಕನ್ನು ಸವಿಯುತ್ತಿದ್ದಾರೆ. ಕ.ಬ.ಅಂಗಡಿಯವರು ಕಟ್ಟಿದ ಮೂಲ ಮನೆ 'ಬಸವ-ಭುವನ'ದಲ್ಲಿ ಅವರು ನೆಲೆಗೊಂಡಿದ್ದಾರೆ. ಅವರ ಹೆಣ್ಣು ಮಕ್ಕಳಲ್ಲಿ ಹಿರಿಯರಾದ ಲಿಂ. ಶಾಂತಕ್ಕ ಶಿವಪುತ್ರಪ್ಪ ಕಲ್ಯಾಣಿಯವರ ಪರಿವಾರವೂ ಗದುಗಿನಲ್ಲಿಯೇ ನೆಲೆಸಿದ್ದಾರೆ. ಅವರ ಇನ್ನೊಬ್ಬ ಮಗಳಾದ ಸರ್ವಮಂಗಲಾ ಶಿವಬಸಪ್ಪ ಬೆಲ್ಲದ ಅವರು ಬೆಂಗಳೂರಿನಲ್ಲಿ ನೆಲೆಸಿದ್ದಾರೆ.

ಅವರ ಮೊದಲ ಮಗನಾದ ಷಣ್ಮುಖಪ್ಪನವರಿಗೆ ನಾಡಿನ ಪ್ರಸಿದ್ಧ ಪುಸ್ತಕ ವ್ಯಾಪಾರಿಗಳೂ, ಪ್ರಕಾಶಕರಾದ ಲಿಂ.ಜಿ.ಎಚ್.ಚನ್ನಪ್ಪ ಅವರ ಮಗಳಾದ ಬಸವಣ್ಣೆವ್ವರೊಂದಿಗೆ ಮದುವೆ ಮಾಡಿದ್ದು, ಅವರಿಗೆ ಒಬ್ಬ ಗಂಡು ಮಗ, ಮೂವರು ಹೆಣ್ಣು ಮಕ್ಕಳಿದ್ದಾರೆ. ಎರಡನೆಯ ಮಗನಾದ ಪಂಚಾಕ್ಷರಪ್ಪನವರಿಗೆ ಗಂಗಾವತಿಯ ಲಿಂ. ಕುಸುಬಿ ತಿಪ್ಪಣ್ಣನವರ ಮಗಳಾದ ಶಕುಂತಲಾಳೊಂದಿಗೆ ಮದುವೆಯಾಗಿದ್ದು, ಅವರಿಗೆ ಇಬ್ಬರು ಗಂಡು ಮಕ್ಕಳು ಮತ್ತು ಒಬ್ಬಳು ಹೆಣ್ಣು ಮಗಳಿದ್ದಾಳೆ. ಅವರ ಮೂರನೆಯ ಮಗನಾದ ಬಸವಣ್ಣೆಪ್ಪನವರಿಗೆ ತಮ್ಮ ಮೊಮ್ಮಗಳು (ಶಾಂತ ಕಲ್ಯಾಣಿಯವರ ಹಿರಿಯ ಮಗಳಾದ) ಸುಮಂಗಲಾಳೊಂದಿಗೆ ಮದುವೆಯಾಗಿದ್ದು, ಅವರಿಗೆ ಮೂವರು ಗಂಡು ಮಕ್ಕಳು ಮತ್ತು ಒಬ್ಬಳು ಹೆಣ್ಣು ಮಗಳಿದ್ದಾಳೆ. ಅವರ ಕೊನೆಯ ಮಗನಾದ ಉಮೇಶ ಅಂಗಡಿಯವರಿಗೂ ತಮ್ಮ ಮೊಮ್ಮಗಳು (ಶಾಂತ ಕಲ್ಯಾಣಿಯವರ ದ್ವಿತಿಯ ಸುಪುತ್ರಿ) ಅಕ್ಕಮಹಾದೇವಿಯೊಂದಿಗೆ ಮದುವೆ ಮಾಡಲಾಗಿದ್ದು, ಅವರಿಗೆ ಇಬ್ಬರು ಗಂಡು ಮಕ್ಕಳು ಮತ್ತು ಒಬ್ಬಳು ಹೆಣ್ಣು ಮಗಳಿದ್ದಾಳೆ (ಅವಳು ಪ್ರಸ್ತುತ ಮಹಾಪ್ರಬಂಧ ಲೇಖಕಿ). ಹಿರಿಯ



ಗದುಗಿನಲ್ಲಿ ಕ.ಬ.ಅಂಗಡಿಯವರು ಕಟ್ಟಿಸಿದ ಬಸವ ಭುವನ ಮನೆ

ಮಗಳಾದ ಶಾಂತಕ್ಕನಿಗೆ ತಮ್ಮ ಹೆಂಡತಿಯ ತಮ್ಮನಾದ ಮತ್ತು ಸಿಟಿಸರ್ವೆ ಆಫೀಸರಾದ ಶಿವಪುತ್ರಪ್ಪ ಕಲ್ಯಾಣಿಯವರೊಂದಿಗೆ ಮದುವೆಯಾಗಿದ್ದು, ಅವರಿಗೆ ನಾಲ್ಕು ಜನ ಗಂಡು ಮಕ್ಕಳು ಮತ್ತು ಇಬ್ಬರು ಹೆಣ್ಣು ಮಕ್ಕಳಿದ್ದಾರೆ. ಅವರ ಕೊನೆಯ ಮಗಳಾದ ಸರ್ವಮಂಗಲೆಯನ್ನು ತಮ್ಮ ವಿದ್ಯಾ ಇಲಾಖೆಯಲ್ಲಿ ಸೇವೆ ಸಲ್ಲಿಸುತ್ತಿದ್ದ ಎಸ್.ಎಮ್.ಬೆಲ್ಲದ ಅವರಿಗೆ ಕೊಟ್ಟು ಮದುವೆ ಮಾಡಲಾಗಿದ್ದು, ಅವರಿಗೆ ಒಬ್ಬ ಗಂಡು ಮಗ ಮತ್ತು ಮೂವರು ಹೆಣ್ಣು ಮಕ್ಕಳಿದ್ದಾರೆ.

ತುಂಬು ಕುಟುಂಬ ಪರಿವಾರದ ಕಷ್ಟ-ಸುಖಗಳಲ್ಲಿ ತಮ್ಮನ್ನು ತೊಡಗಿಸಿಕೊಂಡು, ತಮ್ಮ ಅನುಭಾವದ ಸವಿಯನ್ನು ಮಕ್ಕಳು, ಮೊಮ್ಮಕ್ಕಳಲ್ಲಿ ಹಂಚಿ ಅವರೊಟ್ಟಿಗೆ ಆನಂದವಾಗಿ ಕಾಲಕಳೆಯುತ್ತಿದ್ದರು. ಹಬ್ಬ ಹರಿದಿನಗಳಲ್ಲಿ ತಮ್ಮ ಕುಟುಂಬ- ಪರಿವಾರವನ್ನೆಲ್ಲ ಒಂದೆಡೆಗೆ ಸೇರಿಸಿ ಕೂಡಿ ಹಂಚಿಕೊಂಡು ಉಂಡು ಬದುಕುವ ಸವಿಯನ್ನು ಅನುಭವಿಸುತ್ತಿದ್ದರು. ದಸರಾ ಹಬ್ಬ ನಿಜವಾಗಿಯೂ ಅವರ ಮನೆಯಲ್ಲಿ ಮೈಸೂರು ದಸರೆಯಂತೆ ಅದ್ಧೂರಿಯಾಗಿ ಜರಗುತ್ತಿತ್ತು. ಅದಕ್ಕೆ ಕಾರಣ ಅವರ ಕಟ್ಟಿ ಬೆಳೆಸಿದ ಅವರ ದುಡಿಮೆಯ ಕೇಂದ್ರಗಳಾದ 'ಜಯಬಸವ ಪುಸ್ತಕಾಲಯ' ಮತ್ತು 'ಮಹಾಂತೇಶ ಮುದ್ರಣ'ಗಳ ಕಾಯಕ ಪೂಜೆ.

ಕಾಯಕ ತತ್ವದಲ್ಲಿ ನಂಬಿಕೆಯಿಟ್ಟು ದುಡಿಮೆಯನ್ನು ಮಾಡಿದ ಅವರು ಶಿಕ್ಷಕರಾಗಿ ಸೇವೆ ಸಲ್ಲಿಸುವಾಗ ಗದುಗಿನ ಒಕ್ಕಲಗೇರಿಯಲ್ಲಿ ಎಸ್.ಆಯ್. ಮಾನ್ವಿಯವರ ಮನೆಯಲ್ಲಿ ಭಾಡಿಗೆ ಮನೆ ಮಾಡಿಕೊಂಡಿದ್ದ ಅವರು ತಮ್ಮ ಪರಿಶ್ರಮ ಮತ್ತು ನಿಷ್ಠೆಯ ಕಾಯಕದಿಂದ ಶಾಲೋಪಯೋಗಿ ಪುಸ್ತಕಗಳನ್ನು ಬರೆದ ಪರಿಣಾಮವಾಗಿ ಎಕ್ಸಟೆನ್ಶನ್ ಭಾಗದಲ್ಲಿ ಸ್ಥಳಕೊಂಡು ೧೯೪೨ರಲ್ಲಿ ಮನೆಯನ್ನು ಕಟ್ಟಿಸಿದರು. ಅದಕ್ಕೆ 'ಬಸವ ಭುವನ'ವೆಂದಾಗಿ ನಾಮಕರಣ ಮಾಡಿದರು. ೧೯೫೨ರಲ್ಲಿ ಗದುಗಿನ ಮಾರ್ಕೆಟ್ ಭಾಗದಲ್ಲಿ ಭಾಡಿಗೆ ಅಂಗಡಿಯಲ್ಲಿ 'ಜಯಬಸವ ಪುಸ್ತಕಾಲಯ'ವನ್ನು ಪ್ರಾರಂಭಿಸಿ, ತಮ್ಮ ಶೈಕ್ಷಣಿಕ, ಸಾಮಾಜಿಕ, ಧಾರ್ಮಿಕ ಪ್ರಚಾರ ಕಾರ್ಯಕ್ಕೆ ಹೊಸ ರೂಪ ನೀಡಿದರು. ಮುಂದೆ ೧೯೭೨ರಲ್ಲಿ ಗದುಗಿನ ತೋಂಟದಾರ್ಯ ಮಠದ ಮುಂದೆ ಸ್ಥಳವನ್ನು ಕೊಂಡುಕೊಂಡು 'ಮಹಾಂತ ಕೃಪಾ' ಕಟ್ಟಡವನ್ನು ಕಟ್ಟಿಸಿದರು. ಮುರಗೋಡ ಮಹಾಂತ ಶಿವಯೋಗಿಗಳನ್ನು ಬರಮಾಡಿಕೊಂಡು ಅದರ ಉದ್ಘಾಟನೆಯನ್ನು ಮಾಡಿದರು. ಅಲ್ಲಿಗೆ ಅವರ 'ಜಯಬಸವ ಪುಸ್ತಕಾಲಯ' ಸ್ಥಳಾಂತರಗೊಂಡಿತು. ನಂತರ ಅಲ್ಲಿಯೇ 'ಮಹಾಂತೇಶ ಮುದ್ರಣ'ವನ್ನು ಕಟ್ಟಿ ಬೆಳೆಸಿದರು. ತಮ್ಮ ಎಲ್ಲ ಮಕ್ಕಳನ್ನು ವಿದ್ಯಾವಂತರನ್ನಾಗಿ ಮಾಡಿ, ಅವರು ಉನ್ನತ ಹುದ್ದೆಗಳಲ್ಲಿ ನೆಲೆ




ಕ.ಬ.ಅಂಗಡಿಯವರು ಕಟ್ಟಿದ ಮಹಾಂತ ಕೃಪಾ ಕಟ್ಟಡದಲ್ಲಿ

ಅವರ ಜಯಬಸವ ಪುಸ್ತಕಾಲಯ, ಮತ್ತು ಮಹಾಂತೇಶ

ಮುದ್ರಣ

ನಿಲ್ಲುವಂತೆ ಮಾಡಿದರು. ತಾವು ಕಷ್ಟಪಟ್ಟು, ಬಡತನವನ್ನು ತಮ್ಮ 'ಶಿಕ್ಷಣ' ಮತ್ತು 'ಅರಿವಿ'ನಿಂದ ತೊಡೆದು ಹಾಕಿದರು. ಅಜ್ಜನಾಗಿ ಅವರು ಮೊಮ್ಮಕ್ಕಳಲ್ಲಿ ತಮ್ಮ ಸಂಯಮ ಮತ್ತು ಸಂಸ್ಕಾರಗಳನ್ನು ಬಿತ್ತಲು ಪ್ರಯತ್ನಿಸಿದರು. ಮೊಮ್ಮಕ್ಕಳಲ್ಲದೆ ತಮ್ಮ ಓಣಿಯ ಎಲ್ಲ ಮಕ್ಕಳನ್ನು ಸಾಯಂಕಾಲದ ಸಮಯದಲ್ಲಿ ಮನೆಯ ಮುಂದೆ ಕುಳ್ಳಿರಿಸಿಕೊಂಡು ಅವರಿಗೆ ವಚನಗಳನ್ನು, ಪದ್ಯಗಳನ್ನು, ಹಿತನುಡಿಗಳನ್ನು ಹೇಳಿಕೊಡುತ್ತಿದ್ದರು. ಆ ಮಕ್ಕಳ ಗುಂಪಿನಲ್ಲಿ ನಾನೂ ಕೂಡ ಒಬ್ಬಳು ಎನ್ನುವುದು ನನ್ನ ಸುಕೃತ.

ಇಂತಹ ಸೃಜನಶೀಲ ವ್ಯಕ್ತಿ-ಶಕ್ತಿಯನ್ನು ಗದುಗಿನ ಪರಿಸರ ಪಡೆದದ್ದು ಒಂದು ವಿಶೇಷವೆ. ಶಿಕ್ಷಕನಾಗಿ, ಸಮಾಜ ಸುಧಾರಕರಾಗಿ, ಅಧಿಕಾರಿಯಾಗಿ, ಬರಹಗಾರರಾಗಿ, ಮುದ್ರಕರಾಗಿ, ಸಂಪಾದಕರಾಗಿ, ಪ್ರಕಾಶಕರಾಗಿ, ಸಂಶೋಧಕರಾಗಿ ಇವತ್ತಿಗೆ ನೂರು ವರ್ಷಗಳ ಹಿಂದೆಯೇ ಬದುಕಿನ ಬೇರೆ ಬೇರೆ ಕ್ಷೇತ್ರಗಳಲ್ಲಿ ತಮ್ಮನ್ನು ಗುರುತಿಸಿಕೊಂಡು, ಕಾಯಕದಿಂದಲೇ ಶರಣತ್ವವನ್ನು ಪಡೆದುಕೊಂಡು ಎಲೆ ಮರೆಯ ಕಾಯಾಗಿ ಬದುಕಿದ ಇವರ ಬದುಕು ನಿಜಕ್ಕೂ ಸಾರ್ವಕಾಲೀಕ ಸತ್ಯವಾದುದು ಸಮಾಜಕ್ಕೆ ಒಂದು ಶಕ್ತಿಯೇ.

### ೨.೧೧ ಕ.ಬ.ಅಂಗಡಿಯವರ ಜೀವನದಲ್ಲಿ ಮಗನಾಗಿ ಬಂದ ಅಳಿಯ ಕಲ್ಯಾಣಿ ಶಿವಪುತ್ರಪ್ಪನವರು :

ಕ.ಬ.ಅಂಗಡಿಯವರ ಜೀವನದ ಅಧ್ಯಯನದಲ್ಲಿ ಕಲ್ಯಾಣಿ ಶಿವಪುತ್ರಪ್ಪನವರನ್ನು ಗುರುತಿಸಲೇಕು. ಇಲ್ಲದಿದ್ದರೆ ಅವರ ಅಧ್ಯಯನ ಅಪೂರ್ಣವಾದಂತೆಯೇ ಸರಿ. ಅವರ ಜೀವನದಲ್ಲಿ ಬರುವ ಈ ವ್ಯಕ್ತಿ, ಬರೀ ವ್ಯಕ್ತಿಯಲ್ಲ, ಅವರ ದೊಡ್ಡ ಶಕ್ತಿಯಾಗಿದ್ದಾರೆ. ಇವರಿಬ್ಬರ ನಡುವೆ ಇದ್ದದ್ದು ಅನ್ಯೋನ್ಯತೆ ಅನ್ನುವುದಕ್ಕಿಂತಲೂ ಪರಸ್ಪರರಲ್ಲಿ ಇದ್ದದ್ದು ವಿಶ್ವಾಸ ಮತ್ತು ಪೂಜನೀಯ ಭಾವಗಳು. ಶಿವಪುತ್ರಪ್ಪನವರು ಇವರ ಅಳಿಯಂದಿರು ಅಂದರೆ ಚೆನ್ನಮ್ಮನವರ ತಮ್ಮಂದಿರು. ಶಿವಪುತ್ರಪ್ಪನವರ ತಂದೆ-ತಾಯಂದಿರಿಗೆ ಹತ್ತು ಜನ ಮಕ್ಕಳಂತೆ. ಮೊದಲನೆಯವರು ಚೆನ್ನಮ್ಮನಾದರೆ, ಕೊನೆಯವರು ಶಿವಪುತ್ರಪ್ಪನವರು. ವಯಸ್ಸಿನಲ್ಲೂ ಅಂತರವಿದ್ದ ಚೆನ್ನಮ್ಮ ಮತ್ತು ಶಿವಪುತ್ರಪ್ಪನವರು ಅಪರೂಪದ ಸಹೋದರ-ಸಹೋದರಿಯರು. ಚಿಕ್ಕಂದಿನಲ್ಲಿಯೇ ತಂದೆಯನ್ನು ಕಳೆದುಕೊಂಡ ಶಿವಪುತ್ರಪ್ಪನವರನ್ನು ಕ.ಬ.ಅಂಗಡಿಯವರು ತಂದು ಮಗನಂತೆ ಸಾಕಿ ಬೆಳೆಸಿದರು. ಸ್ವಾಭಿಮಾನಿಯಾದ ಅವರನ್ನು ಸಾಕಿ-ಸಲಹಿ-ವಿದ್ಯೆಯನ್ನು ನೀಡಿ ಸಮಾಜಕ್ಕೆ ಸಲ್ಲುವಂತಹ ಓರ್ವ ಸುಶಿಕ್ಷಿತನನ್ನಾಗಿ ಮಾಡಿದರು. ಅತಿ ಬುದ್ಧಿವಂತನಾಗಿದ್ದ, ಶಾಲೆಗಳಲ್ಲಿ ರ್‍ಯಾಂಕ್ ಪಡೆಯುತ್ತಿದ್ದ



ಕ.ಬ.ಅಂಗಡಿಯವರಮಹಾಂತಕೃಪಾ ಕಟ್ಟಡದ ನೀಲನಕ್ಷೆ

ಶಿವಪುತ್ರಪ್ಪನವರನ್ನು ಇಂಜನೀಯರ್ ಮಾಡಬೇಕೆಂಬ ಮಹದಾಸೆ ಅಂಗಡಿಯವರಿಗಿತ್ತು. ಆದರೆ ಶಿವಪುತ್ರಪ್ಪನವರ ಮನದಲ್ಲಿ ಮಾವನವರು ಮನೆಯನ್ನು ನಡೆಸಲು ಕಷ್ಟವಾಗುತ್ತದೆ. ನಾನೊಬ್ಬ ದುಡಿದರೆ ಅವರಿಗೆ ಭಾರ ಕಡಿಮೆಯಾಗುತ್ತದೆ ಆ ಮೂಲಕ ಅವರ ಮನೆ ಬೆಳಗುತ್ತದೆ ಎಂದು ಯೋಚಿಸುತ್ತಿದ್ದರು. ತಮ್ಮ ವಿದ್ಯಾಭ್ಯಾಸವನ್ನು ಮೊಟಕುಗೊಳಿಸಿ, ಸಿಟಿಸರ್ವೆ ಆಫೀಸರ್ ಆಗಿ ಬಂದ ಹುದ್ದೆಯನ್ನು ಅಲಂಕರಿಸಿ, ಓದುವುದನ್ನು ಬಿಟ್ಟು ದುಡಿಯಲು ಪ್ರಾರಂಭಿಸಿದರು. ಕ.ಬ.ಅಂಗಡಿಯವರು ತಮ್ಮ ಹಿರಿಯ ಮಗಳಾದ ಶಾಂತಕ್ಕ ಅವರನ್ನು ಶಿವಪುತ್ರಪ್ಪನವರಿಗೆ ಕೊಟ್ಟು ಮದುವೆ ಮಾಡಿದರು. ಈ ಇಬ್ಬರೂ ಸಹಬಾಳ್ವೆ-ಸಹಜೀವನದಿಂದ ಶಿವಸಮರ್ಪಕ ಬದುಕನ್ನು ನಡೆಸಿದರು. ಗದುಗಿನಲ್ಲಿ 'ಬಸವ ಭುವನ' ಮನೆಯನ್ನು ಕಟ್ಟಿಸುವ ಸಂದರ್ಭದಲ್ಲಿ ಶಿವಪುತ್ರಪ್ಪನವರು ಆಳಿಗೆ ಆಳಾಗಿ, ಕಲ್ಲು-ಮಣ್ಣನ್ನು ಹೊತ್ತು ಅದಕ್ಕೆ ರೂಪರೇಷೆಯನ್ನು ಕೊಟ್ಟರು. 'ಮಹಾಂತ ಕೃಪಾ' ಕಟ್ಟಡಕ್ಕೆ ನಗರದ ಮಧ್ಯದಲ್ಲಿ ಮತ್ತು ತೋಂಟದಾರ್ಯ ಮಠದ ಎದುರಿನಲ್ಲಿ ಅನುಕೂಲಕರವಾದ ಜಾಗೆಯನ್ನು ಸರ್ವೆ ಮಾಡಿಕೊಟ್ಟರು. ಅಂಗಡಿಯವರಷ್ಟೇ ಸರಿಸಮವಾಗಿ ಅವರ ಎಲ್ಲ ಆಶಯಗಳಿಗೆ ಬೆಂಬಲವಾಗಿ ಕಲ್ಯಾಣಿ ಶಿವಪುತ್ರಪ್ಪನವರು ನಿಂತರು. ಕ.ಬ.ಅಂಗಡಿಯವರು ವರ್ಗವಾಗಿ ಹೋದ ಕಡೆಗೆಲ್ಲ ತಾವೂ ಅವರ ಜೊತೆ ಅವರ ಸಮೀಪದ ಊರುಗಳಿಗೆ ವರ್ಗ ಮಾಡಿಸಿಕೊಂಡು ಹೋಗುತ್ತಿದ್ದರು. ಅವರ ನೆರಳಾಗಿ ಸದಾ ಇರುತ್ತಿದ್ದರು. ಅಂಗಡಿಯವರ ಶಿವಾನುಭವ ಮತ್ತು ಸಾಮಾಜಿಕ ಕಾರ್ಯಗಳಲ್ಲಿ ತಾವೂ ಕೂಡ ಆಸ್ಥೆಯಿಂದ ಭಾಗವಹಿಸುತ್ತಿದ್ದರು. ತಮ್ಮ ಎರಡು ಹೆಣ್ಣು ಮಕ್ಕಳನ್ನು ಕ.ಬ.ಅಂಗಡಿಯವರ ಮಕ್ಕಳಿಗೆ ಮದುವೆ ಮಾಡಿಕೊಟ್ಟರು. ಅವರನ್ನು ಮಾವನೆಂದು ಎಂದೂ ಪರಿಗಣಿಸಲಿಲ್ಲ. ಅವರ ಪಾಲಿಗೆ ಅವರು ತಂದೆಯಾಗಿದ್ದರು. ಅವರ ಹಿರಿಯ ಮಗನಾಗಿ ಬೆಳೆದು ಮನೆ ಮಗ ನಿರ್ವಹಿಸುವ ಎಲ್ಲ ಜವಾಬ್ದಾರಿಗಳನ್ನು ಶಿವಪುತ್ರಪ್ಪನವರು ನಿರ್ವಹಿಸಿದರು. ಕ.ಬ.ಅಂಗಡಿಯವರು ಕೂಡ ಶಿವಪುತ್ರಪ್ಪನವರನ್ನು ಮಗನಾಗಿಯೇ ಕಂಡರು. "ತಂದೆ ಇಲ್ಲದವರಿಗೆ ಸೋದರ ಮಾವ" ಎನ್ನುವ ನಾಣ್ಣುಡಿಯನ್ನು ಬದುಕಿದರು. ಇವರಿಬ್ಬರ ಆ ಮನೋಭಕ್ತಿ ಅನನ್ಯವಾದುದು. ಎರಡು ಕುಟುಂಬಗಳು ಒಬ್ಬರ ಕಷ್ಟ-ಸುಖಗಳಿಗೆ ಸ್ಪಂದಿಸುತ್ತಾ ಎರಡರಲ್ಲಿಯೂ ಒಂದೆಂದು ಬೆರೆಯುವ ಆ ಮೂಲಕ ಸೌಹಾರ್ದ-ಸಂಸ್ಕೃತಿ-ಸಂಬಂಧಗಳಿಗೆ ಹೊಸ ಭಾಷ್ಯಯನ್ನು ಬರೆದರು.



ಕ.ಬ.ಅಂಗಡಿಯವರ ಅಳಿಯಂದಿರಾದ ಶಿವಪುತ್ರಪ್ಪ ಕಲ್ಯಾಣಿ
ಮತ್ತು ಮಗಳು ಶಾಂತಕ್ಕ ಕಲ್ಯಾಣಿಯವರು

## ೨.೧೨ ಶಿಕ್ಷಕ ವೃತ್ತಿಯೊಂದಿಗೆ ಕಲಿಯುವ ಹಂಬಲ :

ಕ.ಬ.ಅಂಗಡಿಯವರು ಮದುವೆಯ ನಂತರವೂ ತಮ್ಮ ಶಿಕ್ಷಣವನ್ನು ಮುಂದುವರೆಸಿದರು. ಪ್ರಾಥಮಿಕ ಶಿಕ್ಷಕರಾಗಿ ಸೇವೆಯನ್ನು ಸಲ್ಲಿಸುತ್ತಲೇ ವೀರಶೈವ ಧರ್ಮದ ತತ್ವಗಳ ಪ್ರಚಾರ ಮಾಡುವುದರ ಜೊತೆಗೆ ಇಂಗ್ಲೀಷ ಅಭ್ಯಾಸ ಮಾಡತೊಡಗಿದರು. ೧೯೨೪ರಲ್ಲಿ ಮ್ಯಾಟ್ರಿಕ್ ಪರೀಕ್ಷೆಯಲ್ಲಿ ಅತ್ಯುತ್ತಮ ಗುಣಗಳನ್ನು ಪಡೆದು ಪ್ರಶಸ್ತಿ ಸಹಿತ ಪ್ರಥಮ ವರ್ಗದಲ್ಲಿ ಪಾಸಾಗಿ ಶಿಕ್ಷಕ ಬಳಗಕ್ಕೆ ಅಭಿಮಾನವನ್ನುಂಟು ಮಾಡಿದರು. ಮ್ಯಾಟ್ರಿಕ್ ಪರೀಕ್ಷೆಯ ಪರಿಣಾಮ ಪ್ರಸಿದ್ಧವಾದೊಡನೆ ಇವರ ಕನ್ನಡ ಭಾಷೆಯ ಹಾಗೂ ಸಾಹಿತ್ಯದ ಒಲವನ್ನು ತಿಳಿದು ಗದಗ-ಬೆಟಗೇರಿ ಮುನಸಿಪಲ್ ಹೈಸ್ಕೂಲಿನಲ್ಲಿ ಕನ್ನಡ ಭಾಷೆಯ ಗೌರವ ಶಿಕ್ಷಕರೆಂದು ನಿಯಮಿಸಿಕೊಂಡರು. ಪರಿಣಾಮವಾಗಿ ಅವರು ಪ್ರಾಥಮಿಕ ಶಾಲೆಗಳಲ್ಲಷ್ಟೇ ಅಲ್ಲ ಮಾಧ್ಯಮಿಕ ಶಾಲೆಗಳಲ್ಲಿಯೂ ಸಾಹಿತ್ಯ ಪ್ರಚಾರ ಮಾಡಲು ಅವಕಾಶ ದೊರೆಯಿತು. ಶಿಕ್ಷಣದೊಂದಿಗೆ ಅವರು ಹಮ್ಮಿಕೊಂಡಿದ್ದ ಸಮಾಜ ಪರಿವರ್ತನೆಯ ಸಾಧನೆಗೆ ಆನೆಬಲ ಬಂದಿತು. ಶರಣರ ಹಾದಿಯಲ್ಲಿ ನಡೆಯಬೇಕು ಅವರ ವಿಚಾರಗಳನ್ನು ಸಮಾಜದ ಪ್ರಬಲ ವರ್ಗವಾದ ಮಹಿಳೆ ಮತ್ತು ಮಕ್ಕಳಲ್ಲಿ ಪ್ರಯೋಗ ಮಾಡಿದರೆ ಅಲ್ಲಿ ಹೆಚ್ಚು ಸಫಲತೆ ದಕ್ಕುವುದೆಂದು ಕಂಡುಕೊಂಡವರು. ಈ ಆಶಯವನ್ನು ಶಿಕ್ಷಣದ ಮೂಲಕ ಸಾಧ್ಯಗೊಳಿಸಿದರು. ಮಹಿಳೆ ಮತ್ತು ಮಕ್ಕಳ ಮನಸ್ಸನ್ನು ತಲುಪಲು ಅವರ ಇತಿ-ಮಿತಿಗೆ ತಮ್ಮ ಸಾಹಿತ್ಯಿಕ ಪರಿಧಿಯನ್ನು ಗುರುತಿಸಿಕೊಂಡರು. ಅವರ ಕೃತಿಯಾದ 'ಅನುಭವದೂಟ'ದಲ್ಲಿ 'ಶರಣೆಯರ ಹೊಲಿಗೆ', 'ಶರಣೆಯರ ಹೆಣಿಕೆ', 'ಅಕ್ಕನೊಳು ಅರಿಕೆ' ಎನ್ನುವ ಪದ್ಯಗಳನ್ನು ಉಲ್ಲೇಖಿಸಬಹುದು. 'ಮುತ್ತೈದೆಯರೈವರು' ಕೃತಿಯಲ್ಲಿ ಅವರು 'ನೀಲಲೋಚನೆ, ಮಲ್ಲಿಗಮ್ಮ, ಅಕ್ಕಮಹಾದೇವಿ, ಮೋಳಿಗೆಯ ಮಹಾದೇವಿಯಮ್ಮ, ಆಯ್ದಕ್ಕಿ ಲಕ್ಕಮ್ಮ' ಇವರ ಜೀವನ ಚಿತ್ರಣವನ್ನು ಶೈಕ್ಷಣಿಕ ದೃಷ್ಟಿಕೋನದಿಂದ ಒಪ್ಪವಾಗಿ ಚಿತ್ರಿಸಿದ್ದು ಉಲ್ಲೇಖಾರ್ಹ. 'ಅಮರವಾಣಿ' ಕೃತಿಯಲ್ಲಿ ಅವರು ಹೇಳುವ ದೇವರೂ ಮತ್ತು ಸಧರ್ಮವೂ, ನೀತಿಯೂ ಮತ್ತು ಸದಾಚಾರವೂ, ತನು-ಮನ-ಭಾವಗಳ ವಿಕಾಸವೇ ಮಾನವನ ವಿಕಾಸ, ವಿದ್ಯೆಯೂ ಅನುಭಾವವೂ, ಬ್ರಹ್ಮಚರ್ಯವೂ ದಾಂಪತ್ಯ ಜೀವನವೂ, ಕಾಯಕವೂ ಪ್ರಸಾದ ಜೀವನವೂ, ಸಮಾಜದ ಮಹನೀಯರು ನುಡಿದ ನುಡಿ ಮುತ್ತುಗಳನ್ನು 'ಅಮರವಾಣಿ' ಎನ್ನುವ ಶೀರ್ಷಿಕೆಯಡಿ ಸಂಪಾದಿಸಿದ ರೀತಿಗಳು ಅವರ ಈ ಕಾರ್ಯ ಸಾಧನೆಯನ್ನು ಬಿಂಬಿಸುತ್ತವೆ.



ಕ.ಬ.ಅಂಗಡಿಯವರು ಧಾರವಾಡದಲ್ಲಿ ಪ್ರಿವಿಯಸ್ ಓದುವಾಗ
ಇದ್ದ ಮುರುಘಾಮಠದ ವಿದ್ಯಾರ್ಥಿ ನಿಲಯ

ವೀರಶೈವ ಸಮಾಜ ಶಿಕ್ಷಣದ ಬೇರುಗಳನ್ನು ಗಟ್ಟಿಯಾಗಿಸಲು ಅಡಿ ಇಟ್ಟದ್ದು ಹತ್ತೊಂಬತ್ತು, ಇಪ್ಪತ್ತನೆಯ ಶತಮಾನದಡಿಯಲ್ಲಿ ಅಲ್ಲ. ಅದನ್ನು ನಾವು ತೀಕ್ಷ್ಣವಾಗಿ ಅವಲೋಕಿಸಿದರೆ ಅದರ ಹೆಜ್ಜೆಗಳು ಹನ್ನೆರಡನೆಯ ಶತಮಾನದಲ್ಲಿಯೇ ಕಾಣಸಿಗುತ್ತವೆ ಮತ್ತು ಬಸವಾದಿ ಪ್ರಮಥರಿಗಿಂತ ಪೂರ್ವದ ಅನುಭಾವಿಗಳಾದ ಆದ್ಯರಲ್ಲೂ ಕಂಡು ಬರುತ್ತದೆ. ಈ ಮಾತನ್ನು ಸಮರ್ಥಿಸುವಂತೆ ಬಸವಣ್ಣನವರು ಹೇಳುವ "ಆದ್ಯರ ವಚನ ಪರುಷ ಕಂಡಯ್ಯ" ಎಂಬಿ ಉಕ್ತಿ ಸಾಕ್ಷ್ಯವೆನಿಸುತ್ತದೆ. ಶಿವಶರಣರು ಸಮಾಜವನ್ನು ಸಂಸ್ಕರಣಗೊಳಿಸಿದ್ದು ಈ ಶಿಕ್ಷಣದ ಮುಖಾಂತರವೇ. ಅವರು ಜನಸಾಮಾನ್ಯರಲ್ಲಿ ಅರಿವನ್ನು ಮೂಡಿಸಲು ಪ್ರಯತ್ನಿಸಿದ್ದು ಈ ಶಿಕ್ಷಣದ ಮೂಲಕವೇ. ವಚನಗಳ ಪರಂಪರೆಯನ್ನು ಹುಟ್ಟು ಹಾಕಿ ಕರ್ನಾಟಕದಲ್ಲಿ ಶಿಕ್ಷಣ ಕ್ರಾಂತಿಯಾಗಲು ಅಡಿಪಾಯ ಹಾಕಿದವರು ಶಿವಶರಣರು. ಅದರ ಪ್ರಭಾವ ಎಷ್ಟಿತ್ತೆಂದರೆ ಮುಂದೆ ಅದು ೧೬ ಮತ್ತು ೧೯ನೆಯ ಶತಮಾನದ ದಿನಗಳಲ್ಲಿ ತನ್ನ ಉತ್ತುಂಗವನ್ನು ಕಂಡುಕೊಂಡಿತು. ಅಂದಿನಿಂದ ಇಂದಿನವರೆಗೂ ಸಾಹಿತ್ಯದ ಹಲವಾರು ಮುಖಗಳ ಮೂಲಕ ವೀರಶೈವ ಸಾಮಾಜಿಕ ಸಂಘಟನೆಗಳು ಕಾಲಾತೀತವಾಗಿ ಮತ್ತು ಜಾತ್ಯಾತೀತವಾಗಿ ಈ ಕಾರ್ಯವನ್ನು ನಡೆಸಿಕೊಂಡು ಬರುತ್ತಿರುವುದು ಮರೆಯದ ಮತ್ತು ಅಳಿಯದ ಇತಿಹಾಸ. ಸ್ವಾತಂತ್ರ್ಯದ ನಂತರ ಸಂವಿಧಾನಿಕವಾಗಿ ಶಿಕ್ಷಣಕ್ಕೆ ಮಹತ್ವ ದೊರಕಿತು. ಶಿಕ್ಷಣ ಸಾಮಾನ್ಯ ಭಾರತೀಯನ ಜನ್ಮ ಸಿದ್ಧ ಹಕ್ಕಾಗಿ ಬದಲಾಯಿತು. ಅದೇ ರೀತಿಯಲ್ಲಿ ಸಾಮಾಜಿಕ, ವೈಜ್ಞಾನಿಕ, ತಾಂತ್ರಿಕ ಮತ್ತು ವೈದ್ಯಕೀಯ ಶಿಕ್ಷಣದ ಹಂತಗಳಲ್ಲಿ ಮಹತ್ತರ ಬದಲಾವಣೆಯನ್ನು ಕಾಣುವಂತಾಯಿತು. ಆದರೆ ಈ ದಿಸೆಯಿಂದ ನಾವು ವಿಚಾರ ಮಾಡುವ ಪ್ರಕ್ರಿಯೆಗೆ ಚಾಲನೆಯನ್ನು ಇನ್ನೂ ನೀಡಿಲ್ಲವೆನ್ನುವುದೆ ಸೋಜಿಗ.

ಈ ಎಲ್ಲ ಹಿನ್ನೆಲೆಗಳಿಂದ ಇವರ ಬದುಕಿನ ಗುರಿ ಮತ್ತು ಸಾಧನೆಯ ಮುಂದಾಲೋಚನೆಗಳು ಎಂಥ ಸಮಾಜ ಕಟ್ಟುವ ಇಟ್ಟಿಗೆಗಳಾಗಲು ಹಂಬಲಿಸುತ್ತಿದ್ದವು ಎಂದು ತಿಳಿದು ಬರುತ್ತದೆ.

ಉಚ್ಚ ಶಿಕ್ಷಣ ಪಡೆಯುವ ಹಂಬಲದಿಂದ ೧೯೫೬ರಲ್ಲಿ ತಮ್ಮ ವೃತ್ತಿಯಿಂದ ರಜೆ ಪಡೆದುಕೊಂಡು ಧಾರವಾಡದ ಕರ್ನಾಟಕ ಕಾಲೇಜಿಗೆ ಪ್ರೀವಿಯಸ್ ಅಭ್ಯಾಸ ಮಾಡಲು ಹೋದರು. ಅಲ್ಲಿ ಧಾರವಾಡದ ಮುರುಘಾ ಮಠದಲ್ಲಿ ತಮ್ಮ ವಾಸ್ತವ್ಯವನ್ನು ಹೂಡಿದರು. ಮುರುಘಾ ಮಠ ಕರ್ನಾಟಕದ ಧಾರ್ಮಿಕ ಇತಿಹಾಸದಲ್ಲಿ ತನ್ನದೆ ಆದ ಸ್ಥಾನ-ಮಾನಗಳನ್ನು ಇಂದಿಗೂ ಹೊಂದಿದಂತಹ ಮಠ. ಅದು ವೀರಶೈವ ಸಂಘಟನೆಗಳನ್ನು ಬಲಪಡಿಸಿದ ಮಠ, ಬಸವಾದಿ ಶಿವಶರಣರ ಆಶಯಗಳಿಗೆ ಸದಾ ಸ್ಪಂದಿಸಿದ ಮತ್ತು ಇಂದಿಗೂ ಸ್ಪಂದಿಸುತ್ತಿರುವ ಮಠ. ಅಲ್ಲಿ ತಮ್ಮ ಸಾಹಿತ್ಯಿಕ ಸೇವೆಯನ್ನು ಮುಂದುವರೆಸಿದರು.

ಶತಕತ್ರಯ[೧೨] ಹೇಳಲು ಪ್ರಾರಂಭಿಸಿದರು. ಮುರುಘಾ ಮಠದಲ್ಲಿ ಅಂದಿನಿಂದ ಶತಕತ್ರಯ ಹೇಳುವ ಪರಂಪರೆ ಪ್ರಾರಂಭವಾಯಿತು. ಮಠದ ಪರಿಸರಕ್ಕೆ ತಾವು ಕೊಡುಗೆ ನೀಡುತ್ತ ಅಲ್ಲಿಯ ಪರಿಸರದಿಂದ ತಾವೂ ಪರಿಪಕ್ವವಾಗುತ್ತ ತಮ್ಮ ಸೇವೆಯಲ್ಲಿ ಸಾತ್ವಿಕತೆಯನ್ನು, ಪಾರದರ್ಶಕತೆಯನ್ನು ತರಲು ಮುಂದಾದರು.

ಸಂಘಟನಾ ಶಕ್ತಿಯಲ್ಲಿ ಪ್ರಬಲವಾಗಿ ನಂಬಿಕೆಯುಳ್ಳವರಾದ ಅಂಗಡಿಯವರು ತಾವೊಬ್ಬರೆ ಎಲ್ಲವನ್ನು ಮಾಡಿಬಿಡಬಲ್ಲೆ ಎಂದು ಹೇಳಿಕೊಂಡವರಲ್ಲ. ಅವರ ಉದ್ದೇಶವೂ ಅದಾಗಿರಲಿಲ್ಲ. ಹೀಗಾಗಿ ಅವರ ನುಡಿ ನಡೆಗಳನ್ನು ನಾವು ಸಾಹಿತ್ಯ ಮತ್ತು ಸಂಸ್ಕೃತಿಯ ತಕ್ಕಡಿಯಿಂದ ತೂಗುವ ಅವಶ್ಯಕತೆಯಿದೆ. ಸದಾ ಸಂಘಜೀವಿಯಾಗಿ ತಮ್ಮ ಸುತ್ತ ಮುತ್ತಲೂ ಗೆಳೆಯರ, ಬಂಧು ಬಳಗದ ಸರಹದ್ದಿನಲ್ಲಿ ತಮ್ಮ ಕಾರ್ಯಗಳಿಗೆ ಚಾಲನೆ ನೀಡಿದುದನ್ನು ಗುರುತಿಸಬಹುದು. ಸ್ವತಃ ಶಿಕ್ಷಕನಾಗಿ ತಮ್ಮ ಸಂಪರ್ಕಕ್ಕೆ ಬಂದ ಶಿಕ್ಷಕ ಬಳಗವನ್ನೆಲ್ಲ ಕೂಡಿಕೊಂಡು ಶಿಕ್ಷಣ, ಸಾಹಿತ್ಯ ಮತ್ತು ಸಾಂಸ್ಕೃತಿಕ ಚಟುವಟಿಕೆಗಳನ್ನು ನಡೆಸಿದರು. ಶರಣರ ವಿಚಾರಗಳು ಜಾತ್ಯಾತೀತವಾದವುಗಳು ಮತ್ತು ಸಾರ್ವಕಾಲೀಕವಾಗಿ ಸರ್ವ ಧರ್ಮಗಳಿಗೂ ಅನ್ವಯವಾಗುವವು ಎಂಬ ಅರಿವಿನಡಿಯಲ್ಲಿ ವೀರಶೈವ ಸಿದ್ಧಾಂತಗಳನ್ನು ಪ್ರಚಾರ ಮಾಡುವ ಜೊತೆಗೆ ಸಾಹಿತ್ಯದ ಅಭ್ಯಾಸ ಮುಂದುವರಿಸಲು 'ಹಾನಗಲ್ಲ ಕುಮಾರೇಶ್ವರ ಸೇವಾ ಶಿಕ್ಷಕ ಸಂಘ'ವೆಂಬ ಸಂಸ್ಥೆ ಕಟ್ಟಿಕೊಂಡು ಅದರ ಮೂಲಕ ಶಿವಾನುಭವ ಚರ್ಚೆ, ಸಾಹಿತ್ಯ ಪ್ರಕಾಶನ ಮೊದಲಾದ ಕಾರ್ಯಕ್ರಮಗಳನ್ನು ನಡೆಸಿ ನಗರದಲ್ಲಿ ಚಿರಪರಿಚಿತರಾದರು.

"ಕ.ಬ.ಅಂಗಡಿಯವರು ಅರ್ಧ ಶತಮಾನ ಕಾಲದಿಂದಲೂ ಅನೇಕ ಕೃತಿಗಳನ್ನು ಕನ್ನಡಕ್ಕೆ ನೀಡಿದ್ದಾರೆ. ಶಿಕ್ಷಣ ಕ್ಷೇತ್ರದಲ್ಲಿ ಸೇವೆ ಸಲ್ಲಿಸುತ್ತಿರುವಾಗಲೇ ೧೯೩೪ರಲ್ಲಿ ಬರೆದ 'ನಿಬಂಧ ಮಾಲೆ' ರಾವ್ ಸಾಹೇಬ ಶಿವಪ್ಪ ದಂಡಪ್ಪ ಮಾನ್ವಿ ಅವರಿಗೆ ಅರ್ಪಿತವಾಗಿದ್ದು, ಇಂದಿಗೂ ಕನ್ನಡ ವಿದ್ಯಾರ್ಥಿಗಳಿಗೆ ಪ್ರಯೋಜಕವಾಗಿದೆ. ಹಾನಗಲ್ಲು ಕುಮಾರಸ್ವಾಮಿಗಳ, ಮುರಗೋಡ ಮಹಾಂತ ಸ್ವಾಮಿಗಳ, ದಿವ್ಯಸಂಪರ್ಕದಲ್ಲಿ ಶ್ರದ್ಧೆ, ನಿಷ್ಠೆಗಳನ್ನು ಹೆಚ್ಚಿಸಿಕೊಂಡ ಕ.ಬ.ಅಂಗಡಿ ಅವರು ವಿಶೇಷತಃ ಧಾರ್ಮಿಕ ಪ್ರವೃತ್ತಿಯುಳ್ಳವರು. ಅವರಿಂದ ರಚಿತವಾದ ಗ್ರಂಥಗಳಿಂದ ವೀರಶೈವ ಸಮಾಜಕ್ಕೆ ಮಹದುಪಕಾರವಾಗಿದೆ. ೧೯೫೫ರಲ್ಲಿ ಪ್ರಕಟವಾದ ಇವರ 'ಅಮರವಾಣಿ' ವಚನಸಾಹಿತ್ಯದ ಉನ್ನತ ಪ್ರಚಾರಕ್ಕೆ ಕಾರಣವಾಯಿತು. ಹರ್ಡೇಕರ ಮಂಜಪ್ಪನವರ ಪರಿಸರದಲ್ಲಿ ಅಂಗಡಿ ಅವರ ಕ್ಷೇತ್ರವು ಮತ್ತಷ್ಟು ವಿಶಾಲವಾಯಿತು. ಅವರು ನಾಮಾವಳಿ, ಭಜನಮಾಲೆ, ಮಂಗಳಾರತಿ ಪದ್ಯಗಳಂಥ ಲಘು ಕೃತಿಗಳನ್ನು ಮಾತ್ರವಲ್ಲದೆ 'ಉರಗಾದ್ರಿ ಕರಿಬಸವಲೀಲೆ', 'ಮುರಗೋಡ ಮಹಾಂತ ಶಿವಯೋಗಿಶ್ವರ ಚರಿತಾಮೃತ'ದಂಥ ಮಹಾಕೃತಿಗಳನ್ನೂ ಬರೆದಿದ್ದಾರೆ; ಇವರಿಂದ ಆಧುನಿಕ ಕನ್ನಡದ



ಗದುಗಿನಲ್ಲಿ ವೃತ್ತಿಗೈದ ಮೊದಲ ಸರಕಾರಿ ನಂ.೧ ಶಾಲೆ

ಷಟ್ಪದಿಯಲ್ಲಿ ವಿರಳವಾಗಿ ಬರೆಯುತ್ತಿರುವ ಅತ್ಯಲ್ಪರಲ್ಲಿ ಇವರ ಅಚ್ಚಗನ್ನಡ ಶೈಲಿ ಚಿತ್ತಾಕರ್ಷಕವಾಗಿದೆ. ಗುಲಬರ್ಗಾ ಜಿಲ್ಲೆಯ ಜೇವರಗಿಯ ಶ್ರೀ ಅಖಂಡೇಶ್ವರ ವಚನ ಕರ್ತೃ ಶ್ರೀ ಷಣ್ಮುಖ ಶಿವಯೋಗೀಶ್ವರ ಪುರಾಣದಲ್ಲಿ ಇವರ ನೂರಾರು ಪದ್ಯಗಳನ್ನು ಪ್ರತ್ಯೇಕವಾಗಿ ಬರೆಸಲಾಗಿದೆ. ಸ್ವಂತಿಕೆಯಿಲ್ಲದ ಸಾಹಿತ್ಯದ ಅಗ್ಗದ ಪ್ರಚಾರ ಹೆಚ್ಚಿರುವ ಈ ಕಾಲದಲ್ಲಿ ತಮ್ಮ ವಿದ್ವತ್ತು ಅನುಭವಗಳಿಂದ ಪರಂಪರೆಯ ಸಾಹಿತ್ಯದ ಘನತೆಯನ್ನು ಹೆಚ್ಚಿಸಿದ ಕೀರ್ತಿ ಕ.ಬ.ಅಂಗಡಿ ಅವರಂಥ ಶರಣ ಕವಿಗಳಿಗೆ ಸಲ್ಲುತ್ತದೆ."[೧೩]

ಈ ಭಾಗದ ಪ್ರಮುಖ ಸಂಶೋಧಕರಲ್ಲೊಬ್ಬರಾದ ಡಾ. ವಿ.ಶಿವಾನಂದರು ಇವರ ಸೃಜನಶೀಲತೆ, ಅನುಭವೈಕ ಅನುಭಾವ ಸಾಹಿತ್ಯ ರಚನೆಯನ್ನು ಕುರಿತು ಹೇಳಿದ ಮೇಲಿನ ಮಾತುಗಳು ಸತ್ಯವೂ, ನಿತ್ಯವೂ ಎಂಬುದನ್ನು ಅವರ ಸಮಗ್ರ ಸಾಹಿತ್ಯ ಅವಲೋಕನದಿಂದ ಸಾಧ್ಯವಾಗುವುದು.

ಗದಗ ನಗರದ ಕನ್ನಡ ಗಂಡು ಮಕ್ಕಳ ಶಾಲೆ ೧, ೨, ಗದಗ-ಬೆಟಗೇರಿ ಕನ್ನಡ ಗಂಡು ಮಕ್ಕಳ ಶಾಲೆ ೧,೨, ಬೆಟಗೇರಿ ಕನ್ನಡ ಗಂಡು ಮಕ್ಕಳ ಶಾಲೆ ಇವುಗಳಲ್ಲಿ ಉಪಶಿಕ್ಷಕರಾಗಿ ಮಕ್ಕಳ ಸರ್ವಾಂಗೀಣ ವಿಕಾಸದತ್ತ ಗಮನ ನೀಡಿದರು. ಆ ಮೂಲಕ ಬಾಲಕರ ಮತ್ತು ಪಾಲಕರ ಮೆಚ್ಚುಗೆಗೆ ಪಾತ್ರರಾದರು. ಸಾಹಿತಿ ಶಿಕ್ಷಕರಾದ ಇವರು ಸೇವೆಗೈದ ಶಾಲೆಗಳ ಪರಿಸರದಲ್ಲಿ ಶಿಕ್ಷಣ ಪ್ರಸಾರದೊಡನೆ ಧಾರ್ಮಿಕ ಜಾಗೃತಿಯನ್ನು ಮತ್ತು ಸರ್ವಧರ್ಮ ಸಮನ್ವಯದ ವಿಚಾರಗಳನ್ನು ವಿನಿಮಯ ಮಾಡತೊಡಗಿದರು. ಅವರ ವಿಚಾರ ವಾಹಿನಿಗೆ ನಗರಸಭೆ ಸದಸ್ಯರು, ಸ್ಕೂಲ್ ಬೋರ್ಡಿನ ಅಧಿಕಾರಿಗಳು ಹಾಗೂ ಶಿಕ್ಷಣ ಮಂಡಲದ ಮೆಚ್ಚುಗೆಯನ್ನು ಪಡೆದರು. ೧೯೩೪ರಲ್ಲಿ ಗದಗ ಕನ್ನಡ ಸೆಂಟ್ರಲ್ ಸ್ಕೂಲಿಗೆ ಮುಖ್ಯಾಧ್ಯಾಪಕರಾಗಿ ನೇಮಕವಾದರು. ಇವರ ಈ ಕರ್ತವ್ಯ ದಕ್ಷತೆ, ಸಮರ್ಥ ಆಡಳಿತ ಶೈಲಿ, ವಿದ್ಯೆಯೊಂದಿಗೆ ವಿನಯದ ಸೌಜನ್ಯ ಮತ್ತು ಸಾತ್ವಿಕತೆಯು ಸೆಂಟ್ರಲ್ ಸ್ಕೂಲಿಗೆ ಮಾದರಿ ಶಾಲೆಯೆಂದು ಕರೆಯುವಂತಾಯಿತು. ಶಾಲೆಯ ಶಿಕ್ಷಣದ ಗುಣಮಟ್ಟವನ್ನು ಎತ್ತರಿಸುವಲ್ಲಿ, ಶಾರೀರಿಕ ಸ್ಪರ್ಧೆಯಲ್ಲಿ ಶಾಲೆಗೆ ಪ್ರಥಮ ಸ್ಥಾನ ದೊರಕಿಸಿ ಕೊಡುವಲ್ಲಿ, ವಾಚನಾಭಿರುಚಿ ಹೆಚ್ಚಿಸುವಲ್ಲಿ, ವ್ಯಕ್ತಿತ್ವ ವಿಕಸನಕ್ಕೆ ಬೇಕಾದ ಶಿಕ್ಷಣವನ್ನು, ಅಂದಿನ ದಿನಗಳಲ್ಲಿಯೇ ದೂರದೃಷ್ಟಿಯನ್ನಿಟ್ಟು ವಾದ-ಸಂವಾದದಂತಹ ಸ್ಪರ್ಧೆಗಳನ್ನು ವಿವಿಧ ಆಯಾಮಗಳ ಮೂಲಕ ವಿದ್ಯಾರ್ಥಿಗಳಿಗೆ ತಲುಪಿಸುವ ಕಾರ್ಯವನ್ನು ಕೈಗೊಂಡರು. ತಾವು ಸೇವೆ ಸಲ್ಲಿಸುತ್ತಿದ್ದ ಶಾಲೆಯನ್ನು ಸರ್ವವಿಧದಲ್ಲೂ ಸಶಕ್ತವನ್ನಾಗಿಸಿದರು. ಶಾಲೆಗಳು ವಿದ್ಯಾರ್ಥಿಗಳು ಬಂದು ವಿದ್ಯೆ ಕಲಿತು ಹೋಗಲು ಅಷ್ಟೇ ಅಲ್ಲ, ಸಮಾಜದ ಆಶೋತ್ತರಗಳಿಗೆ ಸ್ಪಂದಿಸುವಂತಾಗಬೇಕು ಎಂದು ತಾವು




ಕ.ಬ.ಅಂಗಡಿಯವರು ಮುಖ್ಯೋಪಾಧ್ಯಾಯರಾಗಿ ಮತ್ತು
ಶಿಕ್ಷಣಾಧಿಕಾರಿಗಳಾಗಿ ಕಾರ್ಯ ನಿರ್ವಹಿಸಿದ ಸೆಂಟ್ರಲ್ ಸ್ಕೂಲ್

ಸೇವೆಗೈಯುತ್ತಿದ್ದ ಶಾಲೆಯನ್ನು ಸಮಾಜದ ಕೇಂದ್ರಬಿಂದುವನ್ನಾಗಿ ಮಾಡಿದರು. ಅವರ ಈ ಆಡಳಿತ ನೀತಿಗಳನ್ನು ಮೆಚ್ಚಿಕೊಂಡು ಅಧಿಕಾರಿಗಳೂ ಕೂಡ ಅವರಲ್ಲಿ ಸೂಕ್ತ ಸಲಹೆಗಳನ್ನು ಪಡೆಯಲು ಬರುತ್ತಿದ್ದರು. ಅವರ ಕೆಳಗಿನ ಆಡಳಿತ ವರ್ಗವೂ ಕೂಡ ಮಕ್ಕಳ ಶಿಕ್ಷಣ ಅಭಿವೃದ್ಧಿ ಕಾರ್ಯದಲ್ಲಿ ಆಸಕ್ತಿಯನ್ನು ತೋರಿಸುತ್ತಿದ್ದರು. ಈ ರೀತಿ ಸಮರ್ಥಕ ಆಡಳಿತಾಧಿಕಾರಿಯಾಗಿಯೂ ಕೂಡ ಇವರು ಯಶಸ್ವಿಯಾಗಿದ್ದಾರೆ. "ಬಿ.ಜಿ.ಖೇರ ಅವರು ಮುಖ್ಯಮಂತ್ರಿಯಾದ ಕಾಲದಲ್ಲಿ ಲೋಣಾವಳ ಕೈವಲ್ಯಧಾಮಾಶ್ರಮದ ಯೋಗಿ ಸ್ವಾಮಿ ಕುವಲಯಾನಂದರು ಸರಕಾರಕ್ಕೆ ಶಾರೀರಿಕ ಶಿಕ್ಷಣದ ಯೋಜನೆ ಕೊಟ್ಟಿದ್ದರು. ಅಂಥ ಒಂದು ತರಬೇತಿಯು ಕನ್ನಡ ಸೆಂಟ್ರಲ್ ಸ್ಕೂಲಿನಲ್ಲಿ ಗ್ರಾಮೀಣ ಪ್ರದೇಶದ ಶಾಲೆಗಳ ಶಿಕ್ಷಕ, ಶಿಕ್ಷಕಿಯರಿಗೆ ನಡೆದಿತ್ತು. ಮುಖ್ಯಾಧ್ಯಾಪಕ ಕ.ಬ.ಅಂಗಡಿಯವರ ಉಸ್ತುವಾರಿ. ಡಂಬೆಲ್ಸ, ಲೇಝಿಮ್, ಕವಾಯಿತುಗಳಿಗೆ ಪದ್ಯ ಮಾಡಿ ಕೊಟ್ಟಿದ್ದರು. ಅವುಗಳೊಂದಿಗೆ ತಾಳಬದ್ಧ ಚಟುವಟಿಕೆಗಳನ್ನು ಕಲಿಸುವುದೇ ಒಂದು ಮೋಜು"[೧೪]

ತಾವು ಶಿಕ್ಷಕ ವೃತ್ತಿಯಲ್ಲಿರುವಾಗಲೇ ಮಹಿಳೆಯ ಉನ್ನತಿಗಾಗಿ ಗದುಗಿನ ಶಹಪೂರ ಪೇಟೆಯ ಹಡಗಲೀಮಠ ಹಾಗೂ ತೋಂಟದಾರ್ಯ ಮಠದ ಪಕ್ಕದಲ್ಲಿರುವ ಅಕ್ಕನ ಬಳಗಗಳ ಸಂಘಟನೆಗೆ ಹಾಗೂ ಅವುಗಳ ಅಭಿವೃದ್ಧಿಗಾಗಿ ಸಾಕಷ್ಟು ಪ್ರಯತ್ನಿಸಿದ್ದಾರೆ. ಈ ಅಕ್ಕನ ಬಳಗಗಳ ಸಾಹಿತ್ಯ ಪ್ರಚಾರವಾಗಲಿ, ವಾರ್ಷಿಕಸಭೆ ಸಮ್ಮೇಳನಗಳಾಗಲಿ, ನಿಯತಕಾಲಿಕೆ ಕಾರ್ಯಕ್ರಮಗಳಾಗಲಿ ಇವರ ಮಾರ್ಗದರ್ಶನಗಳಿಲ್ಲದೆ ನಡೆಯುತ್ತಿರಲಿಲ್ಲ. ಶಿಕ್ಷಕರ ಆರ್ಥಿಕ ತೊಂದರೆಗಳನ್ನು ತುಂಬಾ ಸಮೀಪದಿಂದ ಕಂಡಿದ್ದ ಇವರು ಅವುಗಳನ್ನು ಶಿಕ್ಷಣದ ಆಧಿಕಾರಿಗಳಿಗೆ ವಿವರಿಸಿ ಅವರ ಕಷ್ಟಗಳ ನಿವಾರಣೆ ಮಾಡಲು ಶಿಕ್ಷಕರ ಸಹಕಾರಿ ಸೊಸಾಯಿಟಿ ಸ್ಥಾಪಿಸಲು ಪ್ರಯತ್ನಿಸಿ ಶಿಕ್ಷಕರ ಮೆಚ್ಚುಗೆಗೆ ಪಾತ್ರರಾಗಿದ್ದರು. ಅವರ ಇಂತಹ ಪ್ರಗತಿಶೀಲ ನಿಲುವುಗಳು ಮತ್ತು ದೂರದೃಷ್ಟಿಯ ಚಿಂತನೆಗಳು ಅವರನ್ನು ವಿಭಿನ್ನವಾಗಿ ಅಭಿವ್ಯಕ್ತಪಡಿಸುತ್ತವೆ.

ಶಿಕ್ಷಕ ವೃತ್ತಿಯಲ್ಲಿ ಸಾಕಷ್ಟು ಸಾಧನೆಗೈದು, ಗದುಗಿನ ಕನ್ನಡ ಸೆಂಟ್ರಲ್ ಸ್ಕೂಲಿನ ಮುಖ್ಯಾಧ್ಯಾಪಕರಾಗಿ ಸೇವೆಗೈದ ಇವರ ಆಡಳಿತ ಕ್ರಮ, ಬೋಧನೆಯ ರೀತಿ, ಸಮಾಜದಲ್ಲಿ ಪಡೆದ ಗೌರವ, ಸಾಂಘಿಕ ಚಟುಚಟಿಕೆಗಳು, ಸಾಹಿತ್ಯ ಪ್ರಚಾರ, ಪಠ್ಯಪುಸ್ತಕಗಳ ಬರವಣಿಗೆ, ದೊಡ್ಡಾಟ-ನಾಟಕಗಳ ರಚನೆ ಹೀಗೆ ಇವರ ಬಹುಮುಖ ಪ್ರತಿಭೆಯನ್ನು ತಿಳಿದು ಶಿಕ್ಷಣ ಇಲಾಖೆಯವರು ಇವರನ್ನು ಅಸಿಸ್ಟಂಟ್ ಎಜ್ಯುಕೇಶನಲ್ ಇನಸ್ಪೆಕ್ಟರಾಗಿ ಆಯ್ಕೆ ಮಾಡಿದರು. ೧೯೪೪ರಲ್ಲಿ ಬೆಳಗಾವಿ ಜಿಲ್ಲೆಯ ಸವದತ್ತಿ ತಾಲೂಕಿನ ಉಪಶಿಕ್ಷಣಾಧಿಕಾರಿಗಳಾಗಿ ಶಿಕ್ಷಣದ ಪ್ರಗತಿಗೆ ಪ್ರಯತ್ನಿಸಿದರು. ಶಾಲೆಗಳ ಸಂದರ್ಶನ, ಶಿಕ್ಷಕರಿಗೆ ಸೂಕ್ತ ಸಲಹೆ ಸೂಚನೆಗಳನ್ನು



ಕ.ಬ .ಅಂಗಡಿಯವರ ನಿವೃತ್ತಿ ದಿನವನ್ನು ಕಲಕೇರಿಯಲ್ಲಿ ಶಿಕ್ಷಕ ದಿನಾಚರಣೆ ಎಂದು ಆರಿಸಲಾಯಿತು.

ಕೊಟ್ಟು ಬೋಧನಾ ಕಾರ್ಯದಲ್ಲಿ ಮಾರ್ಗದರ್ಶನ ಮಾಡಿ ಶಿಕ್ಷಕರ ಮತ್ತು ಮೇಲಧಿಕಾರಿಗಳ ಮೆಚ್ಚುಗೆಯನ್ನು ಪಡೆದರು. ತಪಾಸಣಾಧಿಕಾರಿಯಾಗಿ ಕಾರ್ಯ ನಿರ್ವಹಿಸುವಾಗ ತಮ್ಮ ಖಾತೆಯ ಕಾರ್ಯ ಮುಗಿದೊಡನೆ ಅಲ್ಲಿರುವ ವೀರಶೈವ ಮಠ, ವೀರಶೈವ ಸಾಹಿತ್ಯ, ವೀರಶೈವ ಅನುಭಾವಿಗಳ ಸಂದರ್ಶನ ಪಡೆದು ಅವರಿಂದ ಮಾಹಿತಿ ಸಂಗ್ರಹಿಸುವಲ್ಲಿ ನಿರತರಾಗುತ್ತಿದ್ದರು. ಬೆಳಗಾವಿ ಜಿಲ್ಲೆಯಿಂದ ವಿಜಾಪೂರ ಜಿಲ್ಲೆಯ ಮುದ್ದೇಬಿಹಾಳ ತಾಲೂಕಿಗೆ ಉಪಶಿಕ್ಷಣಾಧಿಕಾರಿಗಳೆಂದು ವರ್ಗವಾಯಿತು. ಅಲ್ಲಿ ತಮ್ಮ ಶಿಕ್ಷಣದ ಕಾರ್ಯದೊಂದಿಗೆ ತಮ್ಮ ಪೂರ್ವಜರ ಸ್ಥಳವಾದ ಕುಂಟೋಜಿಯ ಹಾಗೂ ವಿವಿಧ ಶರಣರ ಸ್ಥಳಗಳನ್ನು ಸಂಚರಿಸಿ ವೀರಶೈವ ಸಾಹಿತ್ಯ, ಸಂಸ್ಕೃತಿಗಳ ಪ್ರಸಾರ ಕಾರ್ಯವನ್ನು ತಮ್ಮ ಭಾಷಣಗಳ ಮೂಲಕ ಪ್ರಚಾರ ಮಾಡಿದರು. ಮತ್ತೆ ವಿಜಾಪೂರ ಜಿಲ್ಲೆಯಿಂದ ಧಾರವಾಡ ಜಿಲ್ಲೆಯ ಮುಂಡರಗಿ ತಾಲೂಕಿನ ಉಪಶಿಕ್ಷಣಾಧಿಕಾರಿಗಳಾಗಿ ವರ್ಗಾಯಿಸಲ್ಪಟ್ಟರು. ಇದೇ ಸಮಯದಲ್ಲಿ 'ಸಮಾಜ ಶಿಕ್ಷಣಾಧಿಕಾರಿ'ಗಳೆಂದು ಕೆಲವು ಕಾಲ ಕಾರ್ಯ ನಿರ್ವಹಿಸಿದರು. 'ಸಮಾಜ ಶಿಕ್ಷಣ' ವೆಂಬ ಮಾಸ ಪತ್ರಿಕೆಯಲ್ಲಿ ಅನೇಕ ಲೇಖನಗಳನ್ನು ಬರೆದು ಸಮಾಜ ಶಿಕ್ಷಣದ ಪ್ರಚಾರದಲ್ಲಿ ಪಾಲ್ಗೊಂಡು ಜಿಲ್ಲೆಯಲ್ಲಿ ಸಾಕ್ಷರ ಸಂಖ್ಯೆಯನ್ನು ಹೆಚ್ಚಿಸಿದರು. ಉಪಶಿಕ್ಷಣಾಧಿಕಾರಿಗಳಾಗಿ ಅವರ ಸೇವೆಯನ್ನು ೧೯೪೪ರಿಂದ ೧೯೫೨ರವರೆಗೆ ಗುರುತಿಸಲ್ಪಡುತ್ತದೆ. ೧೯೫೨ ಜುಲೈ೭ ರಂದು ಮುಂಡರಗಿ ತಾಲ್ಲೂಕಿನ ಕಲಕೇರಿಯಲ್ಲಿ ಶಿಕ್ಷಣದ ಸೇವೆಯಿಂದ ನಿವೃತ್ತರಾದರು. ಕಲಕೇರಿಯ ಆ ಶಾಲೆಯಲ್ಲಿ ಅಂದು ಆ ದಿನವನ್ನು ಶಿಕ್ಷಕರ ದಿನವನ್ನಾಗಿ ಆಚರಿಸಿದರು.

ಕ್ರಿಯಾಶೀಲ ಮನಸುಗಳಿಗೆ ನಿವೃತ್ತಿಯೆಂಬುದು ವೃತ್ತಿ ಬದುಕಿನ ಕೊನೆಯ ಹಂತವಾಗಲಾರದು. ಅದು ಜೀವನ ವೃತ್ತಿಯ ಮತ್ತೊಂದು ಮಜಲಾಗುತ್ತದೆ. ಬದುಕನ್ನು ತಾವಂದುಕೊಂಡಂತೆ ಬದುಕುವ ಅವಕಾಶಕ್ಕೆ ಅದೊಂದು ರಹದಾರಿಯಾಗುತ್ತದೆ. ವೃತ್ತಿ ಬದುಕಿನಲ್ಲಿ ಸಾಧಿಸಬೇಕೆಂದುಕೊಂಡ ಅಥವಾ ಅವುಗಳನ್ನು ಯಾವುದೊ ಕಾರಣಕ್ಕಾಗಿ ತಡೆಹಿಡಿದಿಟ್ಟ ಕನಸುಗಳನ್ನು ನನಸು ಮಾಡಿಕೊಳ್ಳುವ ಸಕಾಲವಾಗುತ್ತದೆ. ಆರೋಗ್ಯ ಭಾಗ್ಯವನ್ನು ಧನ-ಕನಕದಂತೆ ಕಾಯ್ದುಕೊಂಡಿದ್ದ ಕ.ಬ.ಅಂಗಡಿಯವರಿಗೆ ಅನಾರೋಗ್ಯದ ಯಾವ ಭಾದೆಯೂ ಬಾಧಿಸಲಿಲ್ಲ. ಸಂಯಮದ ಬದುಕು ರೂಪಿಸಿಕೊಂಡವರ ಬದುಕು ಎಲ್ಲ ರೀತಿಯಿಂದಲೂ ಸಂಪದ್ಭರಿತವಾಗುತ್ತದೆ ಎನ್ನುವುದಕ್ಕೆ ನಾನು ಕಂಡಂತೆ ಅವರಿಗಿಂತ ಸಾಕ್ಷಿ ಇನ್ನೊಬ್ಬರಿಲ್ಲ. ಸಾಧನೆಯೆಂಬುದು ತಪಸ್ಸು, ಅದನ್ನು ಪಡೆಯುವುದಕ್ಕೆ ಅಪರಿಮಿತ ತಾಳ್ಮೆ-ಸಂಯಮದ ಅವಶ್ಯಕತೆಯಿದೆ. ಸಿದ್ಧಿ ಪುರುಷರೆಲ್ಲ ಸಾಧನೆಯ ದಾರಿಯಲ್ಲಿ ನಡೆಯಲು ಸಂಯಮದ ಹಾದಿಯನ್ನೆ ಬಳಸಿದುದು ಈ ಮೂಲಕ ಗಮನಿಸಬಹುದು.



ಕ.ಬ.ಅಂಗಡಿಯವರು ಶಿಕ್ಷಕರಾಗಿ ಕಾರ್ಯಾರಂಭ ಮಾಡಿದಾಗ
ಅವರ ನಿಲುವು

## ೨.೧೩ ಇರವು-ಉಡುಗೆ-ತೊಡುಗೆ :

ಸರಳ ಜೀವಿಯಾಗಿ ಬದುಕಿದ ಇವರ ಉಡುಗೆ-ತೊಡುಗೆಗಳು ಕೂಡ ಸರಳವಾಗಿದ್ದವು. ಬಿಳಿಯ ಧೋತರ ಕಪ್ಪು ಕೋಟು ತಲೆಗೆ ಸುತ್ತಿದ ಪೇಟ. ಅಂದಿನ ಶಿಕ್ಷಕರ ನಿಲುವು ಹಾಗೆಯೇ ಇರುತ್ತಿತ್ತು. ಆದರೆ ಶುದ್ಧತೆ, ಸ್ವಚ್ಛತೆ, ಸ್ಪಷ್ಟತೆ, ನಿಖರತೆ ಅವರ ಮಾತಿನಲ್ಲೂ ಮತ್ತು ಕೃತಿಯಲ್ಲೂ ಕಂಡು ಬರುತ್ತಿತ್ತು. ಊಟ-ಪಾಠಗಳಲ್ಲಿ ಸರಳವಾದ ಸಾತ್ವಿಕ ಆಹಾರ ಅವರ ಆಯುಷ್ಯದ ಗುಟ್ಟು ಆಗಿತ್ತು. ರೊಟ್ಟಿ ಮತ್ತು ಕಿರಕಸಾಲಿ ಪಲ್ಲೆ ಅವರ ಪ್ರೀತಿಯ ಆಹಾರಗಳಲ್ಲಿ ಒಂದು. ಸೇಂಗಾ-ಬೆಲ್ಲ, ಕೊಬ್ಬರಿ-ಬೆಲ್ಲ ಇವುಗಳನ್ನು ಕೂಡ ಇಷ್ಟಪಟ್ಟು ತಿನ್ನುತ್ತಿದ್ದರು. ಅದು ನಮ್ಮ ಹಳೆಯ ತಿಂಡಿ-ತಿನಿಸುಗಳ ವೈಶಿಷ್ಟ್ಯವನ್ನಿಲ್ಲಿ ತೋರಿಸುತ್ತದೆ. ಈ ಎಲ್ಲ ವಿಷಯಗಳು ಅವರ ವ್ಯಕ್ತಿತ್ವ ವಿಕಾಸಕ್ಕೆ ಪರೋಕ್ಷವಾಗಿ ಕಾರಣವಾಗಿವೆ.

## ೨.೧೪ ಪರಿಪಕ್ವತೆ-ಶರಣ ಬದುಕು :

ಸರಿಯಾಗಿ ೯೦ ವರ್ಷಗಳವರೆಗೆ ಬಾಳಿ ಬದುಕಿದ ಕ.ಬ.ಅಂಗಡಿಯವರು ತಮ್ಮ ಪರಿಪೂರ್ಣ ಬದುಕಿನಲ್ಲಿ ವಯಸ್ಸಾದಂತೆ ಅನುಭವ ಮಾಗಿದಂತೆ ಪರಿಪಕ್ವತೆಯನ್ನು ಪಡೆದುಕೊಂಡರು. ಅವರ ಕೃತಿಗಳು ಈ ವಿಷಯವನ್ನು ಹೆಚ್ಚು ಸಮರ್ಥಿಸುತ್ತವೆ. ಕವನ ರಚನೆ, ಲಾವಣಿ, ಬಯಲಾಟ, ದೊಡ್ಡಾಟ, ನಾಟಕ, ಕಿರುಗ್ರಂಥಗಳನ್ನು, ಭಕ್ತಿ ನಿವೇದನೆಗಾಗಿ ಅಷ್ಟಕ-ಷಟ್ಕಗಳನ್ನು, ಶೈಕ್ಷಣಿಕ ಅನುಕೂಲತೆಗಾಗಿ ಪಠ್ಯಪುಸ್ತಕಗಳನ್ನು, ಅನಂತರ ಪುರಾಣಗಳ ರಚನೆಯಲ್ಲಿ ತೊಡಗಿಕೊಂಡಿದ್ದಾರೆ. ಹೇಗೆ ಸಾಹಿತ್ಯದ ವಿವಿಧ ಪ್ರಕಾರಗಳು ಅವರಿಂದ ಪ್ರಯೋಗಿಸಲ್ಪಟ್ಟವೋ ಅವರ ಬದುಕಿನಲ್ಲಿಯೂ ಕೂಡ ವಿವಿಧ ಸುಖ-ದುಃಖಗಳ ಸಮನ್ವಯತೆ ಅವರಲ್ಲಿ ಪರಿಪತ್ವತೆಯನ್ನು ತುಂಬುತ್ತಾ ಬಂದಿದೆ. ಮಾಗಿದ ಮನಸ್ಸು ಅವರು ಪ್ರಯೋಗಿಸಿದ ಸಾಹಿತ್ಯ ಪ್ರಕಾರಗಳಲ್ಲಿ ವೈವಿಧ್ಯತೆಯನ್ನು ತಂದುಕೊಟ್ಟಿತು. ಬದುಕಿನ ಬೇರೆ ಬೇರೆ ಮಗ್ಗುಲಗಳನ್ನು ಬೇರೆ ಬೇರೆ ದೃಷ್ಟಿಕೋನದಿಂದ ನೋಡಲು ಸಮರ್ಥರಾಗಿ ಅರ್ಥವತ್ತಾದ, ರಸವತ್ತಾದ, ಜ್ಞಾನಾರ್ಜನೆಗೆ ಪೂರಕವಾದ ವಿಷಯಗಳು ಅವರ ಕೃತಿಯ ಭಾಗಗಳಾಗಿವೆ ಹೊರಹೊಮ್ಮಿವೆ.

## ೨.೧೫ ಶೈಕ್ಷಣಿಕ ಸಾಹಿತ್ಯ :

ಶಿಕ್ಷಣಕ್ಕೆ ಮೀಸಲಾಗಿ ಇವರ 'ನಿಬಂಧ ಮಾಲೆ', 'ಅಮರವಾಣಿ', 'ಅನುಭವದೂಟ', 'ಅಕ್ಕನ ಚರಿತ್ರೆ', 'ಸಾಹಸಿ ಸುಭಾಸ ಬೋಸ', 'ಮೋತಿಲಾಲ ನೆಹರು', 'ಜವಾಹರಲಾಲ ನೆಹರು', 'ಗದ್ಯಪದ್ಯಾವಲಿ', 'ಕನ್ನಡ ಸುಭೋದ ವ್ಯಾಕರಣ', ಮುಂತಾದ ಅನೇಕ ಕೃತಿಗಳನ್ನು ಹೊರತಂದರು. ಅವರ 'ಗದ್ಯಪದ್ಯಾವಲಿ'ಯಂತೂ ಬಹು ಜನಪ್ರಿಯ ಕೃತಿ. ಈ ಪುಸ್ತಕವನ್ನು ಓದದ ಅಂದಿನ ಪ್ರಾಥಮಿಕ, ಮಾಧ್ಯಮಿಕ, ಟ್ರೇನಿಂಗ್ ಕಾಲೇಜಿನ ವಿದ್ಯಾರ್ಥಿಗಳಿಲ್ಲ. ತೋಂಟದ ಸಿದ್ಧಲಿಂಗ ಶ್ರೀಗಳೂ ಸಹ ಈ ಕೃತಿಯನ್ನು ತಮ್ಮ ವಿದ್ಯಾರ್ಥಿ ಹಂತದಲ್ಲಿ ಓದಿದ್ದನ್ನು ಸ್ಮರಿಸುತ್ತಾರೆ. ಶಿಕ್ಷಣ ಮತ್ತು ಸಮಾಜವನ್ನು ಹೇಗೆ ಬೆಸೆಯಬೇಕು ಎನ್ನುವ ಪ್ರಯೋಗವನ್ನು ಕ.ಬ.ಅಂಗಡಿಯವರು ಮಾಡಿದ್ದಾರೆ.

ಶಿಕ್ಷಣ ರಂಗದಲ್ಲಿ ಇವರ ಸೇವೆಯನ್ನು ಪುಟ್ಟರಾಜ ಕವಿ ಗವಾಯಿಗಳು ಹೀಗೆ ಗುರುತಿಸಿದ್ದಾರೆ. "ಇವರು ಕೆಲಸ ಮಾಡುತ್ತಿರುವ ಶಾಲೆಯೇ ನಿಜಸ್ಥಾನವಾಗಿ, ಇವರಿಂದ ಪಾಠ ಪಡೆಯುತ್ತಿರುವ ಮಕ್ಕಳೆ ಜಂಗಮ ಲಿಂಗ ಮೂರ್ತಿಗಳಾಗಿ, ಇವರು ಕೊಡುತ್ತಿರುವ ಶಿಕ್ಷಣ ಪದ್ಧತಿಯು ಪೂಜೆಯಾಗಿ, ಇವರು ಶಿವಾರ್ಪಣ ಪೂರ್ವಕವಾಗಿ ಮಕ್ಕಳಿಗೆ ಕೊಟ್ಟ ವಿದ್ಯೆಯೆ ನೈವೇದ್ಯವಾಗಿ ಪರಿಣಮಿಸಿ, ಇವರು ಇಷ್ಟಲಿಂಗ ಸಾಕ್ಷಿಯಾಗಿ ಮಾಡುವ ಉದ್ಯೋಗವೆ ಕಾಯಕವಾಗಿ, ಇವರಿಗೆ ಶರಣ ಜೀವಿಗಳೆಂಬ ನಾಮವು ಸಾರ್ಥಕವಾಗಿದೆ."[೧೫] ಆಗಿನ ಕಾಲದಲ್ಲಿ ಕನ್ನಡದಲ್ಲಿ ನಿಬಂಧಗಳ ಅಂಗಗಳಾದ ಕಥೆ, ಪತ್ರ, ಅರ್ಜಿ, ರಿಪೋರ್ಟ, ಸಾರಾಂಶ ಬರಹ, ವಿಸ್ತರಿಸಿ ಬರೆಯುವುದು, ಚೆಕ್ಕು, ಹುಂಡಿ, ನಿಬಂಧ ಹಾಗೂ ಪ್ರಬಂಧ ಮೊದಲಾದ ವಿಷಯಗಳನ್ನು ವಿವರವಾಗಿ ವಿವೇಚಿಸಿ ಮಾದರಿಯ ಬರೆಹಗಳೊಂದಿಗೆ ಅಭ್ಯಾಸ ಅವಶ್ಯವಾದ ಸೂಕ್ತ ಸೂಚನೆಗಳೊಂದಿಗೆ ಬರೆದ ನಿಬಂಧ ಮಾಲೆಯು ಕನ್ನಡ ನಾಡಿನ ಸರ್ವ ಶಿಕ್ಷಕರ ಬಳಗಕ್ಕೆ ಹಾಗೂ ಶಿಕ್ಷಣ ಖಾತೆಯ ಅಧಿಕಾರಿಗಳಿಗೆ ಮೆಚ್ಚುಗೆಯಾಯಿತು. ಅದು ೧೯೩೦ರಲ್ಲಿ ಪ್ರಥಮವಾಗಿ ಬೆಳಗಾವಿ ಜಿಲ್ಲೆಯ ಸ್ಕೂಲ ಬೋರ್ಡಿನವರು ಪಠ್ಯ ಪುಸ್ತಕವಾಗಿ ಮನ್ನಣೆ ಇತ್ತರು. ಮುಂದೆ ಮುಂಬೈ ಕರ್ನಾಟಕದ ನಾಲ್ಕು ಜಿಲ್ಲೆಗಳಿಗೆ ಪಠ್ಯವಾಯಿತು. ಅದೇ ರೀತಿ " 'ಗದ್ಯಪದ್ಯಾವಲಿ' ಎಂಬ ಲೇಖನಗಳ ಹಾಗೂ ಕವನಗಳ ಸಂಗ್ರಹವೂ ಸಹ ೧೯೩೬ರಲ್ಲಿ ಆಗಿನ ಕಾಲದ ಇಂಗ್ಲೀಷ ಆನೆಯ ಇಯತ್ತೆಗೆ ಪಠ್ಯ ಪುಸ್ತಕವೆಂದು ಮಂಜೂರಿ ಪಡೆಯಿತು."[೧೬]

"೧೯೫೫-೬೦ನೆಯ ಸಾಲಿನಲ್ಲಿ ಗದುಗಿನಲ್ಲಿ 'ಪಠ್ಯ ಪುಸ್ತಕ ರಚನಾ ಸಮಿತಿ'ಯನ್ನು ನಿರ್ಮಿಸಿಕೊಂಡು ಹೊಸ ಅಭ್ಯಾಸ ಪತ್ರಿಕೆಗನುಸಾರವಾಗಿ ಪಠ್ಯಪುಸ್ತಕಗಳನ್ನು ಬರೆಯಿಸಿ ಸರಕಾರದ ಮನ್ನಣೆಗೆ ಕಳಿಸುವ ಕಾರ್ಯಕೈಗೊಂಡರು."[೧೭] ೧೯೬೨ರ ಸುಮಾರಿಗೆ ತಾವೇ ಸುಭಾಸಚಂದ್ರ ಬೋಸ್, ಮೋತಿಲಾಲ ನೆಹರು, ಸುಬೋಧ ವ್ಯಾಕರಣ, ಜವಾಹರಲಾಲ ನೆಹರು ಎಂಬ ಪುಸ್ತಕಗಳನ್ನು ಬರೆದು ವಿವಿಧ ಜಿಲ್ಲೆಗಳಲ್ಲಿ ಪಠ್ಯಪುಸ್ತಕಗಳಾಗಿ ಬಳಕೆಯಲ್ಲಿ ಬಂದವು. ಹೀಗೆ ಅನೇಕ ಶೈಕ್ಷಣಿಕ ಸಾಹಿತ್ಯವನ್ನು ರಚಿಸುವುದರ ಮೂಲಕ ಮಕ್ಕಳ ಮನೋವಿಕಾಸಕ್ಕೆ ತಮ್ಮ ಕೊಡುಗೆಯನ್ನು ನೀಡಿದ್ದಾರೆ.

## ೨.೧೬ ಸಂಘಟನೆಗಳು-ವೀರಶೈವ ಸಾಹಿತ್ಯ ಪ್ರಚಾರ :

ಕ.ಬ.ಅಂಗಡಿಯವರ ಬದುಕು ಸಂಘಟನಾತ್ಮಕವಾದುದು. ಅದು ಮನೆಯಲ್ಲಿಯೇ ಆಗಿರಲಿ ಅಥವಾ ವೃತ್ತಿ, ಪ್ರವೃತ್ತಿಯಲ್ಲಿಯೇ ಆಗಿರಲಿ. ಸಾಂಘಿಕ ಬದುಕಿನಲ್ಲಿರುವ ಸಿಹಿಯನ್ನು ತೋರ್ಪಡಿಸಿದವರು. ತಮ್ಮ ಬದುಕಿನುದ್ದಕ್ಕೂ ಹಲವಾರು ಸಂಘಟನೆಗಳನ್ನು, ಗೆಳೆಯರ ಬಳಗವನ್ನು ಸ್ಥಾಪಿಸಿಕೊಂಡು ಸಮಾಜಮುಖಿಯಾಗಿ ಕಾರ್ಯ ನಿರ್ವಹಿಸಿದವರು. ಸಮಾನ ಮನಸ್ಕರನ್ನು ಸಮದೂಗಿಸಿಕೊಂಡು ಒಂದೇ ವೇದಿಕೆಯಲ್ಲಿ ತರುವುದು ಅಷ್ಟೊಂದು ಸರಳವಾದ ಮಾತಲ್ಲ ಮತ್ತು ಕಾರ್ಯವಲ್ಲ. ಈ ಕಲೆ ಅವರಿಗೆ ಸಿದ್ಧಿಸಿತ್ತು. ನಾಯಕತ್ವದ ಗುಣಗಳು ಅವರಲ್ಲಿದ್ದವು. ಆದರೆ ಆ ನಾಯಕತ್ವದ ದರ್ಪವಾಗಲಿ, ಅಟ್ಟಹಾಸವಾಗಲಿ ಇರಲಿಲ್ಲ. ಹಾನಗಲ್ಲ ಕುಮಾರೇಶ್ವರ ಸೇವಾ ಸಂಘ, ಅನುಭವ ಮಂಟಪ ಗ್ರಂಥಮಾಲೆ, ಬಸವ ಭಜನಾ ಮಾಲೆ, ಅಖಿಲ ಭಾರತ ವೀರಶೈವ ವಿದ್ಯಾಪೀಠ, ತರುಣ ಸಂಘ, ಶಿಕ್ಷಕರ ಸಹಕಾರಿ ಬ್ಯಾಂಕ್ ಮುಂತಾದ ಸಂಘಟನೆಗಳನ್ನು ಕಟ್ಟಿ ಬೆಳೆಸಿದ ಕೀರ್ತಿಗೆ ಅವರು ಭಾಜನರು. ಒಟ್ಟಾರೆಯಾಗಿ ಅವರ ಬದುಕನ್ನು ಶಿಕ್ಷಣದ ಅಭಿಮುಖದಿಂದ ನೋಡಿದಾಗ ಉತ್ತರ ಕರ್ನಾಟಕದ ಶೈಕ್ಷಣಿಕ ಸೂಕ್ಷ್ಮ ಸಂವೇದನೆಗಳು, ಸವಾಲುಗಳು, ಮತ್ತು ಅವುಗಳನ್ನು ಮೆಟ್ಟಿ ನಿಲ್ಲಲು ಅಂದು ನಡೆದ ಪ್ರಾಮಾಣಿಕ ಪ್ರಯತ್ನದ ಸಾರ್ವತ್ರಿಕ ಚಿತ್ರಣ ನಮಗೆ ದೊರೆಯುತ್ತದೆ.

## ೨.೧೭ ಹಾನಗಲ್ಲು ಕುಮಾರ ಸ್ವಾಮಿಗಳ ಸೇವಾ ಸಂಘದ ಸಾಹಿತ್ಯ ಪ್ರಸಾರ

ಈ ಶತಮಾನದ ಪೂರ್ವೋತ್ತರದಲ್ಲಿ ಉತ್ತರ ಕರ್ನಾಟಕದ ಭಾಗದಲ್ಲಿ ಅದೂ ಗದುಗನ್ನು ಕೇಂದ್ರವಾಗಿರಿಸಿಕೊಂಡು "ವೀರಶೈವ ಸಾಹಿತ್ಯ ಸಂಸ್ಕೃತಿ ಪರವಾದ ಕಾರ್ಯ

ಚಟುವಟಿಕೆಗಳು ಆರಂಭವಾದುದು ಮುಖ್ಯವಾಗಿ 'ಹಾನಗಲ್ಲು ಕುಮಾರ ಸ್ವಾಮಿಗಳ ಸೇವಾ ಸಂಘ'ದಿಂದ. ಇದರ ಸ್ಥಾಪಕರು ನಿವೃತ್ತ ಶಿಕ್ಷಣಾಧಿಕಾರಿಗಳೂ, ಜಯಬಸವ ಪುಸ್ತಕಾಲಯದ ಮತ್ತು ಮಹಾಂತೇಶ ಮುದ್ರಣದ ಒಡೆಯರೂ ಮೇಲಾಗಿ ಗಣ್ಯ ಕವಿಗಳೂ ಆದ ಕ.ಬ.ಅಂಗಡಿಯವರು. ರಾಚೋಟಿ ದೇವರಗುಡಿ ಆಗ ಸಂಘದ ಆಶ್ರಯ ಸ್ಥಳವಾಗಿತ್ತು. ಲಿಂ. ಹುಬ್ಬಳ್ಳಿ ಶಾಂತಪ್ಪನವರು ಇದರ ಪೋಷಕರಾಗಿದ್ದರು. ಧರ್ಮರಕ್ಷಣೆ, ಸಾಹಿತ್ಯ ಪೋಷಣೆ ಹಾಗೂ ಸಂಸ್ಕೃತಿ ಪ್ರಸಾರಗಳು ಈ ಸಂಘದ ಮುಖ್ಯ ಗುರಿಯಾಗಿದ್ದವು. ಕ.ಬ.ಅಂಗಡಿಯವರು ಇದೇ ಸಂಘದ ಆಶ್ರಯದಲ್ಲಿ ೧) ವಿಷಾಪಹರಣಲೀಲೆ ೨) ಹಾನಗಲ್ಲು ಕುಮಾರಸ್ವಾಮಿಗಳ ಚರಿತ್ರೆ ಹಾಗೂ ೩) ಮಂಗಲಗೀತೆಗಳನ್ನು ಬರೆದರು. ಕಾರಣಾಂತರಗಳಿಂದ ಈ ಸಂಘವು ನಿಂತು ಹೋದರೂ, ಅದರದೇ ಶಾಖೆ, ಅದೇ ವ್ಯಕ್ತಿಗಳ ಅಂತಃಸ್ಫೂರ್ತಿಯಿಂದ ೩೦ ವರ್ಷಗಳ ತರುವಾಯದಲ್ಲಿ ಮತ್ತೆ 'ಅನುಭವ ಮಂಟಪ ಗ್ರಂಥ ಮಾಲೆ' ಯೆಂಬ ಹೆಸರಿನಿಂದ ಮುಂದುವರೆಯಿತು."[೧೮] ಡಾ. ವಿ.ಶಿವಾನಂದ ಅವರ ಈ ನುಡಿಗಳು ಅಂಗಡಿಯವರ ಸಾಹಿತ್ಯ ರಚನೆಯ ಪ್ರಾರಂಭದ ದಿನಗಳನ್ನು ಮತ್ತು ಸಾಮಾಜಿಕ ಕ್ಷೇತ್ರಗಳಲ್ಲಿ ತಮ್ಮನ್ನು ತೊಡಗಿಸಿಕೊಂಡುದುದನ್ನು ಸಮರ್ಥಿಸುತ್ತವೆ. ಅವರ ಈ ಕೃತಿಗಳು ಇಂದು ಉಪಲಬ್ಧವಾಗಿಲ್ಲ.

### ೨.೧೮ ಅನುಭವ ಮಂಟಪಗ್ರಂಥ ಮಾಲೆ :

"ವೀರಶೈವ ಸಾಹಿತ್ಯ ಪರೀಕ್ಷೆಗಳನ್ನು ನಡೆಸುವ ಉದ್ದೇಶದಿಂದ ಗದುಗಿನಲ್ಲಿ ಸ್ಥಾಪಿತವಾದ ಅನುಭವ ಮಂಟಪ ಗ್ರಂಥಮಾಲೆ ಅದಕ್ಕಾಗಿ ಕೆಲವು ಕಿರುಹೊತ್ತಿಗೆಗಳನ್ನು ಪ್ರಕಟಿಸಿದೆ. ೧)ಅನುಭವದೂಟ, ೨)ಶ್ರೀ ಸರ್ವಜ್ಞನ ವಚನ ಸಂಗ್ರಹ ೩)ವಚನ ಮಧು ೪)ಅನುಭಾವಿಗಳ ಭಾವಗೀತೆಗಳು ೫)ವೀರಶೈವ ತತ್ವಾದರ್ಶ ೬) ಶ್ರೀ ಬವಸಣ್ಣನವರು ಇತ್ಯಾದಿ. ಪಂ. ನಾಗಭೂಷಣ ಶಾಸ್ತ್ರಿಗಳು, ಎಸ್.ವಿ.ಕಲ್ಮಠ, ಕೆ.ಎಚ್. ಓಲಿ, ಕೆ.ಬಿ.ಅಂಗಡಿ ಅಂದು ಈ ಗ್ರಂಥಮಾಲೆಯ ಸಂಪಾದಕರಾಗಿದ್ದರು. ಹಾಲಕೇರಿ ಶ್ರೀ ಅನ್ನದಾನಸ್ವಾಮಿಗಳ ಮಠವು ಈ ಕಾಲಕ್ಕೆ ಶಿವಾನುಭವ ಪ್ರಸಾರದ ಮುಖ್ಯ ಕೇಂದ್ರವಾಗಿತ್ತು. ಆ ದಿನಗಳಲ್ಲಿ ಹಾಳೆಗಳ ಬೆಲೆ ಮಿತಿ ಮೀರಿ ಹೆಚ್ಚಿದ್ದರೂ, ವೀರಶೈವ ಧರ್ಮಪ್ರಸಾರಕ್ಕೆ ಅನುಕೂಲವಾಗಲೆಂದು ಈ ಸಂಸ್ಥೆ ಐದಾಣೆಗೆ ಮಿಕ್ಕದಂತೆ ಸಣ್ಣ ಬೆಲೆಯಲ್ಲಿಯೇ ವಿದ್ವಾಂಸರಿಂದ ಬರೆದ ಪ್ರಕಟಣೆಗಳನ್ನು ಪ್ರಕಟಿಸಿದ್ದು, ವೀರಶೈವ ಪರೀಕ್ಷೆಗಳನ್ನು ಕರ್ನಾಟಕದಲ್ಲಿಯೇ ಮೊತ್ತ ಮೊದಲು ನಡೆಸಿದ್ದು ಇಂದಿಗೂ ಆದರ್ಶಪ್ರಾಯವಾಗಿದೆ."[೧೯]



ವೀರಶೈವ ಪ್ರಗತಿಶೀಲ ಯುವಕ ಸಂಘ

ಡಾ.ವಿ.ಶಿವಾನಂದ ಅವರ ಈ ನುಡಿಗಳು ಕ.ಬ.ಅಂಗಡಿಯವರು ಅವರ ಅನುಭವ ಗ್ರಂಥ ಮಾಲೆಯ ಸಾಹಿತ್ಯಿಕ ಚಟುವಟಿಕೆಗಳನ್ನು ವಿಶದಪಡಿಸುತ್ತವೆ.

### ೨.೧೯ ವೀರಶೈವ ಪ್ರಗತಿಶೀಲ ಯುವಕ ಸಂಘ :

ಗದುಗಿನ ತೋಂಟದಾರ್ಯ ಮಠದ ಸದ್ಭಕ್ತರಾದ ಇವರು ತಮ್ಮ ವಯೋವೃದ್ಧತೆಯಲ್ಲಿಯೂ ಮಠದ ಸಂಬಂಧ ಸಂಪರ್ಕಗಳಿಂದ ದೂರ ಉಳಿಯಲಿಲ್ಲ. ಮಠದ ಕರ್ತೃ ತೋಂಟದ ಸಿದ್ಧಲಿಂಗ ಯತಿಗಳಲ್ಲಿ ಅನನ್ಯ ಭಕ್ತಿಯನ್ನಿಟ್ಟುಕೊಂಡಿದ್ದ ಅವರು ಮಠದ ಕ್ರಿಯಾಶೀಲ ಮನಸ್ಸುಗಳಲ್ಲಿ ಒಬ್ಬರಾಗಿದ್ದರು. "ವೀರಶೈವರಲ್ಲಿ ಭಾವೈಕ್ಯತೆ ಬೆಳೆಯಬೇಕು, ಧರ್ಮದ ತತ್ವಗಳನ್ನು ಅರಿತು ಆಚರಣೆಯಲ್ಲಿ ತರಬೇಕು. ಈ ಉದ್ದೇಶ ಸಾಧನೆಗಾಗಿ ವೀರಶೈವ ಪ್ರಗತಿಶೀಲ ಯುವಕ ಸಂಘ ಸ್ಥಾಪನೆಯಾಗಬೇಕೆಂಬ ಕನಸು ಕಂಡವರಲ್ಲಿ ಕ.ಬ.ಅಂಗಡಿಯವರೊಬ್ಬರು."[೨೦] "ವೀರಶೈವ ಸಮಾಜದ ಸರ್ವತೋಮುಖ ಅಭಿವೃದ್ಧಿಗಾಗಿ ೧೯೭೦ರಲ್ಲಿ ಸ್ಥಾಪಿತವಾದ ಈ ಸಂಘವು ಪ್ರತಿ ಸೋಮವಾರದಂದು ಶಿವಾನುಭವ ಕಾರ್ಯಕ್ರಮ ನಡೆಸುವದು, ಬಸವಾದಿ ಪ್ರಮುಖರ ವಚನ ಕಾರ್ಡುಗಳನ್ನು ಮುದ್ರಿಸಿ, ಪ್ರಕಟಿಸುವುದು, ಮತ್ತು ವೀರಶೈವ ಮಹಾತ್ಮರ ಚರಿತ್ರೆಗಳನ್ನು ಕಿರುಹೊತ್ತಿಗೆಗಳಲ್ಲಿ ಬರೆಯಿಸುವದು ಇವೇ ಮುಂತಾದ ಧಾರ್ಮಿಕ ಪ್ರಸಾರದ ಯೋಜನೆಗಳನ್ನು ಇದು ಹಮ್ಮಿಕೊಂಡಿದೆ. ಅದರಡಿಯಲ್ಲಿ ಅಂಗಡಿಯವರು ಅನನ್ಯ ಕಾರ್ಯಗಳನ್ನು ಮಾಡಿದ್ದಾರೆ. ಈ ಸಂಘದ ಮೂಲಕ ಅವರ 'ಮುರಗೋಡ ಮಹಾಂತಜ್ಜನವರ ಮಹಿಮೆ', 'ಗಣಸಹಸ್ರ-ಜಯಬಸವ-ಸಿದ್ಧಲಿಂಗಶ್ರೀಗುರು ನಾಮಾವಲಿತ್ರಯ', 'ಮುರಗೋಡ ಮಹಾಂತ ಶಿವಯೋಗಿಗಳ ನಡೆ-ನುಡಿ-ಬೆಡಗಿನ ಮಾಲೆ', 'ಅಣ್ಣನ ದಾರಿದೋರಿದ ಕಾರಣಿಕ ಶಿವಯೋಗಿ ಶ್ರೀ ಹಾನಗಲ್ಲ ಕುಮಾರಸ್ವಾಮಿ', 'ಸುಮನ ಸಂಹಿತೆ' ಯಂತಹ ಇನ್ನೂ ಅನೇಕ ಕೃತಿಗಳನ್ನು ಹೊರತಂದಿದ್ದಾರೆ. ಈ ಕೃತಿಗಳ ಬರವಣಿಗೆ ಬೋಧಪ್ರದವಾಗಿದ್ದು ಸರಳವಾಗಿರುವದರಿಂದ ಇವುಗಳ ಪ್ರಚಾರ ಹೆಚ್ಚಿದೆ. ಅತ್ಯಂತ ಕಡಿಮೆ ಬೆಲೆಯಲ್ಲಿ ಶ್ರೇಷ್ಠ ಸಾಹಿತ್ಯವನ್ನು ಒದಗಿಸುವುದು ಇವರ ಉದ್ದೇಶವಾಗಿದೆ. ಈ ಸಂಘದ ಯೋಜನೆಗಳು ವಿಚಾರ ಪೂರ್ಣವೂ ಪ್ರಗತಿಪರವೂ ಆಗಿದೆ. ವೀರಶೈವ ಸಾಹಿತ್ಯದ ಅಮೂಲ್ಯ ತತ್ವಗಳು ವಚನಗಳಲ್ಲಿ ಅಡಕವಾಗಿವೆ. ಅವುಗಳ ಪ್ರಸಾರ ಈ ಸಂಘದಿಂದ ನಿರಂತರವಾಗಿ ನಡೆದಿದೆ. ಅದರ ಭಾಗವಾಗಿ ಕ.ಬ.ಅಂಗಡಿಯವರ ಸೇವೆ ಸ್ಮರಣೀಯವು. ಈ ಸಂಘವು ಆಧುನಿಕ

ವೀರಶೈವ ಸಮಾಜದ ಅಸ್ತಿಭಾರವನ್ನು ವಿಶಾಲ ತಳಹದಿಯ ಮೇಲೆ ಹಾಕಿಕೊಂಡಿರುವುದು ಇದರಿಂದ ಸೂಚಿತವಾಗುತ್ತದೆ.

ಈ ಸಂಘವು ಪ್ರತಿ ಸೋಮವಾರ ನಡೆಸುವ 'ಶಿವಾನುಭವ' ಕಾರ್ಯಕ್ರಮವು ಇಂದು ದಾಖಲೆಯ ಹಂತವನ್ನು ಮುಟ್ಟಿದೆ. ೨೦೦೦ಕ್ಕೂ ಹೆಚ್ಚು ಶಿವಾನುಭವಗಳು ಅಭಾದಿತವಾಗಿ ನಡೆದುಕೊಂಡು ಬಂದಿವೆ. ಅಂತಹ 'ಶಿವಾನುಭವ' ಸಾಧನೆಯಲ್ಲಿ ಕ.ಬ.ಅಂಗಡಿಯವರದು ಗುರುತರ ಹೆಜ್ಜೆಗಳು. "ಯಶಸ್ವಿಯಾಗಿ ನಡೆಯುತ್ತಿರುವ ಈ ಶಿವಾನುಭವಕ್ಕೆ ಆಧಾರವಾಗಿದ್ದವರು ಕ.ಬ.ಅಂಗಡಿಯವರೇ. ಆ ಪ್ರೇರಣೆಗೂ ಅವರೇ ಕಾರಣರು."[೨೧] 'ಮೊಗ್ಗೆಯ ಮಾಯಿದೇವರ ಶತಕತ್ರಯ', ಮೈಲಾರ ಬಸವಲಿಂಗಶರಣರ 'ಗುರುಕರಣ ತ್ರಿವಿಧಿ', 'ಶಿವಾನುಭವದರ್ಪಣ'ದಂತಹ ವೀರಶೈವ ಸಿದ್ಧಾಂತದ ಶುದ್ಧ ತತ್ವಾಚರಣೆಯ ವಿವರಣೆಗಳನ್ನು ಸರಳ-ಸುಂದರ ಮತ್ತು ಮನೋಜ್ಞವಾಗಿ ಪ್ರವಚಿಸುತ್ತಿದ್ದರು. ಅವರ ಈ ಶಿವಾನುಭವ ಸೇವೆ ಅವರ ಆಧ್ಯಾತ್ಮಿಕ ಹಸಿವನ್ನು ಹಿಂಗಿಸಿತ್ತು. ಚಿತ್ತವೃತ್ತಿಗಳಿಂದ ದೂರ ಉಳಿಯುವ ಸಾಧನೆ ಈ ಶಿವಾನುಭವದಿಂದ ಅವರಿಗೆ ಲಭಿಸಿತು. ಹೀಗಾಗಿ ಸಂಘಟನೆಗಳನ್ನು ಬರೀ ಪ್ರಚಾರಕ್ಕೆ ಬಳಸಿಕೊಳ್ಳದೇ ಅಂತರಂಗ-ಬಹಿರಂಗವನ್ನು ಶುದ್ಧೀಕರಿಸಲು ಬಳಸಿಕೊಂಡರು.

## ೨.೨೦ ಬಸವ ಭಜನಾ ಮಾಲೆ :

ಶರಣ ಸಂಪ್ರದಾಯದ ಇವರು ವೀರಶೈವ ಧರ್ಮದ ಹಾಗೂ ಬಸವಣ್ಣನವರ ವಚನಗಳನ್ನು ಆಳವಾಗಿ ಅಭ್ಯಾಸ ಮಾಡಿದವರಾಗಿದ್ದರು. ಗದುಗಿನ ಹೊಸಮಠದಲ್ಲಿ ತಮ್ಮ ಮಿತ್ರರೊಡಗೂಡಿಕೊಂಡು ಬಸವಣ್ಣನವರ ವಚನಗಳ ವಿವರಣೆಗಳನ್ನು ತಿಳಿದುಕೊಳ್ಳಲು ಹೋಗುತ್ತಿದ್ದರು. ಸಿದ್ದಪ್ಪ ಹುಣಸಿಮರದ, ಮಹಾಂತಪ್ಪ ಟೆಂಗಿನಕಾಯಿ, ಶಾಂತಪ್ಪ ಹುಬ್ಬಳ್ಳಿ ಇವರೊಂದಿಗೆ ಶಿವಾನುಭವ ಚರ್ಚೆಗೆ ಹೋಗುವ ರೂಢಿಯೂ ಇತ್ತು. "ಕಿಣಗಿ ಬಸವಲಿಂಗಪ್ಪನವರಿಂದ ಕೇಳಲ್ಪಟ್ಟ ಬಸವ ವಚನಾಮೃತದ ಸಾರವು ಅವರ ಮೇಲೆ ಹೆಚ್ಚಿನ ಪರಿಣಾವಮವನ್ನು ಬೀರಿತ್ತು."[೨೨] ಈ ಎಲ್ಲ ಸಹವಾಸ ಸಹಚಾರಗಳು ಅವರನ್ನು ಉನ್ನತವಾದ ವೈಚಾರಿಕನನ್ನಾಗಿಸಿದವು. ವಿಮರ್ಶಕನನ್ನಾಗಿಸಿದವು. ಪರಿಣಾಮವಾಗಿ ಸಂಗಪ್ಪ ಹುಬ್ಬಳ್ಳಿಯವರೊಂದಿಗೆ ಕೂಡಿಕೊಂಡು ೧೯೩೯ರಲ್ಲಿ 'ಬಸವ ಭಜನಾ ಮಾಲೆ' ಎಂಬ ಸಂಘಟನೆಯನ್ನು ಹುಟ್ಟು ಹಾಕಿದರು. ಇದರ ಮೂಲ ಉದ್ದೇಶ ವೀರಶೈವ ತತ್ವಗಳ ಅಡಿಯಲ್ಲಿ, ಅಂಗದ ಮೇಲೆ ಲಿಂಗವಳ್ಳವರೆಲ್ಲರೂ ಒಂದೆಂಬ ಭಾವ ಅಂಕುರಿಸುವಂತೆ

ಮಾಡುವುದು. ಈ ದಾರಿಯಲ್ಲಿ ಅವರು ನಾಟಕಗಳನ್ನು ರಚಿಸಿ ಅವುಗಳನ್ನು ತಮ್ಮ ಮಾಧ್ಯಮವನ್ನಾಗಿ ಮಾಡಿಕೊಂಡು ಮುಖ್ಯವಾಗಿ ಸಮಾಜದ ಮಹಿಳೆ ಮತ್ತು ಮಕ್ಕಳಲ್ಲಿ ಜಾಗೃತಿಯನ್ನುಂಟು ಮಾಡುವಲ್ಲಿ ಅನುವಾದರು. ಇದರ ಫಲವಾಗಿ ಅವರ 'ಕೆಳದಿ ಚೆನ್ನಮ್ಮಾಜಿ', 'ಬೆಳವಡಿ ಮಲ್ಲಮ್ಮ', 'ಕಿತ್ತೂರ ಕೇಸರಿ' ನಾಟಕಗಳನ್ನು ರಚಿಸಿ ವೀರಶೈವ ಮಹಿಳೆಯರ ಆತ್ಮಾಭಿಮಾನವನ್ನು ಹೆಚ್ಚಿಸುವಲ್ಲಿ ಕಾರ್ಯಪ್ರವೃತ್ತರಾದರು. 'ಶಿವ ಪಾರಮ್ಯ ಅರ್ಥಾತ್ ಗುಗ್ಗುಳ' ಎನ್ನುವ ನಾಟಕ ಬರೆದು ಸಾಮಾಜಿಕವಾಗಿ ಬಸವಾದಿ ಶರಣರ ತತ್ವಗಳನ್ನು ಪಸರಿಸಿದರು. 'ಶ್ರೀ ಬಸವೇಶ್ವರ ಭಜನಾ ಮಾಲೆ' ಎನ್ನುವ ಕಿರು ಹೊತ್ತಿಗೆಯನ್ನು ರಚಿಸಿ, ಆ ಮೂಲಕ ಬಸವಣ್ಣನವರ ಕುರಿತು ಅಷ್ಟಕಗಳನ್ನು, ಭಜನಾವಳಿಗಳನ್ನು, ಮಂಗಲಪದ್ಯಗಳನ್ನು ಬರೆದರು. ಅವುಗಳಿಗೆ ರಾಗ ಸಂಯೋಜನೆಯನ್ನೂ ಮಾಡಿ ಕೊಟ್ಟಿದ್ದರು. ಈ ಬಸವೇಶ್ವರ ಭಜನಾ ಪದ್ಯಗಳನ್ನು ರಾಮದುರ್ಗ ಸಂಸ್ಥಾನದ ಮೆಣಸಗಿ ಗ್ರಾಮದ 'ಶ್ರೀ ಬಸವೇಶ್ವರ ಭಜನಾ ಸಂಘ'ದವರಿಂದಲೂ, ಗದುಗಿನ ಶಹಪುರಪೇಟೆಯ ಶ್ರೀ ವೀರಪ್ಪ ಅಣ್ಣ ಉಮಚಗಿಯವರಿಂದಲೂ ಹಾಡಿಸಿದ ಉಲ್ಲೇಖವಿದೆ.[೨೩]

## ೨.೨೧ ಅಖಿಲ ಭಾರತ ವೀರಶೈವ ವಿದ್ಯಾಪೀಠ :

ವೀರಶೈವ ಸಾಹಿತ್ಯ, ಧರ್ಮ, ಸಂಸ್ಕೃತಿಗಳ ಪರಿಚಯದೊಂದಿಗೆ ವೀರಶೈವರಲ್ಲಿ ಐಕ್ಯ ಮೂಡಿಸುವ ಉದ್ದೇಶದಿಂದ ಗದುಗಿನ ಹಡಗಲೀಮಠದಲ್ಲಿ ಅಖಿಲಭಾರತ ವೀರಶೈವ ವಿದ್ಯಾಪೀಠ ಎಂಬ ಸಂಸ್ಥೆಯನ್ನು ಸ್ಥಾಪಿಸಿದರು. ಈ ಸಂಸ್ಥೆಯ ಕಾರ್ಯದರ್ಶಿಗಳಾಗಿ ಇವರು ಕಾರ್ಯನಿರ್ವಹಿಸಿದರು. ಅವರ ಈ ಕಾರ್ಯದಲ್ಲಿ ಎಸ್.ವಿ.ಕಲ್ಮಠ, ಕೆ.ಎಚ್.ಓಲಿ, ನಾಗಭೂಷಣ ಶಾಸ್ತ್ರಿಗಳು ಸಹಕಾರ ನೆರವು ನೀಡಿದರು. "ವೀರಶೈವ ವಿದ್ಯಾಪೀಠದ ಪರೀಕ್ಷೆಗೆ ಪಠ್ಯಪುಸ್ತಕಗಳನ್ನು ರಚಿಸಿಕೊಟ್ಟರಲ್ಲದೆ ಪರೀಕ್ಷೆಯ ವರ್ಗಗಳಿಗೆ ಪಾಠಗಳನ್ನೂ ಸಹ ಹೇಳುತ್ತಿದ್ದರು. ಕನ್ನಡ ಪ್ರವೇಶ, ಕನ್ನಡ ಮಧುಕರ, ಕನ್ನಡ ರತ್ನ ಎಂಬ ಪರೀಕ್ಷೆಗಳಿದ್ದು ಪ್ರತಿವರ್ಷ ಸಾವಿರಾರು ವಿದ್ಯಾರ್ಥಿಗಳು ಪರೀಕ್ಷೆಗೆ ಕುಳಿತುಕೊಳ್ಳುತ್ತಿದ್ದರು."[೨೪] ಈ ಪರೀಕ್ಷೆಗಳು ಒಂದು ವಿಶ್ವ ವಿದ್ಯಾಲಯದ ಸ್ತರದಲ್ಲಿಯೇ ನಡೆಯುತ್ತಿದ್ದವು. ವೀರಶೈವ ವಿದ್ಯಾಪೀಠದ ಪರೀಕ್ಷೆಗಳ ಮೂಲಕ ಕನ್ನಡ ಸಾಹಿತ್ಯದ ಪ್ರಚಾರವನ್ನು ಸಾಕಷ್ಟು ಮಾಡಿದರು. ಕಾರಣಾಂತರಗಳಿಂದ ಕೆಲವು ಕಾಲ ಅವರ ಮನೆಯಲ್ಲಿಯೇ ಈ ಪರೀಕ್ಷೆಗಳು ನಡೆದಿವೆ.

## ೨.೨೨ ವೀರಶೈವ ಸಂಸ್ಕೃತಿ ಪ್ರಕಾಶಕ ಸಮಿತಿ :

ಅಖಿಲ ಭಾರತ ವೀರಶೈವ ವಿದ್ಯಾಪೀಠದ ರೀತಿಯಲ್ಲಿಯೆ ಸ್ಥಳಿಯವಾಗಿ ಉತ್ತರ ಕರ್ನಾಟಕದಲ್ಲಿ 'ವೀರಶೈವ ಸಂಸ್ಕೃತಿ ಪ್ರಕಾಶನ ಸಮಿತಿ' ಎಂಬ ಸಂಘಟನೆಯನ್ನು ಸ್ಥಾಪಿಸಿ ಆ ಮೂಲಕ ಸಾಹಿತ್ಯ, ಧರ್ಮ, ನೀತಿ, ಉದ್ಯೋಗ, ತತ್ವ, ಕಲೆ ಮತ್ತು ಇತಿಹಾಸ ಮೊದಲಾದ ಮಹತ್ವದ ವಿಷಯಗಳನ್ನು ವೀರಶೈವರಲ್ಲಿ ಪಸರಿಸಬೇಕೆಂಬ ಸದುದ್ದೇಶದಿಂದ ಈ ಸಂಘಟನೆಯನ್ನು ಹುಟ್ಟುಹಾಕಲಾಯಿತು. ಪರೀಕ್ಷೆ ಮತ್ತು ಸಲಹೆಗಾರರ ಮಂಡಲದಲ್ಲಿ ಇವರು ಸೇವೆಗೈದರು. ಈ ಸಂಘಟನೆಯ ಮೂಲಕ ೧) ಸಾಹಿತ್ಯಪ್ರವೇಶ ಪರೀಕ್ಷೆ ೨) ಸಾಹಿತ್ಯ ಮಧುಕರ ಪರೀಕ್ಷೆ ೩) ಸಾಹಿತ್ಯ ಭೂಷಣ ಪರೀಕ್ಷೆ ೪) ಸಾಹಿತ್ಯ ರತ್ನ ಎನ್ನುವ ಪರೀಕ್ಷೆಗಳನ್ನು ನಡೆಸಿಕೊಡುತ್ತಿದ್ದರು.

ಒಟ್ಟಾರೆಯಾಗಿ ಕ.ಬ.ಅಂಗಡಿಯವರ ಜೀವನ ಸಾಧನೆ ಅತ್ಯಮೂಲ್ಯವಾದುದು. ಸರಿಯಾಗಿ ೯೦ ವರ್ಷಗಳ ಸುಧೀರ್ಘ ಬದುಕನ್ನು ಸಾರ್ಥಕ ಮಾಡಿಕೊಂಡ ಅವರ ಕ್ರಮ ಸರ್ವಕಾಲಕ್ಕೂ ಸರ್ವರಿಗೂ ಅನುಕರಣೀಯ, ಆದರ್ಶಪ್ರಾಯ. 'ಕಾಯವಳಿದರೂ ಕಾರ್ಯ ಉಳಿವುದು' ಎಂಬ ಅನುಭವ ನುಡಿಯನ್ನು ಸತ್ಯವಾಗಿಸಿ, ೬-೭-೧೯೮೬ರಂದು ಲಿಂಗೈಕ್ಯರಾದರು. ಸಾಧನೆ-ಬೋಧನೆಯಿಂದ ಅವರ ಬದುಕು-ಬರಹಗಳು ಸದಾವಕಾಲವೂ ಜೀವಂತವಾಗಿ ಉಳಿದು ಅನ್ಯರಿಗೂ ಮಾದರಿಯಾಗಿವೆ.

*****

## ಅಡಿಟಿಪ್ಪಣಿ:

೧. 'ಶರಣ'- ಕ.ಬ.ಅಂಗಡಿಯವರ ೮೦ನೆಯ ವರ್ಷದ ಸವಿನೆನಪಿನ ಸಂಚಿಕೆ,

ಸಂ-ವಿ.ವಿ.ಗಡಾದ, ಪುಟ ೧೩.

೨. ಅ.ದ.ಕಟ್ಟಿಮನಿಯವರ ಸಂದರ್ಶನದಿಂದ, ಪ್ರಾಚ್ಯವಸ್ತು ಸಂಗ್ರಹಾಲಯ, ಗದಗ

೩. 'ಬಯಲು', ಸಂ-ಗುರುಮೂರ್ತಿ ಎನ್, ಸವದತ್ತಿಮಠ ಎಸ್.ಡಿ, ಪುಟ ೯೮ ಮತ್ತು ಮಠದ ಕಾರ್ಯ ನಿರ್ವಾಹಕರಾದ ಶ್ರೀಮತಿ ಹಿರೇಮಠ ಅವರ ಸಂದರ್ಶನದಿಂದ ಮತ್ತು ಲಿಂಗಬಸವೇಶ್ವರ ಕೃತಿ.

೪. 'ಧಾರವಾಡದ ಗಂಡು ಮಕ್ಕಳ ಟ್ರೇನಿಂಗ್ ಸ್ಕೂಲ್' ಮಹಾಪ್ರಬಂಧ

೫. ಅದೇ

೬. ಅದೇ

೭. 'ಅಣ್ಣನ ದಾರಿ ತೋರಿದ ಕಾರಣಿಕ ಶಿವಯೋಗಿ ಶ್ರೀ ಹಾನಗಲ್ಲ ಕುಮಾರ ಸ್ವಾಮಿ',

ಕ.ಬ.ಅಂಗಡಿ, ಮುನ್ನುಡಿಯಿಂದ.

೮. 'ಶರಣ', ಕ.ಬ.ಅಂಗಡಿಯವರ ೮೦ನೆಯ ವರ್ಷದ ಸವಿನೆನಪಿನ ಸಂಚಿಕೆ,

ಸಂ- ವಿ.ವಿ.ಗಡಾದ, ಪುಟ ೧೮.

೯. ಅದೇ, ಪುಟ ೧೯

೧೦. 'ಕನ್ನಡ ದೀಪ', ಬೆನ್ನೂರ ಚ.ಸ, ಪುಟ ೧೨೦.

೧೧. 'ಶರಣ', ಕ.ಬ.ಅಂಗಡಿಯವರ ೮೦ನೆಯ ವರ್ಷದ ಸವಿನೆನಪಿನ ಸಂಚಿಕೆ,

ಸಂ-ವಿ.ವಿ.ಗಡಾದ, ಪುಟ ೧೮.

೧೨. 'ಶರಣ', ಕ.ಬ.ಅಂಗಡಿಯವರ ೮೦ನೆಯ ವರ್ಷದ ಸವಿನೆನಪಿನ ಸಂಚಿಕೆ,

ಸಂ- ವಿ.ವಿ.ಗಡಾದ, ಪುಟ ೨೧.

೧೩. 'ಕನ್ನಡ ಸಾಹಿತ್ಯಕ್ಕೆ ಗದುಗಿನ ಕಾಣಿಕೆ', ಡಾ.ವಿ.ಶಿವಾನಂದ, 'ನಮ್ಮ ಗದುಗು-ಬೆಟಗೇರಿ',

ಸಂ-ಹ.ರಾ.ಕಿದಿಯೂರ, ಪುಟ ೩೨೧

೧೪. 'ಶ್ರೀ ಕೆ.ಬಿ.ಅಂಗಡಿಯವರಲ್ಲಿ ನಾವು ಕಂಡದ್ದು', ಕೌತಾಳ ವೀರಪ್ಪ, ನೇಗಿಲಯೋಗಿ

ಕೃಷಿ ಸಾಪ್ತಾಹಿಕ, 'ಶರಣ' ಸಂಚಿಕೆ, ಪುಟ ೬೭.

೧೫. 'ಶರಣ' ಸಂಚಿಕೆ, ಪುಟ್ಟರಾಜ ಕವಿ ಗವಾಯಿಗಳು, ಆಶಿರ್ವಚನದಿಂದ, ಪುಟ ೧೧.

೧೬. ಅದೇ, ಪುಟ ೨೨.

೧೭. ಅದೇ ಪುಟ ೨೭.

೧೮. 'ಕನ್ನಡ ಸಾಹಿತ್ಯಕ್ಕೆ ಗದುಗಿನ ಕಾಣಿಕೆ', ಡಾ.ವಿ.ಶಿವಾನಂದ, 'ನಮ್ಮ ಗದುಗು-ಬೆಟಗೇರಿ', ಸಂ-ಹ.ರಾ.ಕಿದಿಯೂರ, ಪುಟ ೩೨೧.

೧೯. ಅದೇ, ಪುಟ ೩೨೧.

೨೦. 'ಸಾವಿರ ಶಿವಾನುಭವ', ಸಂ-ವೀರಶೈವ ಪ್ರಗತಿಶೀಲ ಯುವಕ ಸಂಘ, ಪುಟ ೧೧.

೨೧. 'ಶ್ರೀ ಶಿವಾನುಭವವೂ ಅಂಗಡಿ ಮಾಸ್ತರರೂ','ಶರಣ' ನೆನಪಿನ ಸಂಚಿಕೆ, ಬಸವೇಶ್ವರ ತುಪ್ಪದ, ಪುಟ ೩೯]

೨೨. 'ಶರಣ' ಸಂಚಿಕೆ, ಪುಟ ೨೧.

೨೩. 'ಶ್ರೀ ಬಸವೇಶ್ವರ ಭಜನಾ ಮಾಲಾ', ಬಸವತನಯ(ಕ.ಬ.ಅಂಗಡಿ), ಪುಟ ೧೬.

೨೪. 'ಶರಣ' ಸಂಚಿಕೆ, ಪುಟ ೨೪.

*****

ಅಧ್ಯಾಯ : ಮೂರು

# ಅನುಭವ-ಅನುಭಾವದ ನೆಲೆ; ಒದಗಿ ಬಂದ ಪರಿಸರ

- ಅನುಭವ-ಅನುಭಾವ
- ಪ್ರಜ್ಞೆ-ಅರಿವು
- ಆಚಾರ-ವಿಚಾರ-ಸದಾಚಾರ-ಶೀಲಾಚಾರ
- ಭಕ್ತಿ-ಜ್ಞಾನ-ಕ್ರಿಯೆ
- ಲೌಕಿಕ- ಪಾರಮಾರ್ಥಿಕ ಸಮನ್ವಯ
- ಶಿವಾನುಭವ
- ಒಡನಾಟ
- ಪರಿಸರ
- ಫಲ-ಸಾಫಲ್ಯ
- ಬಸವಾದಿ ಶಿವಶರಣರ ಪ್ರಭಾವ
- ಗೊಡಚಿ ಸುಕ್ಷೇತ್ರದ ಪ್ರಭಾವ

# ಅನುಭವ-ಅನುಭಾವದ ನೆಲೆ ; ಒದಗಿ ಬಂದ ಪರಿಸರ

ಸಹಜ ಕವಿ ಹೃದಯದ ಕ.ಬ.ಅಂಗಡಿಯವರು ಕನ್ನಡ ಸಾಹಿತ್ಯಕ್ಕೆ ತಮ್ಮದೆ ಆದ ರೀತಿಯಲ್ಲಿ ನಾಟಕ-ಗದ್ಯ-ಚುಟುಕುಪದ್ಯಗಳಿಂದ ಸೇವೆ ಸಲ್ಲಿಸುತ್ತಿರುವಾಗಲೇ ಅವರ ಜೀವನದಲ್ಲಿ ಬರುವ ವ್ಯಕ್ತಿಗಳ ಒಡನಾಟ ಅವರ ಬದುಕನ್ನು ಶರಣ ಸಾಹಿತ್ಯದತ್ತ ತಿರುಗಿದ್ದುದು ಕಂಡು ಬರುತ್ತದೆ. ಅದರಲ್ಲಿ ಪ್ರಮುಖವಾಗಿ ಅವರ ತಂದೆ ಬಸವಪ್ಪನವರು, ಅವರ ಮಾವ ಬಸೆಟ್ಟೆಪ್ಪನವರು, ಅವರ ಸೋದರಳಿಯ ಶಿವಪುತ್ರಪ್ಪ ಕಲ್ಯಾಣಿಯವರು, ಹಾನಗಲ್ಲ ಕುಮಾರ ಶಿವಯೋಗಿಗಳು, ಮುರಗೋಡ ಮಹಾಂತ ಶಿವಯೋಗಿಗಳು, ಹಾವೇರಿ ಶಿವಬಸವ ಸ್ವಾಮಿಗಳು, ಧಾರವಾಡದ ಮೃತ್ಯುಂಜಯಪ್ಪಗಳು, ತೋಂಟದಾರ್ಯ ಮಠದ ಸಿದ್ಧಲಿಂಗ ಮಹಾಸ್ವಾಮಿಗಳು, ಮುಂಡರಗಿಯ ೧೮ನೆಯ ಪೀಠಾಧಿಪತಿಗಳು ಹಾಗೂ ೧೯ನೆಯ ಪೀಠಾಧಿಪತಿಗಳಾದ ಅನ್ನದಾನೀಶ್ವರ ಮಹಾಸ್ವಾಮಿಗಳು, ನವಿಲುಗುಂದದ ಶ್ರೀಗಳು ಹೀಗೆ ಹಲವಾರು ಹರ-ಚರ-ಗುರು ಮೂರ್ತಿಗಳು ಜೊತೆಗೆ ಅವರ ಸಂಪರ್ಕ-ಸಂಬಂಧಗಳು ಇವರಲ್ಲಿ ಹೊಸ ಮಾನಸಿಕ ಪ್ರಬುದ್ಧತೆಯನ್ನು ತಂದು ಕೊಟ್ಟವು.

ಅವರ ಬದುಕು ಮತ್ತು ಬರಹಗಳಲ್ಲಿ ಧರ್ಮ ಮತ್ತು ಸಮಾಜವೆಂಬ ಎರಡು ಪ್ರಭಾವಿ ಮುಖ ಒಗ್ಗೂಡಿಸುವ, ಚೇತೋಹಾರಿಯಾಗಿಸುವ ಪ್ರಯತ್ನ ಕಂಡು ಬರುತ್ತದೆ. ಅವರ ಎಲ್ಲ ಸಾಧನೆಗಳು ವಿವಿಧ ಕ್ಷೇತ್ರಗಳಲ್ಲಿ ಸಲ್ಲಿದರೂ ಅದು ಸಾಹಿತ್ಯದ ಮುಖಾಂತರವೇ ಸಮನ್ವಯಗೊಂಡಿದೆ ಎಂಬುದು ಗಮನಾರ್ಹ. ಈ ಬದುಕು-ಬರಹದ ಸಮನ್ವಯವು ಅವರು ಸಾಧಿಸಿಕೊಂಡದ್ದು ಈ ಕೆಳಗಿನ ಹಂತಗಳೊಂದಿಗೆ ಗುರುತಿಸಬಹುದಾಗಿದೆ.

## ೩.೧ ಅನುಭವ-ಅನುಭಾವ :

'ಅನುಭವ' ಇದು ಜೀವನವೇ ಕಲಿಸಿ ಕೊಡುವ ಪಾಠ. ಈ ಪಾಠದಿಂದ ಬದುಕಿನ ಜ್ಞಾನ ಪಡೆದವನು ಗೆಲ್ಲುತ್ತಾನೆ. ಅದರ ಪರಿಯನರಿಯದವನು ಸೋಲುತ್ತಾನೆ. ಇರುವುದೊಂದೇ ಜಗವು. ಇದೇ ಜಗದಲ್ಲಿ ಹುಟ್ಟು-ಬದುಕು-ಸಾವು ಎನ್ನುವ ಹಂತಗಳೊಟ್ಟಿಗೆ ಜೀವಿಗಳು ಆಗಿ ಹೋಗುತ್ತವೆ. ಅದರಲ್ಲಿಯೂ ಮಾನವ ಅಘಾದ ಸಾಧನೆಗೆ, ಸಿದ್ಧಿಗೆ, ಪ್ರಯೋಗಾತ್ಮಕ ವೈಚಾರಿಕತೆಗಳಿಗೆ ತನ್ನನ್ನು ತಾನು ಒಡ್ಡಿಕೊಂಡು



ಕ.ಬ.ಅಂಗಡಿಯವರಲ್ಲಿ ಬದಲಾವಣೆಗೆ ಕಾರಣರಾದ ಹಾನಗಲ್ಲ ಕುಮಾರಸ್ವಾಮಿಗಳು, ಶಿವಯೋಗ ಮಂದಿರ.

'ಅನುಭವ'ದ ಸೆಲೆಯನ್ನು ಅಪ್ಪಿಕೊಳ್ಳಬಲ್ಲನು. ಬರೀ ಧಾರ್ಮಿಕ ಸ್ತರಗಳಿಗೆ ನಾವು ಇಂದು ತಂದು ನಿಲ್ಲಿಸಿರುವ ಬಸವಾದಿ ಶಿವಶರಣರ ವಿಚಾರಗಳನ್ನು ನಿಜ ದೃಷ್ಟಿಕೋನದಿಂದ ನೋಡುವಾಗ ಅಲ್ಲಿ ನಮಗೆ ಕಾಣಸಿಗುವುದು ಮಾನವ ಮೌಲ್ಯಗಳ ಹೊಸ ಭಾಷ್ಯ. ಅವು ಯಾರು ಬರೀ ವೀರಶೈವ-ಲಿಂಗಾಯತ ಸಮಾಜ, ಸಮುದಾಯಕ್ಕೆ ಸೀಮಿತಗೊಳಿಸುವಷ್ಟು ತಟಸ್ಥವಾದ ವಿವೇಚನೆಗಳಲ್ಲ. ಜಗತ್ತಿನ ಯಾವುದೇ ಸ್ವಾಸ್ಥ್ಯ ಸಮಾಜ ಅವುಗಳ ಚಿಂತನ-ಮಂಥನ ಮತ್ತು ಅನುಷ್ಠಾನಕ್ಕೆ ತರಬಹುದಾದ ವಿಚಾರಗಳವು. ಪರಿಪೂರ್ಣ ಮತ್ತು ಪಾರಿಭಾಷಿಕ ನೆಲೆಗಳ ಮೇಲೆ ಈ ಚಿಂತನೆಗಳು ರೂಪುಗೊಂಡಿವೆ. ಇವರ ನಿಲವನ್ನು 'ಅನುಭವ' ಮತ್ತು 'ಅನುಭಾವ'ದ ಸಾಮರಸ್ಯದಿಂದ ಗುರುತಿಸಬಹುದಾಗಿದೆ. ಈ ಅನುಭವ ಮತ್ತು ಅನುಭಾವಗಳು ಅವರಲ್ಲಿ ಒಳಗೊಳ್ಳಲು ಪರಿಸರವು ಕಾರಣವಾಗುತ್ತದೆ. ಪರಿಸರದ ಪರಿಧಿಯಲ್ಲಿ ಅವುಗಳ ಸಾತ್ವಿಕ ವಿಕಸನ ಮತ್ತು ಪ್ರಫುಲ್ಲತೆಯನ್ನು ಗುರುತಿಸಲು ಸಾಧ್ಯವಾಗುತ್ತದೆ. ಹೀಗಾಗಿ ಕ.ಬ.ಅಂಗಡಿಯವರ ಬದುಕು-ಬರಹಗಳ ಮೇಲೆ ಅವರ ಅನುಭವ ಹಾಗೂ ಅನುಭಾವಗಳು ಪಡಿಮೂಡಿವೆ ಎಂಬುದು ಇಲ್ಲಿ ಗುರುತಿಸಬಹುದಾಗಿದೆ.

ಜೀವಿಯ ಹುಟ್ಟಿನೊಂದಿಗೆ ಆರಂಭವಾಗಿ ಅವನ ಅಂತ್ಯದವರೆಗೆ ಸಾಗಿ ಬರುವುದೆಲ್ಲವೂ ಅವನಿಗಾದ ಅನುಭವವೇ. ಆದರೆ 'ಅನುಭವ' ಶಬ್ದದ ಹಿನ್ನೆಲೆಯನ್ನು ನೋಡಿದಾಗ ಅದರ ಅರ್ಥ ವಿಶಾಲವಾಗಿದೆ. ಶಿವಶರಣರು ಅನುಭವವನ್ನು ಕುರಿತು ಕೆಲವು ವಿಚಾರಗಳನ್ನು ಹೇಳಿದ್ದಾರೆ. ಶರಣ ಸಿದ್ಧರಾಮ ತಮ್ಮ ವಚನದಲ್ಲಿ 'ಅನುಭವವೆಂಬುದು ಅನುಭಾವಿಕಗಲ್ಲದೆ ಹೊತ್ತಗೆಯಲಿಲ್ಲ....' ಎಂದಿದ್ದಾರೆ. 'ಅನುಭವವಿಲ್ಲದ ಜ್ಞಾನದ ಫಲವೇನೋ' ಎಂದು ವಿಜಯದಾಸರು ಹಾಡಿದ್ದಾರೆ. ಹೀಗಾಗಿ ನಮ್ಮ ಹಿರಿಯರೆಲ್ಲ ಪಾಂಡಿತ್ಯಕ್ಕಿಂತ ಅನುಭವಕ್ಕೆ ಹೆಚ್ಚು ಆದ್ಯತೆ ನೀಡಿದ್ದಾರೆ. ಕೋಟಿ ವಿದ್ಯೆಗಿಂತ ಮೇಟಿ ವಿದ್ಯೆ ಲೇಸು ಎಂದಿದ್ದಾರೆ. ಮಾತಿಗಿಂತ ಕೃತಿಗೆ ಬೆಲೆ ನೀಡಿದ್ದಾರೆ. ಈ ದೃಷ್ಟಾಂತಗಳು ಜೀವನದ ಬೇರೆ ಬೇರೆಯ ಸ್ಥರದಲ್ಲಿ ಬದುಕಿದ ಜನರ ಅನುಭವವನ್ನು ಪ್ರತಿಪಾದಿಸುತ್ತವೆ. 'ಅನುಭವ'ಕ್ಕೆ ಅದರದೇ ಆದ ವಿಶೇಷತೆ ಇದೆ. ಇದೇ ಕಾಯಕವೇ ಕೈಲಾಸ ಎಂಬ ಶರಣರ ಮಾತಿಗೆ ನೆಲೆಯಾಗಿದೆ.

ಅನುಭವ ಮತ್ತು ಅನುಭಾವವನ್ನು ನುಡಿಗಳಲ್ಲಿ ಕಟ್ಟಿಡುವುದು ಸಾಧ್ಯವಿಲ್ಲ. ಜ್ಞಾನೇಂದ್ರಿಯಗಳ ಸಹಾಯದಿಂದ ಪ್ರತಿ ಪದಾರ್ಥದ ಗುಣ-ಧರ್ಮವನ್ನು ಪರಿಚಯಿಸಿಕೊಳ್ಳುವುದು 'ಅನುಭವ'. ಇದು ಕಾಲಾತೀತವಲ್ಲ. ಕಾಲ ಕಕ್ಷೆಯಲ್ಲಿ ನೆಲೆ ನಿಂತದ್ದು. ಇದು ಕಾಲಕ್ಕೆ ತಕ್ಕಂತೆ ಕಾಲದಿಂದ ಬಂಧಮುಕ್ತವೂ ಆಗಬಹುದು.



ಕ.ಬ.ಅಂಗಡಿಯವರ ಆರಾಧ್ಯ ದೈವ ಮತ್ತು ಅವರ ಆಧ್ಯಾತ್ಮಿಕ ಸಾಧನೆಗೆ ಕಾರಣರಾದ ಮುರಗೋಡದ ಶ್ರೀ ಮಹಾಂತ ಶಿವಯೋಗಿಗಳು

ಮುಂದುವರೆದು ವಿಭಿನ್ನ ಕಾಲಗಳ ಕಕ್ಷೆಗೆ ಸೇರಬಹುದು. ಹೀಗೆ ಪದಾರ್ಥಗಳ ಮೂಲ ಗುಣ ಬೇರೆ ವಲಯವನ್ನು ಸೇರಿ ತನ್ನ ಅಸ್ತಿತ್ವವನ್ನು ಉಳಿಸಿಕೊಳ್ಳುವ, ಗತಿಶೀಲವಾಗಿ ಬೆಳೆಸಿಕೊಳ್ಳುವುದಕ್ಕೆ ಯೋಗ್ಯವಾದುದು. ಹೀಗೆ ಮೇಲ್ನೋಟಕ್ಕೆ ಪರಿವರ್ತನೆಗೊಂಡಿರುವ ಪದಾರ್ಥದ ಗುಣ-ಧರ್ಮಗಳನ್ನು ಪ್ರಾಪ್ತ ಮಾಡಿಕೊಳ್ಳುವುದು 'ಅನುಭಾವ'.

'ಅನುಭಾವ'ದಿಂದ ಜನಸಾಮಾನ್ಯ ದೂರ ಉಳಿಯುತ್ತಾನೆ. ಹೀಗಾಗಿ ನಮ್ಮ ಜನಸಾಮಾನ್ಯರಲ್ಲಿ ಅದು ದೂರವಾಗಿ ಉಳಿಯುತ್ತದೆ. ಆದರೆ ಶರಣರು ಈ 'ಅನುಭಾವ'ವನ್ನು ಜನಸ್ನೇಹಿಯನ್ನಾಗಿ ಮಾಡಿದರು. ಜನವಾಣಿಯನ್ನು ವಚನ ರಚನೆಯ ಮೂಲಕ ದೇವವಾಣಿಯನ್ನಾಗಿಸಿದ ಶರಣರು ಅನುಭವ ಮತ್ತು ಅನುಭಾವವನ್ನು ತಾವು ಬದುಕಿದ ಬದುಕಿನಿಂದ ಸರಳ, ಸುಲಲಿತ ಮತ್ತು ಸುಲಭವಾದ ಮಾರ್ಗದಲ್ಲಿ ಕಂಡುಕೊಳ್ಳುವ ಪ್ರಾಯೋಗಿಕತೆಯನ್ನು ತಿಳಿಸಿದರು. ಅಪ್ರತಿಮರಿಗೆ, ಸಾಧು-ಸಂತರಿಗೆ, ಪಂಡಿತ-ಪಾಮರರಿಗೆ ಮಾತ್ರ ಅನುಭವ ಮತ್ತು ಅನುಭಾವ ಎಂಬ ತಿಳುವಳಿಕೆಗೆ ತಿಲಾಂಜಲಿ ಇಟ್ಟರು. ಈ ವಿಷಯ ನಮಗೆ ಶರಣರು ಸಹಜ ಮಾನವರೆಂಬುದನ್ನು ತಿಳಿಸುತ್ತದೆ. ನಮ್ಮ ಇತಿಹಾಸ, ಸಾಹಿತ್ಯ ಮತ್ತು ಸಂಸ್ಕೃತಿಗಳಲ್ಲಿ ಬಿಂಬಿತವಾದಂತೆ ಅವರು ಅತೀಮಾನುಷ ಶಕ್ತಿಯಳ್ಳವರಲ್ಲ ಎನ್ನುವ ಸತ್ಯವನ್ನು ಮನವರಿಕೆ ಮಾಡಿಕೊಡುತ್ತದೆ. ಅತಿಮಾನುಷ ಶಕ್ತಿ ಇಲ್ಲದೆ ಅನುಭವೈಕ ಜೀವನಕ್ರಮದಿಂದ ಮತ್ತು ಮಾನವೀಯ ಮೌಲ್ಯಗಳಿಂದ ಮಾನವ ದೇವಮಾನವನಾಗಬಲ್ಲ ಎಂದು ತೋರಿಸಿಕೊಟ್ಟವರು ಬಸವಾದಿ ಶರಣರು. ಈ ನಡೆಯು ೧೨ನೆಯ ಶತಮಾನದಿಂದ ಇಲ್ಲಿಯವರೆಗೂ ನಿರಂತರವಾಗಿ ನಡೆದುಕೊಂಡು ಬಂದಿದೆ. ಅಂಕಿ ಅಂಶಗಳು ಕಡಿಮೆಯಾಗಿದ್ದರೂ ಸಾವಿರದಲ್ಲಿ ಒಬ್ಬರಾದರೂ ಈ ನಡೆಯನ್ನು ಅರಿತವಾಗಿದ್ದಾರೆ. ಈ ಸಾಲಿನಲ್ಲಿ ಕ.ಬ.ಅಂಗಡಿಯವರು ಕೂಡ ಸಲ್ಲುತ್ತಾರೆ. ನಡೆ-ನುಡಿಯೊಂದಾದ ಬದುಕಿನ ಅನುಭವದಿಂದ ಅನುಭಾವದ ಅರಿಕೆ ಸಾಧ್ಯವೆಂಬುದು ಅವರ ಅಚಲ ನಿಲುವಾಗಿತ್ತು. "ಅನುಭಾವ ಪದದ ವ್ಯಾಪ್ತಿ ಪಾಶ್ಚಾತ್ಯ ತತ್ವಜ್ಞಾನದ ಪಾರಿಭಾಷಿಕ ಪದ 'ಮಿಸ್ಟಿಸಿಜಮ್'ಕ್ಕಿಂತ ವಿಶಾಲವಾದುದು. ಮಿಸ್ಟಿಸಿಜಮ್ ಪದ ರಹಸ್ಯ, ಗೂಢ, ಅಲೌಕಿಕ ಎಂಬ ಅರ್ಥವನ್ನು ನೀಡಿದರೆ, 'ಅನುಭಾವ' ಈ ಎಲ್ಲ ಅರ್ಥಗಳನ್ನೊಳಗೊಂಡೂ ಪ್ರಕಾಶಮಾನ, ಘನ, ಕಾಂತಿಯುತ ಎಂಬಲ್ಲಿಯೂ ವಿಸ್ತರಣೆಗೊಂಡಿದೆ"[೧]



ಇಂತಹ ಅನುಭಾವವನ್ನೇ ಶರಣರು 'ಲಿಂಗಾಂಗ ಸಾಮರಸ್ಯ', 'ಸಮಾಧಿ ನಿರ್ಮಾಣ' ಎಂದು ಕರೆದರು. ಅನುಭಾವವನ್ನು ಅನುಭವಿಸಿಯೇ ತಿಳಿದುಕೊಳ್ಳಬೇಕು.



ನವಿಲುಗುಂದದ ಗವಿಮಠದ ಶ್ರೀಗಳು ಮತ್ತು ಮುರಗೋಡದ
ಮಹಾಂತ ಶ್ರೀಗಳೊಂದಿಗೆ ಕ.ಬ.ಅಂಗಡಿಯವರು

ಅನುಭವ ಬುದ್ಧಿ–ತರ್ಕ–ವಿಚಾರಗಳಿಗೆ ಆಕರವಾಗಿ ನಿಲುಕುವಂಥದ್ದು. ಯಾವುದೇ ಕ್ಷೇತ್ರದಲ್ಲಿ ಪ್ರಾಮಾಣಿಕ ಸಾಧನೆಯಲ್ಲಿ ನಿರತರಾದವರ ಕಣ್ಣಿಗೆ ಕಾಣುವ, ಸತ್ಯದ ದರ್ಶನವೊಂದನ್ನು ಸಾಧಕನ ಅಂತರ್‌ದೃಷ್ಟಿಗೆ ತೋರಿಸಿಕೊಡುವ ಕ್ರಿಯೆಫಲವೇ ಅನುಭಾವ. "ಈ ಸತ್ಯವನ್ನು ಕಂಡ ಕೆಲವು ಸಾಧಕರು; ವಿಜ್ಞಾನಿಗಳು, ಕವಿಗಳು, ಕಲಾಕಾರರು, ದ್ರಷ್ಟಾರರು, ದಾರ್ಶನಿಕರು, ರಸಋಷಿಗಳು ಎನಿಸಿಕೊಂಡರು. ಇಂತವರು ಅನುಭಾವ ಲೋಕದಲ್ಲಿ ಕಂಡುಂಡದನ್ನು ತಮ್ಮ ಬರವಣಿಗೆಯ ವಿವಿಧ ರೂಪಗಳಿಂದ ಲೋಕಕ್ಕೆ ತಿಳಿಸುವ ಪ್ರಯತ್ನ ಮಾಡುತ್ತಲೇ ಬಂದಿದ್ದಾರೆ."[೨] ಅಂತಹ ಅನುಭಾವಿಗಳ ಸಾಲಿನಲ್ಲಿ ಕ.ಬ.ಅಂಗಡಿಯವರ ಬದುಕು–ಬರಹಗಳು ಸಲ್ಲುತ್ತವೆ. ಅವರ ಬದುಕು–ಬರಹಗಳು 'ಅನುಭಾವ' ದೃಷ್ಟಿಯಿಂದ ವಿಶ್ಲೇಷಿಸುವ ಮಟ್ಟದ್ದಾಗಿವೆ. "ಸಾಮಾಜಿಕ ದೃಷ್ಟಿಯಲ್ಲಿ ಶಿಕ್ಷಕರಾಗಿ, ಮುಖ್ಯೋಪಾದ್ಯಾಯರಾಗಿ, ಶಿಕ್ಷಣಾಧಿಕಾರಿಗಳಾಗಿ ಇವರನ್ನು ಕಂಡವರು ಅವರ ಕಾಯಕದ ತಿರುಳಿನಲ್ಲಿ ಅವರನ್ನು ಅನುಭವಿಯಾಗಿ ಮತ್ತು ಅನುಭಾವಿಯಾಗಿ ಕಂಡವರಿದ್ದಾರೆ."[೩] ಕಣ್ಣಿಗೆ ಕಾಣುವ ಸತ್ಯ ಮುಖ್ಯವಾಗಿ ಲೌಕಿಕತೆಯ ಗೊತ್ತು ಗುರಿಗಳಲ್ಲಿ ತಮ್ಮನ್ನು ಗುರುತಿಸಿಕೊಳ್ಳುವ ಜನಮಾನ್ಯರು ಲೌಕಿಕ ಮಾರ್ಗದಲ್ಲಿ ನಿಂತುಕೊಂಡು ಅಲೌಕಿಕ ಬದುಕಿನತ್ತ ಸಾಗುವವರನ್ನು ಅರ್ಥೈಸಿಕೊಳ್ಳುವುದು, ಗುರುತಿಸುವುದು ವಿರಳ.

ಅನುಭವ ಪಂಚೇದ್ರಿಯಕ್ಕೆ ಗೋಚರ. ಅನುಭಾವ ಷಡೀಂದ್ರಿಯಕ್ಕೆ ಗೋಚರ. ಅಂದರೆ ಇಲ್ಲಿ ಷಡೀಂದ್ರಿಯವೆಂದರೆ ಹೃದಯ. ಆದುದರಿಂದ ಅನುಭಾವವೆಂದರೆ ಹೃದಯಗ್ರಾಯ್ಯ ಮತ್ತು ಹೃದಯಂಗಮವಾದುದು. ಇದನ್ನು ಅರಿಯುವ, ಸವಿಯುವ ಶಕ್ತಿ ಸಹೃದಯನಿಗೊಬ್ಬನಿಗೆ ಸಾಧ್ಯ. ಹೀಗಾಗಿ ಗ್ರಾಹ್ಯವಾದುದುದಕ್ಕೆ ನಮ್ಮ ಬುದ್ಧಿ–ಮನಸ್ಸು–ಭಾವನೆ ಸ್ಪಂದಿಸುತ್ತದೆ. ಅನುಭವದಿಂದ ಸಂಗ್ರಹವಾಗುವ ಚಿಂತನಶೀಲತೆಯನ್ನು ಗ್ರಹಿಕೆಯೊಂದಿಗೆ ಅಳವಡಿಸಿಕೊಂಡಾಗ ಪ್ರಜ್ಞೆ, ಅರಿವು ಉಂಟಾಗುತ್ತದೆ. ಇಂತಹ ಪ್ರಜ್ಞೆ ಮತ್ತು ಅರಿವಿನ ಬದುಕು ಇವರದ್ದಾಗಿದೆ.

ನಿಜವಾದ ಅನುಭಾವಿಗಳ ಬದುಕು ಪರಿಚಯ ಮಾಡಿಕೊಳ್ಳುವುದು ಮತ್ತು ನಿಜವಾದ ಅನುಭಾವಿಗಳ ವಿಚಾರಗಳನ್ನು ಕುರಿತು ವ್ಯಕ್ತಪಡಿಸಿರುವ ಆಲೋಚನೆಗಳನ್ನು ನೋಡುವುದರ ಮೂಲಕ ಅನುಭವ–ಅನುಭಾವವನ್ನು ಕೈಗೆಟುಕಿಸಿಕೊಂಡರು. ರಾಷ್ಟ್ರಕವಿ ಕುವೆಂಪು ಹೇಳುವಂತೆ ಕವಿ ಅಂತರಂಗದಲ್ಲಿ ತಪಸ್ವಿಯೂ ಬಹಿರಂಗದಲ್ಲಿ ತೇಜಸ್ವಿಯೂ ಆಗಿರುವನೆಂಬ ಮಾತು ಇವರ ಸುಪ್ತ ಬದುಕು ಬರಹವನ್ನು ಪರಿಚಯಿಸುವಲ್ಲಿ ಸಾಧಾರವಾಗುತ್ತದೆ. ಅವರೆ ಹೇಳುವಂತೆ ಕವಿ ತನ್ನೊಳಗಿನ ಅನುಭವ–ಅನುಭಾವವನ್ನು



ತೋಂಟದಾರ್ಯ ಮಠದ ಡಾ. ಸಿದ್ಧಲಿಂಗ
ಮಹಾಸ್ವಾಮಿಗಳೊಂದಿಗೆ ಕ.ಬ.ಅಂಗಡಿಯವರು

ಹೊರಗೆಳೆಯದೆ ಇರಲಾರ. ಅದರಂತೆ ಕವಿಯಾಗಿ, ಶಿವಕವಿಯಾಗಿ ಕ.ಬ.ಅಂಗಡಿಯವರು ತಮ್ಮ ಭಾವಾಭಿವ್ಯಕ್ತಿಯನ್ನು ಭಾವಾನುಭವ ಮತ್ತು ಅನುಭವದ ರಸಬುತ್ತಿಯನ್ನು ತಮ್ಮ ಹಾಡುಗಬ್ಬಗಳ ಮೂಲಕ, ಲೇಖನಗಳ ಮೂಲಕ, ಅಷ್ಟಕ-ಷಟ್ಕಗಳ ಮೂಲಕ, ಪುರಾಣ-ಪ್ರವಚನಗಳ ಮೂಲಕ ಹೊರಹಾಕಿದ್ದಾರೆ.

ಇಂದಿನ ಜನರಲ್ಲಿ ಬಸವಣ್ಣನವರ ಜೀವನ-ಸಾಧನೆಗಳು ಬರೀ ಮಾತಿನಲ್ಲಿ ಕಂಡು ಬರುತ್ತವೆ. ಕೃತಿಯಲ್ಲಿ ಬಸವಣ್ಣನವರ ಒಂದೇ ಒಂದು ವಿಚಾರಗಳೂ ಕಾರ್ಯರೂಪಕ್ಕೆ ಬರದಂತಾಗಿದೆ. ಬಸವಣ್ಣನ ನುಡಿಗಳು ಅನುಭಾವದ ಆಳವನ್ನು ನೀಡುವವು. ಅದನ್ನು ಪಡೆಯುವ ಮತ್ತು ಸವಿಯುವ ವ್ಯವಧಾನವು ಇಂದಿನ ಜನರಿಗಿಲ್ಲವೆಂದೆ ಹೇಳಬೇಕು. ಆದರೆ ಕ.ಬ.ಅಂಗಡಿಯವರ ನುಡಿ-ಮತ್ತು ನಡೆಗಳಲ್ಲಿ ಬಸವಣ್ಣನವರ, ಶಿವಶರಣರ ಅನುಕರಣೆಯೇ ಇರುತ್ತಿತ್ತು. ಮುರಗೋಡ ಮಹಾಂತ ಶಿವಯೋಗಿಗಳನ್ನು ತಮ್ಮ ಮನೆಗೆ ಕರೆಸಿಕೊಂಡು ಪಾದ ಪೂಜಾಕ್ರಮಗಳನ್ನು ಕೈಗೊಂಡ ಸಂದರ್ಭವನ್ನು ಅವರು ಅನುಭವ ಮಂಟಪದಲ್ಲಿ ಶಿವಶರಣರು ಅಲ್ಲಮಪ್ರಭುವಿನ ನೇತೃತ್ವದಲ್ಲಿ ನೆರೆದ ದೃಶ್ಯವನ್ನೇ ಕಂಡಂತಾಯಿತು ಎಂದು ಹಿರಿಹಿಗ್ಗುತ್ತಾರೆ. ಇಂತಹ ಅನೇಕ ಉದಾಹರಣೆಗಳನ್ನು ಅವರ ಜೀವನದಲ್ಲಿ ಕಾಣಬಹುದು.

ಇವರನ್ನು ಅನುಭವಿ ಮತ್ತು ಅನುಭಾವಿಗಾಗಿ ಗುರುತಿಸುವುದು ಅವರ ಚಿಂತನೆಗಳನ್ನು, ವೈಚಾರಿಕತೆಯನ್ನು ಮತ್ತು ಸರಳತೆಯ ಬದುಕನ್ನು ಮುಖ್ಯ ದೃಷ್ಟಿಯಲ್ಲಿಟ್ಟುಕೊಂಡು. ತಮ್ಮ ಜೀವನವನ್ನು ಬಸವಾದಿ ಶರಣರ ಪಥದ ಅನುಕರಣೆಯಲ್ಲಿ ಬದುಕಿದವರು. ಅವರ ಬದುಕು ಅನುಭಾವದ ಬದುಕಿಗೆ ಮಾದರಿ. ಸಮಾಜದಲ್ಲಿ ಜನಸಾಮಾನ್ಯನಾಗಿದ್ದುಕೊಂಡು ಅನುಭವಿ, ಅನುಭಾವಿಯಾಗಿ, ಶಿವಾನುಭವಿಯಾಗಿ, ಶರಣನಾಗಿ ತಮ್ಮ ಬದುಕಿಗೆ ನ್ಯಾಯ ಒದಗಿಸಿದ ಇವರು ಮತ್ತೊಮ್ಮೆ ಸಾಧಕರು, ಅನುಭಾವಿಗಳು, ಶರಣರು ಎಂಬ ಪದಗಳಿಗೆ ಹೊಸದಾಗಿ ಸರಳ ವ್ಯಾಖ್ಯಾನ ಬರೆದರು. 'ಅನುಭಾವಿ'ಯೆಂದರೆ ಯಾರು? ಎನ್ನುವ ಪ್ರಶ್ನೆಗೆ ಇವರ ಬದುಕೇ ಉತ್ತರವನ್ನು ಕೊಡುತ್ತದೆ.

ಒಬ್ಬ ವ್ಯಕ್ತಿಯು ಅದೆಷ್ಟು ವರ್ಷಗಳು ಬದುಕಿದನು ಎಂಬುವುದು ಮುಖ್ಯವಾಗುವುದಿಲ್ಲ. ಆ ಬದುಕಿನ ಅವಕಾಶವನ್ನು ಅವನು ಅದ್ಹೇಗೆ ಬಳಸಿಕೊಂಡನು ಎಂಬುದು ಪ್ರಮುಖವಾಗಿರುತ್ತದೆ. ಸರಿಯಾಗಿ ೯೦ ವರ್ಷಗಳ ಪೂರ್ಣ ತಮ್ಮ ಜೀವನವನ್ನು ಅಷ್ಟಾವರಣಗಳಲ್ಲಿ ಐಕ್ಯಗೊಳಿಸಿ, ಅನುಭವದ ಅರಿವಿನಿಂದ ಷಟ್ಸ್ಥಲ ಪಥದಲ್ಲಿ ಸಾಗಿಸಿ, ಸದಾಚಾರಗಳ ಸಂಪಾದನೆಯಿಂದ ಭಕ್ತಿಯ ಮಾರ್ಗವಾಗಿ ಮುಕ್ತಿಯನ್ನು ಪಡೆದವರು.

ಸಂಸಾರದಲ್ಲಿದ್ದುಕೊಂಡೂ ಗುರು-ವಿರಕ್ತ ಸಾಧಕರ ಸರಿಸಮಾನವಾಗಿ ಬದುಕನ್ನು ಸಾರ್ಥಕಗೊಳಿಸಿಕೊಂಡರು. ಈ ಸಾರ್ಥಕ್ಯ ಲಭಿಸಲು ಕಾರಣವಾದ ಹಲವಾರು ಸಹಾಯಕ ಅಂಶಗಳನ್ನು ಸಂಶೋಧನೆಯ ಈ ಹಂತದಲ್ಲಿ ಗುರುತಿಸಲಾಗಿದೆ. ಅವರ ಬದುಕಿನ ಬದಲಾವಣೆಗೆ ಮತ್ತು ಅದು ಮುಂದೆ ಕಂಡುಂಡ ಸಾರ್ಥಕತೆಗೆ ಅವರ ಸುತ್ತಲಿನ ಪರಿಸರ, ಸಾಮಾಜಿಕ ವ್ಯವಸ್ಥೆ, ಬಡತನ, ಬದುಕಿನ ಅವಶ್ಯಕತೆಗಳು ಕಾರಣವಾಗಿವೆ. ಗೊತ್ತಿದ್ದೊ ಗೊತ್ತಿಲ್ಲದೆಯೋ ಬದುಕು ವ್ಯಕ್ತಿಯೊರ್ವನನ್ನು ಮುನ್ನಡೆಸುತ್ತ ಶಕ್ತಿಯ ಕೇಂದ್ರವನ್ನಾಗಿಸುತ್ತದೆ. ಅದು ಸಾಮಾಜಿಕ, ಆರ್ಥಿಕ, ರಾಜಕೀಯ, ಲೌಕಿಕ-ಪಾರಮಾರ್ಥಿಕ ಯಾವುದೇ ಅರ್ಥದಲ್ಲಿಯಾಗಿರಲಿ. ಅದರ ಅನುಭವದ ಪರಿಪೂರ್ಣ ಲಾಭವನ್ನು ಸಮಾಜ ತನ್ನ ಬದಲಾವಣೆಗೆ ಕಾಲಾನುಕ್ರಮದಲ್ಲಿ ತೆಗೆದುಕೊಳ್ಳುತ್ತದೆ. ಬದುಕಿನ ಮೌಲ್ಯಕ್ಕೆ ಪರಿಕರಗಳು ಬದಲಾದರೂ ಸೃಷ್ಟಿ ನಿರ್ಮಾಣದ ಗಾಳಿ, ನೀರು, ಬೆಂಕಿ, ಬೆಳಕು ಇವುಗಳಲ್ಲಿ ಯಾವುದೇ ವ್ಯತ್ಯಯವಿಲ್ಲವಷ್ಟೇ. ಅದರಂತೆ ಮನುಷ್ಯನ ಜೀವನದಲ್ಲಿ ಅಶುದ್ಧವಾದ ವಿಚಾರ-ಆಚಾರಗಳ ಸಂತೆಯೇ ಏರ್ಪಟ್ಟಿರುತ್ತದೆ. ಇಹವೇ ಸತ್ಯವೆಂದು ತಿಳಿದುಕೊಂಡು ಪರದಿಂದ ದೂರವುಳಿದು ಬದುಕನ್ನು ಸಂಕುಚಿತಗೊಳಿಸಿಕೊಂಡು ಹುಳು-ಹುಪ್ಪಡಿಗಳಂತೆ ಹುಟ್ಟು-ಸಾವಿನ ಭವಚಕ್ರದಲ್ಲಿ ಗೊತ್ತು-ಗುರಿಯಿಲ್ಲದೆ ಬಂದು ಹೋಗುತ್ತೇವೆ. ಬುದ್ಧಿಯುಳ್ಳ ಪ್ರಾಣಿಯೆಂದು ಗರ್ವ ಪಡುವ ಮನುಷ್ಯನಿಗೆ ತನ್ನ ನಿಜವಾದ ಬದುಕಿನ ಬಗೆಗೆ, ತಾನು ಇಲ್ಲಿ ಬಂದಿರುವುದೇಕೆ ಎಂಬ ಅರಿವನ್ನು ಮೂಡಿಸುವ ಕೆಲಸವನ್ನು ತಮ್ಮ ಬದುಕು ಮತ್ತು ಬರಹಗಳ ಮೂಲಕ ಕ.ಬ.ಅಂಗಡಿಯವರು ತೋರಿದ್ದಾರೆ.

ವ್ಯಕ್ತಿಯೋರ್ವ ಸಮಾಜದ ಅಂಗ. ಸಮಾಜವು ರಾಷ್ಟ್ರದ ಒಂದು ಭಾಗ. ಕಾರಣ ವ್ಯಕ್ತಿಯ ಉನ್ನತಿಯು ಸಮಾಜಕ್ಕೂ, ಸಮಾಜದ ಅಭ್ಯುದಯಕ್ಕೂ, ದೇಶಕ್ಕೂ ಪರಸ್ಪರ ಪೂರಕ-ಪೋಷಕವಾದವುಗಳು. ಈ ಪೂರಕ ಪೋಷಕಗಳಿಗೆ ಅವಶ್ಯವಾದ ವೈಚಾರಿಕತೆಯನ್ನು 'ಅರಿವು' ಹುಟ್ಟು ಹಾಕುತ್ತದೆ. ಈ ಅರಿವಿನ ಮನಸ್ಥಿತಿಯನ್ನು ನೀಡುವುದೇ ಶಿಕ್ಷಣ. ಈ ಶಿಕ್ಷಣದ ಮಹತ್ವವನ್ನು ತಿಳಿದುಕೊಂಡ ಸಮಾಜದ ಹಲವಾರು ಮಹನೀಯರು, ಸಂಸ್ಕೃತ, ಕನ್ನಡ, ಮರಾಠಿ, ಹಿಂದಿ ಮತ್ತು ಇಂಗ್ಲೀಷ ಮುಂತಾದ ದೇಶ ವಿದೇಶಿಯ ಭಾಷೆಗಳನ್ನು ಕಲಿಯುವ ವ್ಯವಸ್ಥೆ ಮಾಡಿದರು. ಅದರ ಪರಿಪೂರ್ಣ ಲಾಭವನ್ನು ಪಡೆದು ತಮ್ಮೊಳಗೆ ಆತ್ಮವಿದ್ಯೆಯ ಅವಶ್ಯಕತೆಯನ್ನು ಮನಗಂಡರು. ಅದೇ ಸಮಯಕ್ಕೆ ಸರಿಯಾಗಿ ಅವರಿಗೆ ಶಿವಯೋಗ ಮಂದಿರದಲ್ಲಿ ಓದುವ ಮಹದವಕಾಶ ಸಿಕ್ಕಿತು. ಅಂಗಡಿಯವರ ಜೀವನ ಪಥದ ಬದಲಾವಣೆಯಾದುದು ಅವರು ಶಿವಯೋಗ



ಹುಕ್ಕೇರಿ ಬಾಳಪ್ಪನವರೊಂದಿಗೆ ಶ್ರೀ ಕ.ಬ.ಅಂಗಡಿಯವರು

ಮಂದಿರದಲ್ಲಿ ಶಿಕ್ಷಣ ಪಡೆದಿರುವುದೆ ಕಾರಣವಾಗಿದೆ. ಅವರ ಜೀವನದ ಗೊತ್ತು ಗುರಿಗಳಲ್ಲಿ ಶಿವಯೋಗ ಮಂದಿರದ ಗೊತ್ತು ಗುರಿಗಳನ್ನು ಕಾಣಬಹುದಾಗಿದೆ.

ಭಾರತೀಯ ಜನಾಂಗದ ಮನೋಭೂಮಿಯನ್ನು ಒಮ್ಮೆ ಅವಲೋಕಿಸಿದಾಗ ಅಲ್ಲಿ ಉತ್ಕೃಷ್ಟವಾದ ಬೆಳೆಯು ಕಂಡು ಬರುತ್ತದೆ. ಆಧ್ಯಾತ್ಮದ ಹಸಿರು ಅಲ್ಲಿ ಪಸರಿಸಿದೆ. ನಮ್ಮ ಮನೋಭೂಮಿ ಎಂದಿಗೂ ಬಾಲಿಶವಾಗಿ ರಚಿತವಾಗಿಲ್ಲ. ಹೀಗಾಗಿ ಈ ದೇಶದಲ್ಲಿ ಮುಸ್ಲಿಂಮರು, ಕ್ರೈಸ್ತರು ಧಾಳಿಕೋರರಾಗಿ ಬಂದರೂ ಅವರ ಧರ್ಮ ಮತ್ತು ಧಾರ್ಮಿಕ ನಿಲುವುಗಳು ಸಹಜವಾಗಿ ಭಾರತದಲ್ಲಿ ಉಳಿದುಕೊಂಡವು ಮತ್ತು ಭಾರತೀಯರಲ್ಲಿ ಬೆಸೆದುಕೊಂಡವು. ಈ ಎಲ್ಲವುಗಳನ್ನು ಒಪ್ಪಿಕೊಂಡ ಫಲಶೃತಿಯಾಗಿಯೇ ನಾವಿಂದು ಭಾರತವನ್ನು ಜಗತ್ತಿನ ದೊಡ್ಡ ಜಾತ್ಯಾತೀತ ರಾಷ್ಟವಾಗಿ ನೋಡುವುದು ಸಾಧ್ಯವಾಗಿದೆ. ಇಲ್ಲಿ ಗಮನಿಸಬೇಕಾದ ಅಂಶವೆಂದರೆ ಭಾರತೀಯ ಆಧ್ಯಾತ್ಮದ ನಿಲುವಿನಲ್ಲಿ ಪರಧರ್ಮ ಸಹಿಷ್ಣುವತೆಗೆ ನೀಡಿರುವ ಪ್ರಾಧಾನ್ಯ. ಇದರ ಅರ್ಥವನ್ನು ಸೂಕ್ಷ್ಮವಾಗಿ ಪರಕಿಸಿದಾಗ 'ದೇವನೊಬ್ಬ ನಾಮ ಹಲವು' ಎನ್ನುವ ಅಪ್ರತಿಮ ತಿಳುವಳಿಕೆ ನಮ್ಮ ಆಧ್ಯಾತ್ಮದ ತಳಹದಿಯಾಗಿರುವುದು ಕಂಡು ಬರುತ್ತದೆ. ಈ ತಿಳುವಳಿಕೆಯ ಮಟ್ಟ ಕಾಲದಿಂದ ಕಾಲಕ್ಕೆ ಸಡಿಲಗೊಳ್ಳುತ್ತಾ ಬಂದಾಗಲೆಲ್ಲ ದೇವರನ್ನು, ಧರ್ಮವನ್ನು ಮುಂದಿಟ್ಟುಕೊಂಡು ಜನಾಂಗಗಳಲ್ಲಿ ತಿಕ್ಕಾಟಗಳು ನಡೆದ ಉದಾಹರಣೆಗಳನ್ನು ಕಾಣಬಹುದು. ಇಲ್ಲಿ ಈ ವಿಷಯಗಳು ಪ್ರಸ್ತುವೆಕೆಂದರೆ ಈ ಅಪ್ರಬುದ್ಧ ತಿಳಿವಳಿಕೆಯ ತಿಕ್ಕಾಟವನ್ನು ಮತ್ತು ಧರ್ಮಗಳ ಹೆಸರಿನಲ್ಲಿ ನಡೆಯುವ ಸಾಮಾಜಿಕ ಶೋಷಣೆಯನ್ನು ೧೨ನೆಯ ಶತಮಾನದಲ್ಲಿ ಬಸವಾದಿ ಶರಣರು ತೀಕ್ಷ್ಣವಾಗಿ ವಿರೋಧಿಸಿದ ಫಲವಾಗಿ ಲಿಂಗಾಯತವೆಂಬ ಸಮಾಜದ ನಿರ್ಮಾಣವಾದದ್ದು. ವೀರಶೈವತ್ವದ ವಿಧಿ-ವಿಧಾನಗಳನ್ನು ಸರಳಗೊಳಿಸಿ ಅಂಗ-ಲಿಂಗದ ಬೆಸುಗೆಯನ್ನು ತಳಹದಿಯನ್ನಾಗಿ ಮಾಡಿ ವೈಚಾರಿಕ ಮತ್ತು ತಾತ್ವಿಕ ದೃಷ್ಟಿಕೋನದಿಂದ ಅದಕ್ಕೊಂದು ಪರಿಣಾಮಕಾರಿಯಾದ ಜೀವನ ಪಥವನ್ನು ತಂದು ಕೊಟ್ಟರು. ಆ ಜೀವನ ಪಥದ ರಥವನ್ನು ನೂರಾರು ಸಾತ್ವಿಕರು ಸಮರ್ಥ ರೀತಿಯಲ್ಲಿ ಎಳೆದು ಗುರಿಯ ಸಾಧನೆಯನ್ನು ಮಾಡಿದರು. ಅವರ ಸಾಲಿನಲ್ಲಿ ಇವರೂ ಕೂಡ ಸಲ್ಲುತ್ತಾರೆ. ಇಂತಹ 'ಸರ್ವರಿಗೂ ಸಮಬಾಳು ಸಮಪಾಲು' ಎನ್ನುವ ಶರಣರ ವಾಕ್ಯವನ್ನು ಪರಿಪಾಲಿಸಿದವರು ಅಂಗಡಿಯವರು. ಇಂದಿಗಿಂತಲೂ ಅವರ ಕಾಲಾವಧಿಯಲ್ಲಿ ಜಾತಿಯ ಬಗೆಗೆ ಕಠೋರ ನಿಲುವುಗಳಿದ್ದವು. ದಲಿತರನ್ನು, ಅನ್ಯ ಕೆಳವರ್ಗದ ಜನರನ್ನು ಕೆಟ್ಟ ರೀತಿಯಲ್ಲಿ ನಡೆಸಿಕೊಳ್ಳಲಾಗುತ್ತಿತ್ತು. ಆದರೆ ಅದೇ ಸಮಯದಲ್ಲಿ ಕ.ಬ.ಅಂಗಡಿಯವರ ನಿಲುವುಗಳು ಬಹಳ ವೈರುಧ್ಯವಾಗಿದ್ದವು. ಲಿಂಗ-ಜಾತಿ-ಮತ ಭೇದಗಳನ್ನು ಅವರು ಒಪ್ಪಲೇ ಇಲ್ಲ. ತಮ್ಮ



ಹಳ್ಳಿಕೇರಿ ಗುದ್ಲೆಪ್ಪನವರೊಂದಿಗೆ ಶ್ರೀ ಕ.ಬ.ಅಂಗಡಿಯವರು

ಮನೆಯಲ್ಲಿ ಅಂತಹ ಅದೆಷ್ಟೋ ಕುಟುಂಬಗಳಿಗೆ ಸಹಾಯವನ್ನೂ ಮಾಡಿದ್ದಾರೆ. ಮನೆಯಲ್ಲಿಟ್ಟುಕೊಂಡು ಶಿಕ್ಷಣವನ್ನೂ ನೀಡಿದ್ದಾರೆ. ಈ ಭಾವನೆಗಳು ದೇಶವನ್ನೂ ಸುಭೀಕ್ಷೆಯನ್ನಾಗಿ ಮಾಡುವಲ್ಲಿ ಮಹತ್ತರ ಕಾರ್ಯ ನಿರ್ವಹಿಸುತ್ತವೆ.

ಇವರು ಯಾವುದೇ ಶಾಸ್ತ್ರಜಾಲಕ್ಕೆ ಸಿಲುಕಿದವರಲ್ಲ ಮತ್ತು ಬೆರಗಾದವರಲ್ಲ. ಅನುಭಾವದ ಅಂತಃಸತ್ವವನ್ನು ಕ್ರಿಯೆಯಲ್ಲಿ ತಂದವರು. ಅವರ ದೃಷ್ಟಿಯಲ್ಲಿ ಅನುಭಾವವು ಸಂತೆಯ ಸುದ್ದಿಯಾಗಿರಲಿಲ್ಲ, ಬೀದಿಯ ಪಸಾರವಾಗಿರಲಿಲ್ಲ, ಕಂಡ ಕಂಡಲ್ಲಿ ಗೋಷ್ಠಿಯಾಗಿಸುವ ನಿಂದಲ್ಲಿಯೆ ಅನುಭಾವ, ಎನ್ನುವ ಬಂದ ಬಂದಲ್ಲಿಯೆ ಪ್ರಸಂಗ ಮಾಡುವವರನ್ನು ನಂಬುತ್ತಿರಲಿಲ್ಲ. ಅನುಭಾವವೆಂಬ ನೆಲದ ಮರೆಯ ನಿಧಾನವನ್ನು ಕಂಡು ಹಿಡಿದ ಜ್ಞಾನಿಗಳಾಗಿದ್ದರು. ಅನುಭಾವದ ಪರಮಾನಂದವನ್ನು ಅನುಭವಿಸಿ, ಆಸ್ವಾದಿಸಿ, ಸಮಾಜದ ಹಿತ-ಚಿಂತನೆಗೆ ಅದನ್ನು ಬಳಸಿಕೊಂಡರು.

“ಅನುಭಾವದನುವಿನಲ್ಲಿ ಗುಹೇಶ್ವರಾ  
ನಿಮ್ಮ ಶರಣ ಅನುಪಮಸುಖಿ”

ಎಂದು ಪ್ರಭುದೇವರು ಹೇಳಿರುವಂತೆ ಅಂಗಡಿಯವರು ಅನುಭಾವದನುವಿನಲ್ಲಿ ಅನುಪಮ ಸುಖಿಗಳಾಗಿದ್ದರು.

## ೩.೨ ಪ್ರಜ್ಞೆ-ಅರಿವು :

ಪ್ರಜ್ಞೆ-ಅರಿವು ಇವು ಅರ್ಥಗಳಲ್ಲಿ ಮುಖಾಮುಖಿಯಾಗುವ ಶಬ್ದಗಳು. ಇವೆರಡು ಶಬ್ದಗಳಿಂದ ಹೊರಹೊಮ್ಮುವ ಅರ್ಥ ಜೀವನದಲ್ಲಿ ವ್ಯತಿರಿಕ್ತವಾಗಿದ್ದಲ್ಲಿ ಆ ಬದುಕನ್ನು ಮನುಷ್ಯ ಗೆಲ್ಲುವುದಕ್ಕೆ ಸಾಧ್ಯವಿಲ್ಲ. ಕೆಲವೊಮ್ಮೆ ಪ್ರಜ್ಞೆಯಿದ್ದರೂ ಅರಿವಿನ ಕೊರತೆಯಿಂದ ಮನುಷ್ಯ ಬಳಲುತ್ತಾನೆ. ಈ ಅರಿವಿನ ಕೊರತೆಯನ್ನು ನಾವು ಅನುಭವ ಮತ್ತು ಅನುಭಾವದಿಂದ ನೀಗಿಸಬಹುದು. ಬದುಕಿನ ಸೋಲು-ಗೆಲುವುಗಳನ್ನು, ಏರು-ಇಳುವುಗಳನ್ನು ಸಮಚಿತ್ತದಿಂದ ಸ್ವೀಕರಿಸುವ ಹಂತ ಅರಿವಿನ ಹಂತವಾಗುತ್ತದೆ. ಆ ಸೋಲು-ಗೆಲುವುಗಳಿಗೆ, ಏರು-ಇಳುವುಗಳಿಗೆ ಬೇಕಾಗುವ ಕಾರ್ಯ ತತ್ಪರತೆಯನ್ನು ತಮ್ಮೊಳಗೆ ತಂದುಕೊಂಡು ತಮ್ಮ ಪ್ರಜ್ಞೆಯ ಹರವನ್ನು ವಿಸ್ತರಿಸಿಕೊಂಡರು.



ಪ್ರಭಾವ ಬೀರಿದ ಶ್ರೀ ಮೃತ್ಯುಂಜಯಪ್ಪಗಳು

“ಶರಣರನ್ನು ಅರ್ಥೈಸಿಕೊಳ್ಳಲು ಅವರ ಬೆಳಕಿನ ಮಾರ್ಗದಲ್ಲಿ ಸಾಗುವುದು ಅಗತ್ಯವಾದುದು. ಎಂಟುನೂರು ವರ್ಷಗಳ ಕನ್ನಡ ಸಂಸ್ಕೃತಿಗೆ ಹೊಸ ಮಾರ್ಗವನ್ನು ನೀಡುತ್ತ ಬಂದುದು 'ಶರಣಪ್ರಜ್ಞೆ'. 'ಶರಣರ' ಪ್ರಜ್ಞೆಯೊಂದಿಗೆ ಶರಣರನ್ನು ಅರ್ಥೈಸಿಕೊಳ್ಳುವ ಪ್ರಜ್ಞೆಯ ಹರವನ್ನು ಹೊಂದಬೇಕಾಗುವುದು.”[೪] ಈ ನುಡಿಗಳನ್ನು ನಾವು ಅವಲೋಕಿಸಿದಾಗ ನಿಜವಾಗಿಯೂ ಇಂದು ನಾವು ಮಾಡಬೇಕಾಗಿರುವುದು ಶರಣರನ್ನು ಅವರ ಧಾರ್ಮಿಕ ನಿಲುವಿನಿಂದಾಚೆಯೂ ವಿಮರ್ಶಿಸಿಬೇಕಾಗುತ್ತದೆ. ಏಕೆಂದರೆ ಶರಣರು ಕಟ್ಟಿದ ಸಮಾಜ ಧಾರ್ಮಿಕ ಪರಿಧಿಯನ್ನು ಮೀರಿ ನಿಂತಂತಹುದು. ಅದಕ್ಕೆ ಅದನ್ನು ನಾವು 'ಅರಿವಿ'ನ, 'ಪ್ರಜ್ಞೆ'ಯ ದೃಷ್ಟಿಯನ್ನು ನೀಡಿದ್ದೇವೆ. ಇವರ ಬದುಕನ್ನು ಆ ದೃಷ್ಟಿಯಿಂದ ನೋಡಿದಾಗ ನಮಗೆ ಕಾಣಸಿಗುವುದು ಅವರಲ್ಲಿದ್ದ ಅರಿವು, ಜಾಗೃತ ಮನಸ್ಸು. ಇಂದಿನ ಸಮತಾವಾದದ ದಿನಗಳಲ್ಲಿ ಸಮಾನತೆಯ ವ್ಯಾಖ್ಯಾನ ಹೇಗಿದೆಯೆಂದರೆ ಮಡಿಬಟ್ಟೆಯೊಂದಿಗೆ ಮೈಲಿಗೆಯನ್ನು ಮಡಿ ಮಾಡದೆ ಸೇರಿಸುವಂತೆ, ಅಸ್ಪೃಶ್ಯರಲ್ಲಿರುವ ಅಸ್ಪೃಶ್ಯತೆಯನ್ನು ಬಿಡಿಸದೆ ಎಲ್ಲರನ್ನೂ ಒಂದುಗೂಡಿಸಿದಾಗ ಒಕ್ಕಟ್ಟು, ಸಮಾನತೆ ಸಿಗುತ್ತದೆ ಎನ್ನುವುದು. ಆದರೆ ಈ ವ್ಯಾಖ್ಯಾನ ಅಂಗಡಿಯವರಿಗೆ ಬೇಕಾಗಿದ್ದಿಲ್ಲ. ಅವರಿಗೆ ಬೇಕಾಗಿದ್ದು ಅಸ್ಪೃಶ್ಯ ಜನಜೀವನದ ರೀತಿ ನೀತಿಗಳನ್ನು, ಅವರ ಆಧ್ಯಾತ್ಮ ಮಟ್ಟವನ್ನು ಉತ್ತಮಪಡಿಸಿ ಅಸಮಾನತೆಯನ್ನು ಯಾರಲ್ಲಿಯೂ ಯಾವುದೇ ಕಾರಣಗಳಿಗೂ ಕಾಣದಂತೆ ಮಾಡುವುದು ಮೂಲ ಉದ್ದೇಶವಾಗಿತ್ತು ಮತ್ತು ಚಿಂತನೆಯಾಗಿತ್ತು. ಈ ವಿಷಯಕ್ಕೆ ತಕ್ಕ ಹಲವಾರು ಸಂದರ್ಭಗಳೂ ಇವರ ಬದುಕಿನಲ್ಲಿ ಸಿಗುತ್ತವೆ. ಯಾವ ಸಮಾಜದಲ್ಲಿ ತಾತ್ವಿಕವಾಗಿ ಎಲ್ಲ ರೀತಿಯಲ್ಲೂ ಸಮಾನತೆ ಕಂಡುಬಂದಾಗ ತಾರತಮ್ಯವಿಲ್ಲದ ಆ ಸಮಾಜ ತಾನಾಗಿಯೇ ಒಕ್ಕಟ್ಟಿನಿಂದ ಬದುಕುತ್ತದೆ. ಅಲ್ಲಿ ಸಮಾನತೆಯೆನ್ನು ಕಾಣಲು ಸಾಧ್ಯವಾಗುತ್ತದೆ. ಈ ರೀತಿಯ ಸಮಾನತೆ ಬಹುಕಾಲ ಬಾಳುತ್ತದೆ ಮತ್ತು ಬದುಕುತ್ತದೆ ಎನ್ನುವುದು ಅವರ ಅರಿವಾಗಿತ್ತು. ಇದು ಬಸವಾದಿ ಶರಣರ ನಿಲುವುಗಳಲ್ಲಿ ಒಂದು. ಮತ್ತು ಅದನ್ನು ಅವರು ತಮ್ಮ ಗ್ರಾಮ ಮೆಣಸಗಿಯಲ್ಲಿ ಮತ್ತು ಸ್ವತಃ ತಮ್ಮ ಮನೆಯಲ್ಲಿ ಪ್ರಯೋಗಕ್ಕೆ ಒಳಪಡಿಸಿದರು. ಮೆಣಸಗಿಯಲ್ಲಿ ಎಲ್ಲ ಜಾತಿ, ಧರ್ಮಗಳನ್ನು ಒಗ್ಗೂಡಿಸಿ ಎಲ್ಲ ಕಾರ್ಯಕ್ರಮಗಳನ್ನು ನಡೆಸುತ್ತಿದ್ದರು. ತಮ್ಮ ಮನೆಯಲ್ಲಿಯೂ ಮೇಲು-ಕೀಳುಗಳ ಬೇರನ್ನು ಕಿತ್ತೊಗೆದರು. ಎಲ್ಲರನ್ನೂ ಸಮಭಾವ ಸಮಚಿತ್ತಗಳಿಂದ ನೋಡುವುದನ್ನು ರೂಢಿಸಿಕೊಂಡರು. ಈ ಎಲ್ಲ ಪ್ರಕ್ರಿಯೆಗಳು ಅವರಲ್ಲಿದ್ದ ಸಾಮಾಜಿಕ 'ಪ್ರಜ್ಞೆ'ಯನ್ನು ಅಂತರಾತ್ಮದ 'ಅರಿವ'ನ್ನು ಎತ್ತಿ ತೋರಿಸುತ್ತವೆ. “ಅರಿವನ್ನು ಆಚರಣೆಯಲ್ಲಿ ತಂದವರನ್ನು ಮಾತ್ರ ಆಚಾರವಂತರೆನ್ನುತ್ತೇವೆ.



ಪ್ರಭಾವ ಬೀರಿದ ಮಹಾಂತಪ್ಪಗಳು

ಅಂಥವರೇ ಅನುಭವಿಗಳು ಮತ್ತು ಶಿವಾನುಭಾವಿಗಳು."[೫] ಈ ಅರಿವು-ಆಚರಣೆಯನ್ನು ಇವರ ಕೃತಿಗಳಲ್ಲಿ ಮತ್ತು ಜೀವನದಲ್ಲಿ ಕಾಣುತ್ತೇವೆ.

ಇವರಲ್ಲಿ ಅರಿವು-ಪ್ರಜ್ಞೆಯ ಮಟ್ಟ ಹೇಗಿತ್ತೆಂದರೆ ಇನ್ನೊಬ್ಬರನ್ನು ತಿದ್ದುವ ಬದಲು ಅಥವಾ ತಿದ್ದುವ ಮೊದಲು ತನ್ನ ನ್ಯೂನ್ಯತೆಗಳನ್ನು ತಾನು ಅರ್ಥೈಸಿಕೊಂಡು, ಸರಿಪಡಿಸಿಕೊಂಡು ಬದುಕಬೇಕೆನ್ನುವುದು ಅವರ ನಿಲುವಾಗಿತ್ತು. ಇದನ್ನೇ ಸಮಾಜ ಶಾಸ್ತ್ರದಲ್ಲಿ "ಉದ್ಧರೇತ್ ಆತ್ಮನಾತ್ಮನಾಂ" ಎಂಬ ಅನುಭಾವದಡಿಯಲ್ಲಿ ಕಾಣಬಹುದು. ಈ ರೀತಿಯ ಚಿಂತನೆಗಳು ಸಾರ್ವಕಾಲೀಕ 'ಶಿಕ್ಷಣ-ಬೋಧನೆ', ಧಾರ್ಮಿಕ ಸಾಧನೆಯನ್ನು ನೀಡಿ ಪ್ರತಿಯೊಬ್ಬನನ್ನು 'ಅರಿವಿ'ನ ಮಾರ್ಗದತ್ತ ಕರೆದೊಯ್ಯುತ್ತವೆ. ಹೀಗಾದಾಗ ಸಮಾಜಕ್ಕೆ ಸ್ವಯಂ ಸಾತ್ವಿಕ ವ್ಯಕ್ತಿಯೊರ್ವನನ್ನು ಕೊಡುಗೆಯಾಗಿ ನೀಡಿದ ಅನಂತಾನಂದವು ಪ್ರಾಪ್ತವಾಗುವುದು. ಇದುವೇ ವಿದ್ಯೆ ಅಥವಾ ಶಿಕ್ಷಣ! ಸಾಧನೆ ಅಥವಾ ಬೋಧನೆ. ಶಿಕ್ಷಣ ಕ್ಷೇತ್ರವನ್ನು ಈ ಅರಿವು ಮತ್ತು ಪ್ರಜ್ಞೆಯನ್ನು ಮೂಡಿಸುವುದಕ್ಕೆ ಅವರು ಮಾಧ್ಯಮವನ್ನಾಗಿಸಿಕೊಂಡರು. ಶಿಕ್ಷಕರಾಗಿ ತಮ್ಮ ಶಿಷ್ಯ-ಸಂಪದವನ್ನು ಸಂಪದ್ಭರಿತವಾಗಿಸಲು ಪ್ರಯತ್ನಿಸಿದರು. ಮಹಿಳೆ ಮತ್ತು ಮಕ್ಕಳಲ್ಲಿ ಸಾಮಾಜಿಕ ಪ್ರಜ್ಞೆಯನ್ನು, ಮಾನಸಿಕ ವಿಕಾಸವನ್ನು ಬೆಳೆಸಿದರು. ಅವರ ಅನೇಕ ಕೃತಿಗಳಲ್ಲಿ ಶಿವಶರಣೆಯರ, ವೀರವನಿತೆಯರ ಕುರಿತು ಹೆಚ್ಚು ಒತ್ತನ್ನು ನೀಡಲಾಗಿದೆ. ಇದಕ್ಕೆ ಅವರ 'ಮುತ್ತೈದೆಯರೈವರು', 'ಅಕ್ಕನ ಚರಿತ್ರೆ', 'ಕಿತ್ತೂರ ರಾಣಿ ಚೆನ್ನಮ್ಮ', 'ಬೆಳವಡಿ ಮಲ್ಲಮ್ಮ', 'ಚೆನ್ನಮ್ಮನ ದಂಡೆ' ಕುರಿತ ಚಿಂತನೆಗಳು, ಪಠ್ಯ ಪುಸ್ತಕಗಳು, ಕಿರು ಗ್ರಂಥಗಳು ನಿದರ್ಶನವಾಗಿವೆ. ಇವರ ಕೃತಿಗಳಲ್ಲಿ ನೀಲಲೋಚನೆಯನ್ನು ಮತ್ತು ಮಲ್ಲಿಗಮ್ಮನನ್ನು ಕುರಿತು ಹೆಚ್ಚಿನ ಚಿಂತನೆಗಳನ್ನು ಕಾಣಬಹುದು. ಆ ಚಿಂತನೆಗಳಲ್ಲಿ ಅವರಿಬ್ಬರಲ್ಲಿ ಇದ್ದ ಸಾಮಾಜಿಕ, ಧಾರ್ಮಿಕ ಮತ್ತು ಸಾಂಸಾರಿಕ ಪ್ರಜ್ಞೆಯನ್ನು ಗುರುತಿಸಿದ್ದಾರೆ. ಬಸವಣ್ಣನವರ ವಿಚಾರ ಪತ್ನಿಯಾಗಿ ನೀಲಲೋಚನೆಯ ಮತ್ತು ಮಡಿವಾಳ ಮಾಚಿತಂದೆಯ ಆಚಾರ ಪತ್ನಿಯಾಗಿ ಮಲ್ಲಿಗಮ್ಮನ ವ್ಯಕ್ತಿತ್ವಗಳು ಅನಾವರಣಗೊಂಡಿವೆ. ಈ ವಿಚಾರಗಳನ್ನು ನೋಡಿದಾಗ ಅಂಗಡಿಯವರು ಸಾಮಾಜಿಕ ಬದ್ಧತೆಯಲ್ಲಿ ಸ್ತ್ರೀಯರನ್ನು ನೋಡಿದ ಮತ್ತು ಸ್ತ್ರೀಯರಿಗೆ ನೀಡಿದ ಪ್ರಾಮುಖ್ಯತೆಯನ್ನು ಗುರುತಿಸಬಹುದಾಗಿದೆ.

ಅವರ 'ಅರಿವಿ'ನ ಮತ್ತೊಂದು ದರ್ಶನ ನಮಗಾಗುವುದು ಅವರು ಮಕ್ಕಳ ಸರ್ವತೋಮುಖ ಬೆಳವಣಿಗೆಗೆ ನೀಡಿದ ಪ್ರಾಮುಖ್ಯತೆಯಲ್ಲಿ. ಯಾವ ಶಿಕ್ಷಣಕ್ಕೆ ಸರ್ವ ಕಾಲದಲ್ಲೂ ಮನ್ನಣೆ ದೊರಕಿದೆಯೊ ಆ ಶಿಕ್ಷಣ ಬದುಕನ್ನು ಕಟ್ಟಿಕೊಡುವ

ಸಾಧನವಾಗಬೇಕು. ಅದು ಬರೀ ಜೀವನೋಪಾಯದ ದಾರಿಯಾಗಬಾರದು ಎನ್ನುವುದು ಅವರ ಆಶಯವಾಗಿತ್ತು. ಈ ದಿಸೆಯಲ್ಲಿ ಅವರ ಬರವಣಿಗೆಯೂ ಕೂಡ ಸಾಗಿತು ಅವರ ಬದುಕು ಕೂಡ ಮುನ್ನಡೆಯಿತು. ಅವರು ಶಿಕ್ಷಣದ ಮೂಲಕ ಅರಿವನ್ನು ಮೂಡಿಸಿ, ಮೂಢ ನಂಬಿಕೆಗಳನ್ನು ತೊಡೆದು ಹಾಕುವುದನ್ನು ಬಯಸಿದರು. ಹೊಸ ಚಿಂತನೆಗೆ ಸಮಾಜದಲ್ಲಿ ದಾರಿ ಮಾಡಿಕೊಟ್ಟರು. ೧೨ನೆಯ ಶತಮಾನದ ಈ ಕಾರ್ಯವನ್ನು ೨೦ನೆಯ ಶತಮಾನದಲ್ಲೂ ಮುನ್ನಡೆಸುವ ಮತ್ತು ಅದರ ಮಹಾತ್ವಾಂಕಾಂಕ್ಷೆಯನ್ನು ವಿಸ್ತರಿಸುವ ಕಾರ್ಯ ಇವರಿಂದ ನಡೆಯಿತು.

ಅರಿವು ನಮಗೆ ಸದುವಿನಯವನ್ನು ತಂದು ಕೊಡುತ್ತದೆ. ಅದು ನಮ್ಮನ್ನು ಪ್ರಬುದ್ಧರನ್ನಾಗಿಸುತ್ತದೆ ಎಂದು ಬಾಳಿನುದ್ದಕ್ಕೂ ನಂಬಿಕೊಂಡು ಬಂದ ಇವರು ವಿನಯವನ್ನು ತಮ್ಮ ಬಾಳಿನ ರೂಪಕವನ್ನಾಗಿಸಿಕೊಂಡರು. ಅವರ ಬಾಯಿಯಿಂದ ಕೆಟ್ಟದಾದ ನುಡಿ-ಶಬ್ದಗಳು ಅಚಾತುರ್ಯವಾಗಿಯೂ ಕೂಡ ಬರುತ್ತಿರಲಿಲ್ಲ. ಬಸವಾದಿ ಶಿವಶರಣರೆಂದಂತೆ 'ತನಗಿಂತ ಕಿರಿಯರಿಲ್ಲ, ಶಿವ ಭಕ್ತರಿಗಿಂತ ಹಿರಿಯರಿಲ್ಲ' ಎಂಬ ನುಡಿ-ವಚನದ ನಡೆಯನ್ನು ಅನುಕರಿಸಿದರು. ಈ ಎಲ್ಲ ಗುಣ-ಧರ್ಮಗಳಿಗೆ ಮೆಟ್ಟಿದ ಮಣ್ಣಿನ ಸಂಸ್ಕಾರವೇ ಕಾರಣವೆನ್ನಬದುಹು. ಇನ್ನೊಂದು ರೀತಿಯಲ್ಲಿ ಅದು ಸುತ್ತಣದ ಪರಿಸರವೆಂದರೆ ತಪ್ಪಾಗಲಾರದು.

## ೩.೩ ಆಚಾರ-ವಿಚಾರ-ಸದಾಚಾರ-ಶೀಲಾಚಾರ :

ಆಚಾರಃ ಪ್ರಥಮೋ ಧರ್ಮ; ಆಚಾರಃ ಪರಮ ತಪಃ

ಆಚಾರಃ ಪರಮಂ ಜ್ಞಾನಂ ಆಚಾರಾತ್ಕಿಂನ ಸಾಧ್ಯತೆ !

ಕ.ಬ.ಅಂಗಡಿಯವರು ಹೇಳುವಂತೆ ಧರ್ಮ-ತಪಸ್ಸು-ಜ್ಞಾನಗಳು ಫಲಿಸಬೇಕಾದರೆ ಮುಖ್ಯವಾಗಿ ಸದಾಚಾರವು ಬೇಕು. ಕಾಮಿಕ, ವಾಚಿಕ ಮತ್ತು ಮಾನಸಿಕ ಶುಚಿತ್ವವೇ ಸದಾಚಾರವು. ಈ ಸದಾಚಾರಗಳಲ್ಲಿ ತಮ್ಮ ಅಚಲ ನಿಷ್ಠೆಯನ್ನು ಉಳ್ಳವರಾಗಿದ್ದರು. ಈ ಸದಾಚಾರಕ್ಕೆ ಸಾಧನವಾಗಿ ಶಿವಯೋಗವನ್ನು ಬಳಸಿಕೊಂಡರು. ತಮ್ಮ ಚಿತ್ತವೃತ್ತಿಗಳನ್ನು ಆ ಮೂಲಕ ತಮ್ಮ ಹಿಡಿತದಲ್ಲಿಟ್ಟುಕೊಂಡರು. ಆ ಮುಖೇನ ತಮ್ಮ ಮನಸ್ಸಿನ ನಿಶ್ಚಲತೆಯನ್ನು ಸದಾ ಕಾಯ್ದುಕೊಂಡರು. ಹಾನಗಲ್ಲ ಕುಮಾರ ಶಿವಯೋಗಿಗಳನ್ನು ತಮ್ಮ ಲೌಕಿಕ ಮತ್ತು

ಪಾರಮಾರ್ಥಿಕ ಗುರುವನ್ನಾಗಿ ಸ್ವೀಕರಿಸಿದ ಅಂಗಡಿಯವರು ಅವರ ಕೆಲವು ಶೀಲಾಚರಣೆಗಳನ್ನು ತಮ್ಮ ಜೀವನದಲ್ಲಿ ಅಳವಡಿಸಿಕೊಂಡರು.

ಇವರದು ಕ.ಬ.ಅಂಗಡಿಯವರದು ನಡೆ-ನುಡಿಗಳ ಸಮನ್ವಯದ ಬದುಕು. ನಡೆ-ನುಡಿಗಳ ಸಮನ್ವಯದಲ್ಲಿ ಅವರ ಆಚಾರವನ್ನು, ವಿಚಾರವನ್ನು, ಸದಾಚಾರವನ್ನು, ಶೀಲಾಚಾರವನ್ನು ವಿವೇಚಿಸಬೇಕಾಗುತ್ತದೆ. ಈ ನಡೆ ಮತ್ತು ನುಡಿಗಳ ಬೆಸುಗೆ ಇದ್ದಲ್ಲಿ ನಡೆಗೂ ಮತ್ತು ನುಡಿಗೂ ಮಹತ್ವ ದೊರೆತಂತಾಗುತ್ತದೆ. ಇವೆರಡೂ ಒಂದನ್ನೊಂದು ಅವಲಂಬಿಸದೆ ಹೋದರೆ ನಡೆ ಮತ್ತು ನುಡಿಗಳೆರಡಕ್ಕೂ ಸ್ವತಂತ್ರ ವ್ಯಕ್ತಿತ್ವ ಲಭಿಸುವುದು ಸಾಧ್ಯವಿಲ್ಲ. ಇವೆರಡರಲ್ಲಿ ಹೊಂದಾಣಿಕೆ ಅಳವಟ್ಟಾಗ ಆ ಕ್ರಿಯೆಗೆ ಮೌಲ್ಯವೊಂದು ಲಭಿಸುವುದು. ಆ ಮೌಲ್ಯಕ್ಕೆ ಹೊಂದಿಕೊಂಡು ಆಚಾರ, ವಿಚಾರ, ಸದಾಚಾರ ಮತ್ತು ಶೀಲಾಚಾರಗಳು ಕೂಡ ಮೌಲ್ಯಯುಕ್ತವಾಗುತ್ತವೆ. ಆ ಜೀವನಕ್ಕೆ ಕಳೆಗುಂದಲಾರದ ಬೆಲೆ ಬರುತ್ತದೆ. ನಾವು ಬಸವಾದಿ ಶರಣರಲ್ಲಿ ಈ ನೆಲೆ-ಬೆಲೆಗಳನ್ನು ಕಾಣುತ್ತೇವೆ. ಅದೇ ನೆಲೆ-ಬೆಲೆಯನ್ನು ಅಂಗಡಿಯವರಲ್ಲಿಯೂ ಕಾಣುತ್ತೇವೆ.

ಶೀಲ ಇದು ಶುಚಿ ಎಂಬ ಅರ್ಥವನ್ನು ಅರ್ಥೈಸುವ ಪದ. ಶೀಲವೆಂಬ ಪದ ಕೇವಲ ಬಾಹ್ಯ ಶುಚಿತ್ವವನ್ನು ಸೂಚಿಸುವ ಪದವಲ್ಲ. ನಮ್ಮ ಅಂತರಂಗದ ಶುಚಿತ್ವವನ್ನು ಸೂಚ್ಯವಾಗಿ ತೋರ್ಪಡಿಸುವ ಪದವಾಗಿದೆ. ಈ ಅಂತರಂಗದ ಶುಚಿತ್ವ ಮನ-ಮೈ-ಮಾತುಗಳನ್ನು ಪ್ರತಿನಿಧಿಸುತ್ತದೆ. ತ್ರಿಕರಣಗಳಾದ ತನು-ಮನ-ಧನ ಇವುಗಳ ಅನುಭೂತಿ. ಪಂಚವಿಧ ಜ್ಞಾನೇಂದ್ರಿಯಗಳಾದ ಕಣ್ಣು, ಮೂಗು, ಕಿವಿ, ನಾಲಗೆ, ಮತ್ತು ತ್ವಚೆ ಇವುಗಳೊಟ್ಟಿಗೆ ಆದಾಗಲೂ ಅಲ್ಲಿ ಶುಚಿತ್ವ ಹೊಂದುವ ಅವಶ್ಯಕತೆ ಇದೆ. ಅಂದಾಗಲೇ ಮಾತ್ರ ಶೀಲವೆಂಬ ಆಚಾರ ಕ್ರಿಯಾತ್ಮಕವಾಗಲು ಸಾಧ್ಯ. ಪ್ರವೃತ್ತಿಯಿಂದ ನಿವೃತ್ತಿಯಾಗಿ ಸದ್ವೃತ್ತಿಗಳಿಂದಿರುವುದೇ ಸಂಪೂರ್ಣ ಶೀಲ. ಶೀಲದ ಈ ಎಲ್ಲ ಅರ್ಥಗಳನ್ನು ಅರಿತು ಆಚರಣೆಯಲ್ಲಿ ತರುವುದೆ ಶೀಲಾಚರಣೆ. ಈ ಶೀಲಾಚರಣೆಯನ್ನು ತಮ್ಮ ಬದುಕಿನಲ್ಲಿ ಮತ್ತು ಬರಹದಲ್ಲಿ ಸಾಧನೆ ಮತ್ತು ಭೋದನೆಯ ಮೂಲಕ ಆಚರಿಸಿದವರು ಕ.ಬ.ಅಂಗಡಿಯವರು. ಸಾಧಕನಿಗೆ ಮೊದಲು ಮುಖ್ಯವಾಗಿ ಬೇಕಾಗುವುದು ಆರೋಗ್ಯಭಾಗ್ಯ ಮತ್ತು ಶಾಂತಿ ಸಹಜ ಸಂತೃಪ್ತಿ. ಇವೆರಡರ ಮೂಲಕವೇ ಸಾಧ್ಯವಾಗುವುದು ಆತ್ಮಸಾಕ್ಷಾತ್ಕಾರ. ಆರೋಗ್ಯವನ್ನು ಸಂಪತ್ತಿನಂತೆ ಕಾಯ್ದುಕೊಳ್ಳಲು ಇವರಿಗೆ ಸಾಧ್ಯವಾದದ್ದು ಈ ಶೀಲಾಚರಣೆಗಳಿಂದಲೇ. ಇದರಿಂದಲೇ ಅವರು ಶೀಲವೆಂದರೇನು? ಶೀಲದ ಅಮೂಲಾಗ್ರವೇನು? ಶೀಲದಿಂದಾಗುವ ಪ್ರಯೋಜನಗಳೇನು? ಶೀಲ ತಪ್ಪಿ ಬಾಳಿದರೆ

ಆಗುವ ಅಪಾಯವೇನು? ಎನ್ನುವ ಪ್ರಶ್ನೆಗಳಿಗೆ ತಮ್ಮ ಬದುಕು- ಬರಹಗಳಿಂದಲೇ ಉತ್ತರಿಸುತ್ತಾರೆ. ಈ ವಿಶಿಷ್ಟ ಕಾರಣಕ್ಕಾಗಿಯೇ ಇವರು ವಿಭಿನ್ನವಾಗಿ ನಿಲ್ಲುತ್ತಾರೆ. ನುಡಿದಂತೆ ನಡೆಯುವುದು ನಡೆದಂತೆ ನುಡಿಯುವುದು ಸರಳವಾಗಿ ಕಂಡರೂ ಅದನ್ನು ಆಚರಣೆಗೆ ತರುವುದು ಸುಲಭಸಾಧ್ಯವಲ್ಲ. ಅದು ಆಚರಣೆಗೆ ಬರಬೇಕಾದಲ್ಲಿ ಆ ಬದುಕಿನ ನೈತಿಕ ಮಟ್ಟ ಉಚ್ಚದ್ದಾಗಿರಬೇಕು. ಹೀಗಾಗಿ ಸಕಲರನ್ನು 'ಶರಣ' ಎಂದು ಸಂಭೋದಿಸಲು ಬರುವುದಿಲ್ಲ. ಹಾಗೆ ಸಂಭೋದಿಸಬಾರದು ಕೂಡ.

ತಮ್ಮ ಜೀವನ ಶೈಲಿಯಲ್ಲಿ ಈ ಎಲ್ಲ ಅರಿವಿನ ಹಿನ್ನೆಲೆಯಲ್ಲಿ ತಮಗೆ ಸಾಧ್ಯವಾದಷ್ಟು ಸ್ವಚ್ಛ ಮತ್ತು ಸಾತ್ವಿಕ ಪಡಿ ಪದಾರ್ಥದ ಬಳಕೆಯಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದರು. ತಾವು ಹಲ್ಲುಜ್ಜಲು ಬೇವು-ಮಾವಿನ ಕಡ್ಡಿಗಳು ಯೋಗ್ಯವೆಂದು ಪರಿಗಣಿಸಿ ಅವುಗಳನ್ನೇ ಬಳಸುತ್ತಿದ್ದರು. ಸ್ನಾನಕ್ಕಾಗಿ ಉಗುರು ಬೆಚ್ಚಗಿನ ನೀರನ್ನು ಬಳಸುತ್ತಿದ್ದರು. ಪ್ರತಿ ದಿನದ ಸ್ನಾನ ಉಷ್ಣಾದಿ ವಿಕಾರಗಳನ್ನು ದೂರ ಮಾಡುತ್ತವೆ ಎಂಬುದನ್ನು ಮತ್ತು ಆ ಸ್ನಾನ ಬೆಳಗಿನ ಜಾವದಲ್ಲಿಯೇ ಮಾಡುವುದರಿಂದ ದೇಹದ ಜಡತೆಯು ನಿವಾರಣೆಯಾಗುತ್ತದೆ ಎಂಬುದನ್ನು ತಾವೇ ಸ್ವತಃ ಪ್ರಯೋಗಿಸಿ ಕಂಡುಕೊಂಡಿದ್ದರು. ಅವರು ರಾಜಸ ಮತ್ತು ತಾಮಸ ಆಹಾರಗಳನ್ನು ಎಂದೂ ತೆಗೆದುಕೊಳ್ಳುತ್ತಿರಲಿಲ್ಲ. ಸಾತ್ವಿಕ ಆಹಾರವು ಅವರ ಜೀವನ ಪದ್ಧತಿಯಾಗಿತ್ತು. ಸಾತ್ವಿಕ ಆಹಾರದಲ್ಲಿಯೂ ಸಹ ಮಿತಿಯನ್ನು ಮೀರದ ಅವರು ಬೆಳಗಿನ ಜಾವದಲ್ಲಿ ಎದ್ದು ಸ್ನಾನ, ಪೂಜೆಗಳನ್ನು ಮುಗಿಸಿ, ಒಂದು ಲೋಟ ಬಿಸಿಯಾದ ಹಾಲನ್ನು ಕುಡಿದು ತೋಂಟದಾರ್ಯ ಮಠದಲ್ಲಿ ನಡೆಯುವ ಶಿವಾನುಭಕ್ಕೆ ಹೋಗುವುದು ಅವರ ದಿನಚರಿ. ತದ ನಂತರ ಅಲ್ಲಿಂದ ಬಂದು ಬಿಸಿಯಾದ ಎರಡು ರೊಟ್ಟಿ ಮತ್ತು ಕಿರಕಸಾಲಿಯ ಪಲ್ಯೆ ಅವರ ಬೆಳಗಿನ ಉಪಹಾರವಾಗಿತ್ತು. ಮದ್ಯಾಹ್ನದಲ್ಲಿ ಬಿಸಿಯಾದ ಒಂದು ರೊಟ್ಟಿ ಮತ್ತು ಅನ್ನ ತಿಳಿಸಾರು. ರಾತ್ರಿಯ ಸಮಯದಲ್ಲಿ ಒಂದು ಲೋಟ ಹಾಲು ಮತ್ತು ಎರಡು ಬಾಳೆಯ ಹಣ್ಣುಗಳು. ಆ ಬಾಳೆಯ ಹಣ್ಣುಗಳಲ್ಲಿ ಒಂದು ಅವರ ಮೊಮ್ಮಕ್ಕಳ ಬಳಗಕ್ಕಾದರೆ ಇನ್ನೊಂದು ಮಾತ್ರ ತಮಗೆ. ಹೀಗೆ ಸಾತ್ವಿಕ ಆಹಾರದ ಶುಚಿತ್ವವನ್ನು ತಮ್ಮ ಜೀವನ ಪೂರ್ತಿ ನಡೆಸಿಕೊಂಡು ಬಂದವರಾಗಿದ್ದಾರೆ. ಆಹಾರ ಶುದ್ಧಿಯೂ ಕೂಡ ಅಂತರಂಗದ ಶುದ್ಧಿಗೆ ಸಾಧನವೆಂಬುದು, ಅಂತರಂಗದ ಶುದ್ಧಿಯಿಂದ ಸ್ಮೃತಿ ಶಕ್ತಿಯ ಸಿದ್ಧಿಯೆಂದು, ಸ್ಮೃತಿ ಸಿದ್ಧಿಯಿಂದ ಸರ್ವ ರಾಗ-ದ್ವೇಷಗಳ ನಾಶವೆಂದು ಅವರಿಗೆ ತಿಳಿದಿತ್ತು. ಆಹಾರ ಪದ್ಧತಿ ನಮ್ಮ ಜೀವನ ಶೈಲಿಯ ಮೇಲೆ ಅಪಾರವಾದ ಪರಿಣಾಮವನ್ನು ಬೀರುತ್ತದೆ. ಅಂಗದ ಮೇಲಷ್ಟೇ ಅಲ್ಲ ಅಂತರಂಗದ ಮೇಲೂ ಆಹಾರ ಪದ್ಧತಿ ಪರಿಣಾಮ ಬೀರುತ್ತದೆ. ಅನಾರೋಗ್ಯ, ಆಲಸ್ಯಾದಿಗಳನ್ನು ದೂರ ಸರಿಸಿ ಸಂಯಮದ ಸಮತಟ್ಟಾದ ಭಾವನೆಗಳನ್ನು

ಸಾತ್ವಿಕ ಆಹಾರ ನೀಡುತ್ತದೆ. ಆ ಮೂಲಕ ಸಾಧಕ ತನ್ನ ಸಾಧನೆಯನ್ನು ಸಾಕಾರಗೊಳಿಸಿ ಸದ್ಗತಿ ಪಡೆಯುತ್ತಾನೆ ಎಂಬುವ ವೈಜ್ಞಾನಿಕ ತಿಳುವಳಿಕೆಯನ್ನು ತಮ್ಮ ಜೀವನದಲ್ಲಿ ಬಿತ್ತಿದರು. ಹಸಿವಾಗಿದೆಯೆಂದು ಮಿತಿಮೀರಿ ಉಣ್ಣುವ ಮತ್ತು ಬಾಯಿ ಚಪಲಕ್ಕೆ ಸಿಕ್ಕಂತೆ ತಿಂದುಣ್ಣುವುದನ್ನು ತಿರಸ್ಕರಿಸುತ್ತಾರೆ ಮತ್ತು ಅದನ್ನು ತಮ್ಮ ಸಾಧನೆ-ಬೋಧನೆಯ ಮೂಲಕ ಅಳವಡಿಸಿಕೊಂಡರು.

ಆಹಾರ ಶುದ್ಧೌ ಸತ್ವಶುದ್ಧಿಃ ಸತ್ವ ಶುದ್ಧೌ ಧೃವಾ ಸ್ಮೃತಿಃ

ಸ್ಮೃತಿಲಂಭೇ ಸರ್ವಗ್ರಂಥೀನಾಂ ವಿಪ್ರಮೋಕ್ಷಃ

ಎಂಬುವ ಈ ಸಾಲುಗಳು ಆಹಾರದ ಶುಚಿತ್ವವನ್ನು ಅದರ ಮಹತ್ವವನ್ನು ಹೇಳುತ್ತವೆ.

ಸಾತ್ವಿಕ ಆಹಾರ ರಾಗ, ರೋಗ, ರಜಸ್ತ ಗುಣಗಳಿಗೆ, ಹಿಂಸೆಗೆ ಕಾರಣವಾಗುವುದಿಲ್ಲ. ಚಿತ್ತವೃತ್ತಿಗಳನ್ನು ದೂರವಿಡಲು ಸಾಧನವಾಗುವುದು ಸಾತ್ವಿಕ ಆಹಾರ. ಆಹಾರ ತನು ಮನಗಳಿಗೆ ಚೈತನ್ಯ ನೀಡುವಂತಿರಬೇಕು ಎನ್ನುವ ಸತ್ಯವನ್ನು ಬದುಕಿದರು.

ಅತಿಯಾದ ಭೋಜನದಿಂದ ಆತ್ಮದ್ರೋಹವುಂಟಾಗುತ್ತದೆ. ಅಲ್ಲದೆ ಸಮಾಜ ದ್ರೋಹವೂ ಉಂಟಾಗುತ್ತದೆ. ಅತಿಯಾಗಿ ಉಣ್ಣುವುದು ರೋಗಕ್ಕೆ ಮೂಲ. ರೋಗದಿಂದ ನರಳುವುದು ಆತ್ಮದ್ರೋಹ; ಇನ್ನೊಬ್ಬರು ಉಂಡು ತೃಪ್ತಿಪಡಬಹುದಾದ ಆಹಾರವನ್ನು ಅತಿಯಾಸೆಗೆ ಒಳಗಾಗಿ ಅತಿಯಾಗಿ ತಿಂದು ಅನ್ಯರಿಗೆ ಇಲ್ಲದಂತೆ ಮಾಡುವುದು ಸಾಮಾಜಿಕ ದ್ರೋಹ. ಸಾಲದ್ದಕ್ಕೆ ನೈತಿಕ ದ್ರೋಹವೂ ಆಗುತ್ತದೆ. ಆರೋಗ್ಯ, ಆಯುಷ್ಯ, ಪುಣ್ಯಗಳು ನಾಶವಾಗುತ್ತವೆ. ಇದು ಅನಾರೋಗ್ಯಕ್ಕೆ ಮಾರ್ಗವನ್ನು ಸೂಚಿಸುತ್ತದೆ. ಹೀಗಾಗಿ ಮಿತ ಭೋಜನವನ್ನು ಅಂಗಡಿಯವರು ಪುರಸ್ಕರಿಸಿದರು.

"ಮೌನದಲುಂಬುದು ಆಚಾರವಲ್ಲ.

ಲಿಂಗಾರ್ಪಿತವ ಮಾಡಿದ ಬಳಿಕ

ತುತ್ತಿಗೊಮ್ಮೆ ಶಿವ ಶರಣೆನ್ನುತ್ತಿರಬೇಕು.

ಕರಣ ವೃತ್ತಿಗಳಡಗುವವು ಕೂಡಲ ಸಂಗನ ನೆನೆಯುತ್ತ ಉಂಡರೆ"

ಎನ್ನುವ ಬಸವಣ್ಣನವರ ವಚನವನ್ನು ಬದುಕಿನಲ್ಲಿ ರೂಢಿಸಿಕೊಂಡಿದ್ದರು.

ಇವೆಲ್ಲವುಗಳಿಗಿಂತ ಮುಖ್ಯವಾದುದು ವ್ಯವಹಾರ ಶುಚಿ. ಇದನ್ನು ಅರಿತು ಆಚರಿಸುವವರು ವಿರಳವೆಂದೆ ಹೇಳಬೇಕು. ಗುಣ, ಶಿಕ್ಷಣಗಳಿದ್ದರೂ ವ್ಯವಹಾರದ ಮಟ್ಟಿಗೆ ಮಾತ್ರ ಅಂಕುಶಮತಿಗಳಾಗಿ ಉಳಿಯುತ್ತಾನೆ ಮಾನವ. ಆದರೆ ಇವರು ಸಾಧನೆಯ ಇನ್ನೊಂದು ಮೆಟ್ಟಿಲಾದ ವ್ಯವಹಾರ ಶುಚಿಯನ್ನೂ ಅಷ್ಟೇ ಪರಿಪಾಲಿಸಿದರು. ಅವರ ಬಾಯಿಂದ ಎಂದಿಗೂ, ಯಾವುದೇ ಕಾರಣಕ್ಕಾಗಿಯೂ ಅವಾಚ್ಯ ಶಬ್ದಗಳು ಬರಲಿಲ್ಲ. ಸಿಟ್ಟಂತೂ ಅವರಿಗೆ ಇರಲೇ ಇಲ್ಲ. ಅಕೋಚಿತವಾಗಿ ಸಿಟ್ಟು ಬಂದರೆ 'ದನಾಕಾಯೋನ !' ಎಂಬ ಶಬ್ದ ಬರುತ್ತಿತ್ತು. ಆ ಶಬ್ದ ಅವರಲ್ಲಿರುವ ನಿಂದನೆಯ ಉತ್ಕಟತೆಯಾಗಿರುತ್ತಿತ್ತು. ಸಮಾಜದಲ್ಲಿ ದೊಡ್ಡದಾದ ಸ್ಥಾನ–ಮಾನಗಳಿದ್ದರೂ ದುಡ್ಡನ್ನು ಕೈಯಿಂದ ಹಿಡಿಯಲೇ ಇಲ್ಲ. ಎಲ್ಲ ಹಣ ವ್ಯವಹಾರಗಳನ್ನು ಮಕ್ಕಳು ಮೊಮ್ಮಕ್ಕಳಿಗೆ ಒಪ್ಪಿಸಿ ಸರಳವಾದ ಬದುಕನ್ನು ಅಪ್ಪಿಕೊಂಡರು. ತಮ್ಮ ಸಾಹಿತ್ಯ ಕೃಷಿಯೊಂದನ್ನೇ ವ್ಯವಹಾರವಾಗಿಸಿಕೊಂಡರು. ಮೃದು ಮಾತು ಮಧುರವಾಗಿರುತ್ತಿತ್ತು. ಆ ಮಾತುಗಳೂ ಕೂಡ ತೂಕಬದ್ಧ ಮಾತುಗಳು ಮತ್ತು ರಚನಾತ್ಮಕ ಮಾತುಗಳು. ಬದುಕಿನ ಅನುಭವ, ಸಮಾಜದ ಚಿಂತನೆ, ಶಿವಾನುಭವದ ಪ್ರತಿಪಾದನೆ ಇವುಗಳನ್ನೇ ಅವರ ಮಾತುಗಳಲ್ಲಿ ಕೇಳಬಹುದಿತ್ತು. ಅವರ ಮಾತು ಜೋತಿರ್ಲಿಂಗವಾಗಿತ್ತೆಂದರೆ ಅತಿಶಯೋಕ್ತಿಯೆನಲ್ಲ. ಅವರ ವ್ಯವಹಾರ ಪಾರದರ್ಶಕತೆಯನ್ನು ಕುರಿತು ಹೇಳುವುದಾದರೆ ಒಮ್ಮೆ ಅವರ ಗೆಳೆಯರೊಬ್ಬರ ಬಳಿಗೆ ಬಂದು ತಾವು ಬರೆದ ಪುಸ್ತಕವನ್ನು ಪಠ್ಯಪುಸ್ತಕವಾಗಲು ಮುಂಬಯಿ ಸರಕಾರಕ್ಕೆ ಕಳುಹಿಸಿರುವುದಾಗಿಯೂ ಅದು ಪಾಸಾಗಿ ಬಂದರೆ ಒಳ್ಳೆಯ ಹಣ ಮೊತ್ತ ಸಂದಾಯವಾಗುತ್ತದೆ ಎಂದೂ ಅದರಿಂದ ತಾವು ಪುಸ್ತಕಾಲಯವೊಂದನ್ನು ಹುಟ್ಟು ಹಾಕುವುದಾಗಿಯೂ ತಿಳಿಸಿದರು. ಆ ಗೆಳೆಯ ಒಳ್ಳೆಯದಾಯಿತು ಬಿಡಿ ಎಂದೂ ತಮಾಷೆಗಾಗಿ ಪುಸ್ತಕ ಪಾಸಾಗಿ ಬಂದರೆ ಅದರಲ್ಲಿ ಅರ್ಧ ಹಣ ತಮಗೆ ಎಂದೂ ಹೇಳಿದರು. ಆದರೆ ಅವರ ಅದೃಷ್ಟಕ್ಕೆ ಆ ಪುಸ್ತಕ ಪಾಸಾಗಿ ಬಂದಾಗ, ಗೆಳೆಯನ ಅಂಗಡಿಗೆ ನೇರವಾಗಿ ಹೋದವರೆ ಅವರ ಪಾಲಿನ ಅರ್ಧದಷ್ಟು ಹಣವನ್ನು ನೀಡಿದರು. ಇದನ್ನು ಒಪ್ಪದ ಗೆಳೆಯ ನಾನು ತಮಾಷೆಗಾಗಿ ನುಡಿದ ಮಾತುಗಳವು. ನೀನು ಶ್ರಮ ಪಟ್ಟು ದುಡಿದ ಹಣವದು ನನಗೆ ಬೇಡ ಎಂದರು. ಆಗ ಕ.ಬ.ಅಂಗಡಿ ಹೇಳಿದರು ಮಾತನ್ನೆಂದೂ ತಪ್ಪಬಾರದು. ನಮ್ಮಿಬ್ಬರ ನಡುವೆ ನಡೆದ ಆ ಮಾತುಗಳಿಗೆ ಅರ್ಥವಿಲ್ಲವೇ? ಮಾತು ತಪ್ಪದ ಬದುಕು ಎಂದಿಗೂ ದೇವರಿಗೆ ಸಲ್ಲುತ್ತದೆ ಎಂದು ಹೇಳಿ ಹಣವನ್ನು ಗೆಳೆಯನ ಕೈಗಿತ್ತು ಬಂದರು. ಈ ಪ್ರಸಂಗ ಅವರಲ್ಲಿದ್ದ ವ್ಯವಹಾರ ಶುಚಿಯನ್ನು ತೋರ್ಪಡಿಸುತ್ತದೆ.

ಅನಾವಶ್ಯಕ ಮಾತುಗಳನ್ನು ಆಡುತ್ತಾ ಸಮಯವನ್ನು ವ್ಯರ್ಥ ಮಾಡಿದವರಲ್ಲ. ವಾಣಿ ಶುಚಿತ್ವವನ್ನು ಕಳೆದುಕೊಂಡವರಲ್ಲ. ಅನ್ಯರನ್ನು ತಮ್ಮ ಸ್ವಾರ್ಥಕ್ಕಾಗಿ ಸುಮ್ಮನೆ ಬಣ್ಣಿಸಿದವರಲ್ಲ. ತಮ್ಮನ್ನೂ ಸಹ ಹೊಗಳಿಕೊಂಡವರಲ್ಲ. ಆಡಂಬರಗಳ ಸಹವಾಸಕ್ಕಂತೂ ಹೋದವರಲ್ಲ. ಸಜ್ಜನಿಕೆಯ ಸರಳ ಬದುಕನ್ನು ಬದುಕಿದವರು. ಮಾತಿನ ಸವಿಗೆ ಸಿಕ್ಕು ಕಂಡಂತೆ ಬಣ್ಣಿಸುವುದಾಗಲಿ, ಹೀಗಳೆಯುವುದಾಗಲಿ, ಒಬ್ಬರನ್ನು ಎತ್ತಿ ಹಿಡಿದು ಇನ್ನೊಬ್ಬರನ್ನು ಕಾಲೆಳೆಯುವ ಪ್ರಕ್ರಿಯೆಗೆ ತೊಡಗಿಸಿಕೊಂಡವರಲ್ಲ. ತಾವು ಸಾಕ್ಷರರೆಂದು, ತಾವು ಬಲ್ಲಿದರೆಂದು, ತಾವು ಅಧಿಕಾರಿಗಳೆಂದು, ತಾವೊಬ್ಬ ಪ್ರಭಾವಿ ಸಾಮಾಜಿಕ ವ್ಯಕ್ತಿಯೆಂದೂ ಆತ್ಮಸ್ತುತಿಯನ್ನು ಮಾಡಿಕೊಂಡವರಲ್ಲ. ಮಾತಿನ ಮಂಟಪವ ಕಟ್ಟಿದವರಲ್ಲ. ಮಾತಿನ ಮಾಲೆಯನ್ನು ಹೆಣೆದವರಲ್ಲ. ಸತ್ಯ ಧರ್ಮವನ್ನು ಮುಖ್ಯವಾಗಿ ಕಾಪಾಡಿಕೊಂಡಿದ್ದುದೇ ಅವರ ವಾಣಿಯ ಶೀಲಾಚರಣೆ.

ಈ ಆಚರಣೆಗಳು ಕಿವಿಗೆ ಬಿದ್ದೊಡನೆ ಮಾನವನ ಅಂತರಂಗ ಶುದ್ಧಿ, ಬಹಿರಂಗ ಶುದ್ಧಿಗೆ ಬೇಕಿರುವ ಸಪ್ತ ಸಂಹಿತೆಗಳನ್ನು ಬಸವಣ್ಣನವರು ಬೋಧಿಸಿದ 'ಕಳಬೇಡ, ಕೊಲಬೇಡ, ಹುಸಿಯ ನುಡಿಯಲು ಬೇಡ, ತನ್ನ ಬಣ್ಣಿಸಬೇಡ, ಇದಿರ ಹಳಿಯಲು ಬೇಡ..........' ಈ ವಚನವು ಅವರ ಅಂತರಂಗ ಮತ್ತು ಬಹಿರಂಗ ಶುದ್ಧಿಯನ್ನು ಅನುರಣನಗೊಳಿಸುತ್ತದೆ. ಈ ಯುಗದ ಅನುಭಾವ ಕವಿಯಾದ ಸಿದ್ಧಯ್ಯ ಪುರಾಣಿಕರವರು ಹೇಳಿದ 'ಕವಿ ದೇಹವಿಟ್ಟಾನು, ಕವಿತೆಯುಳಿದೀತು!' ಎಂಬ ಸತ್ಯಕ್ಕೆ ಇವರ ಬದುಕು ಕೈಯೊಳಗಿನ ಕನ್ನಡಿಯಂತೆ ತೋರದೆ ಇರದು.

ಅವರ ಕೈ ಗುಣವೂ ಕೂಡ ಹುಸಿ ಹೋಗುವಂತಹುದಲ್ಲ. ಅವರು ನೆಟ್ಟ ಗಿಡ–ಗಂಟೆಗಳ ಟೊಂಗೆಗಳೂ ಚಿಗುರುತ್ತಿದ್ದವು. ಓದುವ ಬಡ ಬಗ್ಗರಿಗೆ, ಹಸಿದವರಿಗೆ, ನಿರಾಶ್ರಿತರಿಗೆ ತಮ್ಮ ಕೈಲಾದ ಮಟ್ಟಿಗೆ ಸಹಾಯ ಹಸ್ತವನ್ನು ಚಾಚುತ್ತಿದ್ದರು. ಇಲ್ಲಿ ಅಚ್ಚರಿಯ ಸಂಗತಿಯೆಂದರೆ ಧಾರವಾಡದ ಕರ್ನಾಟಕ ವಿಶ್ವವಿದ್ಯಾಲಯದ ಕುಲಪತಿಗಳಾದ ಆರ್.ಸಿ.ಹೀರೆಮಠರನ್ನು ಚಿಕ್ಕಂದಿನಲ್ಲಿಯೇ ಗುರುತಿಸಿದವರು ಕ.ಬ.ಅಂಗಡಿಯವರು ಅವರ ಪ್ರಾಥಮಿಕ ಶಿಕ್ಷಣಕ್ಕೆ ಸವಲತ್ತುಗಳನ್ನು ಮಾಡಿಕೊಟ್ಟವರು ಮತ್ತು ಊಟಕ್ಕೆ ವಾರಾನ್ನದ ವ್ಯವಸ್ಥೆ ಮಾಡಿ ತಮ್ಮ ಮನೆಯಲ್ಲೂ ನೆಲೆಯನ್ನು ನೀಡಿದರು. ಈ ಮಾತನ್ನು ಸ್ವತಃ ಆರ್.ಸಿ. ಹೀರೆಮಠ ಅವರು ತಮ್ಮ 'ಬೆಳುವಲ'ದಲ್ಲಿ ಹೇಳಿದ್ದಾರೆ. ಅವರ ಕುಟುಂಬದ ಮತ್ತು ಅವರ ನಿಕಟ ಸಂಪರ್ಕವನ್ನು ಹೊಂದಿದ ಜನರನ್ನು ತಮ್ಮೊಟ್ಟಿಗೆ ಕರೆದೊಯ್ಯುವ, ಬೆಳೆಸುವ, ಪ್ರೋತ್ಸಾಯಿಸುವ ಸುಮಧುರ ಗುಣ ಇವರಲ್ಲಿತ್ತು. ಮಲ್ಲಿಕಾರ್ಜುನ ಲಕ್ಕೆಯವರು ಈ

ಮಾತನ್ನು ಹೇಳುತ್ತಾರೆ. ಅವರ ಸೋದರಳಿಯರಾದ ಶಿವಲಿಂಗಪ್ಪ ವಾಲಿಯವರು ತಮ್ಮ ಮಾವನನ್ನು ಮನೆಯ ಮಹಾಮರವೆಂದೆ ಗುರುತಿಸುತ್ತಾರೆ. ಅದು ಸಮಾಜದ ಹೆಮ್ಮರವೂ ಕೂಡ ಎಂದು ಹೇಳಲು ಅವರು ಮರೆಯುವುದಿಲ್ಲ. ಜಾತ್ರೆ-ಹಬ್ಬದ ದಿನಗಳಲ್ಲಿ ತಮ್ಮ ಸಮಾನ ಮನಸ್ಕರನ್ನು, ಬಂಧು-ಬಾಂಧವರನ್ನು ಕೂಡಿಕೊಂಡು ಸಾಂಸ್ಕೃತಿಕ ರೀತಿ-ನೀತಿಗಳಿಂದ ಮತ್ತು ಯಾವುದೇ ಆಡಂಬರಗಳಿಲ್ಲದೆ ಆಚರಿಸುತ್ತಿದ್ದರು. ಅವರು ಯಾವುದೆ ಪವಾಡ ಪುರುಷರಲ್ಲ. ಆದರೆ ತಮ್ಮ ನಿಸ್ವಾರ್ಥ ಮತ್ತು ಅರಿವಿನ ಹಿರಿಮೆಯಿಂದ ಅಂದಿನ ಕಾಲದಲ್ಲಿ ತಮ್ಮ ಸುತ್ತಲೂ ಇದ್ದ ಮುಗ್ಧ ಹಳ್ಳಿಯ ಜನರನ್ನು ಮಾಟ-ಮಂತ್ರ-ತಂತ್ರಗಳ ಹುಚ್ಚು ತಿಳುವಳಿಕೆಗಳಿಂದ ಮುಕ್ತ ಮಾಡಿದರು.

ತಮ್ಮ ಸಹೋದರಿಯೋರ್ವಳು ತನ್ನ ಮಗನಿಗೆ ಬಂದ ಕಾಯಿಲೆಯಿಂದ ಚಿಂತಾಕ್ರಾಂತಳಾಗಿ ಎಲ್ಲ ಕಡೆಯ ದೇವರು-ದಿಂಡರನ್ನು ಸಂಪರ್ಕಿಸಿ, ಕೊನೆಗೆ ಗದುಗುನಲ್ಲಿ ಯಾರೋ ಮಾಯಾವಿ ಮಾಂತ್ರಿಕನೋರ್ವ ಈ ಕಾಯಿಲೆಯನ್ನು ವಾಸಿ ಮಾಡುತ್ತಾನೆ ಎಂದು ತಿಳಿದುಕೊಂಡು ಅವನ ವಿಳಾಸವನ್ನು ತೆಗೆದುಕೊಂಡು ಬಂದು ತನ್ನ ಸಹೋದರರಾದ ಕ.ಬ.ಅಂಗಡಿಯವರಿಗೆ ತಿಳಿಸುತ್ತಾಳೆ. ಆಗ ಅವರು ಉಪಾಯ ಮಾಡಿ ಅವಳಲ್ಲಿ ಊರಿದ್ದ ಮೌಢ್ಯವನ್ನು ಹೊಡೆದೊಡಿಸಲು ತೀರ್ಮಾನಿಸಿದರು. ನಂತರ ಒಂದೆರಡು ದಿನ ಕಳೆದ ನಂತರ ತಾವು ಲಿಂಗಪೂಜೆಯನ್ನು ಮಾಡಿಕೊಳ್ಳುವ ಸಮಯದಲ್ಲಿ ಮುರಗೋಡ ಮಹಾಂತ ಶಿವಯೋಗಿಗಳನ್ನು ನೆನೆದು ಅವರ ಪಾದೋದಕವನ್ನು ಮತ್ತು ಅವರ ಪ್ರಸಾದವನ್ನು ತಮ್ಮ ಸಹೋದರಿಯ ಬಳಿಗೆ ತಂದು ಕೊಟ್ಟು ಇದು ಆ ಮಾಯಾವಿ ಮಾಂತ್ರಿಕನೇ ಕೊಟ್ಟಿದ್ದು ಎಂದು ನಂಬಿಸಿ ಅವಳನ್ನು ಊರಿಗೆ ಕಳಿಸುತ್ತಾರೆ. ನಂತರದ ದಿನಗಳಲ್ಲಿ ಸಹೋದರಿಯು ತಮ್ಮ ಅಣ್ಣನ ಬಳಿಗೆ ಬಂದು ಆ ಮಾಂತ್ರಿಕ ಮಾಯಾವಿಯಿಂದ ತನ್ನ ಮಗನ ರೋಗ ಗುಣವಾಯಿತೆಂದೂ ತನ್ನನ್ನು ಆ ಮಾಂತ್ರಿಕನ ಬಳಿಗೆ ಕರೆದೊಯ್ಯಲು ಹೇಳುತ್ತಾಳೆ. ಆಗ ಅವರು ತಾವು ಮಾಡಿದ ಕಾರ್ಯವನ್ನು ಅವಳಿಗೆ ತಿಳಿಸಿ ಅವಳಲ್ಲಿದ್ದ ಮೌಢ್ಯವನ್ನು ಕಿತ್ತೊಗೆಯುತ್ತಾರೆ. ಅವಳು ಅಂದಿನಿಂದ ಶರಣರ ನುಡಿ ತತ್ವಗಳಿಗೆ ಶರಣಾಗುತ್ತಾಳೆ. ಮುರಗೋಡ ಮಹಾಂತ ಶಿವಯೋಗಿಗಳನ್ನು ಸ್ಮರಿಸುತ್ತಾ ಜೀವನವನ್ನು ಅರಿವಿನ ಬೆಳಕಿನಲ್ಲಿ ಬಾಳಿದಳು. ಈ ಎಲ್ಲ ವಿಷಯಗಳೂ ಇಲ್ಲಿ ಪ್ರಸ್ತುತವೇಕೆಂದರೆ ಕ.ಬ.ಅಂಗಡಿಯವರ ನಡೆ-ನುಡಿಯ ಶುಚಿಯು ಬರೀ ಬಾಯಿ ಮಾತಿನಿಂದಲ್ಲ. ಅದು ಕೃತಿಗೂ ಅಳವಟ್ಟಿತ್ತು ಎಂಬುದನ್ನು ಸೂಚಿಸುತ್ತದೆ. ಅದೇ ಬಸವಾದಿ ಶರಣರ ತತ್ವಗಳ ಆಚರಣೆಯಿಂದ ಶುದ್ಧ ಹಸ್ತದಿಂದ ಅವರ ವ್ಯಾಪಾರ, ವಹಿವಾಟುಗಳು, ಸಂಬಂಧ, ಸಂಪರ್ಕಗಳು, ವಿನೋದ, ವಿಕಾಸಗಳು ಲೀಲಾಜಾಲವಾಗಿ ನಡೆದುಕೊಂಡು

ಬಂದವು. ಆ ಶುದ್ಧ ಹಸ್ತಗಳು ಪರರಿಂದ ಕಿತ್ತುಕೊಂಡ ಹಸ್ತಗಳಲ್ಲ, ಅನ್ಯರಿಗೆ ಕೆಟ್ಟದ್ದನ್ನು ಮಾಡಿದ ಕೈಗಳಲ್ಲ, ಅವರ ಹಸ್ತಶುಚಿಯು ಅವರ ವಿಶಾಲ ಮನಸ್ಸಿನಂತೆ ನಿರ್ಮಲವಾಗಿದ್ದವು. ಅದೇ ಶುದ್ಧ ಹಸ್ತದಿಂದ ಲೌಕಿಕವಾಗಿ ಕಾಣುವಂತೆ ತಮ್ಮ ನಿವೃತ್ತಿಯ ಮೊದಲು ಮನೆಯನ್ನು, ಮನಸನ್ನು, ಹಲವಾರು ಸಂಘ-ಸಂಸ್ಥೆಗಳನ್ನು, ಜನರನ್ನು, ವ್ಯಕ್ತಿತ್ವವನ್ನು ಕಟ್ಟಿಕೊಂಡು, ನಿವೃತ್ತಿಯ ನಂತರ 'ಜಯಬಸವ ಪುಸ್ತಕಾಲಯ'ವನ್ನು, 'ಮಹಾಂತೇಶ ಮುದ್ರಣ'ವನ್ನು ಕಟ್ಟಿ ಬೆಳೆಸಿದ ಅವರು ಪಾರಮಾರ್ಥಿಕವಾಗಿ ಭಕ್ತ, ಮಾಹೇಶ, ಪ್ರಾಣಲಿಂಗಿ, ಪ್ರಸಾದಿ, ಶರಣಸ್ಥಳಗಳನ್ನು ಹಂತ ಹಂತವಾಗಿ ಮುಟ್ಟಿದರು. ಯೋಗತ್ವವನ್ನು ಪಡೆದುಕೊಂಡರು. ಕವಿಗಳಿಂದ ಶಿವಕವಿಗಳಾಗಿ, ಶಿವಕವಿಯಿಂದ ಶರಣಕವಿಯಾಗಿ ಮಾರ್ಪಟ್ಟರು.

ಅವರ ಜ್ಞಾನೇಂದ್ರಿಯಗಳನ್ನು ಕೂಡ ಶುಚಿತ್ವದಿಂದ ಕಾಯ್ದುಕೊಂಡಿದ್ದರು. ಜ್ಞಾನೇಂದ್ರಿಯದಲ್ಲಿ ಅವರ ಮೂಗು ಬಸವಾದಿ ಶರಣರ ಜೀವನದ ಸುಗಂಧವನ್ನೇ ಅವರು ಘ್ರಾಣಿಸಿದ್ದು. ಅದೇ ಅವರ ಉಸಿರಾಗಿತ್ತು. ಉಸಿರಿನ ಕೊನೆಯವರೆಗೂ ಅದು ಅವರ ಜೀವನ ಶೈಲಿಯಾಗಿತ್ತು. ಅವರ ನಾಲಗೆ ಸಾತ್ವಿಕ ಆಹಾರದಲ್ಲಿ ಆಸ್ಥೆಯನ್ನಿಟ್ಟಿತ್ತು. ಲಿಂಗಾರ್ಪಣಕ್ಕೆ ಮೊದಲು ಮಾಡಿ ನಂತರ ತಾವು ಆಸ್ವಾದಿಸುತ್ತಿದ್ದರು. ಕಣ್ಣುಗಳು ಇಷ್ಟಲಿಂಗಾರ್ಚನೆಯನ್ನು ನೋಡುವುದರಲ್ಲಿಯೇ ವಿಷಯಾಸಕ್ತವಾಗಿರುತ್ತಿದ್ದವು. ತ್ವಚೆ ಕೂಡ ಜಂಗಮ-ಲಿಂಗ ಸ್ಪರ್ಶದಲ್ಲಿಯೇ ಸುಖ-ಸಂತೋಷವನ್ನು ಕಾಣುತ್ತಿದ್ದವು. ಲಿಂಗವನ್ನು ಮುಟ್ಟಿ ಪೂಜಿಸುವ ಸುಖ ಸಾಧನೆಯಲ್ಲಿ ಸಂತೋಷವನ್ನು ಕಾಣುತ್ತಿತ್ತು. ಕಿವಿಗಳು ಬಸವಾದಿ ಶಿವಶರಣರ ಪುರಾಣಗಳನ್ನು, ಶಿವಾನುಭವಗಳನ್ನು, ಶುಭವಾರ್ತೆಗಳನ್ನು ಕೇಳುವಲ್ಲಿ ಸಾರ್ಥಕ್ಯ ಹೊಂದುತ್ತಿದ್ದವು. ತಮ್ಮ ಅನುಭಾವನಾದವನ್ನು ಪ್ರಸಾರ ಮಾಡುವುದೇ ಅವುಗಳ ಕೈಂಕರ್ಯವಾಗಿತ್ತು.

ಬಾಹ್ಯಕ್ಕಿಂತಲೂ ಅಂತರಂಗದ ಶುದ್ಧಿಯು ಅತ್ಯವಶ್ಯಕ. ಸಂಯಮವೇ ಆಂತರಿಕ ಶೌಚ. ಚಂಚಲವಾದ ಮನವೊಂದನ್ನು ನೆಲೆ ನಿಲ್ಲಿಸುವುದೇ ಇಲ್ಲಿಯ ಶುದ್ಧಿ. ಮತಿಯು ಮತ್ತೊಂದನ್ನು ಚಿಂತಿಸದೆ ಯೋಚಿಸದೆ ದೇವನನ್ನು ನೆನವುದೇ ಧ್ಯಾನ. ಇದು ಬುದ್ಧಿಯ ಶೀಲ. ಅಹಂಕಾರವನ್ನು ಅಳಿಸಿ ಸರಳತೆಯನ್ನು ಮನಸ್ಸಿನಲ್ಲಿ ಬಿತ್ತುವುದು ಅಹಂಕಾರದ ಶೀಲಾಚಾರ. ಇವೆಲ್ಲವನ್ನೂ ಆಚರಣೆಯಲ್ಲಿ ತರುವಲ್ಲಿ ಅವರ ಸ್ತೋತ್ರ ಗೀತೆಗಳು, ಅಷ್ಟಕ-ಷಟ್ಕಗಳು-ನವಕಗಳು-ನೂರೆಂಟು ನಾಮಾವಳಿಗಳು- ಹೆಚ್ಚು ಪೂರಕವಾಗಿ ಕೆಲಸ ಮಾಡಿವೆ ಎಂಬುದು ವಿದಿತವಾಗುತ್ತದೆ. ಇವುಗಳಿಂದ ತಮ್ಮ ಅಂತರಂಗ ಮತ್ತು ಬಹಿರಂಗವನ್ನು ಸದಾ

ಶುದ್ಧಿ ಮತ್ತು ಸಮನ್ವಯವಾಗಿಟ್ಟುಕೊಂಡು ಬದುಕಿದರು. ಹೀಗೆ ಬದುಕಿದ ಫಲವಾಗಿ ಅವರಿಗೆ ದೊರೆತ ಅನುಭವ್ಯಕ ಫಲ-ಕ್ರಿಯೆ-ಪದಾರ್ಥಾದಿಗಳನ್ನು ತಮ್ಮ ಸುತ್ತಲ ಸಮಾಜದ ಉನ್ನತಿಗೆ, ವಿಕಾಸಕ್ಕೆ, ಸ್ವಾಸ್ಥ್ಯಕ್ಕೆ ಪೂರಕವಾಗುವಂತೆ ವಿನಿಯೋಗಿಸಿದರು. ಮಿತಭಾಷಿಯಾದರೂ ಇವರ ಅನುಭಾವ ಜ್ಞಾನವನ್ನು ತಮ್ಮ ನಿರ್ಮಲ ದೃಷ್ಟಿಯಿಂದ ಸಾಹಿತ್ಯದ ಮೂಲಕ, ಶಿಕ್ಷಣದ ಮೂಲಕ, ಕಾಯಕದ ಮೂಲಕ, ದಾಸೋಹದ ಮೂಲಕ ಸಮಾಜಕ್ಕೆ ರವಾನಿಸಿದರು.

## ೩.೪ ಭಕ್ತಿ-ಜ್ಞಾನ-ಕ್ರಿಯೆ :

ಭಕ್ತಿಯೆಂಬುದು ಅಂತಹಃಶಕ್ತಿ. ಸಾಧನೆಗೆ ಬೇಕಾಗಿರುವ ಛಲ. ಆ ಶಕ್ತಿಯನ್ನು ಜ್ಞಾನದ ಬಲದಿಂದ ಮೂರ್ತಗೊಳಿಸಿ ಸಕ್ರಿಯಾತ್ಮಕವಾಗಿ ಬಳಸಿದಾಗ ಅಲ್ಲಿ ಸಾಧನೆಯ ಸಾಕಾರ ನೆರವೇರುತ್ತದೆ. ಆ ಸಾಧನೆಯ ಸಾಕಾರದಲ್ಲಿ ವೈಚಾರಿಕತೆ ಹೆಚ್ಚು ಮಹತ್ವವನ್ನು ಪಡೆಯುತ್ತದೆ. ಅದು ಸೃಜನಶೀಲತೆಗೆ ಮತ್ತು ಸಹಬದುಕಿಗೆ ಹೊಸ ಆಯಾಮ ನೀಡುತ್ತದೆ. ಈ ರೀತಿಯ ಬದುಕು ಅವರಿಗೆ ದೊರೆತದ್ದು ಶಿವಯೋಗ ಮಂದಿರದ ಶಿಕ್ಷಣ ಕ್ರಮದಲ್ಲಿ. ಆ ಶಿಕ್ಷಣ ಕ್ರಮ ಬಸವಣ್ಣನವರ ವೈಚಾರಿಕತೆ ಮತ್ತು ವೀರಶೈವತ್ವವನ್ನು ಅವರಿಗೆ ಮೈಗೂಡಿಸಿತು. ಹೀಗಾಗಿ ಭಕ್ತಿ-ಜ್ಞಾನ-ಕ್ರಿಯೆ ಇವುಗಳ ಸಮನ್ವಯದಲ್ಲಿ ಕ.ಬ.ಅಂಗಡಿಯವರ ವ್ಯಕ್ತಿತವನ್ನು ಗುರುತಿಸಬಹುದು.

ಭಕ್ತಿಯ ಮಾರ್ಗವು ಪರಿಪೂರ್ಣವಾಗಬೇಕಾದರೆ ಅದಕ್ಕೆ ಜ್ಞಾನ-ಕ್ರಿಯೆಗಳ ಸಹಕಾರ ಬೇಕು. ಹೇಗೆ ಮನುಷ್ಯನು ತನ್ನ ಒಂದೇ ಕಾಲಿನಿಂದ ನಡೆಯಲು ಆಗುವುದಿಲ್ಲವೋ ಮನುಷ್ಯನಿಗೆ ಜ್ಞಾನ-ಕ್ರಿಯೆಗಳ ವಿನಃ ಭಕ್ತಿಯ ನೆಲೆಯು ಸಿಗುವುದಿಲ್ಲ. ಈ ಭಕ್ತಿ-ಜ್ಞಾನ-ಕ್ರಿಯೆಯ ಸಮನ್ವಯ ಯೋಗಕ್ಕೆ ಶಿವಯೋಗವೆನ್ನುವರು. ಈ ಶಿವಯೋಗವನ್ನು ಸಾಧಿಸಿದರು.

ಶಕ್ತಿವಿಶಿಷ್ಟಾದ್ವೈತದ ಸಿದ್ಧಾಂತ ಹೇಳುವಂತೆ ದೇಹವು ಸವಿಯುತ್ತಿರುವ ಕರ್ಪುರದಂತೆ, ಕ್ರಿಯೆಯು ಸುಡುವ ಅಗ್ನಿಯಂತೆ, ಆ ಕರ್ಪುರ ಸುಡುವಾಗ ಸುತ್ತಲೂ ಪ್ರಕಾಶಿಸುವ ಬೆಳಕು ಜ್ಞಾನದಂತೆ. ಈ ಕರ್ಪುರ-ಅಗ್ನಿ-ಪ್ರಕಾಶ ಸಮ್ಮಿಳಿತವಾಗಿ ಬಯಲಾಗುವಂತೆ, ಭಕ್ತಿ-ಜ್ಞಾನ-ಕ್ರಿಯೆ ಈ ಮೂರು ಪರಿಕರಗಳು ದೇಹವಿರಿವವರೆಗೂ ಸಮನ್ವಯಗೊಂಡು ಅಜ್ಞಾನವನ್ನು ಕಿತ್ತೊಗೆದು ಅರಿವಿನ ಬದುಕನ್ನು ಕಟ್ಟಿಕೊಡುತ್ತವೆ. ಕ್ರಿಯೆಯಿಂದ ಕೂಡಿದ ಜ್ಞಾನವನ್ನು, ಜ್ಞಾನದಿಂದ ಕೂಡಿದ ಕ್ರಿಯೆಯನ್ನು ಅಂದರೆ

ಅಷ್ಟಾವರಣ, ಪಂಚಾಚಾರ, ಷಟ್‌ಸ್ಥಲಾದಿ ಶಿವಾದ್ವೈತ ತತ್ವವನ್ನು ತಮ್ಮ ಲೌಕಿಕ-ಪಾರಮಾರ್ಥಿಕ ಗುರುವಾದ ಹಾನಗಲ್ಲ ಕುಮಾರ ಶಿವಯೋಗಿಗಳಿಂದ ಪಡೆದುಕೊಂಡು ಅದರಂತೆ ನಡೆದರು.

ತಮ್ಮ ಜ್ಞಾನವನ್ನು ರಚನಾತ್ಮಕವಾದ ಕಾರ್ಯಗಳಲ್ಲಿ ಅಳವಡಿಸಿ, ಆ ಸಮಕಾಲೀನ ಸಮಾಜ ರಚನೆಯಲ್ಲಿ ಪ್ರಮುಖ ಪಾತ್ರ ವಹಿಸಿದರು. ಪಠ್ಯಪುಸ್ತಕ ರಚನೆ, ಅಖಿಲ ಭಾರತ ವೀರಶೈವ ವಿದ್ಯಾಪೀಠ, ಶಿಕ್ಷಣ ಪ್ರಸಾರ ರಂಗಭೂಮಿಯಲ್ಲಿ ಪ್ರಯೋಗಿಸಿದ ಅವರ ನಾಟಕಗಳು ಅವರ ರಚನಾತ್ಮಕತೆಗೆ ಹಿಡಿದ ಕೈಗನ್ನಡಿಗಳು.

## ೩.೫ ಲೌಕಿಕ-ಪಾರಮಾರ್ಥಿಕ ಸಮನ್ವಯ :

ಬದುಕಿನಲ್ಲಿ ಯಾವಾಗಲೂ ಎರಡು ಬಗೆಯ ವಿವೇಚನೆಗಳನ್ನು ಕಾಣಬಹುದಾಗಿದೆ. ಅವುಗಳನ್ನು ಲೌಕಿಕ ಮತ್ತು ಪಾರಮಾರ್ಥಿಕ ಎಂದು ಕರೆಯುತ್ತೇವೆ. ಯಾವುದು ಲೋಕದ ಅರವಿಗೆ ಬರುವಂತಹುದೋ ಅದು ಲೌಕಿಕ ಮತ್ತು ಯಾವುದು ಆತ್ಮದ ಅರಿವಿಗೆ ಬರುವಂತಹುದೋ ಅದು ಪಾರಮಾರ್ಥಿಕ. ಈ ಎರಡು ಬದುಕಿನ ಮಗ್ಗಲುಗಳು ಎಲ್ಲರಲ್ಲೂ ಇರುತ್ತವೆ ಮತ್ತು ಇರಬೇಕಾದುದು ಅವಶ್ಯಕ. ಆದರೆ ಇವೆರಡರ ಅರಿವು ಮಾತ್ರ ಎಲ್ಲರಲ್ಲೂ ಕಾಣಸಿಗುವುದಿಲ್ಲ. ಹೀಗಾಗಿ ನಿಜಗುಣ ಶಿವಯೋಗಿಗಳು ಹೇಳುವಂತೆ ಯಾರು ಲೌಕಿಕ ಮತ್ತು ಪಾರಮಾರ್ಥಿಕವೆರಡನ್ನೂ ಕೂಡಿ ನಡೆಯುವವನು ಅವನು ಶಿವಶರಣನಾಗಬಲ್ಲ. ಅವನೇ ನಿಜ ಜಾಣನಾಗಬಲ್ಲನು.

ಸಂಸಾರವೆಂದರೆ ಆತ್ಮನು ಸತಿ ಪುತ್ರಾದಿಗಳೊಡನೆ ಕುಟುಂಬ ಜೀವಿಯಾಗಿ ವಿಷಯಗಳನ್ನು ಭೋಗಿಸುವುದೇ ಆಗಿರುವುದು. ಜೀವನ ವೃತ್ತಿಗೆ 'ಕಾಯಕ ಸ್ವರೂಪ' ಕೊಟ್ಟು ಜೀವನವನ್ನು ಪಾರಮಾರ್ಥಿಕ ಜೀವನವನ್ನಾಗಿ ಪರಿಣಮಿಸುವಂತೆ ಆಚರಿಸುವವರಿಗೆ ಸಂಸಾರದ ಸುಖ ದುಃಖಗಳು ಅಂಟಿಕೊಳ್ಳಲಾರವು. ಕ.ಬ.ಅಂಗಡಿಯವರು ಪಾರಮಾರ್ಥಿಕ ಬದುಕನ್ನು ಸವಿಯಲಿಚ್ಛಿಸಿದರೂ ಸಂಸಾರದ ಸಾರತೆಗೆ ಕುಂದುಂಟಾಗಲಾರದಂತೆ ಬದುಕಿದರು. ವಿವಾಹವನ್ನು ತಮ್ಮ ಷಟ್ಸ್ಥಲಾಚರಣೆಗೆ ಪ್ರತಿಬಾಧಕವೆಂದು ತಿಳಿಯಲಿಲ್ಲ. ಈ ಸನ್ಮಾರ್ಗವನ್ನು ತೋರಿದವರು ಹಾನಗಲ್ಲ ಕುಮಾರ ಸ್ವಾಮಿಗಳು. ಶಿವಯೋಗ ಮಂದಿರದಲ್ಲಿ ವಟುವಾಗಿ ಬೆಳೆದು ಸಂಸಾರವನ್ನು ಬಿಟ್ಟು ಸಮಾಜ ಸೇವೆಗೆ ತಮ್ಮನ್ನು ತಾವು ಅರ್ಪಿಸಿಕೊಳ್ಳಬೇಕೆಂದುಕೊಂಡ ಇವರನ್ನು ಶಿಕ್ಷಕರನ್ನಾಗಿ ಮಾಡಿ, ಸಂಸಾರಿಕರನ್ನಾಗಿ ಮಾಡಿ, ಸಮಾಜ ಸೇವೆಯನ್ನು ಸಾಹಿತ್ಯ ಮತ್ತು ಶಿಕ್ಷಣದ ಮೂಲಕ ಮಾಡಲು ಶಕ್ತಿಯಾದರು.




ತೋಂಟದಾರ್ಯ ಮಠದಲ್ಲಿ ಶಿವಾನುಭವ ನಡೆಯುವ ವೇದಿಕೆ

ಹೀಗಾಗಿ ಗುರುವಿನ ಆಸೆಯಂತೆ ಮದುವೆಯ ಮೆಟ್ಟಿಲನ್ನೇರಿ, ಶರಣರ ಅನುಭಾವದಂತೆ ಸತಿ-ಪತಿಗಳೊಂದಾಗಿಯೂ ಶಿವಸಮನ್ವಯವನ್ನು ಸಾಧಿಸಿಕೊಂಡರು. ಚೆನ್ನಮ್ಮನವರು ಸಂಸಾರಿಕ ಬದುಕಿನಲ್ಲಿದ್ದೂ ಲೌಕಿಕ ಭೋಗದಿಂದ ದೂರ ಸರಿಯದೇ ಅವುಗಳೊಡನೆ ನಿರ್ಲಿಪ್ತ ಸ್ಥಿತಿಯಲ್ಲಿದ್ದು ಶಿವಸ್ವರೂಪ ಪಡೆಯುವಲ್ಲಿ ಸಹಕಾರಿಗಳಾದರು. ಹೀಗೆ ಭಕ್ತಿ, ಜ್ಞಾನ, ಕರ್ಮ, ಧ್ಯಾನ ಮಾರ್ಗಗಳನ್ನು ಅನುಸರಿಸಿ ಲೌಕಿಕ ಮತ್ತು ಪಾರಮಾರ್ಥಿಕ ಬದುಕುಗಳೆರಡನ್ನೂ ಬೆಸೆದುಕೊಂಡ ಇವರು ಅದನ್ನು ತಮ್ಮ ಬರಹದಲ್ಲಿಯೂ ಅಳವಡಿಸಿದರು. ನೇರವಾದ, ನಿರ್ಭಯವಾದ , ನಿಸ್ಸಂದಿಗ್ಧವಾದ, ಅಡ್ಡಿ-ಆತಂಕಗಳಿಲ್ಲದ, ಸುಲಭವಾದ, ಸುಗಮವಾದ ಸುರಕ್ಷಿತವಾದ ಶರಣರ ದಾರಿಯಲ್ಲಿ ನಡೆದು ಯಶಸ್ವಿಯಾದವರು.

### ೩.೬ ಶಿವಾನುಭವ :

ಶಿವ-ಜೀವರ ಐಕ್ಯವು ಶಿವಯೋಗವಾದರೆ, ಅವನ ಅನುಭಾವ ಅನುಭೂತಿಯನ್ನು ಅನುಭವಕ್ಕೆ ತಂದುಕೊಡುವುದು 'ಶಿವಾನುಭವ' ಎನಿಸಿಕೊಳ್ಳುತ್ತದೆ. ಶಿವಾನುಭವವು ವೀರಶೈವ-ಲಿಂಗಾಯತ ಸಮಾಜದ ಪ್ರಮುಖ ಲಕ್ಷಣವು. ಶಿವಾನುಭವ ಕ.ಬ.ಅಂಗಡಿಯವರ ದೈನಂದಿನ ಕಾರ್ಯಕ್ರಮಗಳಲ್ಲಿ ಹಾಸು ಹೊಕ್ಕಾಗಿ ಬೆರೆತಿದ್ದುದನ್ನು ಎಷ್ಟೋ ಜನ ಅರಿತವರಾಗಿದ್ದರೆ. ಪ್ರತಿ ದಿನವೂ ಅರ್ಚನ, ಅರ್ಪಣ, ಅನುಭವಗಳನ್ನು ನಿಷ್ಠೆಯಿಂದ ನಡೆಸುತ್ತಿದ್ದರು. ಅವರು ತಮ್ಮ ಕಾಲದಲ್ಲಿ ನಡೆಸುತ್ತಿದ್ದ ಚರ್ಚಾಕೂಟಗಳು, ಸಭೆ-ಸಮಾರಂಭ-ಸಮ್ಮೇಳನಗಳೂ ಕೇವಲ ಮಾತಿನ ಮಾಲೆಯಾಗಿರದೆ ಪ್ರತಿಯೊಂದೂ ಒಂದು ಪ್ರಯೋಗ ಶಾಲೆಗಳಾಗಿದ್ದವು.

ಶಿವಾನುಭವವೆಂದರೆ ಸಂತೆಯ ಮಾತಲ್ಲ. ವಿಷಯಾಸಕ್ತರಿಗೆ ಅಲ್ಲಿ ಮೀಯಲು ಅವಕಾಶವಿಲ್ಲ. ಭವವನ್ನು ಅರ್ಥ ಮಾಡಿಕೊಳ್ಳದೆ, ಸಾಧನೆಯ ದಾರಿಯಲ್ಲಿ ಸರಳವಾಗಿ ಸಾಗದೆ ಜನನ-ಮರಣಗಳ ನಡುವೆ ಹೊಡಮರಳುವ ಮಾನವರಿಗೆ ಈ ಅನುಭಾವದ ಸಿಹಿಯು ಅದೆಲ್ಲಿ ಅಷ್ಟು ಸುಲಭವಾಗಿ ನಿಲುಕುವುದು. ಅನುಭಾವಿಗಳೆಲ್ಲ ಒಂದೆಡೆ ಸೇರಿ ಅಂಗ-ಲಿಂಗದ ಸಾಮರಸ್ಯವನ್ನು ತತ್ವಗಳನ್ನು ಪರಾಮರ್ಶಿಸಿ ಪೂರ್ಣಜ್ಞಾನವನ್ನು ಪಡೆದು ಅದರ ಪರಿಣಾಮದಿಂದ ಶಿವಾನಂದವನ್ನು ಸವಿಯುವ ಸವಿಯೂಟ ಶಿವಾನುಭವ ಎಂದು ಅಂಗಡಿಯವರು ತೋರಿಸಿದ್ದಾರೆ.

ಶಿವಾನುಭವ ಇದು ಪ್ರಮುಖವಾಗಿ ಆತ್ಮದ ಹಸಿವನ್ನು ಹಿಂಗಿಸುವ ಕಲೆ. ಈ ಕಲೆಯನ್ನು ೨೦ನೆಯ ಶತಮಾನದಲ್ಲಿ ಪ್ರಚಾರಕ್ಕೆ ಮತ್ತು ಪ್ರಸಾರಕ್ಕೆ ತಂದವರು ಹಾನಗಲ್ಲ ಕುಮಾರ ಶಿವಯೋಗಿಗಳು. ಇದರ ಮೊದಲ ಪ್ರಯೋಗ ೧೯೧೪ನೆಯ ಇಸ್ವಿಯಲ್ಲಿ ನಡೆದಿರುತ್ತದೆ. ಈ ಪ್ರಯೋಗವನ್ನು ಗದುಗಿನ ತೋಂಟದಾರ್ಯಮಠದಲ್ಲಿ ಮತ್ತು ಹಾಲಕೆರೆ ಮಠದಲ್ಲಿ ತಮ್ಮ ಜೀವನದ ಕೊನೆಯವರೆಗೂ ಅವಿರತವಾಗಿ ನಡೆಸುವ ಕಾರ್ಯದಲ್ಲಿ ಇವರು ತೊಡಗಿಸಿಕೊಂಡಿದ್ದರು.

ಗದುಗಿನ ತೋಂಟದಾರ್ಯ ಮಠ ಇಂದಿಗೂ ಈ ಶಿವಾನುಭವ ಪರಂಪರೆ ಯಶಸ್ವಿಯಾಗಿ ನಡೆಸಿಕೊಂಡು ಬರುತ್ತಿದೆ. ಶಿವಾನುಭವಗಳನ್ನು ಅಲ್ಲಲ್ಲಿ ಸಂಘ-ಸಂಸ್ಥೆಗಳ ಸಹಾಯದಿಂದ ನಡೆಸುತ್ತಿರಬೇಕು. ಜನರಲ್ಲಿ ಆಧ್ಯಾತ್ಮಿಕ ವಿಷಯ-ವಿಚಾರಗಳನ್ನು ನೆಲೆಗೊಳಿಸಬೇಕೆನ್ನುವುದು ಅವರ ಆಶಯವಾಗಿತ್ತು. ಶಿವಾನುಭವದಲ್ಲಿ ಅವರಿಗಿದ್ದ ಆಸ್ಥೆಯನ್ನು ಈ ಮಾತುಗಳು ವಿಶದಪಡಿಸುತ್ತವೆ. "ಈ ಶಿವಾನುಭವಕ್ಕೆ ಆಧಾರವಾಗಿರುವವರೇ ಅಂಗಡಿ ಗುರುಗಳು. ಆ ಪ್ರೇರಣೆಗೂ ಇವರೇ ಕಾರಣರು. ಬೆಳಗಿನ ಏಳು ಘಂಟೆಯೊಳಗೆ ಸ್ನಾನ ಪೂಜೆ ತೀರಿಸಿ, ತಮ್ಮ ಜೀವನಪೂರ್ತಿ ತಪ್ಪದೇ ಈ ಕಾರ್ಯವನ್ನು ನಡೆಯಿಸಿಕೊಂಡು ಬಂದಿರುತ್ತಾರೆ."[೬] ಇಂತಹುದೇ ಸಾಹಸವನ್ನು ಅವರು ತಮ್ಮ ಮನೆದೇವರಾದ ಗೊಡಚಿಯ ವೀರಭದ್ರ ದೇವಸ್ಥಾನದಲ್ಲಿ ಕೈಗೊಂಡಿದ್ದಾರೆ. "ಗೊಡಚಿ ಕ್ಷೇತ್ರದಲ್ಲಿಯೂ ಶ್ರೀಗಳವರಿಂದ (ಮುರಗೋಡ ಮಹಾಂತ ಶಿವಯೋಗಿಗಳು) ಬಸವ ಶಿವಾನುಭವ ಮಂಟಪ ಸ್ಥಾಪಿಸಲ್ಪಟ್ಟಿದ್ದು ಇದಕ್ಕೆ ಕ.ಬ.ಅಂಗಡಿಯವರ ಸೇವೆಯೂ ಸಲ್ಲಿದೆ."[೭] ಸುಮಾರು ಅರ್ಧ ಶತಮಾನದದಿಂದಲೂ ಗದುಗಿನ ಜನರಿಗೆ ಇವರ ಶಿವಾನುಭವದ ಕೊಡುಗೆಯು ಅವಿಸ್ಮರಣೀಯ. ಪಂ. ನಾಗಭೂಷಣ ಶಾಸ್ತ್ರಿಗಳವರ ನಾಯಕತ್ವದಲ್ಲಿ ಗುರುಸಿದ್ಧಪ್ಪನವರು ಬಳ್ಳಾರಿ, ಶಿವಪ್ಪನವರು ತುಪ್ಪದ, ಶಾಂತಪ್ಪನವರು ಯಳಮಲಿ, ಮಡಿವಾಳಪ್ಪನವರು ವೀಣೇಕರ, ಚೆನ್ನಪ್ಪನವರು ಹುರಕಡ್ಲಿ, ಈಶ್ವರಪ್ಪನವರು ಬೇಂಡಿಗೇರಿ, ಈಶ್ವರಪ್ಪ ಭೂಸ್ತ ಮುಂತಾದ ಕೆಲ ಶಿವಾನುಭವ ಪ್ರೇಮಿಗಳನ್ನು ಕೂಡಿಕೊಂಡು ಹಾಳಕೇರಿ ಅನ್ನದಾನ ಸ್ವಾಮಿಗಳವರ ಮಠದಲ್ಲಿ 'ಶಿವಾನುಭವ' ಸಂಘವನ್ನು ಸ್ಥಾಪಿಸಿ ಆ ಮುಖಾಂತರ ಕ.ಬ.ಅಂಗಡಿಯವರಿಂದ ಸುಲಭ ಶೈಲಿಯ ಪದ್ಯಗಳನ್ನು ರಚಿಸಿ ಸಣ್ಣ ಸಣ್ಣ ಪುಸ್ತಿಕೆಗಳನ್ನು ಹಂಚಿದ ಪರಿಣಾಮವಾಗಿ ಅಂದಿನ ಹೆಣ್ಣು ಮಕ್ಕಳಿಗೆ ಷಟ್ಸ್ಥಲ, ಅಷ್ಟಾವರಣ, ಪಂಚಾಚಾರ ತತ್ವಗಳು ಕೌದಿಯಾಗಿಯೂ, ಹೆಣಿಕೆಯ ವಸ್ತ್ರವಾಗಿಯೂ ಮುಖ ಪಾಠವಾಗಿದ್ದವು. ಅಖಿಲ ಭಾರತ ವೀರಶೈವ ವಿದ್ಯಾಪೀಠಗಳಂತಹ ಸಂಸ್ಥೆಗಳನ್ನು ಆಶ್ರಯಿಸಿ ಶಿವಾನುಭವದ ಪ್ರಸಾರಕ್ಕೆ

ಸಾಕಷ್ಟು ಶ್ರಮಿಸಿದ್ದಾರೆ. ಆ ಮೂಲಕ ವೀರಶೈವ ತತ್ವಗಳ ಪ್ರಸಾರಕ್ಕೆ ತಮ್ಮ ಅಮೂಲ್ಯವಾದ ಸೇವೆಯನ್ನು ಸಲ್ಲಿಸಿದ್ದಾರೆ.

ಈ ಎಲ್ಲ ವಿಷಯಗಳು ಅವರ ಬದುಕು ಮತ್ತು ಬರಹದ ತುಂಬ ಶಿವಾನುಭವ ಸೌರಭವನ್ನೇ ಸೂಸುವುದನ್ನು ತೋರ್ಪಡಿಸುತ್ತವೆ. ಅವರು ಹೇಳುವ ವಿಷಯ-ಕ್ಷೇತ್ರಗಳು ವೈವಿಧ್ಯತೆಯಿಂದ ಕೂಡಿದ್ದರೂ, ಅವರ ಸಂವಹನ ಶೈಲಿ ಮಾತ್ರ ಶಿವಾನುಭವ, ಬಸವಾದಿ ಶಿವಶರಣರ ತತ್ವ-ವಿವೇಚನೆಗಳಿಂದಲೇ ನಡೆಯುತ್ತಿದ್ದುದು ಗುರುತಿಸಬಹುದು.

## ೩.೭ ಒಡನಾಟ :

ಕ.ಬ.ಅಂಗಡಿಯವರ ಬದುಕಿನಲ್ಲಿ ಹಾನಗಲ್ಲ ಕುಮಾರ ಶಿವಯೋಗಿಗಳು ಪ್ರಮುಖ ಪಾತ್ರ ವಹಿಸುತ್ತಾರೆ. ತಮ್ಮ ತಂದೆಯೊಂದಿಗೆ ಒಂದು ದಿನ ಶಿವಯೋಗ ಮಂದಿರಕ್ಕೆ ಹೋದಂತಹ ಸಂದರ್ಭದಲ್ಲಿ ಹಾನಗಲ್ಲ ಕುಮಾರ ಶಿವಯೋಗಿಗಳ ದರ್ಶನಭಾಗ್ಯ ಪಡೆದರು. ಅವರ ಅಭಿಪ್ರಾಯ ಸಲಹೆಯ ಮೇರೆಗೆ ಕ.ಬ.ಅಂಗಡಿಯವರು ಶಿವಯೋಗ ಮಂದಿರದಲ್ಲಿ ವಟುವಾಗಿ ಸಾಧನೆಗೈದರು. ಈ ಸಮಯವು ಅವರ ಬದುಕಿನಲ್ಲಿ ಸಾತ್ವಿಕ ಸಿದ್ಧಾಂತಗಳ ಪರಿಚಯ ಮಾಡಿಕೊಟ್ಟಿತು. ಹಾನಗಲ್ಲ ಕುಮಾರ ಶಿವಯೋಗಿಗಳ ಯೋಚನೆ ಮತ್ತು ಯೋಜನೆಯಂತೆ ಅಂಗಡಿಯವರ ಜೀವನ ರೂಪುಗೊಳ್ಳತೊಡಗಿತು. ಅವರಲ್ಲಿ ಸಾಮಾಜಿಕ ಬದಲಾವಣೆಯ ಬೀಜ ಮೊಳಕೆಯೊಡೆಯಲು ಪ್ರಾರಂಭಿಸಿತು. ಅದೇ ಸಮಯದಲ್ಲಿ ಅವರಿಗೆ ನರೇಗಲ್ಲದ ಕೋಡಿಕೊಪ್ಪದಲ್ಲಿ ನೆಲೆನಿಂತು ಮನೆ ಮನೆ ಮಾತಾದ ಸಂತ ಪಕೀರ ವೀರಪ್ಪಜ್ಜನವರ ದರ್ಶನವೂ ದೊರೆಯಿತು. “ಯಾವುದು ಅಲ್ಲ, ಅದು ಹೌದು! ಯಾವುದು ಹೌದು ಅದು ಅಲ್ಲ!”[೮] ಎನ್ನುವ ಅವರ ತತ್ವಜ್ಞಾನಕ್ಕೆ ಮಾರುಹೋದರು. ಇತಿಹಾಸ ಕಂಡಂತೆ ವೀರಪ್ಪಜ್ಜನವರು ಹಠಯೋಗಿಗಳು, ನಿಜಸಾಂಭನೆಂದು ಪ್ರಖ್ಯಾತಿ ಹೊಂದಿದವರು. ಅವರ ಜೀವನದ ಹಾದಿಯನ್ನು ಗಮನಿಸಿದಾಗ ಇಹ-ಪರವನ್ನು ಗೆಲ್ಲಲು ಬೇಕಾದ ನಿತ್ಯದ ಜೀವನ ಅವರದಾಗಿತ್ತು ಎಂದು ಅನ್ನಿಸದೇ ಇರದು. ಅವರು ಬದುಕಿದ ಬದುಕು ಹೊರಗಿನವರಿಗೆ ವಿಚಿತ್ರವಾಗಿ, ವಿಭಿನ್ನವಾಗಿ, ಕಠೋರವಾಗಿ ಕಂಡರೂ ಅದು ಸತ್ಯದ ಸರಳತೆಯಲ್ಲಿ ವಿರಮಿಸುವಂತಹುದು. ಅಂತಹ ಹಠಯೋಗಿಗಳ ಸಾಧನೆಯನ್ನು ಗುರುತಿಸಿ ಅವರ ಒಡನಾಟವನ್ನು ಬಯಸಿದರು. ಇವರಿಬ್ಬರ ನಡುವಿನ ಮಾತುಕತೆಗಳು ತಿಳಿದು ಬರುವುದಿಲ್ಲವಾದರೂ ವೀರಪ್ಪಜ್ಜನವರ ಪ್ರಭಾವ ಇವರಿಗೆ ಆಗಿರುವುದು ಸ್ಪಷ್ಟವಾಗಿ ಗುರುತಿಸಬಹುದು.

ಅಣ್ವಸ್ತ್ರಗಳಿಂದ ಇಡೀ ಜಗತ್ತು ಯುದ್ಧದ ಭಯದಲ್ಲಿ, ಭಯೋತ್ಪಾದನೆಯಲ್ಲಿ ಮುಳುಗಿರುವ ಈ ಸಂದರ್ಭಗಳಲ್ಲಿ ಇವರು ತಮ್ಮ ಸುತ್ತಲಿನ ಪರಿಸರದಲ್ಲಿ ಅದಕ್ಕೆ ವೈರುಧ್ಯವಾದ ಶಾಂತಿ-ಸಮನ್ವಯತೆಗಳನ್ನು ಸಾರುವಲ್ಲಿ ಮೌನ ಕ್ರಾಂತಿಯನ್ನು ಮಾಡಿದರೆಂದರೆ ತಪ್ಪಾಗಲಾರದು. ಶಿವಾನುಭವವೆಂಬ ಪರಮ ವಿದ್ಯೆಯನ್ನು ಭಯೋತ್ಪಾದನೆಯ ಹುಟ್ಟಡಗಿಸಲು ಬಳಸಿಕೊಳ್ಳಬಹುದೆಂದು ಪರೋಕ್ಷವಾಗಿ ಅವರ ಬದುಕು-ಬರಹಗಳು ತೋರಿಸಿಕೊಡುತ್ತವೆ. ಇದು ಸಾಮಾಜಿಕವಾಗಿ ಬದಲಾವಣೆಯ ಹಂತವಲ್ಲವೆ? ಲಿಂಗಾಂಗ ಸಾಮರಸ್ಯದ ರಹಸ್ಯವನ್ನು ತಿಳಿಯಲು ಅನುಭವ ಗೋಷ್ಠಿಗಳು, ಶಿವಯೋಗಿ ಶರಣರ ಸಹವಾಸ, ಅದರ ಬಗೆಗೆ ಆಸಕ್ತಿ, ಅಧ್ಯಯನದ ಹಂಬಲ ಇವೆಲ್ಲವೂ ಇರಬೇಕಾಗುತ್ತದೆ. ಅಂತಹ ಅಪರೂಪದ ಪರಿಸರವನ್ನು, ಪರಿಚಾರಿಕತೆಯನ್ನು, ವೈಚಾರಿಕತೆಯನ್ನು ತಮ್ಮ ಸುತ್ತಲೂ ಅವರು ಬೆಳೆಸಿಕೊಂಡಿದ್ದರು.

ಈ ಅನುಭವದ ಪಯಣಕ್ಕೆ ಮತ್ತೊಂದು ಪರುಷವಾಗಿ ದೊರೆತವರು ಅರಭಾವಿ-ಮುರಗೋಡ ಮಠದ ಶ್ರೀಗಳಾದ ಮಹಾಂತ ಶಿವಯೋಗಿಗಳು ಅವರ ಸಾನಿಧ್ಯದಲ್ಲಿ ಇವರು ಇಹ-ಪರದಲ್ಲಿ ಸಲ್ಲಲು ಬೇಕಾದ ಪರಿಪಕ್ವತೆಯನ್ನು ಪಡೆದುಕೊಂಡರು. ಮಹಾಂತ ಶಿವಯೋಗಿಗಳ ಒಡನಾಟದಲ್ಲಿ ಅವರ ಮೃದು ಭಾಷೆ, ಸಂಯಮ, ಸದಾ ತಪಸ್ವಿಯ ನಿಲುವು, ಅಚಲವಾದ ಸಾಧನೆ, ಸರಳತೆ, ಸಜ್ಜನಿಕೆಗಳು ಕ.ಬ.ಅಂಗಡಿಯವರನ್ನೂ ಆವರಿಸಿಕೊಂಡವು. ಮಗುವಿನ ನಿಲುವನ್ನು ಹೊಂದಿದ ಮುರಗೋಡ ಮಹಾಂತ ಶಿವಯೋಗಿಗಳು ಈ ಶತಮಾನ ಕಂಡ ಮಹಾ ತಪಸ್ವಿ ಅವರ ತಪಸ್ಸಿನ ಆಳ ಅಂತರವನ್ನು ನಾವು ಅವರ ಸಾಮಾಜಿಕ ಸೇವೆಯಿಂದ ಗುರುತಿಸುತ್ತೇವೆ. ಸಂಶೋಧನೆಯ ಹೊಳಹುಗಳನ್ನು ಕ.ಬ.ಅಂಗಡಿಯವರಲ್ಲಿ ಹುಟ್ಟುಹಾಕುವಲ್ಲಿ ಮುರಗೋಡ ಮಹಾಂತ ಶಿವಯೋಗಿಗಳ ಪಾತ್ರ ಮಹತ್ವವಾದದ್ದು. ಅವರಿಬ್ಬರ ಒಡನಾಟವನ್ನು ಕುರಿತು ಮುರಗೋಡದ ನಿವೃತ್ತ ಶಿಕ್ಷಕರಾದ ಶ್ರೀ ವಿ.ಚೆ.ಕುಬುಸದ ಅವರು ಹೀಗೆನ್ನುತ್ತಾರೆ. "ಮಹಾಂತಜ್ಜನ ಕೃಪೆಗೊಳಗಾಗಿ ತಮ್ಮ ಜೀವನ ಪಾವನ ಮಾಡಿಕೊಂಡವರಲ್ಲಿ ಅಂಗಡಿ ಕರವೀರಪ್ಪನವರೊಬ್ಬರು. ಗದುಗಿನ ಶಾಲಾ ಶಿಕ್ಷಕರಾದ್ದಾಗಿನಿಂದ ಮಠಕ್ಕೆ ಬಂದು, ಅಜ್ಜ ಅವರ ಪಾದದರ್ಶನದಿಂದ ತೃಪ್ತಿಗೊಂಡು ಹೋಗುತ್ತಿದ್ದ ಶ್ರೀಯುತರು ಉಪಶಿಕ್ಷಣಾಧಿಕಾರಿಗಳಾಗಿ ಮುರಗೋಡ ವಿಭಾಗಕ್ಕೆ ಬಂದ ಮೇಲಂತೂ, ಮಠವೇ ಅವರ ವಸತಿ(ಕ್ಯಾಂಪಿಂಗ್) ಸ್ಥಾನವಾಯಿತು. ಶ್ರೀಗಳವರ ಪೂಜಾನುಷ್ಠಾನಾದಿಕ್ರಿಯೆಗಳವರಿಗೆ ಪಂಚಪ್ರಾಣ. ಶ್ರೀಗಳವರು ನೀಡುವ ಆಶೀರ್ವಚನಗಳನ್ನು ಕೇಳಿ ಮಂತ್ರಮುಗ್ಧರಾಗುವುದು ಅವರ ಆಗಿನ ಚರ್ಯೆ! ಮಠದ ಹಳೆಯ ಹೊಸ ಸಾಹಿತ್ಯ ಪ್ರತಿಗಳನ್ನು ಓದಿ ಅವುಗಳ

ಅನುಭವವನ್ನು ಹೊರಗೆ ಹಾಕುವುದೂ, ಶ್ರೀಗಳವರನ್ನು ಕೂಡಿ, ಮುರಗೋಡ, ಕಾರೀಮನೆ, ಸೊಗಲ, ಸವದತ್ತಿ, ರೇಣುಕಾ ಕ್ಷೇತ್ರಗಳನ್ನು ಸಂದರ್ಶಿಸಿ, ಅಲ್ಲಿಯ ಸ್ಥಾನವನ್ನು ಕಟ್ಟುವ ಮಹತ್ವವನ್ನೂ ಅವುಗಳ ಐತಿಹಾಸಿಕ ಹಿನ್ನೆಲೆಯನ್ನೂ ಹೊರದೆಗೆದು ಸರ್ವರಿಗೂ ಸಾಹಿತ್ಯದ ರಸದೂಟವನ್ನು ನೀಡುತಲಿರುವುದೂ ಅವರಿಗೆ ತೃಪ್ತಿಯ ವಿಷಯ. ಪ್ರತಿ ವರುಷ ಶ್ರೀಕ್ಷೇತ್ರ ಗೊಡಚಿಗೆ ಯಾತ್ರಾ ಸಮಾರಂಭದಲ್ಲಿ ಮಾಹಾಂತಜ್ಜನನ್ನು ದಯಮಾಡಿಸಿಕೊಂಡು, ಅವರ ಕೃಪಾವರಣದಲ್ಲಿ ಶಿವಾನುಭವ ಕಾರ್ಯಕ್ರಮಗಳನ್ನು ಅಂಗಡಿಯವರ ಚಾಲಕತ್ವದಲ್ಲಿ ಸೇವಾಸಂಘದವರು ನಡೆಸುತ್ತಲಿದ್ದ ಕಾರಣದಿಂದಾಗಿ ಶ್ರೀ ಕ್ಷೇತ್ರವು ಜಂಗಮ ಕ್ಷೇತ್ರವಾಗಿ ಮೆರೆಯ ಹತ್ತಿತು. ತಮ್ಮ ಹಾಗೂ ತಮ್ಮ ಪುತ್ರ ಪೌತ್ರರ ಸುಖಾಭಿವೃದ್ಧಿಗೆ ಮಹಾಂತಜ್ಜನ ಕೃಪೆಯೆ ಕಾರಣವೆಂದು, ತುಂಬು ಹೃದಯದಿಂದ ಸಾಹೇಬರು ಹೇಳುತ್ತಲಿದ್ದುದು ನನ್ನ ಹೃದಯಲ್ಲೇಕೆ ಮುರಗೋಡ ಶ್ರೀಗಳವರ ಭಕ್ತ ವೃಂದದ ಹೃದಯದಲ್ಲಿಯೂ ಬೇರೂರಿ ನಿಂತಿದೆ. ಇಂತು ಇವರ ನಿಷ್ಠೆಯ ನಿಲುವು!"[5]

ಮುರಗೋಡ ಮಹಾಂತ ಶಿವಯೋಗಿಗಳ ಈ ನಿಕಟ ಒಡನಾಟವೇ ಅವರನ್ನು ಕಾವ್ಯ ಋಷಿಯನ್ನಾಗಿಸಿತು. ಆತ್ಮಜ್ಞಾನಿಯ ಚರಿತ್ರೆಯನ್ನು ಬರೆಯುವುದು ಆ ಮಾರ್ಗದಲ್ಲಿ ಸಾಧನೆ ಮಾಡಿದವರಿಗೆ ಮಾತ್ರ ಸಾಧ್ಯ. ಆ ಮಾರ್ಗದ ಲವಲೇಶವೂ ಗೊತ್ತಿರದ ಸಾಹಿತಿಯಲ್ಲಿ ನಾವು ಈ ರೀತಿಯ ಗುಣ ಮೌಲ್ಯವನ್ನು ಕಾಣುವುದು ಸಾಧ್ಯವಿಲ್ಲ. ಹೀಗಾಗಿ ಶಿವ ಮಾರ್ಗದಲ್ಲಿ ನಡೆಯುತ್ತ, ಶಿವಶರಣರ ಜೀವನವನ್ನು ಪರಿಪಾಲಿಸುತ್ತ, ಶಿವಾನುಭವದಲ್ಲಿ ಆಸಕ್ತರಾಗುತ್ತ ತಾವೊಬ್ಬ ಶರಣ ಸಾಹಿತಿಯಾಗಿ ಗುರುತಿಸಿಕೊಳ್ಳುತ್ತಲೇ ಶರಣಸ್ಥಲವನ್ನು ಪ್ರಾಪ್ತಿ ಮಾಡಿಕೊಂಡರು. ಮುರಗೋಡ ಮಹಾಂತ ಶಿವಯೋಗಿಗಳ ಜೀವನ ಚರಿತ್ರೆಯನ್ನು ಭಾಮಿನಿ ಷಟ್ಪದಿಯಲ್ಲಿ ಬರೆದು ತಮ್ಮಲ್ಲಿಯ ಭಕ್ತಿ ಮತ್ತು ಸಮರ್ಪಣಾ ಮನೋಭಾವವನ್ನು ಅಭಿವ್ಯಕ್ತಿಸಿದ್ದಾರೆ. ಪುರುಷನೊರ್ವನ ಪೂವಾರ್ಥ ಜೀವನದಲ್ಲಿ ತಾಯಿಯೊಬ್ಬಳು ಹೇಗೆ ಬದುಕಿನ ರಹದಾರಿಯನ್ನು ತೋರುತ್ತಾಳೋ ಉತ್ತರಾರ್ಥದಲ್ಲಿ ಹೆಂಡತಿಯೊಬ್ಬಳು ಹೇಗೆ ತನ್ನನ್ನು ತಾನು ಸಮರ್ಪಣಾ ಭಾವದಿಂದ ಸಮರ್ಪಿಸಿಕೊಂಡು ಪುರುಷನ ಉತ್ತರಾರ್ಥವನ್ನು ಬೆಳಗುತ್ತಾಳೋ ಹಾಗೆಯೇ ಅವರ ಜೀವನದ ಪೂವಾರ್ಥದಲ್ಲಿ ಹಾನಗಲ್ಲ ಕುಮಾರ ಶಿವಯೋಗಿಗಳು ಜೀವನ್ಮುಕ್ತಿಯ ದಾರಿಯನ್ನು ತೋರಿಸಿದರೆ ಉತ್ತರಾರ್ಥದಲ್ಲಿ ಅರಭಾವಿ–ಮುರಗೋಡ ಮಹಾಂತ ಶಿವಯೋಗಿಗಳು ಶರಣಸ್ಥಲದ ಪ್ರಾಪ್ತಿಗೆ ಕಾರಣರಾಗುತ್ತಾರೆ.

ಮೃಡಗಿರಿಯ ೯ನೆಯ ಮತ್ತು ೧೧ನೆಯ(ಇಂದಿನ) ಪೀಠಾಧಿಪತಿಗಳಾದ ಅನ್ನದಾನೀಶ್ವರರ ಒಡನಾಟವೂ ಇವರಿಗಿದೆ. ಕ.ಬ.ಅಂಗಡಿಯವರ ನಿವೃತ್ತಿಯ ಸಮಯದಲ್ಲಿ "ಬಂಗಾರದ ಪೆನ್ನೊಂದನ್ನು"[೧೦] ನೀಡಿ ಹೆಚ್ಚಿನ ಕಾವ್ಯಕೃಷಿಗೆ ಮೊದಲು ಆಶೀರ್ವದಿಸಿದವರು ಮುಂಡರಗಿ ಮಠದ ೯ನೆಯ ಪೀಠಾಧಿಪತಿಗಳಾದ ಶ್ರೀ ಅನ್ನದಾನೀಶ್ವರರು. ಅದರಂತೆ ಮುಂಡರಗಿಯ ಇಂದಿನ ಶ್ರೀಗಳೊಂದಿಗೂ ಹೆಚ್ಚು ಒಡನಾಟವಿತ್ತು. ವಯಸ್ಸಿನಲ್ಲಿ ಕ.ಬ.ಅಂಗಡಿಯವರು ಹಿರಿಯರಾದರೂ ಕಿರಿಯರಾದ ಇಂದಿನ ಶ್ರೀಗಳೊಟ್ಟಿಗೆ ಹೆಚ್ಚು ಆತ್ಮೀಯರಾಗಿದ್ದರು. "ತಾವು ಬಲ್ಲವರು, ಪ್ರಸಿದ್ಧ ಲೇಖಕರು ಎಂಬುವ ಅಹಂಕಾರ ಅವರಲ್ಲಿರಲಿಲ್ಲ. ಬರವಣಿಗೆಯಲ್ಲಿ ಯಾರಾದರೂ ಹೊಸತನ್ನು ಸೂಚಿಸಿದರೆ, ಯಾವುದೇ ಬಿಗುಮಾನವಿಲ್ಲದೆ ಒಪ್ಪಿಕೊಳ್ಳುತ್ತಿದ್ದರು."[೧೧] 'ಮೃಡಗಿರಿ ಜಗದ್ಗುರು ಅನ್ನದಾನೀಶ್ವರ ಲೀಲಾಮೃತ' ಪುರಾಣ ರಚನೆಯ ಸಂದರ್ಭದಲ್ಲಿ ಇವರ ಕಾರ್ಯ ವೈಖರಿಯನ್ನು ಮೆಚ್ಚಿದರು. ಅಂಗಡಿಯವರ ಮನೆಯಲ್ಲಿ ನಡೆಯುವ ಎಲ್ಲ ಕಾರ್ಯದಲ್ಲೂ ಶ್ರೀಗಳ ಅಮೃತಹಸ್ತವಿದ್ದೇ ಇರುತ್ತಿತ್ತು. ಅದು ಮಹಾಂತ ಕೃಪಾ ಕಟ್ಟಡವಾಗಲಿ, ಅವರ ಮಕ್ಕಳ ಮದುವೆಯಾಗಲಿ ಅಲ್ಲಿ ಶ್ರೀಗಳ ಇರುವಿಕೆಯನ್ನು ಗುರುತಿಸಬಹುದಾಗಿದೆ.

## ೩.೮ ಪರಿಸರ :

ಹತ್ತೊಂಭತ್ತು ಮತ್ತು ಇಪ್ಪತ್ತನೆಯ ಶತಮಾನದ ಕೊಂಡಿಯಾಗಿ ಕಂಡು ಬರುವ ಇವರ ವ್ಯಕ್ತಿತ್ವ ರಚನೆಯಲ್ಲಿ ಅವರ ಅಂದಿನ ಪರಿಸರ ಕೂಡ ಅಷ್ಟೇ ಸಹಾಯಕಾರಿಯಾಗಿದೆ. ವ್ಯಕ್ತಿಯಲ್ಲಿ ಉನ್ನತ ವಿಚಾರಗಳನ್ನು ಬಿತ್ತಿ-ಬೆಳೆಸಿದರೆ ಅದರ ಫಲವೂ ಅಷ್ಟೇ ಪರಿಣಾಮಕಾರಿಯಾಗಿರುತ್ತದೆ ಎನ್ನುವುದಕ್ಕೆ ಸಾಕ್ಷಿ ಇವರಾಗಿದ್ದಾರೆ. ಹತ್ತೊಂಭತ್ತನೆಯ ಶತಮಾನದ ಮುಕ್ತಾಯ ಮತ್ತು ಇಪ್ಪತ್ತನೆಯ ಶತಮಾನದ ಆರಂಭದ ದಿನಗಳನ್ನು ಪುನರಾವಲೋಕನ ಮಾಡಿದಲ್ಲಿ ವೀರಶೈವ ಸಮಾಜದ ಗಣನೀಯ ಬೆಳವಣಿಗೆ ಮತ್ತು ಅದಕ್ಕೆ ಕಾರಣವಾದ ಶೈಕ್ಷಣಿಕ ಕ್ರಾಂತಿಯ ಅರಿವು ನಮಗೆ ಮೂಡುತ್ತದೆ. ಅಲ್ಲಿಂದಲೇ ವೀರಶೈವ ಸಾಹಿತ್ಯ ಸಂಸ್ಕೃತಿಯನ್ನು ಬೆಳೆಸಿ ಸಂವೃದ್ಧಿಸಬೇಕು ಎಂಬ ಇಚ್ಛೆಯಿಂದ ಅನೇಕ ವೀರಶೈವ ಮಹನಿಯರು ದುಡಿಯುತ್ತಾ ಬಂದರು. ಫ.ಗು.ಹಳಕಟ್ಟಿಯವರು, ಶಿ.ಶಿ.ಬಸವನಾಳರು, ಡೆಪ್ಯುಟಿ ಚೆನ್ನಬಸಪ್ಪನವರು, ಅರಟಾಳ ರುದ್ರಗೌಡರು, ಬಿ.ಶಿವಮೂರ್ತಿ ಶಾಸ್ತ್ರಿಗಳು ಮುಂತಾದವರು ಸಮಕಾಲೀನ ವೀರಶೈವತ್ವ ತತ್ವ ಚಿಂತನೆಗಳ ಪರಾಮರ್ಶನಕ್ಕೆ ತೊಡಗಿದ್ದರು. ಸಾಮಾಜಿಕವಾಗಿ ರಾಜಾರಾಮ್ ಮೋಹನರಾಯ್, ದಯಾನಂದ ಸರಸ್ವತಿ,

ರಾಮಕೃಷ್ಣ ಪರಮಹಂಸರು, ಸ್ವಾಮಿ ವಿವೇಕಾನಂದರಂತಹ ಮೇಧಾವಿ ಶಕ್ತಿಗಳು ಭಾರತದ ಆಂತರಿಕ ಸಮಾಜವನ್ನು ಸದೃಢವಾಗಿಸಲು ಶ್ರಮಿಸುತ್ತಿದ್ದರು. ಇವರೆಲ್ಲರ ಹೋರಾಟ ದಿನದಿಂದ ದಿನಕ್ಕೆ ಶಕ್ತಿಯುತವಾಗ ಹತ್ತಿತು. ಬ್ರಿಟಿಷ್ ಸಾಮ್ರಾಜ್ಯ ತನ್ನ ಇತಿಹಾಸವನ್ನು ಮತ್ತು ತನ್ನ ಭಾಷೆಯನ್ನು ಭಾರತೀಯರ ಮೇಲೆ ಹೇರತೊಡಗಿತ್ತು. ಅದು ಕಾಲಾಂತರದಲ್ಲಿ ತಮಗೆ ಮುಳುವಾಗಬಹುದೆಂದು ಅವರು ಊಹಿಸಿರಲಿಲ್ಲ. ದೇಶದ ಸ್ವಾತಂತ್ರತೆ, ಅದರ ಸಾಮಾಜಿಕ ಬದಲಾವಣೆಗಳು ಭಾರತೀಯರಲ್ಲಿ ಪ್ರಕರ ಮಾನಸಿಕ ಬದಲಾವಣೆಗಳನ್ನು ತರಲು ಪ್ರಾರಂಭಿಸಿದವು. ಅವರನ್ನು ತಾತ್ವಿಕವಾಗಿ, ಸಾಹಿತ್ಯಿಕವಾಗಿ, ವ್ಯವಹಾರಿಕವಾಗಿ, ತಾಂತ್ರಿಕವಾಗಿ ವಿಚಾರವಂತರನ್ನಾಗಿ ಮಾಡಿದವು. ಅದರ ಫಲಶೃತಿಯನ್ನು ನಾವು ಸ್ವಾತಂತ್ರ್ಯ ಚಳುವಳಿಯ ಮೂಲಕ ಬ್ರಿಟಿಷರಿಗೆ ತೋರ್ಪಡಿಸಿದ್ದು ಈಗ ಇತಿಹಾಸ. ಈ ಎಲ್ಲ ಸಂಗತಿಗಳು ಇವರ ಜೀವನದ ಮೇಲೆ ತೀವ್ರ ಪರಿಣಾಮವನ್ನು ಬೀರದವೆಂದರೆ ತಪ್ಪಾಗಲಾರದು. ಈ ವಿಷಯಗಳಿಗೆ ಅವರ ಬರೆದ ಸುಭಾಸಚಂದ್ರ ಬೋಸ, ಜವಾಹರಲಾಲ ನೆಹರು, ಮೋತಿಲಾಲ ನೆಹರು, ಕಿತ್ತೂರ ಚೆನ್ನಮ್ಮ, ಬೆಳವಡಿ ಮಲ್ಲಮ್ಮ, ಕೆಳದಿಯ ಚೆನ್ನಮ್ಮನಂತಹ ಕೃತಿಗಳೇ ಸಾಕ್ಷಿಯಾಗುತ್ತವೆ.

ಮೆಣಸಗಿಯ ಅವರ ಮನೆಯ ಸಮೀಪದಲ್ಲಿದ್ದ ಲಿಂಗಬಸವೇಶ್ವರ ಮಠ ಅವರ ಬದುಕಿನ ಅವಿಭಾಜ್ಯ ಅಂಗವಾಗಿತ್ತು. ಮಠದ ಸಾಮಾಜಿಕ–ಧಾರ್ಮಿಕ–ಸಾಂಸ್ಕೃತಿಕ ಕೊಡುಕೊಳ್ಳುವಿಕೆಗಳ ಭಾಗವಾಗುತ್ತ ಬೆಳೆದ ಅವರು ಸಾಹಿತ್ಯ, ಸಂಗೀತ, ಧಾರ್ಮಿಕ, ಸಾಂಸ್ಕೃತಿಕ ಬೆಳವಣಿಗೆಗಳನ್ನು ಮಠದ ಪರಿಸರ–ಕಾರ್ಯಕ್ರಮಗಳ ಮೂಲಕವೇ ತಮ್ಮೊಳಗೆ ತಂದುಕೊಂಡದ್ದು. ಮಠದ ಪ್ರತಿಯೊಂದು ಕಾರ್ಯ ಅವರ ಜೀವನದ ನಾಡಿಬಡಿತಗಳಲ್ಲಿ ಮೇಳೈಸಿವೆ. ಮಠದ ಗಂಟೆ –ಜಾಗಟೆಗಳ ಶಬ್ದ ಸಂವಹನಗಳು ಅವರ ಕಾಯಕದ ಪ್ರಾರಂಭ ಮತ್ತು ಮುಕ್ತಾಯದ ಗುರುತುಗಳಾಗಿದ್ದವು. ಬದುಕಿನ ಗಡಿಯಾರವಾಗಿದ್ದವು. ಅಲ್ಲಿ ಹತ್ತುವ ದೀಪದ ಸಮಯವು ಕೂಡ ಅವರ ಕಾಯಕದ ಕುರುಹು ಆಗಿತ್ತು.

ಅದರಂತೆ ಶಿವಯೋಗ ಮಂದಿರದ ಒಡನಾಟ ಕೂಡ ಅವರ ಬದುಕಿನಲ್ಲಿ ಮಹತ್ತರ ಬದಲಾವಣೆಗಳನ್ನು ತಂದಿದೆ. ಶಿವಯೋಗಮಂದಿರವೆಂಬ ಸಂಸ್ಥೆ ರಾಷ್ಟ್ರಕವಿ ರವೀಂದ್ರನಾಥ ಠಾಗೋರರು ಕಟ್ಟಿ ಬೆಳೆಸಿದ 'ಶಾಂತಿನೀಕೇತನ'ವೆಂಬ ಗುರುಕುಲ ಮಾದರಿಯ ಸಂಸ್ಥೆಯಷ್ಟೇ ಬಲಶಾಲಿಯಾದುದು. ಅದು ಒಂದು ಸಮಾಜ, ಜಾತಿ, ಧರ್ಮ, ವರ್ಗ, ವರ್ಣಗಳಿಗೆ ಸೀಮಿತವಾದ ಸಂಸ್ಥೆಯಲ್ಲ. ಬಸವಾದಿ ಶರಣರ ಸಾತ್ವಿಕ ನಿಲುವುಗಳನ್ನು ಆದರಿಸಿದ ಸಂಸ್ಥೆಯಾದರೂ, ಮಠ–ಮಾನ್ಯಗಳಿಗೆ ನಿಯುಕ್ತವಾಗುವ

ಪೀಠಾಧೀಪತಿಗಳಿಗೆ ಅಥವಾ ವಾರಸುದಾರರಿಗೆ ಬೇಕಾಗುವ ಗುಣ-ಲಕ್ಷಣಗಳನ್ನು ದೊರಕಿಸಿಕೊಡುವ ಸಂಸ್ಥೆಯಿದಾದರೂ ಸರ್ಮಧರ್ಮ ಸಮನ್ವಯತೆ, ಸದಾಚಾರಗಳ ನಡತೆಯನ್ನು ಸರ್ವ ಸಮಾಜದಲ್ಲೂ ನೆಲೆ ನಿಲ್ಲಿಸುವುದು ಅದರ ಮೂಲ ಉದ್ದೇಶವಾಗಿದ್ದರಿಂದ ಆ ಸಂಸ್ಥೆಯನ್ನು ಜಾತಿಯ ಮನೋಭಾವದಿಂದ ದೂರವಾಗಿ ನೋಡುವದೇ ಸ್ತುತ್ಯಾರ್ಹ. ಈ ಹಿನ್ನೆಲೆಯಿಂದ ರಚನೆಗೊಂಡ ಜೀವನ ನಿಷ್ಠೆಗಳು ಶ್ರೀ ಕ.ಬ.ಅಂಗಡಿಯವರ ಬದುಕು-ಬರಹಗಳಲ್ಲೂ ಕಂಡು ಬರುತ್ತವೆ.

ಶಿವಯೋಗ ಮಂದಿರವನ್ನು ಕುರಿತು ಹಲವಾರು ಪುಸ್ತಕಗಳು ಹೊರಬಂದಿದ್ದು, ಮೂರು-ನಾಲ್ಕು ಸಂಶೋಧನೆಯ ಪ್ರಬಂಧಗಳೂ ಹೊರಬಂದಿವೆ. ಶ್ರೀಮದ್ವಿರಶೈವ ಸಂಸ್ಥೆಯಗಿರುವ ಈ ಮಂದಿರದ ಹುಟ್ಟಿಗೆ ಕಾರಣ ಮತ್ತು ಅದರ ಕರ್ತೃವನ್ನು ಅಭ್ಯಸಿಸುವುದು ಸ್ತುತ್ಯಾರ್ಹವೇ ಆಗಿರುತ್ತದೆ. ಏಕೆಂದರೆ ಆ ಸಂಸ್ಥೆಯ ರೂಪದಲ್ಲಿ ಅದರ ಆಶಯಗಳು ಕ.ಬ.ಅಂಗಡಿಯವರಂತಹ ಮಹಿಮರನ್ನು ಹುಟ್ಟು ಹಾಕಿ, ಆ ಮೂಲಕ ಸಾಂಘಿಕವಾಗಿ ಸಮಾಜ ಕಟ್ಟುವ ಕಾರ್ಯಕ್ಕೆ ಅನುವಾದುದನ್ನು ಇಲ್ಲಿ ಸ್ಮರಿಸಬೇಕಾಗುತ್ತದೆ. ಈ ಸಂಸ್ಥೆಯೊಂದು ಅವರ ಜೀವನದಲ್ಲಿ ಮಹತ್ತರ ಬದಲಾವಣೆಗಳನ್ನು ತಂದುದು ಸ್ಪಷ್ಟವಾಗುತ್ತದೆ. ಕ.ಬ.ಅಂಗಡಿಯವರಂತಹ ಅನೇಕರ ಮೂಲಕ ಅವರ ಗುರುಗಳಾದ ಹಾನಗಲ್ಲ ಕುಮಾರ ಶಿವಯೋಗಿಗಳು ಅವರ ಬದುಕು, ಅವರ ವೈಚಾರಿಕತೆಗಳು, ಸಮಾಜಮುಖಿ ಸಾಧನೆಗಳು ಕಾಲಾಂತರದಲ್ಲಿಯೂ ಬದುಕುತ್ತಿರುವ ಸತ್ಯವನ್ನು ಗುರುತಿಸಬಹುದು. ಎಲ್ಲ ಕಡೆಗೆ ಗುರುವಿನ ಇರುವು ಸಾಧ್ಯವಾಗಲಾರದು. ಎಲ್ಲ ಕಾಲದಲ್ಲಿಯೂ ಗುರುವಿನ ಇರುವು ಸಾಧ್ಯವಾಗಲಾರದು. ಆದರೆ ಶಿಷ್ಯ-ಪ್ರಶಿಷ್ಯ ಪರಂಪರೆಯ ಮೂಲಕ ಗುರುವಿನ ಗುರಿ ಮತ್ತು ಗೌರವಗಳು ಅಚ್ಚಳಿಯದೆ ಉಳಿಯುತ್ತವೆ. ಅದೇ ಶಿಷ್ಯ-ಪ್ರಶಿಷ್ಯ ಪರಂಪರೆಯ ಭಾಗವಾಗಿ ಮತ್ತು ಶಿಷ್ಯನೊಬ್ಬ ಗುರುವಾಗಿ ಹತ್ತು ಹಲವು ಶಿಷ್ಯರನ್ನು-ಪ್ರಶಿಷ್ಯರನ್ನು ಹುಟ್ಟು ಹಾಕಿ, ತನ್ನ ಗುರುವಿನ ಗುರಿಯನ್ನು ಮತ್ತು ಗೌರವವನ್ನು ಜೀವಂತವಾಗಿಡುತ್ತಾನೆ. ಆ ಪರಂಪರೆಯ ಪಾರಿಭಾಷೆ ಇಲ್ಲಿ ಬಳಕೆಯಾಗಿದೆ. ಹಾನಗಲ್ಲ ಕುಮಾರಶಿವಯೋಗಿಗಳ ಆಶಯದಂತೆ ಹುಟ್ಟಿದ ಶಿವಯೋಗ ಮಂದಿರ ಅವರ ಆಶಯಗಳನ್ನು ಕ.ಬ.ಅಂಗಡಿಯವರ ಮೂಲಕ ಪ್ರವಹಿಸಿದೆ. ಸಾವಿರಾರು ವರ್ಷಗಳು ಬದುಕಿವೆ ಮುಂದೆಯೂ ಬದುಕುತ್ತವೆ. ಈ ರೀತಿಯಲ್ಲಿ ಸಾಮಾಜಿಕ ಚೌಕಟ್ಟನ್ನು ಅದರ ಮೌಲ್ಯವನ್ನು ವೃದ್ಧಿಸುವ, ಬಲಪಡಿಸುವ ಕಾರ್ಯವನ್ನು ಸದ್ದಿಲ್ಲದೆ ಇವರು ನಡೆಸಿಕೊಂಡು ಹೋಗುತ್ತಾರೆ. ಕ.ಬ.ಅಂಗಡಿಯವರಂತೆ ಪಂಚಾಕ್ಷರ ಗವಾಯಿಗಳನ್ನು, ಪುಟ್ಟರಾಜ ಗವಾಯಿಗಳನ್ನು, ಮೃತ್ಯುಂಜಯಪ್ಪಗಳನ್ನು ಹೆಸರಿಸಬಹುದು. ಬಹುದೂರದ

ಉದಾಹರಣೆಗಳು ಬೇಡ ಈ ಕೆಲವೇ ಕೆಲವು ವರ್ಷಗಳ ಸಮಯದಲ್ಲಿ ಪುಟ್ಟರಾಜ ಗವಾಯಿಗಳು ತಮ್ಮ ಗುರತು-ಶಿಷ್ಯ ಪರಂಪರೆಯಿಂದ, ಸಂಸ್ಕೃತಿ, ಜಾತಿ, ಮತ ಬೇಧವಿಲ್ಲದೆ ಸಾಮಾಜಿಕ ಮತ್ತು ಧಾರ್ಮಿಕ ಸ್ತರಗಳನ್ನು ಎತ್ತಿ ಹಿಡಿದು ಸಹಜ ಮಾನವರಿಂದ ದೇವ ಮಾನವರಾಗಿ ಬದಲಾದುದನ್ನು ಗುರುತಿಸಬಹುದಷ್ಟೇ. ಇದೇ ಪುಟ್ಟರಾಜ ಗವಾಯಿಗಳು ಕ.ಬ.ಅಂಗಡಿಯವರನ್ನು "ಅಷ್ಟಾವರಣ ನಿಷ್ಠಾಗರಿಷ್ಠ"[೧] ಎಂದೂ ಕರೆದಿದ್ದಾರೆ. ಹೀಗಿರುವಾಗ ಅವರ 'ಅನುಭವ' 'ಅನುಭಾವ'ವಾಗಿ ಸಾಮಾಜಿಕ, ಶೈಕ್ಷಣಿಕ, ಧಾರ್ಮಿಕ ನ್ಯೂನ್ಯತೆಗಳನ್ನು ಸರಿಪಡಿಸುವ ಕಾರ್ಯದಲ್ಲಿ ತೊಡಗಿಕೊಂಡದ್ದು ಸ್ಪಷ್ಟವಾಗಿ ಗೋಚರಾಗುತ್ತದೆ.

ಕ.ಬ.ಅಂಗಡಿಯವರ ಕರ್ಮಭೂಮಿ ಗದಗ. ಮೆಣಸಗಿಯಿಂದ ಗದುಗಿಗೆ ಅವರು ಬಂದಾಗ ಅತ್ಯಾಕರ್ಷಿಸಿದ್ದು ಗದುಗಿನ ಸಾಂಸ್ಕೃತಿಕ ಮತ್ತು ಧಾರ್ಮಿಕ ಲೋಕ. ಗದುಗು ಪೌರಾಣಿಕ ಹಿನ್ನಲೆಯಿಂದಲೇ ವಿಶೇಷ ನಗರ. ಸಂಗೀತ-ಸಾಹಿತ್ಯ, ಲಲಿತ ಕಲೆಗಳ ತವರಾದ ಈ ನಗರದ ಧಾರ್ಮಿಕ ವೈಚಾರಿಕತೆಯೂ ಮಹತ್ವದ್ದಾಗಿದೆ. ವೀರಶೈವ-ಲಿಂಗಾಯತ, ಬ್ರಾಹ್ಮಣ ಸಮಾಜಗಳ ಪಡಸಾಲೆಯೂ ಹೌದು ಈ ನಗರ. ಇಲ್ಲಿಯ ಕುಮಾರವ್ಯಾಸನನ್ನು, ಚಾಮರಸನನ್ನು, ಅತ್ತಿಮಬ್ಬೆಯನ್ನು, ರನ್ನನನ್ನು...... ನೆನೆಯದೆ ಕನ್ನಡ ಸಾಹಿತ್ಯ ಪರಂಪರೆಯು ಅಪೂರ್ಣವಾಗುತ್ತದೆ.

ವಾಣಿಜ್ಯಾಭಿವೃದ್ಧಿಯೂ ಕೂಡ ಈ ನಗರದ ಹೆಮ್ಮೆಯಾಗಿದೆ. ಇಂತಹ ಗದಗ ನಗರ ಪ್ರದೇಶದಲ್ಲಿ ತಮ್ಮ ಅನುಭವ ಮತ್ತು ಅನುಭಾವ ಎಲ್ಲಿಯೂ ಕೆಡದಂತೆ ಬದುಕಿದ ಹೆಗ್ಗಳಿಕೆ ಅವರದು. ನಗರ ಪ್ರದೇಶವಾದರೂ ಸಹ ಅಲ್ಲಿನ ವ್ಯಾಪಾರೀಕರಣ, ಜಾಗತೀಕರಣಗಳ ಭರಾಟೆಯ ಮಧ್ಯೆಯೂ ತಮ್ಮ ಸಾತ್ವಿಕ ನಿಲುವು-ವ್ಯಕ್ತಿತ್ವ-ವಿಚಾರಗಳನ್ನು ಜೀವಂತವಾಗಿರಿಸಿಕೊಂಡು ಬದುಕು ನಿರ್ವಹಿಸಿದ ಅವರ ಜಾಣ್ಮೆಯನ್ನು ಗುರುತಿಸಬಹುದು. ಗದುಗಿನಲ್ಲಿ ಆ ಸಮಯದಲ್ಲಿ ವೀರಶೈವ-ಲಿಂಗಾಯತ ಸಮಾಜದ ಪುನರುಜ್ಜೀವನ ತೀವ್ರಗತಿಯಲ್ಲಿ ನಡೆದ ಸಮಯವೆಂದೆ ಗುರುತಿಸಲಾಗುತ್ತದೆ. ಅಲ್ಲಿಯ ಸಂಘಟನಾತ್ಮಕ ಮತ್ತು ರಚನಾತ್ಮಕ ಕಾರ್ಯಗಳು ಸಮಾಜದ ಮೇಲೆ ಬಹು ದೊಡ್ಡ ಪರಿಣಾಮಗಳನ್ನು ಬೀರಿದ್ದವು.

ಗದುಗಿನ ಸಾಂಸ್ಕೃತಿಕ, ಧಾರ್ಮಿಕ ಮತ್ತು ಶೈಕ್ಷಣಿಕ ಕ್ಷೇತ್ರದಲ್ಲಿ ತೋಂಟದಾರ್ಯ ಮಠದ ಸಾಧನೆಯು ಅಚ್ಚಳಿಯಲಾರದು. ಅಲ್ಲಿಯ ಪರಂಪರಾಗತ ಧಾರ್ಮಿಕ ವಿಧಿ-ವಿಧಾನಗಳು, ಸೈದ್ಧಾಂತಿಕ ನಿಲುವುಗಳು, ಬಸವಾದಿ ಶಿವಶರಣರ ವೈಚಾರಿಕತೆಯನ್ನು ಎತ್ತಿ ಹಿಡಿಯುವ ಪರಿಯು, ಸಮಾಜಕ್ಕೆ ಪ್ರಾಮುಖ್ಯತೆ ನೀಡುವ ಬಗೆಯು ಹೊಸತನವಾಗಿ

ಕಂಡುಬರುತ್ತವೆ. ಈ ವಿಭಿನ್ನ ಮತ್ತು ಸಮಾಜಮುಖಿ ಧೋರಣೆಗಳು ಅನುಭಾವಿಕ ನೆಲೆಯುಳ್ಳ ಇವರನ್ನು ಸೆಳೆದವು. ಮಠದ ಜೊತೆಗೆ ಸಾಂಸ್ಕೃತಿಕ-ಧಾರ್ಮಿಕ ಸಂಬಂಧ-ಸಂಪರ್ಕಗಳನ್ನು ಬೆಳೆಸಿಕೊಂಡರು. ತಮ್ಮ ಅನುಭಾವದ ಬಲದಿಂದ ಶಿವಾನುಭವ ಕಾರ್ಯಕ್ರಮಗಳನ್ನು ನಡೆಸಿಕೊಡುವಲ್ಲಿ ಮಹತ್ತರ ಪಾತ್ರ ವಹಿಸಿದರು. ಬೆಳಗಿನ ಶಿವಾನುಭವದಿಂದ ಪ್ರಾರಂಭಗೊಂಡ ಅವರ ಅನುಭಾವ-ಶಿವಾನುಭವಗಳ ಸಾಂಗತ್ಯ ತಮ್ಮ ಜೀವಮಾನದ ಕೊನೆಯವರೆಗೂ ನಡೆದುಕೊಂಡು ಬಂದಿತು. ಮೈಲಾರ ಬಸವಲಿಂಗ ಶರಣರ 'ಶತಕತ್ರಯ'ವನ್ನು ಹೇಳುವ ಪರಿಯನ್ನು ಅವರ ಬಾಯಿಂದಲೇ ಕೇಳಬೇಕು ಎಂದು ಶಿವಾನುಭವಿಗಳಲ್ಲಿ ಒಬ್ಬರಾದ ಸುಶೀಲಾ ಪವಾಡಶೆಟ್ಟರ ಹೇಳುತ್ತಾರೆ. ಮೃದು ಭಾಷೆಯನ್ನು ಬಳಕೆಯಲ್ಲಿ ತಂದ ಅವರು ತೀವ್ರಗಾಮಿಗಳಲ್ಲ. ಬೆಣ್ಣೆಯಷ್ಟೇ ಮೃದುವಾಗಿದ್ದರು. ಅವರ ಪರಿಸರ ಅವರನ್ನು ಸರಳ, ಸೌಜನ್ಯ ಶರಣರನ್ನಾಗಿ ರೂಪಿಸಿದವೆಂದರೆ ಅತಿಶಯೋಕ್ತಿಯಲ್ಲ.

### ೩.೯ ಫಲ-ಸಾಫಲ್ಯ :

ಕ.ಬ.ಅಂಗಡಿಯವರು ತಮ್ಮ ಜೀವನದಲ್ಲಿ ಶಿವಯೋಗ ಮಂದಿರದ ಗೊತ್ತು-ಗುರಿಗಳನ್ನು ಆಚರಿಸಿದ ಬಗೆ ಈ ರೀತಿಯಾಗಿದೆ

೧. ಶಿವಯೋಗ ಮಂದಿರದ ಬೋಧನೆ ಮತ್ತು ಸಾಧನೆಯನ್ನು ಪಡೆದ ಇವರು ವಟುವಾಗಿ ಬೆಳೆದು ಗುರು ಪೀಠಗಳಲ್ಲಿ ಜೀವ ವಿನಿಯೋಗಿಸಬಯಸಿದ್ದರು. ಆದರೆ ಈ ವಿಚಾರದಲ್ಲಿ ಹಾನಗಲ್ಲ ಕುಮಾರ ಸ್ವಾಮಿಗಳ ವಿಚಾರ ಧೋರಣೆ ಭಿನ್ನವಾಗಿತ್ತು. ಈ ಭಿನ್ನತೆಗೆ ಕಾರಣ ಕ.ಬ.ಅಂಗಡಿಯವರಲ್ಲಿ ಅವರು ಕಂಡುಕೊಂಡಿದ್ದ ಭಾಷೆ, ಸಾಹಿತ್ಯ ಮತ್ತು ಸಾಂಸ್ಕೃತಿಕ ಒಲವು ನಿಲುವುಗಳಾಗಿದ್ದವು.

೨. ಶಿಕ್ಷಕರಾಗಿ ಗುರುತಿಸಿಕೊಂಡ ಇವರು ಶಿವಯೋಗ ಮಂದಿರದ ಸ್ವಾಮ್ಯದಲ್ಲಿದ್ದ ಮತ್ತು ಇನ್ನಿತರ ವೀರಶೈವ-ಲಿಂಗಾಯತ ಮಠ-ಮಾನ್ಯಗಳ, ಸಂಘ-ಸಂಸ್ಥೆಗಳ ಸಂಪರ್ಕ ಸಾಧಿಸಿಕೊಂಡು ಆ ಮೂಲಕ ಶಿವಯೋಗ ಮಂದಿರದ ಆಶಯಗಳೊಂದಾದ ಶಿವಾನುಭವ ಕಾರ್ಯಕ್ರಮಗಳನ್ನು ನಡೆಸಲು ಬಹುವಾಗಿ ಶ್ರಮಿಸಿದರು. ಗದುಗಿನ ಹಾಲಕೆರೆ ಅನ್ನದಾನೀಶ್ವರ ಮಠದಲ್ಲಿ, ತೋಂಟದಾರ್ಯ ಮಠದಲ್ಲಿ, ಗದುಗಿನ ಬಸವೇಶ್ವರ ನಗರದಲ್ಲಿರುವ ಹಡಗಲಿ ಮಠದಲ್ಲಿ, ಅಕ್ಕನ ಬಳಗದಲ್ಲಿ, ಪ್ಯಾಟಿ ವೀರಭದ್ರ ದೇವರ ಗುಡಿಯಲ್ಲಿ, ಬೆಟಗೇರಿ ವೀರಭದ್ರ ಗುಡಿಯಲ್ಲಿ, ಒಕ್ಕಲಗೇರಿಯ ರಾಚೋಟಿ ವೀರಭದ್ರ

ದೇವರ ಗುಡಿಯಲ್ಲಿ, ಗೊಡಚಿಯ ವೀರಭದ್ರ ದೇವರ ಗುಡಿಯಲ್ಲಿ (ಗೊಡಚಿ ವೀರಭದ್ರೇಶ್ವರ ಸೇವಾ ಸಂಘದ ಕಾರ್ಯದರ್ಶಿಗಳಾಗಿ), ಮುರಗೋಡದ ಮಹಾಂತೇಶ ಮಠದಲ್ಲಿ ಶಿವಾನುಭವದ ಸಂಸ್ಕೃತಿಯನ್ನು ನಿರಂತರವಾಗಿ ನಡೆಸುವಲ್ಲಿ ಯಶಸ್ವಿಯಾದರು.

೩. ಇವರ ಬದುಕು ಪುಸ್ತಕಗಳೊಂದಿಗೆ ಬೆಸೆದುಕೊಂಡಿತ್ತು. ಜ್ಞಾನ ಅವರಲ್ಲಿ ಹೊಸತನ ಮತ್ತು ಸಾಕ್ಷರತೆಯ ಸಿದ್ಧಿಯನ್ನು ಎತ್ತಿ ಹಿಡಿಯುವ ಛಲ ನೀಡಿದ್ದವು. ಅವರ ಬದುಕಿನ ಮತ್ತೊಂದು ಮಗ್ಗುಲಾಗಿ ಪುಸ್ತಕಗಳನ್ನು ಗುರುತಿಸುತ್ತೇವೆ. ತಮ್ಮ ಮನೆಯನ್ನೆ ವಿಶಾಲವಾದ ಗ್ರಂಥಾಲಯವನ್ನಾಗಿ ರೂಪಿಸಿಕೊಂಡಿದ್ದ ಅವರು ತತ್ವ, ಶಾಸ್ತ್ರ, ವಚನ, ಇತಿಹಾಸ, ಭಾಷೆ, ಸಂಖ್ಯಾಶಾಸ್ತ್ರದಂತಹ ಅಸಂಖ್ಯ ಪುಸ್ತಕಗಳನ್ನು ಅಭ್ಯಾಸ ಮಾಡಿದ್ದರು. ತಮ್ಮ ಬಳಿಗೆ ಬರುವ ಯಾವುದೆ ವ್ಯಕ್ತಿಯ ಸಂಶಯಗಳನ್ನು ಸಂಯಮ ಮತ್ತು ತಾರ್ಕಿಕ ನಿಲುವುಗಳಿಂದ ಪರಿಹರಿಸುತ್ತಿದ್ದರು. ಹೀಗಾಗಿ ಅವರನ್ನು ನಾವು 'ಅಭಿಜಾತ ಶತ್ರು'ವೆಂದು ಕರೆಯಬಹುದು. ಧಾರ್ಮಿಕ ವಿಚಾರಗಳನ್ನು ಅತ್ಯಂತ ಮೌಲ್ಯಯುಕ್ತವಾಗಿ ಮಾಪನ ಮಾಡುವುದು ಅವರ ವೈಚಾರಿಕ ಹಿನ್ನೆಲೆಯನ್ನು ಸಾದರಪಡಿಸುತ್ತದೆ.

೪. ಇವರ ಸಾಹಿತ್ಯಿಕ ಜೀವನ ಪ್ರಾರಂಭವಾಗುವುದು ಸಾಮಾಜಿಕ ಕಳಕಳಿಯಿಂದಾದರೂ ಅವರ ಬರವಣಿಗೆಯಲ್ಲಿ ಸಹಜವಾಗಿ ಶರಣ ಧರ್ಮ ಪರಿಪಾಲನೆಯನ್ನು ಕಾಣಬಹುದು. ಅವರು ಶಿವಕವಿಯಾಗಿ, ಶರಣ ಕವಿಯಾಗಿ ರೂಪುಗೊಳ್ಳತೊಡಗಿದುದು ಈ ಹಂತಗಳಲ್ಲಿ ಕಾಣುತ್ತದೆ. ಧಾರವಾಡದ ಮುರುಘಾ ಮಠದಲ್ಲಿದ್ದು ಅಭ್ಯಾಸ ಮಾಡುವ ಸಂದರ್ಭದಲ್ಲಿ ಬಸವಲಿಂಗ ಶರಣರ ಶತಕತ್ರಯವನ್ನು ಹೇಳಲು ಪ್ರಾರಂಭಿಸಿದರು. ಅದು ಮುರುಘಾ ಮಠದಲ್ಲಿ ಹೊಸ ಪರಂಪರೆಯನ್ನು ಹುಟ್ಟು ಹಾಕಿತು. ಲಾವಣಿ, ದೊಡ್ಡಾಟ, ನಾಟಕಗಳನ್ನು ಬರೆದು ತಮ್ಮ ಪರಿಸರದಲ್ಲಿ ಹೆಸರುವಾಸಿಯಾಗಿದ್ದ ಅಂಗಡಿಯವರು ಶಿವಶರಣರ ಪ್ರಭಾವಕ್ಕೊಳಗಾಗಿ ಅಷ್ಟಕ-ಷಟ್ಕಗಳನ್ನು ಬರಯಲು ಪ್ರಾರಂಭಿಸಿದರು. ಇವುಗಳನ್ನು ಬರೆಯುವ ಉದ್ದೇಶ ಬಸವ ತತ್ವಗಳ ಸಾರವನ್ನು ಜನಸಾಮಾನ್ಯರಿಗೂ ಉಣಬಡಿಸುವುದೇ ಆಗಿದೆ. ಭಕ್ತಿಯ ನೆಲೆಯನ್ನು ತಮ್ಮ ಸಾಹಿತ್ಯದಲ್ಲಿ ಸಮ್ಮಿಳಿಸಿಕೊಂಡು ಶಿವಶರಣರ ದ್ಯೇಯವಾದ ಅಂತರಂಗ-ಬಹಿರಂಗ ಶುದ್ಧಿಯನ್ನು ಸಮಾಜದಲ್ಲಿ ಅರುಹುವುದು ಅವರ ಮೂಲ ಉದ್ದೇಶ ಆಗಿತ್ತು. ಶಿವಯೋಗ ಮಂದಿರದ ಗೊತ್ತು-ಗುರಿಗಳಲ್ಲಿ ಒಂದಾದ ಧರ್ಮ ಪ್ರಸಾರವನ್ನು ಸಾಹಿತ್ಯದ ಮೂಲಕ ಮಾಡುವಲ್ಲಿ ನಿರತರಾದರು. ಇಲ್ಲಿ ಅವರ ಕೆಲವು ಅಷ್ಟಕ-ಷಟ್ಕಗಳನ್ನು ಹೆಸರಿಸಬಹುದಾಗಿದೆ. 'ಹಸನ ನುಡಿ ಮುತ್ತುಗಳೆಂಬ ಮಂಗಲ ಷಟ್ಕ', 'ಶ್ರೀ ಮದಥಣಿ ಶಿವಯೋಗೀಂದ್ರ ನೀಂರಕ್ಷಿಸೈ', 'ಶ್ರೀ ಮುರಗೋಡ ಶಿವಯೋಗಿ

ಶ್ರೀಪಾದ ಸ್ತೋತ್ರಾಷ್ಟಕ', 'ಶ್ರೀ ಮುರಗೋಡ ಶಿವಯೋಗಿ ಶ್ರೀಗಂಧ ಪಾದುಕಾರ್ಪಣ ಸ್ತೋತ್ರಾಷ್ಟಕಂ', 'ಸಹಸ್ರ ಬಿಲ್ವಾರ್ಪಣ ಪಾದ ಪೂಜಾಷ್ಟಕ', 'ಹಾನಗಲ್ಲ ಕುಮಾರ ಶಿವಯೋಗಿ ಸ್ತೋತ್ರಾಷ್ಟಕ', 'ಹಾವೇರಿ ಶಿವಬಸವ ಸ್ವಾಮಿಚರಣಕ್ಕೆ ಶರಣಾಷ್ಟಕಂ', 'ನೀಡು ಕೃಪಾಘನ ಮಂಗಲಗೀತೆ'.

ಇದರೊಟ್ಟಿಗೆ ಕಿರುಗ್ರಂಥಗಳ ಹೊಸ ಅಧ್ಯಾಯ ಆಗ ತಾನೆ ಪ್ರಾರಂಭವಾಗಿತ್ತು. ಅದರ ಪರಿಪೂರ್ಣ ಲಾಭವನ್ನು ಸಮಾಜಕ್ಕೆ ನೀಡುವ ಉದ್ದೇಶದಿಂದ 'ಅನುಭವದೂಟ', 'ಅಕ್ಕನ ಚರಿತ್ರೆ', 'ಅಮರವಾಣಿ', 'ಜಯಬಸವ ನೂರೆಂಟು ನಾಮಾವಳಿ', 'ಅಣ್ಣನವರ ಬೆಳಗಿನ ಪೂಜೆಯನ್ನು ಸ್ಮರಿಸಿ ಸ್ತೋತ್ರ', 'ಕಾರಣಿಕ ಶಿವಯೋಗಿ ಹಾನಗಲ್ಲ ಕುಮಾರ ಮಹಾಸ್ವಾಮಿ', 'ಮುರಗೋಡ ಮಹಾಂತಜ್ಜನವರ ಮಹಿಮೆ', 'ಮುರಗೋಡ ಮಹಾಂತಸ್ವಾಮಿ ನಡೆ-ನುಡಿ ಬೆಡಗಿನ ಮಾಲೆ', 'ನಾಮಾವಳಿತ್ರಯ', 'ಮುತ್ತೈದೆಯ್ಯೆವರು', 'ಶ್ರೀ ಗೊಡಚಿ ಕ್ಷೇತ್ರ ವಸ್ತು ಮಡಿವಾಳ ಮಾಚಿ ತಂದೆ', 'ಘನಮಹಿಮರು', 'ಬಸವಲಿಂಗ ನಾಮಾವಳಿ', 'ಸುಮನ ಸಂಹಿತೆ', 'ಕರ್ಮಯೋಗಿ ಸಿದ್ಧರಾಮಪ್ಪ ಅಂದಾನಪ್ಪ ಮಾನವಿ' ಎನ್ನುವ ಅರ್ಥವತ್ತಾದ ಕಿರು ಗ್ರಂಥಗಳನ್ನು ಬರೆದರು. ಇವು ಆ ಕಾಲದಲ್ಲಿ ಹೊಸ ರೀತಿಯ ಚಿಂತನೆ ಮತ್ತು ವಿಮರ್ಶೆಗೆ ಹಾದಿಯಾದವು.

೫. ತಮ್ಮ ಸಾತ್ವಿಕ ವೈಚಾರಿಕತೆಯನ್ನು ತಮ್ಮ ಬದುಕು-ಬರಹದಲ್ಲಿ ಅಳವಡಿಸುತ್ತಲೇ ಶಿಕ್ಷಕ ವೃತ್ತಿಯಲ್ಲಿ ತಮ್ಮ ವೈಚಾರಿಕತೆಗೆ ಮತ್ತು ವಿವೇಚನೆಗೆ ಹೊಂದುವ ಸಹವರ್ತಿಗಳನ್ನು ತಮ್ಮ ಜೊತೆಗೆ ಕರೆದುಕೊಂಡು ಸಾಗುತ್ತ ಅವರಿಂದಲೂ ವೀರಶೈವ ಧರ್ಮ ಪ್ರಸಾರಣದ ಕಾರ್ಯದಲ್ಲಿ ತೊಡಗುವಂತೆ ಪ್ರೇರೆಪಿಸುತ್ತಿದ್ದರು. ಜೊತೆಗೆ ಸಮಾಜದ ಹಲವಾರು ಗಣ್ಯರನ್ನು, ಮಠದ ಪೀಠಾಧೀಪತಿಗಳನ್ನು ಕೂಡಿಸಿಕೊಂಡು ಚರ್ಚಿಸಿ ಸಮಾಜಕ್ಕೆ ಸರಿಯಾದುದನ್ನು ನೀಡುವ ಸಂಕಲ್ಪವನ್ನು ಹೊಂದಿದ್ದರು. ತಾವು ಗೊಡಚಿ ಕ್ಷೇತ್ರದ ಕಾರ್ಯಾಧ್ಯಕ್ಷರಾದ ಸಮಯದಲ್ಲಿ ಗೊಡಚಿಯಲ್ಲಿ ಬಸವ ಶಿವಾನುಭವ ಮಂಟಪ ಸ್ಥಾಪಿಸಿ, ಅಲ್ಲಿ ಜಾತ್ರೆ ನಡೆಯು ಸಂದರ್ಭದಲ್ಲಿ ಮುರಗೋಡ ಮಹಾಂತ ಶಿವಯೋಗಿಗಳನ್ನು ಹಲವಾರು ಬಾರಿ ಕರೆದುಕೊಂಡು ಹೋಗಿ ಶಿವಾನುಭವ ನಡೆಸಿದ ಶ್ರೇಯಸ್ಸು ಅವರದ್ದು. ಮುಂಡರಗಿಯ ಇಂದಿನ ಶ್ರೀಗಳು ಮತ್ತು ಹಿಂದಿನ ಶ್ರೀಗಳನ್ನು ಶಿವಾನುಭವಗಳಲ್ಲಿ ಅನುಭಾವವನ್ನು ಹಂಚಿಕೊಳ್ಳಲು ಕರೆದುಕೊಂಡು ಹೋಗಿದ್ದಾರೆ. ಇದನ್ನು ಸ್ವತಃ ಇಂದಿನ ಶ್ರೀಗಳು ನೆನೆಯುತ್ತಾರೆ. ಗದುಗಿನ ತೋಂಟದಾರ್ಯ ಶ್ರೀಗಳೂ ಈ ಮಾತನ್ನು ಹೇಳುತ್ತಾರೆ.

ಇಂತಹ ಕಾರ್ಯಗಳ ಮೂಲಕ ಶಿವಯೋಗ ಮಂದಿರದ ಆಶಯಗಳನ್ನು ಅವರು ಅನುಷ್ಠಾನಕ್ಕೆ ತರಲು ಯತ್ನಿಸಿದ್ದಾರೆ.

೬.ವೀರಶೈವ ಸಮಾಜದಲ್ಲಿ ನಿತ್ಯಜೀವನದಲ್ಲಿ ಭಸ್ಮ(ವಿಭೂತಿ) ವಿಶೇಷತೆಯನ್ನು ಪಡೆದಿದೆ. ಭಸ್ಮ ಲೇಪನವು ಆಧುನಿಕವಾಗಿಯೂ ವೈಜ್ಞಾನಿಕ ಹಿನ್ನೆಲೆಯಿಂದ ಕೂಡಿದೆ. ಆ ಪರಿಜ್ಞಾನವನ್ನು ಮುಖ್ಯವಾಗಿಟ್ಟುಕೊಂಡು ಶಿವಯೋಗ ಮಂದಿರದಲ್ಲಿ ತಯಾರಾಗುವ ಭಸ್ಮಗಳ ಶುದ್ಧತೆಯನ್ನು ಅರಿತಿದ್ದ ಅವರು ತಾವು ಪ್ರಾರಂಭಿಸಿದ 'ಜಯಬಸವ' ಪುಸ್ತಕಾಲಯದಲ್ಲಿ ಶಿವಯೋಗ ಮಂದಿರದಿಂದ ತಯಾರಾಗುತ್ತಿದ್ದ ಕ್ರಿಯಾಗಟ್ಟಿ(ವೀರಶೈವ ತತ್ವಗಳಿಗೆ ಅನುಸರಿಸಿ ರಚನೆಯಾದ ನಿತ್ಯ ಲಿಂಗ ಪೂಜೆಯಲ್ಲಿ ಬಳಸುವ ಭಸ್ಮ), ವಿಭೂತಿ(ಲಿಂಗಪೂಜೆಯಲ್ಲಿ ಅಲ್ಲದೆ ಉಳಿದ ಸಂದರ್ಭಗಳಲ್ಲಿ ಬಳಸುವ ಭಸ್ಮ), ರುದ್ರಾಕ್ಷಿಗಳನ್ನು ದೊರಕುವ ವ್ಯವಸ್ಥೆಯನ್ನು ಮಾಡಿದರು. ವ್ಯಾಪಾರ-ವಾಣಿಜ್ಯೋದ್ಯಮ ಉಚ್ಛ್ರಾಯ ಸ್ಥಿತಿಯಲ್ಲಿರುವ ಇಂದಿನ ದಿನಗಳಿಗಿಂತ ಅಂದಿನ ದಿನಗಳಲ್ಲಿ ಈ ಕ್ರಿಯೆ ಮಹತ್ವ ಪಡೆಯುತ್ತದೆ.

ಗದುಗಿನ ಶಿವಾನುಭವ ಸಂಘದ ಚೇತನರಾಗಿ ಕರ್ನಾಟಕ ವಿಶ್ವ ವಿದ್ಯಾಲಯದ ರುವಾರಿಗಳಾದ ಮತ್ತು ಅಂದಿನ ಉಪಕುಲಪತಿಗಳಾಗಿದ್ದ ರ್‍ಯಾಂಗ್ಲರ್ ದಾನಪ್ಪ. ಚಿಂತಪ್ಪ ಪಾವಟೆ(ಡಿ.ಸಿ.ಪಾವಟೆ)ಯವರ ಷಷ್ಟ್ಯಬ್ದಿ ಸಮಾರಂಭದಲ್ಲಿ ಅವರಿಗೆ ಚಿರಸ್ಮರಣೀಯವಾಗಿ ಉಳಿಯುವಂತೆ ಅರವತ್ತು ರುದ್ರಾಕ್ಷಿಗಳ ಮಾಲೆಯನ್ನು ಅರ್ಪಿಸುವ ಹೊಸತನವನ್ನು ತೋರಿದರು.

೭. ಇಷ್ಟಲಿಂಗಾರ್ಚನೆಯನ್ನು ಬಾಳಿನ ಸೂತ್ರವನ್ನಾಗಿಸಿಕೊಂಡರು. ಪ್ರತಿನಿತ್ಯ ವಿಧಿವತ್ತಾದ ಇಷ್ಟಲಿಂಗ ಪೂಜೆಯೊಂದೆ ಅವರ ಪೂಜೆಯಾಗಿತ್ತು. ಅನ್ಯ ಸಾವಿರರು ದೇವರನ್ನು ಒಲ್ಲೆಯೆಂದ ಕ.ಬ.ಅಂಗಡಿಯವರು ಬಸವಾದಿ ಶರಣರ ಆಶಯದಂತೆ ಏಕದೇವೋಪಾಸನೆಯನ್ನು ಪಾಲಿಸಿದರು. ಅವರ ಇಷ್ಟಲಿಂಗ ಪೂಜಾನಿಷ್ಠೆ ಯಾವ ಸಾಧಕನಿಗಿಂತ ಕಡಿಮೆಯೆನಲ್ಲ. ತನು-ಮನಗಳ ಕಾಮನೆಗಳನ್ನು ಇಷ್ಟಲಿಂಗಾರ್ಚನೆಯ ಪ್ರಕ್ರಿಯೆಯೊಂದಿಗೆ ಸುಟ್ಟುಕಾಕಿದರು. ಪರಿಶುದ್ಧ ಅಂತರಂಗ-ಬಹಿರಂಗಗಳ ಸಮನ್ವಯಕ್ಕೆ ಪ್ರಯತ್ನಪಟ್ಟರು ಮತ್ತು ಯಶಸ್ವಿಯೂ ಆದರು.

೮. ತಮಗೆ ಸಿಕ್ಕ ರಜೆಯನ್ನು ಮಜವಾಗಿ ಕಳೆಯದೆ ಅದರ ಸದುಪಯೋಗವನ್ನು ಮಾಡಿಕೊಳ್ಳುತ್ತಿದ್ದರು. ತಮ್ಮ ಸ್ವಗ್ರಾಮವಾದ ರೋಣ ತಾಲ್ಲೂಕಿನ ಮೆಣಸಗಿ ಗ್ರಾಮಕ್ಕೆ ತೆರಳಿ

ಅಲ್ಲಿ ವೀರಶೈವ ತತ್ವಗಳ ಪ್ರಸಾರವನ್ನು ಮಾಡುತ್ತಿದ್ದರು. ಅಶಿಕ್ಷಿತರಲ್ಲಿ, ಅಂಗವಿಕಲರಲ್ಲಿ ವಿಶೇಷ ಆಸಕ್ತಿ ವಹಿಸಿ ಅವರ ಜೀವನ ನಿರ್ವಹಣೆಗೆ ಬೇಕಾದ ಸವಲತ್ತುಗಳನ್ನು ಮಾಡಿಕೊಡುತ್ತಿದ್ದರು. ಸುಲಭ ಶೈಲಿಯ ಪದ್ಯಗಳನ್ನು ರಚಿಸಿ ಸಣ್ಣ ಸಣ್ಣ ಪುಸ್ತಿಕೆಗಳನ್ನು ಹಂಚಿದ ಪರಿಣಾಮವಾಗಿ ಅಲ್ಲಿಯ ಅನೇಕ ಹೆಣ್ಣು ಮಕ್ಕಳಿಗೆ ಷಟ್ಸ್ಥಲ, ಅಷ್ಟಾವರಣ, ಪಂಚಾಚಾರ ತತ್ವಗಳು ಕೌದಿಯಾಗಿಯೂ, ಹಣಿಕೆಯ ಪಾಠವಾಗಿಯೂ ಮುಖ ಪಾಠವಾಗಿವೆ. ಅಂಥ ಅನುಭವದೂಟವನ್ನು ತಾವೊಬ್ಬರೇ ಮುಚ್ಚುಮರೆಯಾಗಿ ಉಣ್ಣದೇ ಬಸವಣ್ಣ, ಅಕ್ಕಮಹಾದೇವಿ, ಕೆಳದಿಯ ಚೆನ್ನಮ್ಮ, ವೀರೇಶ ಶರಣರು ಮುಂತಾದವರ ನುಡಿಗಳನ್ನು ಸಮಾಜಕ್ಕೆ ನೀಡುವ ಪ್ರಯತ್ನ ಮಾಡಿದ್ದಾರೆ.

೯. ಇವರ ದೃಷ್ಟಿಕೋನವೆಂದಿಗೂ ಸಂಶೋದನಾತ್ಮಕವಾಗಿಯೇ ಇರುತ್ತಿತ್ತು. ತಾವು ಶಿಕ್ಷಕರಾಗಿ, ಶಿಕ್ಷಣಾಧಿಕಾರಿಗಳಾಗಿ ಹೋದ ಕಡೆಗಳೆಲ್ಲ ಆ ಊರು, ಆ ಊರಿನ ಮಹಿಮೆ, ವಿಶೇಷತೆ, ಅಲ್ಲಿ ಬಸವಾದಿ ಶರಣರ ಚಲನ-ವಲನಗಳೆನಾದರೂ ದೊರಕಬಹುದೆ ಎಂದು ಹುಡುಕಾಟದಲ್ಲಿ ತೊಡಗುತ್ತಿದ್ದರು. ತಮ್ಮ ಸಹೃದಯತೆಯಿಂದ, ಪ್ರೀತಿ-ವಿಶ್ವಾಸದ ಮೂಲಕ ಅಲ್ಲಿಯ ಜನರೊಟ್ಟಿಗೆ ಆತ್ಮೀಯ ಸಂಬಂಧವನ್ನು ಬೆಸೆದುಕೊಳ್ಳತಿದ್ದ ಇವರು ಅನ್ಯ ಧರ್ಮಿಯರನ್ನೂ ತಮ್ಮ ಸ್ನೇಹ ಬಳಗದಲ್ಲಿ ಕೂಡಿಸಿಕೊಳ್ಳುತ್ತಿದ್ದರು. ಅವರೊಟ್ಟಿಗೆ ಚಿರಂತನವಾಗಿ ಸಾಮಾಜಿಕ, ಧಾರ್ಮಿಕ, ಶೈಕ್ಷಣಿಕ ಚಿಂತನೆಗಳಲ್ಲಿ ತೊಡಗಿಸಿಕೊಳ್ಳುತ್ತಿದ್ದರು. ಅವರ ಈ ಚರ್ಚೆಯ ಪರಿಣಾಮವಾಗಿ ಅವರ ಅನೇಕ ಸ್ನೇಹಿತರು ಜೀವನದಲ್ಲಿ ಸರಿಯಾದ ಮಾರ್ಗದಲ್ಲಿ ನಡೆದ ಉದಾಹರಣೆಗೂ ಇವೆ. ಕಳ್ಳನೋರ್ವ ತನ್ನ ದುಷ್ಟ ಹಾದಿಯನ್ನು ಬದಲಿಸಿ ಹೊಸ ಬದುಕನ್ನು ಕಟ್ಟಿಕೊಂಡ ಉದಾಹರಣೆಗಳಿವೆ. ಇವರ ಚಿಂತನೆಗಳ ಪರಿಣಾಮದ ಫಲವಾಗಿ ಅವರ ಅನ್ಯ ಧರ್ಮಿಯ ಸ್ನೇಹಿತರಾದ ಚೌವ್ಹಾಣ ಮತ್ತು ಹಂಚಾಟೆಯವರೂ ಕೂಡ ವೀರಶೈವ ಮತ-ತತ್ವಗಳ ಸೆಳೆತಕ್ಕೆ ಒಳಗಾದರು. ಅವರೂ ಕೂಡ ಈ ದಿಸೆಯಲ್ಲಿ ಚರ್ಚೆಗಳನ್ನು, ವಿಚಾರ ಮಂಥನಗಳನ್ನೂ ಮಾಡತೊಡಗಿದರು. "ಕ.ಬ.ಅಂಗಡಿಯವರು ಕೇವಲ ವಿದ್ಯಾ ಖಾತೆಗೆ ಮಾತ್ರ ಸೀಮಿತರಾದವರಲ್ಲ. ಅವರದು ಬಹು ಮುಖ ಪ್ರತಿಭೆ. ಇನ್ಸಪೆಕ್ಟರರಾಗಿ ಹೋದ ಕಡೆಯೆಲ್ಲೆಲ್ಲಾ ಶಾಲೆಯ ನಾಲ್ಕು ಗೋಡೆಗಳನ್ನಷ್ಟೇ ನೋಡಿ ಪುಸ್ತಕದಲ್ಲಿ ಶರಾ ಬರೆದವರಲ್ಲ. ತಮ್ಮ ವ್ಹಿಜಿಟ್ ಮುಗಿದೊಡನೆ, ಆ ಊರ ಹೆಸರು, ಹೆಸರಿನ ಕಾರಣ, ಯಾವ ನಾಡಿನ ಪರಿಣಾಮ ಮುಂತಾದ ಐತಿಹಾಸಿಕ ಘಟನೆಗಳನ್ನು ಟಿಪ್ಪಣಿಸಿ, ಬಸವನಾಡಿನ ಸಮಾಜ ಸಂಸ್ಕೃತಿಗೆ ಸಂಬಂಧದ ವಿಷಯಗಳನ್ನು ಹೋಲಿಸಿ ಸಂಬಂಧೀಕರಣ ಸಂಶೋಧನೆಯಲ್ಲಿ ತೊಡಗುತ್ತಿದ್ದರು. ಇಂದಿಗೂ ಇದು ಸಗರನಾಡು, ಇದು ಶರಣರ ನಾಡು, ಇದು ಜೈನರನಾಡು ಎಂದು ಆಯಾ ಸ್ಥಾನದ

ವಿವರಣೆಯನ್ನು ಅವರ ಮುಖದಿಂದ ಕೇಳುತ್ತಿದ್ದರೆ, ಕಾಲ್ಪನಿಕ ಸಿನಿಮಾ ಥೇಟರದಲ್ಲಿ ಕುಳಿತಂತೆ ಆಗುತ್ತದೆ. ಅದಕ್ಕೆ ಅವರ ಪೂರ್ವ ಸುಕೃತದ ಪುಣ್ಯದಿಂದ ದೊರೆತ ಪರಮ ಪೂಜ್ಯ ಲಿಂ. ಹಾನಗಲ್ಲ ಕುಮಾರ ಸ್ವಾಮಿಗಳವರ ಕೃಪೆಯೇ ಕಾರಣವು."[೧೩] ನಾವು ಇವರೆಗೂ ಸ್ತ್ರೀಯನ್ನು ಸಮಾಜದಲ್ಲಿ ಎರಡನೆಯ ಸ್ಥರದ ಪ್ರಜೆಯೆಂದೆ ಪರಿಗಣಿಸಿದ್ದಿದೆ. ಈ ತಿಳುವಳಿಕೆಯನ್ನು ಬಸವಾದಿ ಶರಣರು ಸಂಪೂರ್ಣವಾಗಿ ನಿರ್ಮೂಲನೆ ಮಾಡಿ, ಸ್ತ್ರೀಗೆ ಪುರುಷ ಸಮಾನ ಹಕ್ಕು ಮತ್ತು ಸ್ಥಾನಮಾನಗಳನ್ನು ೧೨ನೆಯ ಶತಮಾನದಲ್ಲಿಯೇ ನೀಡಿದ್ದರೂ ಕೂಡ ಅದನ್ನು ಅನುಲಕ್ಷಿಸಿ ಇಂದಿಗೂ ಕೂಡ ಸ್ತ್ರೀ ವರ್ಗವನ್ನು ಕಡೆಗಣಿಸಿದ್ದೇವೆ. ಆ ತಪ್ಪನ್ನು ತಿದ್ದಿಕೊಳ್ಳಲು ಸ್ರೀ ಮತ್ತು ಮಕ್ಕಳನ್ನು ಸಮಾಜದ ಪ್ರಬಲ ವರ್ಗವೆಂದು ಮನಗಂಡು ಅವರಲ್ಲಿ ಸಾತ್ವಿಕ ಚಿಂತನೆಗಳನ್ನು ಅಳವಡಿಸಲು ಕಾರ್ಯನಿರತರಾದರು. ಹೊಲಿಗೆ, ಹೆಣಿಕೆ, ಸಂಗೀತದ ಮೂಲಕ ಅವರಿಗೆ ಉಣ ಬಡಿಸಿದರು. 'ಜೀವನ ಶಿಕ್ಷಣ'ವೆನ್ನುವ ಸರಕಾರಿ ಕಾರ್ಯಕ್ರಮದ ಅಡಿಯಲ್ಲಿ ಕಿರುಗ್ರಂಥಗಳನ್ನು ಬರೆದು ವಯಸ್ಕರನ್ನು ಮತ್ತು ಮಹಿಳೆ ಮಕ್ಕಳಲ್ಲಿ ಸಾತ್ವಿಕ ಬೆಳವಣಿಗೆಗೆ ಕಾರಣರಾದರು.

೧೧. ಬಸವಾದಿ ಶರಣರು ನಡೆ-ನುಡಿಯನ್ನು ಸಮನ್ವಯಗೊಳಿಸಿ ರಚಿಸಿದ ಸಮಾಜವನ್ನು ಮತ್ತು ಅದರ ಅಂತಃಸತ್ವವನ್ನು ಜಗತ್ತಿಗೆ ತೋರ್ಪಡಿಸಿವ ಕಾರ್ಯದಲ್ಲಿ ೧೯ ಮತ್ತು ೨೦ನೆಯ ಶತಮಾನಗಳು ಹೆಚ್ಚು ಕಾರ್ಯ ಪ್ರವೃತ್ತರಾದುದುದನ್ನು ಗುರುತಿಸಬಹುದಾಗಿದೆ. ಕೀರ್ತನೆ, ಪುರಾಣ, ಪುಣ್ಯಕಥೆಗಳು, ಕಿರುಗ್ರಂಥಗಳೂ ಮತ್ತು ಇನ್ನಿತರ ಸಾಹಿತ್ಯದ ಪ್ರಬೇಧಗಳ ಮೂಲಕ ಪ್ರಸಾರಕ್ಕೆ ತೊಡಗಿದ ಅಂಶ ಗಮನಿಸುವಂತಹುದು. ಮೆಣಸಗಿಯಲ್ಲಿ "ಭಜನಾ ಸಂಘ ಮಾಡಿ ತಾವು ಸ್ವತಃ ಪದಗಳನ್ನು ಬರೆದು ಹಾಡು ಹೇಳುತ್ತಿದ್ದರು. ಯಕ್ಷಗಾನ, ನಾಟಕಾದಿಗಳನ್ನು ಬರೆದು ಆಡಿಸಿ ಜನ ಜಾಗ್ರತೆಗೆ ಕಾರಣರಾಗಿದ್ದಾರು. ಪುರಾಣಗಳನ್ನು ಕೂಡ ಬರೆದು, ಹೇಳಿ, ಜನಪ್ರಿಯರಾಗಿರುವರು."[೧೪]

೧೨. ಅವರ ಪುರಾಣಗಳಾದ ಶ್ರೀ ಮುರಗೋಡ ಮಹಾಂತೇಶ ಪುರಾಣ, ಶ್ರೀ ಮೃಡಗಿರಿ ಅನ್ನದಾನೇಶ್ವರ ಲೀಲಾಮೃತಂ ಮುಂತಾದವುಗಳಲ್ಲಿ ಸಮಾಜದಲ್ಲಿ ವೀರಶೈವ ಮತಬೋಧಕ ಕೈಗೊಂಡ ಗಣಂಗಳು ತಮ್ಮ ಕರ್ತವ್ಯವನ್ನು ಮರೆತು, ಕೇವಲ ತಮ್ಮ ಹೊಟ್ಟೆ ಹೊರೆದುಕೊಳ್ಳುವುದಕ್ಕೆ ರೂಪಧಾರಿಗಳಾಗಿ ಮಾತ್ರ ಈಗ ಸಂಚರಿಸಿ, ದುಡ್ಡು ಸೆಳೆಯುತ್ತಿರುವ ಮತ್ತು ಮಧ್ಯಪಾನ, ಸ್ತ್ರೀ ಲೋಲುಪರಾಗಿ ಹೀನ ಬಾಳನ್ನು ಬಾಳುತ್ತಿರುವ ಕುರಿತು ವಿವೇಚಿಸಿದ್ದಾರೆ. ಮತ್ತು ಆ ಅವಸ್ಥೆಗೆ ಕಾರಣರಾದವರನ್ನು ಜನ ಗುರುತಿಸಿ, ಅವರಿಂದ

ದೂರ ಸರಿಯಬೇಕು ಎಂದು ಹೇಳುತ್ತಾರೆ. ಮತ್ತು ಅದನ್ನು ತಮ್ಮ ವೃತ್ತಿಯನ್ನಾಗಿಸಿಕೊಂಡು ಬದುಕುತ್ತಿರುವವರಿಗೆ ಶಿವಯೋಗ ಮಂದಿರದಂತಹ ಜ್ಞಾನನಿಧಿಯತ್ತ ದಾರಿ ತೋರುತ್ತಾರೆ.

"ಶೀಲ ತಪ್ಪಿದ ಮೇಲೆ ಜನತೆಯು
ಲೀಲೆಗೈಯುತ ಕೀಳ ಕಾರ್ಯದಿ

ಕೀಲ ಜಾರಿದ ರಥದ ಪರಿಯೊಳು ದಾರಿತಪ್ಪುತ್ತ
ಲಲ್ಲೆ ಹೊಡೆಯುತ ವ್ಯಸನ ಜಾಲದಿ
ಕಾಲ ಸಿಕ್ಕಿಸಿ ನೆರಳಹತ್ತಿದೆ
"ವ್ಯಾಲಮಾಲನೆ ಹೇಳಲಾಗದು ಭರತ ಭವಣಿಯನು !!"

೧೩. ಮಕ್ಕಳಲ್ಲಿ, ಮೊಮ್ಮಕ್ಕಳಲ್ಲಿ, ತಮ್ಮ ಸ್ನೇಹಿತರಲ್ಲಿ, ತಮ್ಮ ಸುತ್ತು-ಮುತ್ತಲ ಪರಿಸರದಲ್ಲಿ ಲಿಂಗ ಪೂಜೆಯ ವಿಧಿ-ವಿಧಾನಗಳನ್ನು ಕಲಿಸಿಕೊಟ್ಟರು. ಬಸವಾದಿ ಪ್ರಮಥರ ಜ್ಞಾನ ನಿಘಂಟು ವಚನಗಳನ್ನು ಪರಾಮರ್ಶಿಸಿ, ಅದರ ಸಾರತೆಯನ್ನು ಕಟ್ಟಿಕೊಡುತ್ತ, ಸಂಜೆಯ ವೇಳೆಯಲ್ಲಿ ಅವುಗಳ ಬೋಧನೆಯನ್ನು ತಮ್ಮ ಮಕ್ಕಳು, ಮೊಮ್ಮಕ್ಕಳು, ಶಿಷ್ಯರಿಗೆ, ಸಹವರ್ತಿಗಳಿಗೆ ಮಾಡುತ್ತಿದ್ದರು. ಅವರ ಮನೆ ಗುರು-ವಿರಕ್ತ ಮಠಗಳಂತೆ ಸಾಮಾಜಿಕ ಕೇಂದ್ರವಾಗಿತ್ತು. ಅಲ್ಲಿ ಬಡವ, ಬಲ್ಲಿದರೆಂಬ ಬೇಧ ಭಾವನೆಯನ್ನು ಸುಟ್ಟು ಹಾಕಿ, ಮನೆಯನ್ನೇ ದಾಸೋಹ ಕೇಂದ್ರವನ್ನಾಗಿಸಿದರು. ಮಠದ ಪೀಠಾಧಿಪತಿಗಳು ಮಾಡುವ ಕಾರ್ಯ ಸಾಧನೆಯನ್ನು ಒಬ್ಬ ಸಾಮಾನ್ಯನಾಗಿ, ಜನಮಾನ್ಯನಾಗಿ ಮಾಡಿದರು.

೧೪. ತಾವು ಶಿಕ್ಷಣಾಧಿಕಾರಿಯಾಗಿ ನಿವೃತ್ತಿ ಹೊಂದಿದ ನಂತರ ೧೯೫೭ರ ವಿಜಯದಶಮಿಯ ದಿನದಂದು 'ಜಯ ಬಸವ ಪುಸ್ತಕಾಲಯ' ಎಂಬ ಪುಸ್ತಕದ ಅಂಗಡಿಯನ್ನು ಪ್ರಾರಂಭಿಸಿ ಅಲ್ಲಿ ಶರಣರ ಮತ್ತು ವೀರಶೈವ ತತ್ವಗಳನ್ನು ಒಳಗೊಂಡ ಪುಸ್ತಕಗಳನ್ನು, ಶಿವಯೋಗ ಮಂದಿರದಲ್ಲಿ ದೊರೆಯುತ್ತಿದ್ದ ಉತ್ತಮ ಗುಣಮಟ್ಟದ ವಿಭೂತಿ, ರುದ್ರಾಕ್ಷಿ, ಇನ್ನಿತರ ವೀರಶೈವ ಪೂಜಾ ಪರಿಕರಗಳನ್ನು ತಮ್ಮ ಅಂಗಡಿಯವಲ್ಲಿ ಸುಲಭ ದರದಲ್ಲಿ ದೊರೆಯುವಂತೆ ಮಾಡಿದರು. ಸಂಸ್ಕೃತದಲ್ಲಿದ್ದ ವೀರಶೈವ ಸಾರವನ್ನು ಅನೇಕರು ಕನ್ನಡಕ್ಕೆ ಮತ್ತು ಇಂಗ್ಲೀಷಿಗೆ ಭಾಷಾಂತರಿಸಿ, ಹೊಸ ಜಗತ್ತಿಗೆ ಬಸವಾದಿ ಶರಣರ ಬದುಕನ್ನು

ದೂರ ಸರಿಯಬೇಕು ಎಂದು ಹೇಳುತ್ತಾರೆ. ಮತ್ತು ಅದನ್ನು ತಮ್ಮ ವೃತ್ತಿಯನ್ನಾಗಿಸಿಕೊಂಡು ಬದುಕುತ್ತಿರುವವರಿಗೆ ಶಿವಯೋಗ ಮಂದಿರದಂತಹ ಜ್ಞಾನನಿಧಿಯತ್ತ ದಾರಿ ತೋರುತ್ತಾರೆ.

"ಶೀಲ ತಪ್ಪಿದ ಮೇಲೆ ಜನತೆಯು
ಲೀಲೆಗೈಯುತ ಕೀಳ ಕಾರ್ಯದಿ

ಕೀಲ ಜಾರಿದ ರಥದ ಪರಿಯೊಳು ದಾರಿತಪ್ಪುತ್ತ
ಲಲ್ಲೆ ಹೊಡೆಯುತ ವ್ಯಸನ ಜಾಲದಿ
ಕಾಲ ಸಿಕ್ಕಿಸಿ ನೆರಳಹತ್ತಿದೆ
"ವ್ಯಾಲಮಾಲನೆ ಹೇಳಲಾಗದು ಭರತ ಭವಣೆಯನು !!"

೧೩. ಮಕ್ಕಳಲ್ಲಿ, ಮೊಮ್ಮಕ್ಕಳಲ್ಲಿ, ತಮ್ಮ ಸ್ನೇಹಿತರಲ್ಲಿ, ತಮ್ಮ ಸುತ್ತು-ಮುತ್ತಲ ಪರಿಸರದಲ್ಲಿ ಲಿಂಗ ಪೂಜೆಯ ವಿಧಿ-ವಿಧಾನಗಳನ್ನು ಕಲಿಸಿಕೊಟ್ಟರು. ಬಸವಾದಿ ಪ್ರಮಥರ ಜ್ಞಾನ ನಿಘಂಟು ವಚನಗಳನ್ನು ಪರಾಮರ್ಶಿಸಿ, ಅದರ ಸಾರತೆಯನ್ನು ಕಟ್ಟಿಕೊಡುತ್ತ, ಸಂಜೆಯ ವೇಳೆಯಲ್ಲಿ ಅವುಗಳ ಬೋಧನೆಯನ್ನು ತಮ್ಮ ಮಕ್ಕಳು, ಮೊಮ್ಮಕ್ಕಳು, ಶಿಷ್ಯರಿಗೆ, ಸಹವರ್ತಿಗಳಿಗೆ ಮಾಡುತ್ತಿದ್ದರು. ಅವರ ಮನೆ ಗುರು-ವಿರಕ್ತ ಮಠಗಳಂತೆ ಸಾಮಾಜಿಕ ಕೇಂದ್ರವಾಗಿತ್ತು. ಅಲ್ಲಿ ಬಡವ, ಬಲ್ಲಿದರೆಂಬ ಬೇಧ ಭಾವನೆಯನ್ನು ಸುಟ್ಟು ಹಾಕಿ, ಮನೆಯನ್ನೇ ದಾಸೋಹ ಕೇಂದ್ರವನ್ನಾಗಿಸಿದರು. ಮಠದ ಪೀಠಾಧಿಪತಿಗಳು ಮಾಡುವ ಕಾರ್ಯ ಸಾಧನೆಯನ್ನು ಒಬ್ಬ ಸಾಮಾನ್ಯನಾಗಿ, ಜನಮಾನ್ಯನಾಗಿ ಮಾಡಿದರು.

೧೪. ತಾವು ಶಿಕ್ಷಣಾಧಿಕಾರಿಯಾಗಿ ನಿವೃತ್ತಿ ಹೊಂದಿದ ನಂತರ ೧೯೫೨ರ ವಿಜಯದಶಮಿಯ ದಿನದಂದು 'ಜಯ ಬಸವ ಪುಸ್ತಕಾಲಯ' ಎಂಬ ಪುಸ್ತಕದ ಅಂಗಡಿಯನ್ನು ಪ್ರಾರಂಭಿಸಿ ಅಲ್ಲಿ ಶರಣರ ಮತ್ತು ವೀರಶೈವ ತತ್ವಗಳನ್ನು ಒಳಗೊಂಡ ಪುಸ್ತಕಗಳನ್ನು, ಶಿವಯೋಗ ಮಂದಿರದಲ್ಲಿ ದೊರೆಯುತ್ತಿದ್ದ ಉತ್ತಮ ಗುಣಮಟ್ಟದ ವಿಭೂತಿ, ರುದ್ರಾಕ್ಷಿ, ಇನ್ನಿತರ ವೀರಶೈವ ಪೂಜಾ ಪರಿಕರಗಳನ್ನು ತಮ್ಮ ಅಂಗಡಿಯವಲ್ಲಿ ಸುಲಭ ದರದಲ್ಲಿ ದೊರೆಯುವಂತೆ ಮಾಡಿದರು. ಸಂಸ್ಕೃತದಲ್ಲಿದ್ದ ವೀರಶೈವ ಸಾರವನ್ನು ಅನೇಕರು ಕನ್ನಡಕ್ಕೆ ಮತ್ತು ಇಂಗ್ಲೀಷಿಗೆ ಭಾಷಾಂತರಿಸಿ, ಹೊಸ ಜಗತ್ತಿಗೆ ಬಸವಾದಿ ಶರಣರ ಬದುಕನ್ನು

ಪರಿಚಯಿಸುವ ಕಾರ್ಯ ನಡೆಯುತ್ತಿತ್ತು. ಅದೇ ಸಮಯದಲ್ಲಿ ತಮ್ಮ 'ಜಯ ಬಸವ ಪುಸ್ತಕಾಲಯ' ದಲ್ಲಿ ದೇಶಿಯ ಮತ್ತು ವಿದೇಶಿಯ ಭಾಷೆಯಲ್ಲಿ ರಚನೆಗೊಂಡ ಹಲವಾರು ವೀರಶೈವ ತತ್ವಗಳ ಪುಸ್ತಕಗಳನ್ನು ಮಾರಾಟ ಮಾಡುವ ಪ್ರಕ್ರಿಯೆಯಲ್ಲಿ ತಮ್ಮನ್ನು ತೊಡಗಿಸಿಕೊಂಡರು. ಅದಲ್ಲದೆ ತಾವೇ ಸ್ವತಃ ಮುದ್ರಣಾಲಯವನ್ನು ಸ್ಥಾಪಿಸುವಲ್ಲಿ ಆಸಕ್ತರಾದರು. ಅದರ ಫಲವಾಗಿ ಮುರಗೋಡ ಮಹಾಂತ ಶಿವಯೋಗಿಗಳ ದಿವ್ಯ ಸಾನಿಧ್ಯದಲ್ಲಿ ೧೯೭೨ರಲ್ಲಿ ತಮ್ಮ ಸ್ವಂತ ಕಟ್ಟಡದಲ್ಲಿ 'ಮಹಾಂತೇಶ ಮುದ್ರಣಾಲಯ'ವನ್ನು ಸ್ಥಾಪಿಸಿದರು. 'ಜಯ ಬಸವ ಪುಸ್ತಕಾಲಯ' ಮತ್ತು 'ಮಹಾಂತೇಶ ಮುದ್ರಣ'ಗಳು ಅವರ ಆದಾಯದ ಮೂಲವಾಗದೇ ಅವರ ಸಾಮಾಜಿಕ ಮತ್ತು ಶೈಕ್ಷಣಿಕ ವಿವಿದ್ಯೋದೇಶಗಳನ್ನು ಸಾಕಾರ ಮಾಡುವ ಕೇಂದ್ರವಾಗಿದ್ದವು.

೧೫. ತಾವೇ ಸ್ವತಃ ಕನ್ನಡ, ಸಂಸ್ಕೃತ ಮತ್ತು ಇಂಗ್ಲೀಷ ಅಭ್ಯಾಸ ಮಾಡಿಕೊಂಡವರಾದ್ದರಿಂದ ತಮಗೆ ಸಾಧ್ಯವಾದ ಮಟ್ಟಿಗೆ ವೀರಶೈವ ಮತ ತತ್ವಗಳನ್ನು ವಚನಗಳನ್ನು ಕನ್ನಡ, ಹಿಂದಿ, ಇಂಗ್ಲೀಷಿನಲ್ಲಿ ಬರೆದರು. ಬಸವ ಜಯಂತಿಗೆ ಬಸವಣ್ಣನವರ ವಚನಗಳನ್ನು ಇಂಗ್ಲೀಷ ಹಿಂದಿಯಲ್ಲಿ ಗ್ರೀಟಿಂಗ್ ಕಾರ್ಡಗಳ ರೂಪದಲ್ಲಿ ಮುದ್ರಿಸಿ ವಿನಿಮಯ ಮಾಡಿಕೊಳ್ಳುವ ಹೊಸ ಪರಂಪರೆಯನ್ನು ಹಾಕಿದರು. ಆರ್.ಸಿ.ಹಿರೇಮಠರನ್ನು, ಡಾ.ವಿ. ಶಿವಾನಂದರನ್ನು, ಡಾ. ಮಲ್ಲಿಕಾರ್ಜುನ ಲಠ್ಠೆಯವರನ್ನು, ಪಂ. ನಾಗಭೂಷಣ ಶಾಸ್ತ್ರಿಗಳನ್ನು, ಡಾ. ಎಮ್.ಎಮ್. ಸುಂಕಾಪುರರನ್ನು ಮುಂತಾದ ಇನ್ನೂ ಅನೇಕ ವೀರಶೈವ-ಲಿಂಗಾಯತ ತತ್ವಗಳನ್ನು ಬಲ್ಲವರನ್ನು ಮತ್ತು ಮುರಗೋಡ ಮಹಾಂತ ಶಿವಯೋಗಿಗಳು, ಹಾನಗಲ್ಲ-ಶಿವಯೋಗಮಂದಿರದ ಸದಾಶಿವ ಮಹಾಸ್ವಾಮಿಗಳನ್ನು, ಹಾವೇರಿಯ ಹುಕ್ಕೇರಿ ಮಠದ ಶಿವಲಿಂಗ ಮಹಾಸ್ವಾಮಿಗಳನ್ನು, ಮುಂಡರಗಿಯ ಅನ್ನದಾನೀಶ್ವರ ಮಹಾಸ್ವಾಮಿಗಳನ್ನು, ಕಾಳೇನಹಳ್ಳಿ-ಶಿವಯೋಗಮಂದಿರದ ರುದ್ರಮುನಿ ಸ್ವಾಮಿಗಳನ್ನು, ಧಾರವಾಡದ ಮೃತ್ಯುಂಜಯ ಮಹಾಸ್ವಾಮಿಗಳನ್ನು, ಗದುಗಿನ ತೋಂಟದಾರ್ಯ ಶ್ರೀಗಳನ್ನು, ಮೈಸೂರಿನ ಸರ್ಪಭೂಷಣ ಶಿವಯೋಗಿಗಳಂತಹ ಅನುಭಾವಿಗಳನ್ನು ತಾವು ನಡೆಸಿಕೊಡುವ ಶಿವಾನುಭವ ಕಾರ್ಯಕ್ರಮಗಳಿಗೆ ಕರೆದುಕೊಂಡು ಬಂದು ಅವರಿಂದ ಶಿವಾನುಭವ ಭೋದೆಯನ್ನು ಕೊಡಿಸುತ್ತಿದ್ದರು.

೧೬. ತಮ್ಮ ಗಮನಕ್ಕೆ ಬಂದ ಹಲವಾರು ಕೆಲವು ತಾಡೋಲೆಗಳನ್ನು ಪರಿಸ್ಕರಿಸಿ ಅವುಗಳ ಅರ್ಥವನ್ನು ಎಲ್ಲರಿಗೂ ತಿಳಿಯುವಂತೆ ತಮ್ಮ ಶಿವಾನುಭವದ ಕಾರ್ಯಕ್ರಮದಲ್ಲಿ ಸಾದರಪಡಿಸುತ್ತಿದ್ದರು. ಕಬ್ಬಿಣದ ಕಡಲೆಯಂತಿರುವ 'ರಾಜಶೇಖರ ವಿಳಾಸ' ಮತ್ತು 'ಶಬರ

ಶಂಕರ ವಿಳಾಸ'ದಂತಹ ಶೈವ ಧರ್ಮ ತತ್ವ ಪ್ರಾತಿಪಾಧಿಕ ಗ್ರಂಥಗಳನ್ನು ಅಧ್ಯಯನ ಮತ್ತು ಅಧ್ಯಾಪನ ತುಂಬಾ ಸರಳವಾಗಿ ಮತ್ತು ಜನರಿಗೆ ಅರ್ಥವಾಗುವ ರೀತಿಯಲ್ಲಿ ಹೇಳುತ್ತಿದ್ದರು. ಏಳನೂರು ವರ್ಷ ಬಾಳಿದ ಹೊಸಳ್ಳಿ ಬೂದಿ ಮಹಾಂತ ಸ್ವಾಮಿಗಳ ಚರಿತೆಯನ್ನು ಅವರ ಮಾತಿನಲ್ಲಿ ಕೇಳಬೇಕು ಎಂದು ಶಿವಾನುಭವ ಪ್ರವಚನಗಳನ್ನು, ಉಪನ್ಯಾಸಗಳನ್ನು ಕೇಳಿದ ಸುಶೀಲಮ್ಮ ಪವಾಡಶೆಟ್ಟರ ಅವರು ನೆನಪಿಸಿಕೊಳ್ಳುತ್ತಾರೆ. ಸುಶೀಲಮ್ಮಾ ಪವಾಡಶೆಟ್ಟರ ಅವರ ಬೀಗರಾದ ಕುರಗೋಡ ಅವರ ಮನೆಯಲ್ಲಿದ್ದ ಹಸ್ತಪ್ರತಿಗಳನ್ನು ತರಿಸಿಕೊಂಡಿದ್ದನ್ನು ನೆನೆಯುತ್ತಾರೆ.

ಬಸವಣ್ಣನವರ ನೂರಾರು ವಚನಗಳನ್ನು ಸ್ಥಲಗಳ ಆಧಾರದ ಮೇಲೆ ವಿಭಜಿಸಿ ಅವುಗಳನ್ನು ಪರಿಸ್ಕರಿಸಿದ್ದಾರೆ. ಆ ಪರಿಷ್ಕರಣೆಯನ್ನು ಪುಸ್ತಕದ ರೂಪದಲ್ಲಿ ಗದುಗಿನ ಖ್ಯಾತ ಪುಸ್ತಕ ವ್ಯಾಪಾರಿಗಳಾದ ಶಾಬಾದಿಮಠ ಅವರು ಮುದ್ರಿಸಿರುತ್ತಾರೆ. ಈ ರೀತಿ ಅನೇಕ ಗ್ರಂಥಗಳನ್ನು, ಕೃತಿಗಳನ್ನು ಹುಡುಕುವ, ಪರಿಸ್ಕರಿಸುವ ಕಾರ್ಯದಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದರು. ಈ ಎಲ್ಲ ಕಾರ್ಯಗಳು ಶಿವಯೋಗ ಮಂದಿರದ ಆಶಯಗಳ ಸಾಕಾರವೇ ಆಗಿವೆ.

೧೮. ಇವರ ಸಂಘಟನಾ ಶಕ್ತಿಯನ್ನು ಅರಿತುಕೊಂಡವರಿಗೆ ಅವರು ಮಾಡಿರುವ ಎಲ್ಲ ಕಾರ್ಯಗಳ ಅರಿವು ಆಗುತ್ತದೆ. ನಾಗಭೂಷಣ ಶಾಸ್ತ್ರಿಗಳನ್ನು, ಕಲ್ಮಠರನ್ನು, ಓಲಿಯವರಂತಹ ಸಮಾನ ಮನಸ್ಕರನ್ನು ಸೇರಿಕೊಂಡು ಅವರು ಸೇವೆಗೈದ ಗದುಗಿನ ವೀರಶೈವ ವಿದ್ಯಾಪೀಠ ಅಂದಿನ ಕಾಲಕ್ಕೆ ಎಂ.ಎ ಸ್ನಾತಕೋತ್ತರ ಪದವಿಯ ಸರಿಸಮಾನ ಪಾಠಗಳನ್ನು ಮತ್ತು ಪರೀಕ್ಷೆಗಳನ್ನು ನಡೆಸುತ್ತಿದ್ದರು. "ಗದುಗಿನ ವೀರಶೈವ ವಿದ್ಯಾಪೀಠವೊಂದು ಆಗ ಪಂ.ನಾಗಭೂಷಣ ಶಾಸ್ತ್ರಿಗಳವರ ನೇತೃತ್ವದಲ್ಲಿ ಅದ್ಭುತ ಸೇವೆ ಸಲ್ಲಿಸುತ್ತಿತ್ತು."[೧೫] ನಾಡಿನಾದ್ಯಾಂತ ಸಾಹಿತ್ಯ ಪರೀಕ್ಷೆಗಳನ್ನು ನಡೆಸುತ್ತ ಚಿಕ್ಕ ಮಕ್ಕಳಲ್ಲಿ ಸಂಸ್ಕೃತಿಯ ಬೀಜ ಬಿತ್ತಲು ಸಹಾಯಕಾರಿಯಾಗಿತ್ತು. ಆ ಪೀಠದ ಪ್ರಮುಖ ಸದಸ್ಯರೆನಿಸಿಕೊಂಡವರು ಕ.ಬ.ಅಂಗಡಿಯವರು. ಅವರ ಮನೆಯಲ್ಲಿಯೂ ಸಹ ಈ ಪರೀಕ್ಷೆಗಳು ನಡೆದದ್ದನ್ನು ಅವರ ಮಕ್ಕಳು ಇಂದಿಗೂ ನೆನೆದುಕೊಳ್ಳುತ್ತಾರೆ. ಅವರ ಮಕ್ಕಳು ಸಹ ಈ ಪರೀಕ್ಷೆಗಳನ್ನು ಕಟ್ಟಿ ಪಾಸಾದದನ್ನು ನೋಡಬಹುದು. ತೋಂಟದಾರ್ಯ ಮಠ, ಹಾಲಕೆರಿ ಅನ್ನದಾನೀಶ್ವರ ಮಠ, ಅಕ್ಕನ ಬಳಗಗಳಲ್ಲಿ ಶರಣರ 'ವಚನ ವಾಚನ' ಸ್ಪರ್ಧೆ ಕೂಡ ನಡೆಯುತ್ತಿದ್ದವು. ಅವುಗಳಿಗೆ ಆಕರ್ಷಣೀಯವಾಗಿ ಬಹುಮಾನಗಳನ್ನು ನೀಡುವ ಪರಂಪರೆಯನ್ನು ಇವರು ಹುಟ್ಟುಹಾಕಿದರು. ಈ ಎಲ್ಲ ಕಾರ್ಯಗಳು ಅವರ ಶಿವಯೋಗ

ಮಂದಿರದಲ್ಲಿ ಪಡೆದ ಸಮಾಜ ಸಂಘಟನೆ ಮತ್ತು ಅಭಿವೃದ್ದಿಗಳ ಕುರಿತ ಶಿಕ್ಷಣವೇ ಕಾರಣ ಎಂದರೆ ಅತಿಶಯೋಕ್ತಿಯಲ್ಲ.

ಭಕ್ತನಿಗಿರಬೇಕಾದ ಈ ಗುಣ-ಲಕ್ಷಣಗಳು ವೈಚಾರಿಕತೆಯಲ್ಲಿ ಸುಲಭವೆನ್ನಿಸಿದರೂ ಆಚರಣೆಯಲ್ಲಿ ಸುಲಭಗ್ರಾಹ್ಯಗಳಲ್ಲ. ಆದರೆ ಈ ಎಲ್ಲ ಗುಣ-ಲಕ್ಷಣಗಳನ್ನು ತಮ್ಮ ನಡೆ-ನುಡಿಗಳ ಸಮನ್ವಯದಿಂದ ಸಾಧಿಸಿಕೊಂಡರು. ಅವರ ಮನಸ್ಸಿನಲ್ಲಿ ಕಾಮವಿಲ್ಲ, ಕ್ರೋಧವಿಲ್ಲ, ಮೋಹವಿಲ್ಲ, ಲೋಭವಿಲ್ಲ, ಮದವಿಲ್ಲ, ಮತ್ಸರವಿಲ್ಲ. ಇಂಥ ಅರಿಷಡ್ವರ್ಗಗಳ ಉಪಟಳವಿಲ್ಲವೆಂದ ಬಳಿಕ, ಸಪ್ತವ್ಯಸನಗಳ ಜಂಜಡವಿಲ್ಲ, ಅಷ್ಟಮದಗಳ ಪೀಡಣೆಯಿಲ್ಲವೆಂದಾಗ ಇವುಗಳೆಲ್ಲದರ ಫಲವಾಗಿ ನಿಜಭಕ್ತನೆನ್ನಿಸಿದರು. ಆ ಉತ್ಕಟ ಭಕ್ತಿ ನಿವೇದನೆ ಸಾಹಿತ್ಯದ ಮೂಲಕ ಅಭಿವ್ಯಕ್ತಗೊಳಿಸಿ ಭಕ್ತ ಕವಿಯಾಗಿ ಹರಿಹರ, ರಾಘವಾಂಕರಂತೆ ತಮ್ಮ ಬದುಕನ್ನು ಶಿವಯೋಗಿಗಳ ಜೀವನ ಸಾಧನೆಗಳನ್ನು ಲೋಕಕ್ಕೆ ತಿಳಿಸುವ ಕಾರ್ಯದಲ್ಲಿ ತೊಡಗಿಸಿಕೊಂಡರು.

ಜೀವನ ಶಿಕ್ಷಣದ ಮೊದಲ ಸ್ತರದಲ್ಲಿ ತಂದೆ, ತಾಯಿ, ಪೋಷಕರ, ಎರಡನೆಯ ಸ್ತರದಲ್ಲಿ ಶಿಕ್ಷಣದ, ಮೂರನೆಯ ಸ್ತರದಲ್ಲಿ ಸ್ವಯಂ ತನ್ನ ಅರಿವಿನ, ನಾಲ್ಕನೆಯ ಹಂತದಲ್ಲಿ ಬದುಕು ಕಲಿಸುವ ಪಾಠ ಇವೆಲ್ಲವುಗಳು ವ್ಯಕಿತ್ವ ನಿರ್ಮಾಣದಲ್ಲಿ ತಮ್ಮದೆ ಆದ ಮಹತ್ವದ ಪಾತ್ರವನ್ನು ವಹಿಸುತ್ತವೆ. ಈ ಎಲ್ಲ ಸ್ತರಗಳನ್ನು ಒಟ್ಟಿಗೆ ಕಟ್ಟಿಕೊಡಬಲ್ಲ ಶಕ್ತಿ ಬಸವಾದಿ ಶರಣರ ತತ್ವಗಳಿಗಿದೆ. ಆ ಮಹದಾಶೆಯ ಸಾಕಾರಕ್ಕೆ ಜೀವಂತ ಉದಾಹರಣೆಯಾದವರು ಕ.ಬ.ಅಂಗಡಿಯವರು.

## ೩.೧೦ ಬಸವಾದಿ ಶಿವಶರಣರ ಪ್ರಭಾವ :

ಕ.ಬ.ಅಂಗಡಿಯವರ ಬದುಕಿನಲ್ಲಿ ಬಸವಾದಿ ಶಿವಶರಣರ ಪ್ರಭಾವ ಅತ್ಯಧಿಕ. ಶಿವಶರಣರ ಜೀವನ ಪ್ರೀತಿಯ ಜೊತೆಗೆ ಅವರ ವಿಭಿನ್ನ ಮತ್ತು ಸಾತ್ವಿಕ ಜೀವನ ಶೈಲಿ ಇವರನ್ನು ಸೆಳೆದಿರುತ್ತದೆ. ತಮ್ಮ ಶೈಕ್ಷಣಿಕ ಜೀವನದಿಂದಲೇ ಬಸವಾದಿ ಶರಣರ ತತ್ವಗಳ ವೈಚಾರಿಕತೆಯಲ್ಲಿ ತಮ್ಮನ್ನು ತೊಡಗಿಸಿಕೊಳ್ಳತೊಡಗಿದರು. ಈ ತತ್ವಗಳ ಪ್ರಭಾವ ಅಂದಿನ ದಿನಗಳಲ್ಲಿ ಹೆಚ್ಚು ಪ್ರಚಾರದಲ್ಲಿಯೂ ಮತ್ತು ಕ್ರಿಯಾಶೀಲತೆಯಿಂದಲೂ ಕೂಡಿರಲು ಕಾರಣ ಹಾನಗಲ್ಲ ಕುಮಾರ ಶಿವಯೋಗಿಗಳು. ಅಂಧ ಶ್ರದ್ಧೆಗಳಲ್ಲಿ, ಅನಾಚಾರಗಳಲ್ಲಿ, ಅವ್ಯವಹಾರದಲ್ಲಿ, ಪಾಪಕೂಪಗಳಲ್ಲಿ ತಮ್ಮನ್ನು ತೊಡಗಿಸಿಕೊಂಡು ಸಂಪೂರ್ಣ ವೀರಶೈವ ಧರ್ಮ ಪರಿಪಾಲನೆಯನ್ನು ಮರೆತ ವೀರಶೈವ ಜನಾಂಗದಲ್ಲಿ ಪ್ರಗತಿಯ ಜ್ಯೋತಿಯನ್ನು

ಬೆಳಗಿಸಿದವರು. ಬಸವಣ್ಣನವರು ಮತ್ತು ಎಡೆಯೂರು ಸಿದ್ಧಲಿಂಗ ಯತಿಗಳ ನಂತರದ ಮಹತ್ವದ ಸ್ಥಾನ-ಮಾನಗಳಲ್ಲಿ ಹಾನಗಲ್ಲ ಕುಮಾರ ಶಿವಯೋಗಿಗಳನ್ನು ಗುರುತಿಸಲಾಗುತ್ತದೆ. ಆ ಸ್ಥಾನದಲ್ಲಿದ್ದುಕೊಂಡು ವೀರಶೈವ ಪುನರುತ್ಥಾನದ ಕಾರ್ಯವನ್ನು ಎಡೆಬಿಡದೆ ತಮ್ಮ ಜೀವನ ಪೂರ್ತಿ ಮಾಡಿರುವುದು ಗಮನಾರ್ಹ. ಅಂತವರ ಪರಿಸರದಲ್ಲಿದ್ದ ಇವರು ಸಹಜವಾಗಿ ಅವರ ಚಿಂತನೆಗಳಿಗೆ ಸ್ಪಂದಿಸಿದರು. ಅಂದಿನ ಗದುಗಿನ ಪರಿಸರ ಕೂಡ ಅವರ ಈ ಅಭಿವ್ಯಕ್ತಿ ಮಾಧ್ಯಮಕ್ಕೆ ನೆಲೆ-ಬೆಲೆಯನ್ನು ಕಲ್ಪಿಸಿಕೊಟ್ಟಿತು.

ಇವರು ಮೊದಮೊದಲು ಬರೆದ ನಾಟಕಗಳು, ಬೈಲಾಟಗಳನ್ನು ನೋಡಿದಾಗ ನಮಗೆ ಅವುಗಳ ಆಯ್ಕೆಯಲ್ಲಿ ಅವರ ಆಶಯವೂ ಕೂಡ ಕಂಡುಬರುತ್ತದೆ. ಅವರ ನಾಟಕಗಳಾದ 'ಶಿವಪಾರಮ್ಯ ಅರ್ಥಾತ್ ಗುಗ್ಗುಳ' ಮತ್ತು 'ಜಕ್ಕಲಿಯ ಶರಣರ ನಾಟಕ' ಗಳಲ್ಲಿ ಬಸವಾದಿ ಶಿವಶರಣರ ಜೀವನಾಸೆ ಆಕಾಂಕ್ಷೆಗಳನ್ನು ಅಭಿವ್ಯಕ್ತಿಸಿದ್ದಾರೆ.

'ಕೆಳದಿಯ ಚೆನ್ನಮ್ಮ', 'ಕಿತ್ತೂರ ಕೇಸರಿ', 'ಬೆಳದಡಿ ಮಲ್ಲಮ್ಮ' ದಂತಹ ಸಾಮಾಜಿಕ-ರಾಜಕೀಯ ವಸ್ತುಗಳಲ್ಲಿಯೂ ಕೂಡ ಬಸವಾದಿ ಶರಣರ ವಿಚಾರಗಳನ್ನು, ಸಾಮಾಜಿಕ ಮತ್ತು ಧಾರ್ಮಿಕ ಕಾಳಜಿಗಳನ್ನು ಸಹಜವಾಗಿ ಅಭಿವ್ಯಕ್ತಿಸಿದ್ದಾರೆ. ಸ್ತ್ರೀಯರಿಗೆ ಪುರುಷ ಸಮಾನ ಸ್ಥಾನಮಾನಗಳನ್ನು ನೀಡಿ, ಲಿಂಗಬೇಧ ನಿವಾರಣೆಗಾಗಿ ಪ್ರಾಯೋಗಿಕ ಪ್ರಯತ್ನ ಮಾಡಿದರು. ಇವರ ನಾಟಕ ಮತ್ತು ಬಯಲಾಟ ಕೃತಿಗಳನ್ನು ನಾವು ಸಾಮಾಜಿಕ ಸಹಜೀವನದ ಮತ್ತು ಸ್ತ್ರೀಯರ ಆತ್ಮಗೌರವದ ಪ್ರತೀಕವಾಗಿಯೇ ನೋಡಬೇಕಾಗುತ್ತದೆ. ಗೃಹ ಕಾರ್ಯಗಳಲ್ಲಿ ತನ್ನನ್ನು ತೊಡಗಿಸಿಕೊಂಡು ತನ್ನ ಕುಟುಂಬ ಪರಿವಾರದ ಬಗೆಗೆ ಸತತವಾಗಿ ಆಲೋಚಿಸುವ ಹಿಂದಿನ ಸ್ತ್ರೀಯರಿಗೂ ಮತ್ತು ಗೃಹಕಾರ್ಯಗಳ ಜೊತೆಗೆ ಹೊರಗಡೆ ಸರಿಸಮಾನವಾಗಿ ದುಡಿದು, ತನ್ನ ಕುಟುಂಬ ಪರಿವಾರದ ಬಗೆಗೆ ಆಲೋಚಿಸುವ ಇಂದಿನ ಸ್ತ್ರೀಯರಿಗೂ ನಾವು ತುಲನೆ ಮಾಡಿದಾಗ, ಇವರ ಶ್ರಮವನ್ನು ಗುರುತಿಸಲು ಸಾಧ್ಯ. ಸ್ತ್ರೀಯರ ಮನೋಭೂಮಿಯಲ್ಲಿ ಸಕಾರಾತ್ಮಕ ಬೀಜವನ್ನು ಬಿತ್ತಿ, ಸಮಯೋಚಿತ ಬೆಳೆ ತೆಗೆಯುವ ಇವರ ಕಾರ್ಯ ನಿಜಕ್ಕೂ ಶ್ಲಾಘನೀಯ.

ಬಸವಣ್ಣ, ಮಡಿವಾಳ ಮಾಚಿತಂದೆ, ನೀಲಲೋಚನೆ, ಮಲ್ಲಿಗಮ್ಮ, ಆಯ್ದಕ್ಕಿ ಲಕ್ಕಮ್ಮ, ಅಕ್ಕಮಹಾದೇವಿ, ಚೆನ್ನಬಸವಣ್ಣ, ಸಿದ್ಧರಾಮ ಶಿವಯೋಗಿ, ಮೋಳಿಗೆಯ ಮಹಾದೇವಮ್ಮ ಮತ್ತು ಆ ಕಾಲದ ಬಹುತೇಕರ ಪ್ರಭಾವಕ್ಕೆ ಒಳಗಾದುದು ಅವರ ಕೃತಿಗಳ ಮೂಲಕ ಗುರುತಿಸಬಹುದು.



ಗೊಡಚಿಯ ವೀರಭದ್ರ ದೇವಸ್ಥಾನ



ಕ.ಬ.ಅಂಗಡಿಯವರು ಶಿವಾನುಭವಗಳನ್ನು ನಡೆಸಿದ ಗೊಡಚಿಯ ಶಿವಾನುಭವ ಮಂಟಪ.

## ೩.೧೧ ಗೊಡಚಿ ಸುಕ್ಷೇತ್ರದ ಪ್ರಭಾವ :

ತಮ್ಮ ಶಿಕ್ಷಣವೃತ್ತಿಯ ನಡುವೆಯೂ ತಾವು ವರ್ಗವಾಗಿ ಹೋದ ಕಡೆಗೆಲ್ಲ ಸಂಶೋಧನೆಯ ಮುಖ್ಯ ಉದ್ದೇಶವನ್ನು ಹೊಂದಿ, ತಮ್ಮ ಅರಿವಿಗೆ ಬರುವ ಕೋಟೆ-ಕೊತ್ತಲು, ಆ ಊರು, ಅದರ ಪರಿಸರ, ಅದರ ಧಾರ್ಮಿಕ-ಸಾಂಸ್ಕೃತಿಕ ತಳಹದಿ. ಆ ಸ್ಥಳ ಬಸವಾದಿ ಶಿವಶರಣರಿಗೆ ಯಾವುದೇ ರೂಪದಲ್ಲಿ ಬಳಕೆಯಾಗಿತ್ತೆ ? ಅಲ್ಲಿ ಅವರ ಕುರುಹುಗಳು ಏನಾದರೂ ಇರಬಹುದೇ ? ಎನ್ನುವ ಕುತೂಹಲಗಳನ್ನು ಮನಸ್ಸಿನಲ್ಲಿ ಮೈಗೂಡಿಸಿಕೊಂಡು ತಮ್ಮ ಶೈಕ್ಷಣಿಕ ವೃತ್ತಿಯೊಂದಿಗೆ ಸಂಶೋಧನೆಯ ಪ್ರವೃತ್ತಿಯಲ್ಲಿ ತೊಡಗಿಕೊಳ್ಳುತ್ತಿದ್ದರು.

ಗೊಡಚಿ ಶ್ರೀ ಕ್ಷೇತ್ರ ಅವರ ಮನೆದೇವರಾದ ವೀರಭದ್ರ ದೇವರ ಜಾಗೃತ ಸ್ಥಳ. ಆ ಸ್ಥಳವೊಂದು ಹಿಂದುಳಿದ ಹಳ್ಳಿಗಾಡು ಪ್ರದೇಶ. ಅಲ್ಲಿ ಯಾವುದೇ ಜನಸಂಪರ್ಕವಿರಲಿಲ್ಲ. ಗೊಡಚಿ ಎನ್ನುವ ಇಚಲು ಮರದಂತಹ ಗಿಡಗಳುಳ್ಳ ಪ್ರದೇಶವದು. ಈ ದೃಷ್ಟಿಯಿಂದ ಅದಕ್ಕೆ ಗೊಡಚಿ ಎಂದು ಕರೆಯಲಾಗುತ್ತದೆ. ಇದು ಅವರ ಮನೆದೇವರಾದ ಕಾರಣ ಪ್ರತಿವರ್ಷ ಅವರು ಹೊಸ್ತಿಲು ಹುಣ್ಣಿಮೆಯಂದು ಅಲ್ಲಿ ನೆರೆದು ತಮ್ಮ ಭಕ್ತಿಯನ್ನು ಅಭಿವ್ಯಕ್ತಿಸುವ ಪರಿಪಾಠವನ್ನಿಟ್ಟುಕೊಂಡಿದ್ದರು. ಗೊಡಚಿಯ ಮೇಲಿನ ಅವರ ಪ್ರಭಾವಕ್ಕೆ ಒಂದು ಸನ್ನೀವೇಶ ಕಾರಣವಾಗುತ್ತದೆ.

ದೈವದ ಬಗೆಗೆ ಜನರಿಗಿರುವ ಮೌಢ್ಯವನ್ನು ಖಂಡಿಸುತ್ತ ತಮ್ಮ ಜೀವನದಲ್ಲಿ 'ಲಿಂಗಾಂಗ ಸಾಮರಸ್ಯ'ಕ್ಕೆ ಒತ್ತುಕೊಟ್ಟು, ಕಾಳಿ, ಮಾರಿ, ಮಸಣಿ, ರುದ್ರ, ಭದ್ರ ಇವುಗಳ ಆರಾಧನೆಯನ್ನು ನಿರಾಕರಿಸುತ್ತಿದ್ದರು. ದೇವರನ್ನು ಸತ್ಯದಲ್ಲಿ, ಸರಳತೆಯಲ್ಲಿ, ವೃತ್ತಿಪರತೆಯಲ್ಲಿ, ಸಂತೃಪ್ತ ಬದುಕಿನಲ್ಲಿ, ಪ್ರೀತಿ-ಸ್ನೇಹದಲ್ಲಿ, ವಿಶ್ವಾಸದಲ್ಲಿ, ಸಾಹಿತ್ಯದಲ್ಲಿ ಕಂಡರಸಿದ ಇವರು ಎಲ್ಲ ಬಗೆಯ ಡಾಂಭಿಕ ಪೂಜೆಗಳನ್ನು ತಮ್ಮ ಮನೆಯಲ್ಲೂ ನಿಷೇಧಿಸಿದರು. ಕ.ಬ.ಅಂಗಡಿಯವರ ಮತ್ತು ಅವರ ಪತ್ನಿ ಚೆನ್ನಮ್ಮನವರ ನಡುವೆ ನಡೆದ ವಾಗ್ವಾದದಲ್ಲಿ ಗೊಡಚಿ ವೀರಭದ್ರನ ಬಗೆಗೆ ಜರಿದು ಮಾತನಾಡಿದರಂತೆ. ಆ ಸಂದರ್ಭದಲ್ಲಿ ಅಂಗಡಿಯವರ ಕಣ್ಣುಗಳು ಕಾಣದಾಗಿ ಮಂಜಾದವು. ಚೆನ್ನಮ್ಮನವರು 'ನೀವು ಗೊಡಚಿ ವೀರಭದ್ರ ದೇವರನ್ನು ಜರಿದಿದ್ದಕ್ಕಾಗಿ ನಿಮ್ಮ ಕಣ್ಣುಗಳು ದೃಷ್ಟಿ ಕಳೆದುಕೊಂಡಿವೆ' ಎಂದರು. ಇದನ್ನು ಕೇಳಿದ ಅವರು 'ನಾನೀಗಲೇ ಗೊಡಚಿಗೆ ಹೋಗುವೆ ನನ್ನ ಜೊತೆ ಯಾರು ಬರಬಾರದು ಮತ್ತು ಈ ಸ್ಥಿತಿಯಲ್ಲೇ ನಾವು ಗೊಡಚಿಗೆ ಹೋಗುವುದಾಗಿ ಪಟ್ಟು ಹಿಡಿದು,

ಗೊಡಚಿಯ ಬಸ್ಸನ್ನು ಹತ್ತಿದರು. ರಾತ್ರಿಯಾಗುತ್ತಾ ಬಂದಾಗ ಗೊಡಚಿ ಮುಟ್ಟಿ ಏನೂ ಕಾಣದ ಕಾರಣ ತಾವು ಒಂದು ಮೂಲೆಯಲ್ಲಿ ಹೋಗಿ ಕುಳಿತುಕೊಳ್ಳಲು, ಅಲ್ಲಿ ವಸ್ತ್ರವೊಂದು ದೊರೆಯಿತು. ಅದನ್ನೆ ಹಾಸಿಯನ್ನಾಗಿ ಮಾಡಿಕೊಂಡು, ನೀನು ನಿಜವಾಗಿಯೂ ಇದ್ದರೆ ನನ್ನ ಕಣ್ಣು ಬರಲಿ, ನಿನ್ನನ್ನು ನಂಬುವೆ ಎಂದು ಮನದಲ್ಲಿ ಅಂದುಕೊಂಡು ಮಲಗಿದರು. ಮುಂಜಾನೆ ಸರಿಯಾಗಿ ಎಚ್ಚರವಾಗಲು ಅವರಿಗೆ ಅಚ್ಚರಿಯೊಂದು ಕಾದಿತ್ತು. ಅವರ ಕಣ್ಣಿನ ದೃಷ್ಟಿ ಸರಿಯಾಗಿತ್ತು. ತಾವು ಮಲಗಿದ ಸ್ಥಾನ ವೀರಭದ್ರ ದೇವರ ಸನ್ನಿಧಿಯೇ ಆಗಿತ್ತು. ಅಂದಿನಿಂದ ನೀನಿರುವುದು ಸತ್ಯವೆಂದರಿತು ತಮ್ಮ ಜೀವನ ಪೂರ್ತಿ ಗೊಡಚಿ ವೀರಭದ್ರ ದೇವರ ಭಕ್ತರಾಗಿ ಸೇವೆ ಸಲ್ಲಿಸಿದರು.[೧೬] ಈ ವೃತ್ತಾಂತ ನಂಬಿಕೆ ಎಂದುಕೊಂಡರೂ, ಆ ನಂಬಿಕೆ ಮೌಢ್ಯಗಳಲ್ಲಿ ಪರ್ಯವಸಾನವಾಗದೆ ಅವರ ಸತ್ಯ ಸಂಶೋಧನೆಗೆ ವೇದಿಕೆಯಾಗಿತು.

ಅವರ ಈ ಗೊಡಚಿಯ ಸ್ನೇಹದಿಂದಾಗಿ ಅವರ ಮನದಲ್ಲಿ ಮೂಡಿದ ಸಂಶೋಧನೆಯ ಕುತೂಹಲ ಅವರನ್ನು ಕ್ಷೇತ್ರ ಪರ್ಯಟನೆಗೆ ಹಚ್ಚಿತು. ಗದುಗಿನಲ್ಲಿ ಕ್ಷೇತ್ರದ ಹಲವಾರು ಭಕ್ತರನ್ನು ಸಂಘಟಿಸಿಕೊಂಡು ಗೊಡಚಿ ಶ್ರೀಕ್ಷೇತ್ರ ಸೇವಾ ಸಂಘವನ್ನು ಕಟ್ಟಿದರು. ಅದರ ಕಾರ್ಯಾಧ್ಯಯಕ್ಷರಾಗಿ ಕಾರ್ಯ ನಿರ್ವಹಿಸಿದರು. ಹಾಳು ಕೊಂಪೆಯಾಗಿದ್ದ ಗೊಡಚಿ ಕ್ಷೇತ್ರಕ್ಕೆ ಚೈತನ್ಯ ಒದಗಿಸುವ ಕಾರ್ಯದಲ್ಲಿ ತಲ್ಲೀನರಾದರು. ಶಿವಾನುಭವಗಳನ್ನು, ಮಂಥನ ಸಭೆಗಳನ್ನು, ಜಾತ್ರೆಯ ಕಾರ್ಯಕ್ರಮಗಳನ್ನು, ಸಾಂಸ್ಕೃತಿಕ ಕಾರ್ಯಗಳನ್ನು, ಸಾಂಘಿಕ ಯೋಜನೆಗಳನ್ನು ಹಮ್ಮಿಕೊಳ್ಳತೊಡಗಿದರು. ಮುಳ್ಳು-ಕಳ್ಳಿಗಳಿಂದ ಕೂಡಿದ ದುರ್ಗಮ ಪ್ರದೇಶವಾದ ಗೊಡಚಿ ಸುಸಜ್ಜಿತವಾದ ರೂಪ ಪಡೆದುಕೊಳ್ಳತೊಡಗಿತು. ಗೊಡಚಿಯೊಂದಿಗೆ ಅವರ ಭಾವನಾತ್ಮಕ ಸಂಬಂಧವನ್ನು ಈ ಕೆಳಗಿನ ಅವರದೇ ನುಡಿಗಳಲ್ಲಿ ನೋಡಬಹುದು.

೧೯೩೩ ಡಿಸೆಂಬರ ಹೊಸ್ತಿಲ ಹುಣ್ಣಿಮೆ, ಶ್ರೀ ಕ್ಷೇತ್ರದ ಜಾತ್ರೆ, ರಾತ್ರಿ ಸಮಯ, ರಾಮದುರ್ಗ ಕಂಪನಿ ನಾಟಕ, ವಿಶ್ರಾಂತಿ ಸಮಯದ ನಂತರ ರಂಗ ಪಡದೆ ಎತ್ತಲ್ಪಟ್ಟಿತು, ಸ್ಟೇಜಿನ ಮೇಲೆ ನಿಂತವರು ಅಂಗಡಿ ಕರವೀರಪ್ಪವರು. ಪ್ರೇಕ್ಷರತ್ತ ಕೈ ಮುಗಿದು, ನಡೆದ ನಾಟಕವನ್ನು ಪ್ರಶಂಸಿಸಿ, ಭಾವಾವೇಶಪೂರಿತವಾದ ಕನಿಕರದಿಂದ ಹೀಗೆ ಹೇಳಿದರು. "ಶ್ರೀ ರುದ್ರ ಭಕ್ತ ಶ್ರೇಷ್ಠರೆ, ಇದು ಸ್ಥಾವರ ಕ್ಷೇತ್ರವಲ್ಲ. ಪವಿತ್ರ ಜಂಗಮ ಶರಣ ಕ್ಷೇತ್ರ. ಕಲ್ಯಾಣ ಕ್ರಾಂತಿಯ ಕಾರಣದಿಂದ ಷಟ್ಸ್ಥಲ ಧರ್ಮತತ್ತ್ವರಸ ಬುಗ್ಗೆಯು ಒಡೆದು, ಪುಟಿದೆದ್ದು, ಗುಪ್ತಗಾಮಿನಿಯಾಗಿ ಹರಿದು ಅಲ್ಲಲ್ಲಿ ಒರತೆಯಾಗಿ ತೋರಹತ್ತಿತು. ಈ ಒರತೆಯೆ

ಜ್ಞಾನಗಂಗೋತ್ರಿ ಈ ಕ್ಷೇತ್ರ !! ಚೆನ್ನ ಬಸವ, ಮಡಿವಳ ಮಾಚಿತಂದೆ, ಅಕ್ಕನಾಗಮ್ಮ, ಗಂಗಾಂಬಿಕೆ ಮತ್ತು ರುದ್ರಮುನಿ ಮೊದಲಾದ ಸಹಸ್ರಾರು ಶರಣ ಶರಣೆಯರು ಕಲ್ಯಾಣವನ್ನು ಬಿಟ್ಟು ಉಳವಿಯತ್ತ ನಡೆಸಿರಲು ಈ ಸ್ಥಾನವವರಿಗೆ ರಕ್ಷಾಕವಚವಾಯಿತು ಮಡಿವಳ ವೀರಶ್ರೀ ದ್ಯೋತಕ ಧೀರ ಶರಣರ ಕ್ಷೇತ್ರವಾಯಿತು. ರುದ್ರಮುನಿ ಹಾಗೂ ಚೆನ್ನಬಸವರ ಕಾಲಜ್ಞಾನ, ಶರಣಲೀಲಾಮೃತಪುರಾಣ, ರಾವಬಹದ್ದೂರ ಲಿಂ. ಹಳಕಟ್ಟಿಯವರ ಸಾಹಿತ್ಯ ಮತ್ತು ನಿರಂಜನ ರತ್ನಾಕರ ಗ್ರಂಥ ಇವು ಈ ಮಾತಿಗೆ ಆಧಾರವಾಗಿ ನಿಂತಿವೆ. ಇದರಿಂದ ಕ್ರಾಂತಿಯ ತರುವಾಯ ಶರಣರಿಗೆ ಈ ಸ್ಥಾನ ನೂತನ ಕಲ್ಯಾಣವಾಗಿತ್ತೆಂದು ನಿರ್ವಿವಾದ.

ಕಾಲ ಬದಲಾದಂತೆ ತಜ್ಞರ ಶೋಧದಿಂದ ಹಾಗೂ ಭಕ್ತರ ತ್ಯಾಗದಿಂದ ಜಂಗಮ ಕ್ಷೇತ್ರಗಳಾಗಿ ಮೆರೆವ ಎಡೆಯೂರು, ಉಳವಿ, ಸಂಗಮ, ಶ್ರೀಶೈಲಗಳಂತೆ ೧೯೩೩ರ ವರೆಗೆ ಸ್ಥಾವರ ಲಿಂಗದ ಕ್ಷೇತ್ರವಾಗಿದ್ದ ಈ ಕ್ಷೇತ್ರ ಇಂದು, ಜಂಗಮಲಿಂಗ ಕ್ಷೇತ್ರವಾಗಿ ಮೆರೆಯಹತ್ತ ಬೇಕಾದರೆ ನಮ್ಮಗಳ ತ್ಯಾಗವು ಬೇಕು"[೧೭] ಎಂದು ಹೇಳುತ್ತ, ಮತ್ತೆ "ನೋಡಿರಿ; ನಗ್ಗಲಿ-ಬಿಂಜಾಲಿ ಮುಳ್ಳುಗಳಿಂದ ಸುತ್ತುಗಟ್ಟಿದೆ ಈ ಕ್ಷೇತ್ರ, ಮುಳ್ಳಿನ ತುಳಿತಕ್ಕೆ ಕಂಗೆಟ್ಟ ಭಕ್ತಾದಿಗಲೆಲ್ಲ ಕಕ್ಕಾವಿಕ್ಕಿಯಾಗಿದೆ. 'ದೇವರೇ ಶ್ರೀ ರುದ್ರ' ಎನ್ನುತ್ತ ಕಣ್ಣೀರಿಡುತ್ತ ಪ್ರಣತಿಗೆ ಎಣ್ಣೆ ಹಾಕುತ್ತಿರುವರು. ಹೊರಗಿನ ದೃಶ್ಯಕನಿಕರಪಡುವಂತಹದು. ಮಾಲಿನ್ಯಮಯನೆಲ; ರೋಗ ಜನಕ ಜಲ; ಮಾರಿಗೌತಣವಿಡುವ , ಬಾಳೆ-ಬೋರೆ-ಬೆಳವಲ ಫಲ. ಗುಳಿಗುಳಿಯಾಟ, ರೊಕ್ಕದಾಟ, ಕಣ್ಣುಮುಚ್ಚುಣಿಕೆಯಾಟ, ಕಳ್ಳರ ಆಟ ಇಂತಹ ಪರಿಸರ ತುಂಬಿದ ಈ ಜಾತ್ರೆಯಲ್ಲಿ ಶಿವ ಶಿವ ! ಶ್ರೀ ರುದ್ರ, ನಮಗೆ ನಿಜವನ್ನು ತೋರಯ್ಯ' ಎನ್ನುತ್ತ ನಾವು ಈ ಕ್ಷೇತ್ರೋದ್ಧಾರಕ್ಕಾಗಿ ಸೇವೆ ಸಲ್ಲಿಸಲು ಸಿದ್ಧರಾಗಬೇಕಲ್ಲದೆ; ಅಷ್ಟು ಎಣ್ಣೆ ಸುಟ್ಟೆ, ಕಾಯಿ ಒಡೆಯಿಸಿದೆ; ಉಣಿಸಿದೆ.....' ಎಂದರೆ ಆಗದು. ನಮ್ಮ ಈ ಇಂತಹ ಭಕ್ತಿಗೆ ಶ್ರೀ ರುದ್ರ ಮೆಚ್ಚನು; ಶರಣರ ಕ್ಷೇತ್ರದಲ್ಲಿನ ನಮ್ಮದು ವಿಚಾರಣೆಯಾಗಿಯೂ ತೋರದು. ಆದ್ದರಿಂದ ದಯಮಾಡಿ ಸೇವಾಸಂಘವೊಂದನ್ನು ಕಟ್ಟುವಾ"[೧೮] ಎನ್ನುತ್ತ ಯಾತ್ರಿಕರಿಗೆ ಕೈಮುಗಿದು ಕುಳಿತರು.

ನಾಟಕ ಮುಗಿಯಿತು; ಅದೇ ರಂಗಭೂಮಿಯಲ್ಲಿ ಆಸ್ತಿಕರು ಕೂಡಿದರು; ಒಪ್ಪಿ ಗೊಡಚಿ ವೀರಭದ್ರೇಶ್ವರ ಕ್ಷೇತ್ರ ಸೇವಾಸಂಘ, ಎಂಬುದನ್ನು ಕಟ್ಟಿದರು. ತನು-ಮನ-ಧನಗಳ ಸೇವೆಯನ್ನು ಸಲ್ಲಿಸಲು ಪ್ರತಿಜ್ಞೆ ಮಾಡಿದರು. ಸಂಘವು ಸ್ಥಾಪನೆಯಾಯಿತು ೧೯೩೩ರಲ್ಲಿ. ಕಾರ್ಯನಿರ್ವಾಹಕ ಸಂಘಕ್ಕೆ ಗದುಗು ಕೇಂದ್ರವಾಯಿತು, ಮುದ್ದೂರು(ಆಲೂರ) ವೀರಪ್ಪ ಖಜಾಂಚಿ; ಅಲ್ಲದೆ ಸರ್ವಶ್ರೀ ವಸ್ತ್ರದ ವೀರಬಸಯ್ಯ ಉಪ್ಪಿನ ವೀರಪ್ಪ ಬೆಳಗಾವಿ, ಬಟಕುರಕಿ

ಶೇಖರಪ್ಪ, ಮಾಳವಾಡ ಸಂಗಪ್ಪ, ಹೊಸಕೇರಿ ರಾಜಶೇಖರಪ್ಪ ಇತ್ಯಾದಿ. ಇವರಲ್ಲದೆ ಗದಗ, ನರಗುಂದ, ಗೋಕಾಕ, ಆಲೂರ, ರಾಮದುರ್ಗ, ಗುಳೇದಗುಡ್ಡ, ಬಾಗಿಲುಕೋಟೆ ಈ ಊರಿನ ಭಕ್ತಾದಿಗಳೆಲ್ಲರು ಸದಸ್ಯರಾಗಿ ನಿಸ್ಸೀಮ ಸೇವೆಗೈಯ ಹತ್ತಿದರು.

"ಪ್ರತಿ ವರುಷ ಜಾತ್ರೆಯಲ್ಲಿ ಹಗಲಿರುಳೆನ್ನದೆ ಸಂಘದವರ ದುಡಿತದ ಫಲವಾಗಿ ೨-೩ ವರುಷಗಳಲ್ಲಿ ನೀರೂ ನೆಲವೂ ಸ್ವಚ್ಛವಾಗಲು ಯಾತ್ರಿಕರ ಸಂತೋಷವು ಹೆಚ್ಚಿತು; ಸಂಘದವರು ಏರ್ಪಡಿಸಿದ ಧಾರ್ಮಿಕ ಸಾಮಾಜಿಕ ನೈತಿಕ-ಸೈಕ್ಷಣಿಕ ವ್ಯಾಖ್ಯಾನಕಾರರ ಬೋಧೆಯಿಂದ, ಅನುಭಾವಿಗಳ, ಪೌರಾಣಿಕರ, ಕೀರ್ತನಕಾರರ ಹಿತನುಡಿಗಳ ಪರಿಣಾಮದಿಂದ ಶ್ರೀ ಕ್ಷೇತ್ರ ಯಾತ್ರಿಕರ ಮನವೇ ಪರಿಶುದ್ಧಗೊಳ್ಳ ಹತ್ತಿತು. ಇದರಿಂದ ಸಂಘದವರಲ್ಲಿ ನವಚೇತನವು ಮೂಡಿ ಕ್ಷೇತ್ರದ ಸ್ಥಿತಿಯೇ ಶಿವಮಯವಾಗಿ ತೋರಹತ್ತಿತು ! ಶರಣ ಅಂಗಡಿ ಹಾಗೂ ಹುರಕಡಲಿ ಚೆನ್ನಪ್ಪ ಇವರ ಭಕ್ತಿ ವಿಶೇಷದಿಂದ ಶತಾಯುಷಿ ಮುರಗೋಡ ಮಹಾಂತ ಶಿವಯೋಗಿಗಳು ಪ್ರತಿ ವರುಷ ಶ್ರೀ ಕ್ಷೇತ್ರಕ್ಕೆ ಬರಹತ್ತಿದರು. ಅವರ ಕೃಪಾವರಣದಲ್ಲಿ ಸಂಘದ ಕಾರ್ಯ ಕಲಾಪಗಳು ನಡೆಯಹತ್ತಿದವು. ಶರಣ ಕರವೀರಪ್ಪನವರ ಅನುಭವದಿಂದ ಸಂಘದ ಕಾರ್ಯ ನಿರ್ವಾಹಕ ಶಕ್ತಿ ಹೆಚ್ಚಿತು. ತನ್ಮೂಲಕ ಬಸವ ಶಿವಾನುಭವ ಮಂಟಪವು ಯಾವುದಾದರೊಂದು ಸಾಂಸ್ಕೃತಿಕ ವಿದ್ಯಾಲಯಕ್ಕೆ ಪಾತ್ರವಾಗುವ ಸ್ಥಿತಿಯಲ್ಲಿ ಎದ್ದು ನಿಂತಿತು. ಈ ಎಲ್ಲ ಕಾರ್ಯಕ್ರಮಗಳಿಗೂ ಚೇತಕರಾಗಿ ಅಂಗಡಿಯವರಿದ್ದುದೂ ಮುಖ್ಯ ! ಈ ಬಗೆಯಾಗಿದ್ದ ಸಂಘದ ಸಂಸ್ಥಾಪಕರಾದ ಅಂಗಡಿಯವರ ಸೇವೆಯು ಮೌನಮಲ್ಲಿಗೆಯಂತೆ ನಿರಂತರವಾಗಿ ಸಾಗಿತು."[೯೯]

ಈ ಎಲ್ಲ ಮುಖ್ಯ ಅಂಶಗಳು ಇವರ ವೀರಶೈವ ತತ್ವಗಳ ಚಿಂತನ-ಮಂಥನ ಮತ್ತು ಪ್ರಸಾರದಲ್ಲಿ ತೊಡಗಿಕೊಂಡದುದನ್ನು, ಫಲವಾಗಿ ಅವರ ಕೃತಿಗಳೂ ಈ ತತ್ವ ವಿವೇಚನೆಯಲ್ಲಿ ಮತ್ತು ಪ್ರಸಾರ ಕ್ರಿಯೆಯಲ್ಲಿ ಉತ್ಕೃಷ್ಟವಾಗಿ ಮೂಡಲು ಸಾಧ್ಯವಾದದ್ದನ್ನು ವಿಶದಪಡಿಸುತ್ತವೆ. ಈ ಅಂಶಗಳು ಕವಿ ಹೃದಯದ ಅವರನ್ನು ಶರಣಕವಿಯನ್ನಾಗಿಸಿದವು. ಲೌಕಿಕ-ಪಾರಮಾರ್ಥಿಕದ ಸವಿಗಳೆರಡನ್ನೂ ಸವಿದರು.

*****

## ಅಡಿಟಿಪ್ಪಣಿ:

೧. "ಅಂತರಂಗದ ರತ್ನ", ಕನ್ನಡ ಕೈವಲ್ಯ ಸಾಹಿತ್ಯದಲ್ಲಿ 'ಕಾಣ್ಕೆ', ಚಂದ್ರಶೇಖರ ವಸ್ತ್ರದ, ಪುಟ ೨೮೪]

೨. "ಅನುಭಾವ", ಪ್ರೊ. ಸಿ.ಕೆ.ನಾವಲಗಿ, ಬಸವಪಥ ಸಂಚಿಕೆ.

೩. ಅಣ್ಣಿಗೇರಿ ಗುರುಗಳ ಸಂದರ್ಶನದಿಂದ

೪. "ಶರಣ ಪ್ರಜ್ಞೆ", ಡಾ. ಬಿ.ಎಸ್.ಗೊರವರ

೫. "ಅರಿವು-ಆಚಾರ-ಅನುಭಾವ ಬಸವಣ್ಣನವರಲ್ಲಿ" ಬಿ. ಮಹದೇವಪ್ಪ

೬. "ಶ್ರೀ ಶಿವಾನುಭವವೂ ಅಂಗಡಿ ಮಾಸ್ತರರೂ", ಬಸವೇಶ್ವರ ತುಪ್ಪದ, 'ಶರಣ' ಸಂಚಿಕೆ ಪುಟ ೩೯, ಪ್ರ-೧೯೭೬.

೭. ಅದೇ ಪುಟ ೪೦

೮. 'ಹಠಯೋಗಿ ವೀರಪ್ಪಜ್ಜನವರ ಪುರಾಣ', ಶ್ರೀ ಹಠಯೋಗಿ ಸಾಹಿತ್ಯ ಪ್ರಕಾಶನ, ನರೇಗಲ್ಲ

೯. 'ಶ್ರೀ ಮುರಗೋಡ 'ಮಹಾಂತಜ್ಜ' ಅವರೂ ಅಂಗಡಿ ಸಾಹೇಬರೂ', ವಿ.ಚೆ.ಕುಬಸದ, 'ಶರಣ' ಸಂಚಿಕೆ, ಪುಟ ೮೪, ಸಂ-ವಿ.ವಿ.ಗಡಾದ, ಪ್ರ-೧೯೭೬)

೧೦. 'ಮೃಡಗಿರಿ ಶ್ರೀ ಜಗದ್ಗುರು ಅನ್ನದಾನೀಶ್ವರ ಲೀಲಾಮೃತ', ಕ.ಬ.ಅಂಗಡಿ, ಹೃದ್ಗತದಿಂದ.

೧೧. ಮುಂಡರಗಿಯ ೧೦ನೆಯ ಪೀಠಾಧೀಪತಿಗಳಾದ ಅನ್ನದಾನೀಶ್ವರ ಮಹಾಸ್ವಾಮಿಗಳ ಸಂದರ್ಶನದಿಂದ.

೧೨. ಮುಂಡರಗಿಯ ಅನ್ನದಾನೀಶ್ವರ ಮಹಾಸ್ವಾಮಿಗಳ ಸಂದರ್ಶನದಿಂದ.

೧೩. 'ಶರಣ' ಸಂಚಿಕೆ, ಪಂ. ಪುಟ್ಟರಾಜ ಕವಿ ಗವಾಯಿಗಳ ಆಶೀರ್ವಚನ. ಪುಟ ೧೧.

೧೪. 'ಶ್ರೀ ಶಿವಾನುಭವವೂ ಅಂಗಡಿ ಮಾಸ್ತರರೂ', ಬವೇಶ್ವರ ತುಪ್ಪದ, 'ಶರಣ' ಸಂಚಿಕೆ, ಪುಟ ೩೯, ಪ್ರ-೧೯೭೬)

೧೫. 'ಸ್ವ-ಗ್ರಾಮದ ಆತ್ಮೀಯ ಬಂಧು ಶ್ರೀ ಕ.ಬ.ಅಂಗಡಿಯವರು', ಪಾಂಡುರಂಗ ತಮ್ಮಾಜಿ ಕುಲಕರ್ಣಿ, 'ಶರಣ' ಸಂಚಿಕೆ, ಪುಟ ೯೬, ಪ್ರ-೧೯೭೬)

೧೬. 'ಶ್ರೀ ಅಂಗಡಿಯವರು ನಾನು ಕಂಡಂತೆ', ಡಾ. ಮಲ್ಲಿಕಾರ್ಜುನ ಲಠ್ಠೆ, 'ಶರಣ' ಸಂಚಿಕೆ, ಪುಟ ೪೭, ಪ್ರ-೧೯೭೬)

೧೭. ಲಿಂ. ಶಾಂತಕ್ಕ ಕಲ್ಯಾಣಿ ಅವರ ಮೌಖಿಕ ಸಂದರ್ಶನದಿಂದ.

೧೮. 'ಶ್ರೀ ಗೊಡಚಿ ಕ್ಷೇತ್ರವೂ ಕರವೀರಪ್ಪನವರು', ಆರ್.ಜಿ.ಹೊಸಕೇರಿ, 'ಶರಣ' ಸಂಚಿಕೆ, ಪುಟ ೯೭.

೧೯. ಅದೇ, ಪುಟ ೯೮.

೨೦. ಅದೇ, ಪುಟ ೯೮.

*****

ಅಧ್ಯಾಯ : ನಾಲ್ಕು

# ಸಾಹಿತ್ಯ ಸಮೀಕ್ಷೆ

- ಲಾವಣಿ-ದೊಡ್ಡಾಟಗಳು-ಬೈಲಾಟಗಳು
- ನಾಟಕಗಳು
- ಸಂಖ್ಯಾವಾಚಕ ಸ್ತೋತ್ರ ಸಾಹಿತ್ಯ ಪ್ರಕಾರಗಳು
- ಕಿರುಗ್ರಂಥಗಳು
- ಪಠ್ಯಪುಸ್ತಕಗಳು
- ಪುರಾಣಗಳು
- ಬಿಡಿ ಲೇಖನಗಳು

ಅಧ್ಯಾಯ : ನಾಲ್ಕು

# ಸಾಹಿತ್ಯ ಸಮೀಕ್ಷೆ

ಕ.ಬ.ಅಂಗಡಿಯವರ ಸಾಹಿತ್ಯವನ್ನು ಅದರ ಸಮೀಕ್ಷೆಯನ್ನು ಈ ಅಧ್ಯಾಯದಲ್ಲಿ ವಿಸ್ತೃತವಾಗಿ ವಿಶ್ಲೇಷಿಸುವ ಪ್ರಯತ್ನ ಮಾಡಲಾಗಿದೆ. ಅವರ ಸಾಹಿತ್ಯವೆಲ್ಲವೂ ಭಕ್ತಿಯ ಪರಿಧಿಯಲ್ಲಿ ಅಭಿವ್ಯಕ್ತಗೊಂಡಿದ್ದರೂ ಅವುಗಳಲ್ಲಿ ಸಾರ್ವತ್ರಿಕತೆ ಎದ್ದು ಕಾಣುತ್ತದೆ. ಸಮಕಾಲೀನ ವಸ್ತು ಸ್ಥಿತಿಗಳು ಹೆಚ್ಚು ಪ್ರಭಾವಶಾಲಿಯಾಗಿ ಮೂಡಿ ಬಂದಿವೆ. ಆದ್ದರಿಂದ ಈ ಕೃತಿಗಳೂ ಸಾರ್ವಕಾಲೀಕವಾಗಿ ಗೋಚರಿಸುತ್ತವೆ. ಇವರ ಸಾಹಿತ್ಯವನ್ನು ಸ್ಥೂಲವಾಗಿ ಹೀಗೆ ವಿಭಾಗಿಸಬಹುದು.

೧)ಲಾವಣಿ ೨)ಬೈಲಾಟಗಳು ೩)ನಾಟಕಗಳು ೪)ಅಷ್ಟಕ-ಷಟ್ಕಗಳು ೫)ಗ್ರಂಥಗಳು

೬)ಪಠ್ಯ ಮಸ್ತಕಗಳು ೭)ಪುರಾಣ ಗ್ರಂಥಗಳು ೮)ಸಂಪಾದಿತ ಕೃತಿಗಳು

೯)ಬಿಡಿ ಲೇಖನಗಳು

## ೪.೧ ಲಾವಣಿ-ಬೈಲಾಟ-ದೊಡ್ಡಾಟಗಳು :

ಕ.ಬ.ಅಂಗಡಿಯವರ ಸಾಹಿತ್ಯ ರಚನೆ ಲಾವಣಿ, ದೊಡ್ಡಾಟ, ಮಂಗಳ ಪದಗಳನ್ನು ಬರೆಯುವುದರೊಂದಿಗೆ ಪ್ರಾರಂಭವಾಗಿ ನಾಟಕ, ಅಷ್ಟಕ,-ಷಟ್ಕ, ಕಿರುಗ್ರಂಥಗಳು, ಶೈಕ್ಷಣಿಕ ಪಠ್ಯಮಸ್ತಕಗಳು, ಪುರಾಣಗಳ ರಚನೆಯವರೆಗೂ ವಿಸ್ತಾರವಾಗಿದೆ. ಲಾವಣಿ ಮತ್ತು ಬೈಲಾಟಗಳು ಅವರ ಪ್ರಾರಂಭದ ಪ್ರಯೋಗಗಳಾಗಿವೆ. "೧೯೨೦ರಲ್ಲಿ ಅವರು ಅನೇಕ ಲಾವಣಿ ಪದಗಳನ್ನು ರಚಿಸಿದರು. ಅವುಗಳಲ್ಲಿ ಗದುಗಿನ ಹತ್ತಿ ಅರಳಿ ವ್ಯಾಪಾರಸ್ಥರು ಹಾನಿ ಹೊಂದಿದ ಲಾವಣಿ ಪದ್ಯ ಅನೇಕರನ್ನು ಆಕರ್ಷಿಸಿ ಇವರಲ್ಲಿರುವ ಕವಿತ್ವ ಶಕ್ತಿಗೆ ಮಂತ್ರ ಮುಗ್ಧರಾದರು."[೧] ಇವರು ದೊಡ್ಡಾಟಗಳನ್ನೂ ಬರೆದಿದ್ದಾರೆ. "ಮಡಿ ಮೈಲಿಗೆಯಿಂದ ಬೇಸತ್ತು ಇವರು ಬರೆದ 'ಬೊಮ್ಮದ ಬಡಬಡಿಕೆ', 'ಹನುಮಂತನಿಗೆ ಲಿಂಗಧಾರಣ' ಎಂಬ ದೊಡ್ಡಾಟಗಳು ಬಹಳ ಪ್ರಚಾರ ಮಾಡಿದವು."[೨] ಈ ಲಾವಣಿ, ದೊಡ್ಡಾಟ, ಬೈಲಾಟಗಳು ಪ್ರಕಟಗೊಂಡಿದ್ದು ಕಾಲದ ಅಂತರದಿಂದ ಅವುಗಳು ಉಪಲಬ್ಧವಾಗುವುದು ಕಷ್ಟಸಾಧ್ಯ.

ಕೈಬರಹದಲ್ಲಿ ಪಟ್ಟಿ ಮಾಡಿರುವ ಕೃತಿಗಳ ಸಾಲಿನಲ್ಲಿ ಅವರ ಲಾವಣಿ ಮತ್ತು ದೊಡ್ಡಾಟಗಳ ಉಲ್ಲೇಖವಿದೆ. 'ಶರಣ' ಸಂಚಿಕೆಯಲ್ಲೂ ಈ ಕುರಿತು ಉಲ್ಲೇಖಗಳಿವೆ.

೧) ಹನುಮಂತನಿಗೆ ಲಿಂಗಧಾರಣ  ೨) ಬೊಮ್ಮದ ಬಡಬಡಿಕೆ

**೪.೧.೧. ಹನುಮಂತನಿಗೆ ಲಿಂಗಧಾರಣ :**

ತಮ್ಮ ಹುಟ್ಟೂರಿನ ಪರಿಸರದಲ್ಲಿ ತಾವು ಕಂಡ ಮಡಿ ಮೈಲಿಗೆಯ ಕೆಲವು ಸಂಗತಿಗಳು ಸಮಾಜಕ್ಕೆ ಮಾರಕವೆಂದು ಆಲೋಚಿಸುವ ಪ್ರಬುದ್ಧತೆ ಅವರಲ್ಲಿ ಕಾಣುತ್ತೇವೆ. ಮೆಣಸಗಿಯನ್ನು ಬಿಟ್ಟು ಬರಲು ಇದೂ ಒಂದು ಕಾರಣವೆಂದು ಅವರು ಹೇಳುತ್ತಾರೆ. ಮೆಣಸಗಿಯನ್ನು ಬಿಟ್ಟು ಬಂದಾಗ ಆ ಕಂದಾಚಾರಗಳು ಸುಮ್ಮನೆ ಕೂರಲು ಬಿಡಲಿಲ್ಲ. ತನ್ನಂತೆ ಪರರೂ ಆಲೋಚಿಸಬೇಕೆಂದು ನಿರ್ಧರಿಸಿ, ಆ ಕುರಿತು ಜಾಗ್ರತೆಯನ್ನು ಮೂಡಿಸುವ ಪ್ರಯತ್ನದಲ್ಲಿ ತಮ್ಮನ್ನು ತೊಡಗಿಸಿಕೊಂಡರು. ಇದರ ಫಲವಾಗಿಯೇ "ಅವರಿಂದ 'ಬೊಮ್ಮದ ಬಡಬಡಿಕೆ' ಮತ್ತು 'ಹನುಮಂತನಿಗೆ ಲಿಂಗಧಾರಣ' ಎಂಬ ಬೈಲಾಟ ಕೃತಿಗಳ ರಚನೆಯಾದುದು. ಆ ದಿನಗಳಲ್ಲಿ ಈ ಕೃತಿಗಳು ಹೆಚ್ಚು ಪ್ರಚಾರ ಮಾಡಿದವು."[೫]

'ಹನುಮಂತನಿಗೆ ಲಿಂಗಧಾರಣ' ಪ್ರಕಟಿತ ಕೃತಿ. ಇಂದು ಉಪಲಬ್ಧವಿಲ್ಲ. ಆದರೆ ಅತ್ಯಲ್ಪ ಮಾಹಿತಿಗಳಿಂದ ಈ ನಾಟಕದ ಆಶಯಗಳನ್ನು ಗುರುತಿಸಬಹುದು. ರಾಮ ಭಕ್ತ ಹನುಮಂತನಿಗೆ ಶಿವ ತತ್ತ್ವವನ್ನು ಬೋಧಿಸಿದ ವೀರಭದ್ರನ ಕಥೆಗಳನ್ನು ಪುರಾಣಾದಿ ಸಾಹಿತ್ಯಗಳಲ್ಲಿ ಕಾಣುತ್ತೇವೆ. ಇದೇ ರೀತಿಯ ವಿಷಯ 'ಹನುಮಂತನಿಗೆ ಲಿಂಗಧಾರಣ' ಕೃತಿ. ಇದು ಜನರು ತಮ್ಮ ತಮ್ಮ ಧರ್ಮದ ಮಹಿಮೆಯನ್ನೂ, ಪಾರಮ್ಯವನ್ನೂ ಸಾರುವ ವಿಷಯವಾಗಿ ಕಂಡು ಬರುತ್ತದೆ. ಇನ್ನೂ ಆಳವಾಗಿ ಅಧ್ಯಯನಕ್ಕೊಳಪಟ್ಟರೆ ಆರ್ಯ-ದ್ರಾವಿಡರ, ಶೈವ-ವೈಷ್ಣವ ಸಂಘರ್ಷ-ಸಾಮರಸ್ಯಗಳಾಗಿಯೂ ಈ ವಿಷಯಗಳನ್ನು ವಿವೇಚಿಸಬಹುದು. ಆದರೆ ಇಲ್ಲಿ ಕ.ಬ.ಅಂಗಡಿಯವರ ಆಶಯಗಳೇ ವಿಭಿನ್ನವೆಂದು ಗುರುತಿಸಬಹುದು. ಇಲ್ಲಿ ಶೈವ-ವೈಷ್ಣವ ಧರ್ಮ ಸಂಘರ್ಷಕ್ಕಿಂತ ಅವುಗಳ ನಡುವೆ ಇರಬೇಕಾದ ಪರಧರ್ಮ ಸಹಿಷ್ಣುವತೆಯನ್ನು ಈ ನಾಟಕಗಳ ಮೂಲಕ ಅಭಿವ್ಯಕ್ತಿಸುತ್ತಾರೆ. ವೀರಶೈವ ಧರ್ಮದ ಮೂಲ ಆಶಯಗಳಲ್ಲಿ ಒಂದಾದ ಧರ್ಮ ಸಹಿಷ್ಣುವತೆಯನ್ನು ಸಾರುವುದೇ ಇಲ್ಲಿಯ ಉದ್ದೇಶ. ಈ ಉದ್ದೇಶಗಳು ಧಾರ್ಮಿಕ ತಳಹದಿಯಲ್ಲಿ ಕಂಡು ಬರುವಂತಿದ್ದರೂ ಅವುಗಳನ್ನು ವಿಶಾಲ ದೃಷ್ಟಿಕೋನದಿಂದ ಅಳೆದಾಗ ಅಲ್ಲಿಯ ಸ್ಪಷ್ಟತೆ

ಅರ್ಥವಾಗುತ್ತದೆ. ಈ ಉದ್ದೇಶಗಳು ಇಂದಿಗೂ ಎಂದೆಂದಿಗೂ ಪ್ರಸ್ತುತವಾದ ವಿಷಯಗಳೆಂಬುದನ್ನು ಗಮನಿಸಬೇಕು. ಸಾಮಾಜಿಕ ಸ್ವಾಸ್ಥ್ಯತೆ ಸಮಾಜದಲ್ಲಿ, ಜನಜೀವನದಲ್ಲಿ ಒಡಮೂಡಬೇಕಾದರೆ ಅನ್ಯ ಧರ್ಮಗಳನ್ನು, ಅನ್ಯ ಮನಸುಗಳನ್ನು ಗೌರವಿಸುವ ವಿಶಾಲ ಮನೋಭಾವ ಬೇಕು. ಅದು ಸಶಕ್ತ ವ್ಯಕ್ತಿತ್ವಗಳನ್ನು ಮತ್ತು ಸಶಕ್ತ ದೇಶವನ್ನೂ ಕಟ್ಟುವಲ್ಲಿ ಪ್ರಮುಖ ಸಾಧನವಾಗುತ್ತದೆ. ಧಾರ್ಮಿಕ ಹಿನ್ನೆಲೆಯ ಶಿಕ್ಷಣವೆಂದಾಗ ಅದರ ಅಪಾರ್ಥಗಳನ್ನು ಹುಟ್ಟು-ಹಾಕುವ ಅವಶ್ಯಕತೆಯಿಲ್ಲ. ಧರ್ಮ ಯಾವುದಾದರೂ ಅದರ ಅಂತರಂಗ ಒಂದೇ ಎಂಬುದು ಈ ನಾಟಕದಿಂದ ವಿಧಿತವಾಗುವ ವಿಷಯ. ಈ ಕೃತಿಯು ಉಪಲಬ್ಧವಾದರೆ ಇನ್ನೂ ಹೆಚ್ಚಿನ ಅಂಶಗಳು ಬೆಳಕಿಗೆ ಬರಬಹುದು.

## ೪.೩ ನಾಟಕಗಳು :

ನಾಟಕ ಪ್ರಕಾರವನ್ನು ಮೂಲವಾಗಿಟ್ಟುಕೊಂಡು ನೋಡುವುದಾದರೆ ಇವರ ನಾಟಕಗಳನ್ನು ಅಧ್ಯಯನ ಮಾಡುವ ಮೊದಲು ಸಂಕ್ಷಿಪ್ತವಾಗಿ ನಾಟಕಗಳ ಬಗೆಗೆ ತಿಳಿದುಕೊಳ್ಳಬೇಕಾಗುತ್ತದೆ.

ಕನ್ನಡ ಸಾಹಿತ್ಯ ಪ್ರಪಂಚದಲ್ಲಿ ನಾಟಕ ಸಾಹಿತ್ಯಕ್ಕೊಂದು ಪ್ರತ್ಯೇಕ ನೆಲೆ ಸಿಕ್ಕಿರುವುದು ಇಂದಿನ ದಿನಗಳಲ್ಲಿ. ಕನ್ನಡದ ನಾಟಕ ಸಾಹಿತ್ಯದ ಪ್ರಾರಂಭವನ್ನು ೧೬೮೦ರಲ್ಲಿ ರಚಿತವಾದ ಸಿಂಗರಾರ್ಯನ 'ಮಿತ್ರವಿಂದಾಗೋವಿಂದ'ದಿಂದ ಗುರುತಿಸಲಾಗಿದೆ. ಇದು ಹರ್ಷನ ಸಂಸ್ಕೃತದ 'ರತ್ನಾವಳಿ'ಯ ಕನ್ನಡ ರೂಪ. ಗೋವಿಂದ ಪೈಯವರು ೯-೧೦ನೆಯ ಶತಮಾನದಿಂದ ಕುಮಾರವ್ಯಾಸನ ಕಾಲದವರೆಗೆ ಕೆಲವಾದರೂ ಸಾಹಿತ್ಯೋಚಿತ ನಾಟಕಗಳು ಇದ್ದಿರಬೇಕೆಂದು ಅಭಿಮತ ಪಡುತ್ತಾರೆ. ಮತ್ತು ಗ್ರೀಕ್ ಭಾಷೆಯ ಆಧಾರದಿಂದ ಕನ್ನಡ ನಾಟಕಗಳ ಅಸ್ತಿತ್ವ ಕ್ರಿ.ಶ. ಪೂರ್ವವನ್ನು ಮುಟ್ಟುತ್ತದೆ. "ಅಂದರೆ ಹಿಂದೆ ಬಹಳ ಹಿಂದೆ ನಾಟಕ ಇತ್ತು, ರಂಗಭೂಮಿ ಇತ್ತು; ಅದು ಜನಸಾಮಾನ್ಯರ ಆಸ್ತಿಯಾಗಿತ್ತು. ಬಾಯಿಂದ ಬಾಯಿಗೆ ಪಾಠವಾಗಿ ಅಭಿನಯಿಸಲ್ಪಡುತ್ತಿದ್ದು, ಜನಪ್ರಿಯತೆಯನ್ನು ಗಳಿಸಿತ್ತು".[೩] "ನಮ್ಮಲ್ಲಿ ಹಿಂದೆ ನಾಟಕ ಎನ್ನುವ ಪ್ರಕಾರದ ಸಾಹಿತ್ಯ ಕೃತಿಗಳೇ ಇರಲಿಲ್ಲ. ಆದರೆ, ನಾಟಕ ಪ್ರಯೋಗ ಮಾತ್ರ ಇತ್ತು."[೪] ಕನ್ನಡದಲ್ಲಿ ನಾಟಕವೆಂಬ ಸಾಹಿತ್ಯ ಪ್ರಕಾರ ನಿರ್ಮಾಣಕ್ಕೆ ಸಂಸ್ಕೃತದ ಪ್ರಭಾವವೇ ಕಾರಣ. ಸಂಸ್ಕೃತದಿಂದ ಬಹುತೇಕ ಭಾಷೆಗಳು ಪ್ರಭಾವಕ್ಕೆ ಒಳಗಾಗಿರುವುದು ತಿಳಿದ ಸತ್ಯ. ಕನ್ನಡಾದಿಯಾಗಿ ಅನೇಕ ಭಾಷೆಗಳಲ್ಲಿ ಪೌರಾಣಿಕ ಸಾಮಗ್ರಿಗಳನ್ನು ಬಳಸಿಕೊಂಡು ಮೊದಮೊದಲು ನಾಟಕಗಳ ರಚನೆ ಪ್ರಾರಂಭಗೊಂಡಿತು. ತದ ನಂತರ

ಸಾಮಾಜಿಕ, ಐತಿಹಾಸಿಕ ವಿಷಯಗಳು, ಸಮಸ್ಯೆಗಳು ನಾಟಕದ ವಸ್ತುಗಳಾದವು. ಶಿಷ್ಟ ರಕ್ಷಣೆ, ದುಷ್ಟ ಮರ್ಧನವೇ ಪೌರಾಣಿಕ ನಾಟಕಗಳಲ್ಲಿ ಕಂಡು ಬರುವ ಭಾವ ಸಂವೇದನೆಯಾದರೆ, ಸಾಮಾಜಿಕ ನಾಟಕಗಳ ರಚನೆಯಲ್ಲಿ ಸಾಮಾಜಿಕ ಪಿಡುಗುಗಳು, ಸಾಮಾಜಿಕ ದೌರ್ಭಲ್ಯಗಳ ವಿರುದ್ಧ ಜನರಲ್ಲಿ ಜಾಗೃತಿ ಮೂಡಿಸುವ ಮುಖ್ಯ ಉದ್ದೇಶವಾಗಿದ್ದವು. ಅದರಂತೆ ಐತಿಹಾಸಿಕ ವಸ್ತು ಸ್ಥಿತಿಗಳನ್ನು ಜೀವಂತವಾಗಿ ಇಡುವ ಕಾರ್ಯ ಐತಿಹಾಸಿಕ ನಾಟಕಗಳ ರಚನೆಯ ಮುಖ್ಯ ಉದ್ದೇಶವಾಯಿತು. ಇವರ ನಾಟಕಗಳು-ಬೈಲಾಟಗಳ ಕೃಷಿ ಈ ರೀತಿಯಾಗಿ ಕಂಡು ಬರುತ್ತದೆ.

### ೪.೩.೧ ಕ.ಬ.ಅಂಗಡಿಯವರ ನಾಟಕಗಳು :

೧) ಕೆಳದಿಯ ಚೆನ್ನಮ್ಮಾಜಿ ೨) ಕಿತ್ತೂರ ಕೇಸರಿ ೩)ಬೆಳವಡಿ ಮಲ್ಲಮ್ಮ

೪) ಶಿವಪಾರಮ್ಯ ಅರ್ಥಾತ್ ಗುಗ್ಗುಳ ೫) ಜಕ್ಕಲಿಯ ಶರಣರ ನಾಟಕ

೬) ಘನಮಹಿಮರು ೭) ಬಿಲ್ಲೀ ಕಾಗದ ೮) ಚೆನ್ನಮ್ಮನ ದಂಡಿ

ತಮ್ಮ ವೃತ್ತಿಯಾದ ಶಿಕ್ಷಣ ಕ್ಷೇತ್ರದಲ್ಲಿ ಸಿಗುವ ಬಿಡುವಿನ ವೇಳೆಯನ್ನು ತಮ್ಮ ಹುಟ್ಟೂರಾದ ಮೆಣಸಗಿಯಲ್ಲಿ ಕಳೆಯುತ್ತ ಅಲ್ಲಿ ತಾವು ರಚಿಸಿದ ಬೈಲಾಟಗಳನ್ನು, ನಾಟಕಗಳನ್ನೂ ರಂಗಭೂಮಿಯ ಮೂಲಕ ಪ್ರಯೋಗಕ್ಕೆ ಒಳಪಡಿಸುತ್ತಿದ್ದರು. ನಾಟಕಪ್ರಿಯರಾದ ಇವರು "ವೀರಶೈವ ಮಹಿಳಾಮಣಿಗಳಾದ ಕೆಳದಿ ಚೆನ್ನಮ್ಮಾಜಿ, ಕಿತ್ತೂರ ಚೆನ್ನಮ್ಮ, ಬೆಳವಡಿ ಮಲ್ಲಮ್ಮ ನಾಟಕಗಳನ್ನು ಬರೆದು ಮಹಿಳೆಯರಲ್ಲಿ ಜಾಗ್ರತಿಯನ್ನುಂಟು ಮಾಡಿದರಲ್ಲದೆ ವೀರಶೈವರಲ್ಲಿ ಆತ್ಮಾಭಿಮಾನವನ್ನು ಜಾಗೃತಿಯಾಗುವಂತೆ ಸಾಹಿತ್ಯ ರಚಿಸಿದರು."[೬] "ಶಿವಪಾರಮ್ಯ ಅರ್ಥಾತ್ ಗುಗ್ಗುಳ ಎಂಬ ನಾಟಕ ಬರೆದು ಶಿವ ತತ್ತ್ವದ ದರ್ಶನ ಮಾಡಿಕೊಟ್ಟರು."[೭] ಅವರ ನಾಟಕ ರಚನೆಯ ಪ್ರಕ್ರಿಯೆ ೧೯೨೯ರವರೆಗೂ ಅವ್ಯಾಹತವಾಗಿ ನಡೆದು ಬಂದಿದೆ.

ಉತ್ತರ ಕರ್ನಾಟಕದಲ್ಲಿ ಕ.ಬ.ಅಂಗಡಿಯವರು ನಾಟಕ ರಚಿಸುವ ಕಾಲದಲ್ಲಿ ಕಂಡು ಬರುವ ಪ್ರಮುಖ ನಾಟಕಕಾರರೆಂದರೆ ಶ್ರೀಕಂಠ ಶಾಸ್ತ್ರಿಗಳು ನಲವಡಿ, ಕಂದಗಲ್ಲ ಹನುಮಂತರಾಯರು, ಗರುಡ ಸದಾಶಿವರಾಯರು, ಹಿರೇಮಠ ಮಹಾಂತೇಶ ಶಾಸ್ತ್ರಿ, ಹಿರೇಮಠ ಸದಾಶಿವ ಶಾಸ್ತ್ರಿ, ಹುಯಿಲಗೋಳ ನಾರಾಯಣರಾವ್, ಭಸ್ಮೆ, ಎಚ್.ಎನ್.ಹೂಗಾರ, ಪುಟ್ಟರಾಜ ಗವಾಯಿಗಳು ಮುಂತಾದವರು. ಗರುಡ

ಸದಾಶಿವರಾಯರ ಜೊತೆಗೆ ಅನ್ಯೋನ್ಯ ಸಂಬಂಧ ಸಂಪರ್ಕಗಳನ್ನು ಹೊಂದಿದ್ದ ಇವರು ಎಷ್ಟೋ ಸಲ ಹಲವಾರು ಕೃತಿಗಳಿಗೆ ಸಹಾಯವನ್ನೂ ಮಾಡಿರುತ್ತಾರೆ. ಆದರೆ ಆ ಕುರಿತು ಎಲ್ಲಿಯೂ ಉಲ್ಲೇಖಗಳು ಸಿಗುವುದಿಲ್ಲ. ಇವರ 'ಘನಮಹಿಮರು', 'ಚೆನ್ನಮ್ಮನದಂಡಿ' ನಾಟಕ ಕೃತಿಗಳು ಉಪಲಬ್ದವಾಗಿವೆ. 'ಬಿಲ್ಲೀ ಕಾಗದ' ಎನ್ನುವ ನಾಟಕದ ಕೆಲವು ಪುಟಗಳು ಲಭ್ಯವಾಗಿವೆ. ಆದರೆ ಇನ್ನುಳಿದ ಯಾವುದೇ ನಾಟಕ, ಬೈಲಾಟಗಳು ಉಪಲಬ್ದವಿರುವುದಿಲ್ಲ. ಈ ಎಲ್ಲ ಕೃತಿಗಳು ಪ್ರಕಟಿತವಾಗಿವೆ. ಅವುಗಳ ಕುರಿತು ಅಂಗಡಿಯವರು ಸ್ವತಃ ತಮ್ಮ ಕೈ ಬರಹದಲ್ಲಿ ಪಟ್ಟಿ ಮಾಡಿರುವಲ್ಲಿ ಇವುಗಳ ಬಗೆಗೆ ಉಲ್ಲೇಖವಿದೆ. ಅವರ ಸಮಕಾಲೀನರು 'ಶರಣ ಕೃತಿ'ಯಲ್ಲಿ ಈ ಬಗೆಗೆ ಅನೇಕ ಸುಳುವುಗಳನ್ನು ನೀಡುತ್ತಾರೆ. ಈ ಕೆಲವೇ ಆಧಾರಗಳನ್ನಿಟ್ಟುಕೊಂಡು ನಾವು ಅಧ್ಯಯನಕ್ಕೆ ತೊಡಗಿದಾಗ ಒಂದು ಸಮಾರೋಪಕ್ಕೆ ಬರಬಹುದು.

ಇವರ ಮೂಲ ಉದ್ದೇಶವನ್ನು ಇಲ್ಲಿ ಮರೆಯುವಂತಿಲ್ಲ. ಅವರು ನಾಟಕಕಾರರಾಗುವ ಹಂಬಲದಿಂದ ನಾಟಕಗಳನ್ನು ಬರೆದವರಲ್ಲ. ಅವರ ಮೂಲ ಉದ್ದೇಶವಿರುವುದು ಬಸವಾದಿ ಪ್ರಮಥರ ತತ್ತ್ವಾದರ್ಶಗಳನ್ನು ಜನಸಾಮಾನ್ಯರಿಗೆ ಮುಟ್ಟಿಸುವುದು ಮತ್ತು ಸಮಾಜದಲ್ಲಿ ಗಾಢವಾಗಿ ಬೇರೂರಿರುವ ಮೌಢ್ಯಗಳನ್ನು ಕಿತ್ತೊಗೆಯಬೇಕೆಂಬ ಆಶಯ. ಅದರೊಟ್ಟಿಗೆ ಸಮಾಜದ ಕಟ್ಟ ಕಡೆಯ ಪ್ರಜೆಗೂ ಶಿಕ್ಷಣ ದೊರೆಯಬೇಕೆಂಬ ಆ ಮೂಲಕ 'ಅರಿವಿ'ನ ಸಮಾಜವನ್ನು, ರಾಜ್ಯವನ್ನೂ, ದೇಶವನ್ನೂ ಕಟ್ಟುವ ಮಹದಾಸೆ. ಹೀಗಾಗಿ ಅವರ ನಾಟಕ ಕೃತಿಗಳಲ್ಲಿ ಕೆಲವು ಪೌರಾಣಿಕ ವಸ್ತುವನ್ನು ಹೊಂದಿದ್ದರೂ ಅವು ಪೌರಾಣಿಕತೆಯನ್ನು ಮೀರಿ ಸಾಮಾಜಿಕ ಸ್ಪಂದನದಲ್ಲಿಯೇ ಪರ್ಯವಸನವಾಗುತ್ತವೆ. ಅವರ ಸಾಹಿತ್ಯವನ್ನು ಒಟ್ಟಾರೆಯಾಗಿ ಅವಲೋಕಿಸಿದಾಗ ಕಾಣುವ ಹಲವಾರು ಹಂತಗಳಲ್ಲಿ ಅವರ ಪ್ರಬುದ್ಧತೆಯ ಜೊತೆಗೆ ಅವರ ಅನುಭಾವವೂ ಹಂತ ಹಂತವಾಗಿ ಸಾಹಿತ್ಯದ ಬೇರೆ ಬೇರೆ ಪ್ರಕಾರಗಳನ್ನು ಬಳಸಿಕೊಂಡು ಅವರೊಳಗಿನ ಕವಿ, ಭಕ್ತಕವಿಯಾದುದು ಮತ್ತು ಶರಣಕವಿಯಾದುದು ಗಮನಿಸಬೇಕಾದ ಅಂಶ. ಸಿನಿಮಾದಂತಹ ಪ್ರಭಾವಿ ದೃಶ್ಯ ಮಾಧ್ಯಮ ಇಂದು ಮಾಡುತ್ತಿರುವ ಪ್ರಭಾವ ಅಂದಿನ ದಿನಗಳಲ್ಲಿ ನಾಟಕಗಳು, ದೊಡ್ಡಾಟ, ಸಣ್ಣಾಟಗಳು, ಯಕ್ಷಗಾನ, ಬಯಲಾಟಗಳು ಮಾಡುತ್ತಿದ್ದವು. ಈ ಕಾರಣದಿಂದ ತಮ್ಮ ಅನುಭಾವದ ಅನುಭೂತಿಯನ್ನು ನಾಟಕಗಳ ಮೂಲಕ ಮಾಡಲು ಹವಣಿಸಿದ್ದಾರೆ.

### ೪.೨.೨ 'ಕೆಳದಿಯ ಚೆನ್ನಮ್ಮಾಜಿ', 'ಕಿತ್ತೂರ ಕೇಸರಿ', 'ಬೆಳವಡಿ ಮಲ್ಲಮ್ಮ' ನಾಟಕಗಳು

"ವೀರಶೈವ ಮಹಿಳಾ ರತ್ನಗಳಾದ 'ಕೆಳದಿ ಚೆನ್ನಮ್ಮಾಜಿ', 'ಕಿತ್ತೂರ ಕೇಸರಿ', 'ಬೆಳವಡಿ ಮಲ್ಲಮ್ಮ' ನಾಟಕಗಳನ್ನು ಬರೆದು ಮಹಿಳೆಯರಲ್ಲಿ ಜಾಗೃತಿಯನ್ನುಂಟು ಮಾಡಿದರು"[೮] ಸ್ತ್ರೀಯೋರ್ವಳು ಮನಸ್ಸು ಮಾಡಿದಲ್ಲಿ ಅಡುಗೆ ಮನೆಯ ನಾಲ್ಕು ಗೋಡೆಗಳ ಆಚೆಗೂ ಸಶಕ್ತವಾಗಿ ನಿಲ್ಲಬಲ್ಲಳು. ಕಾಲಕಾಲಕ್ಕೆ ಒದಗುವ ವೈಪರೀತ್ಯಗಳನ್ನು ಮೆಟ್ಟಿ ನಿಲ್ಲಬಲ್ಲಳು ಎಂಬುವ ಗಟ್ಟಿ ಸಂದೇಶವನ್ನು ನಮ್ಮ ಹೆಣ್ಣುಮಕ್ಕಳಲ್ಲಿ ಅಂಕುರಿಸುವ ಕಾರ್ಯ ಮಾಡಿದರು. ಇಲ್ಲಿ ಅವರ ಇನ್ನೊಂದು ಕಾರ್ಯವನ್ನೂ ನಾವು ಗುರುತಿಸಬೇಕು. ಅದೇನೆಂದರೆ ಬಸವಾದಿ ಪ್ರಮಥರ ಆಶೆಯಗಳ ನಿಲುವಿನಲ್ಲಿ ಇರುವ ಗಟ್ಟಿತನವನ್ನು ಜಗತ್ತಿಗೆ ಮತ್ತೊಮ್ಮೆ ತೋರ್ಪಡಿಸುವ ಅವರ ಸಾಹಸ. ವೀರಶೈವ ಸಮಾಜದಲ್ಲಿ ಇಂದು ಶಿಕ್ಷಣದಲ್ಲಿ ಆದ ಬದಲಾವಣೆ ಮತ್ತು ಸಮಾನತೆಯಲ್ಲಿ ಆದ ಬದಲಾವಣೆಯ ಫಲಶೃತಿಯೇ ಇಂತಹ ಮಹಿಳೆಯರ ವ್ಯಕ್ತಿತ್ವ ವಿಕಸನಕ್ಕೆ ಕಾರಣ. ಸ್ತ್ರೀ ಸಮಾಜವನ್ನು ಎರಡನೆಯ ದರ್ಜೆಯಲ್ಲಿ ನಡೆಸಿಕೊಳ್ಳುತ್ತಿದ್ದ ಸಮಯದಲ್ಲಿ ಅದನ್ನು ಬಹಿರಂಗವಾಗಿ ಖಂಡಿಸಿದ ೧೨ನೆಯ ಶತಮಾನದ ಕ್ರಾಂತಿ, ಪರಿಪೂರ್ಣವಲ್ಲದಿದ್ದರೂ ಹೆಚ್ಚಿನ ಪ್ರತಿಶತದಲ್ಲಿ ಈ ಆಶೋತ್ತರಗಳನ್ನು ಸಾಧಿಸಲು ಅನುಕೂಲವಾದುದುದನ್ನು ತಿಳಿಸುತ್ತಾರೆ. ವೀರಶೈವರಲ್ಲಿ ಈ ಬಗೆಯ ಇನ್ನೂ ಹೆಚ್ಚಿನ ಆತ್ಮವಿಶ್ವಾಸವನ್ನು ತುಂಬುವಲ್ಲಿ ತಮ್ಮ ಕಾರ್ಯವನ್ನು ಮನ್ನಡೆಸುತ್ತಾರೆ. ಈ ನಾಟಕ ಕೃತಿಗಳು ಇಂದು ಅನುಪಲಬ್ಧವಾಗಿದ್ದರೂ ಅವರ ಕೆಲವು ಕೃತಿಗಳಲ್ಲಿ ಈ ಆಶಯಗಳು ಅಭಿವ್ಯಕ್ತಗೊಂಡದ್ದನ್ನು ಗುರುತಿಸಬಹುದು. ತಾವು ಪಠ್ಯ ಪುಸ್ತಕ ಸಮಿತಿಯನ್ನು ರಚಿಸಿಕೊಂಡು ಮಾಡಿದ ಶೈಕ್ಷಣಿಕ ಕಾರ್ಯಗಳಲ್ಲಿ ತಮ್ಮ ನಾಟಕದ ವ್ಯಕ್ತಿತ್ವಗಳನ್ನೂ ಮತ್ತು ತಮ್ಮ ಮೂಲ ಆಶಯಗಳನ್ನು 'ಕಿತ್ತೂರ ಚೆನ್ನಮ್ಮ', 'ಬೆಳವಡಿ ಮಲ್ಲಮ್ಮ', 'ಕೆಳದಿ ಚೆನ್ನಮ್ಮ' ಚಿತ್ರಣಗಳಲ್ಲಿ ಅನಾವರಣಗೊಳಿಸಿದ್ದಾರೆ.

### ೪.೨.೩ ಶಿವಪಾರಮ್ಯ ಅರ್ಥಾತ್ ಗುಗ್ಗುಳ ನಾಟಕ :

'ಶಿವ ಪಾರಮ್ಯ ಅರ್ಥಾತ್ ಗುಗ್ಗುಳ' ಎಂಬ ನಾಟಕ ವಿಭಿನ್ನ ವಸ್ತುವನ್ನು ಹೊಂದಿದ್ದು, ಈ ನಾಟಕ ಅನುಪಲಬ್ಧವಾಗಿರುವ ಕಾರಣದಿಂದ ಇದರ ರಚನಾ ವಿನ್ಯಾಸ ಮತ್ತು ಅದರ ಅಂತರಾಳವನ್ನು ವಿಮರ್ಶಿಸಲು ಸಾಧ್ಯವಿಲ್ಲ. ಆದರೆ ಈ ನಾಟಕದ ಆಶಯವನ್ನು ಮಾತ್ರ ಅಧ್ಯಯನದಿಂದ ಸಂಕ್ಷಿಪ್ತವಾಗಿ ಅರ್ಥೈಸಿಕೊಳ್ಳಬಹುದು. ಇಲ್ಲಿ

'ಗುಗ್ಗುಳ' ಎಂಬುವ ಪರಂಪಾರಗತ ಕಲೆಯೊಂದನ್ನು ಹೊಸ ದೃಷ್ಟಿಕೋನದಿಂದ ನೋಡುವುದು ಅವರ ಆಶಯವಾಗಿದೆ. ನಮಗೆ ತಿಳಿದಿರುವ ಮಟ್ಟಿಗೆ ಈ ಕಲೆಯನ್ನು ನಾವು ಇಂದಿಗೂ ಮದುವೆಗಳಲ್ಲಿ ಹೆಚ್ಚು ನೋಡಬಹುದಾಗಿದೆ. ವೀರಭದ್ರ ದೇವರು ಮನೆದೇವರಾದವರು ತಮ್ಮ ಗಂಡು ಮಕ್ಕಳ ಮದುವೆಯ ಸಂದರ್ಭದಲ್ಲಿ ಈ ಕಲೆಯನ್ನು ಆಡಿಸುವ ಪರಂಪರೆಯೊಂದು ನಮ್ಮಲ್ಲಿ ಕಂಡು ಬರುತ್ತದೆ. ಇದರ ಹಿಂದಿನ ನಿಜವಾದ ಆಶಯಗಳನ್ನು ಮರೆತು ನಾವು ಕಪೋಲ ಕಲ್ಪಿತವಾದ ಮೌಢ್ಯಕ್ಕೆ ಮಾರುಹೋಗಿರುವುದನ್ನು ತಿಳಿದು, ಆ ಕುರಿತ ಜಾಗೃತೆಯನ್ನು ಮೂಡಿಸುವುದು ಈ ಕೃತಿಯ ಮೂಲ ಉದ್ದೇಶವಿದ್ದಂತಿದೆ. ಇದಕ್ಕೆ ಅವರು ಬರೆದ 'ಶ್ರೀ ಕ್ಷೇತ್ರ ಗೊಡಚಿ ವಸ್ತು ಮಡಿವಾಳ ಮಾಚಿತಂದೆ' ಕೃತಿಯ ಆಶಯಗಳು ಇಂಬಾಗಿವೆ. ಕ.ಬ.ಅಂಗಡಿಯವರ ಪ್ರಕಾರ ಇದರ ಮೂಲ ಉದ್ದೇಶ ೧೨ನೆಯ ಶತಮಾನದಲ್ಲಿ ನಡೆದ ಕ್ರಾಂತಿಯ ಕೊನೆಯ ಮಜಲುಗಳನ್ನು ನೆನಪಿಸಿಕೊಳ್ಳುವುದು. ಬಿಜ್ಜಳನ ಸೈನ್ಯ ಬಸವಾದಿ ಶರಣರ ಮೇಲೆ ಯುದ್ಧಕ್ಕೆ ಬಂದಾಗ ಶರಣರೆಲ್ಲರು ಬೇರೆ ಬೇರೆ ಜಾಗಗಳಿಗೆ ಉಪಕ್ರಮಿಸಿ ತಮ್ಮ ಆತ್ಮ ರಕ್ಷಣೆಗೆ ಮುಂದಾದ ಸಮಯದಲ್ಲಿ ಬೆಳಗಾವಿ ಜಿಲ್ಲೆಯ ಗೊಡಚಿಯಲ್ಲಿ ಮಡಿವಾಳ ಮಾಚಿದೇವರ ಸಮ್ಮುಖದಲ್ಲಿ ಒಂದು ಶರಣರ ಗುಂಪು ಘರ್ಷಣೆಗೆ ಒಳಗಾದ ಸಂದರ್ಭದಲ್ಲಿ ಮಡಿವಾಳ ಮಾಚಿ ದೇವರು ವೀರಾವೇಶದಿಂದ ಹೋರಾಡಿದ ದೃಶ್ಯಕಾವ್ಯವನ್ನು ಮತ್ತು ಶರಣರ ಅಸ್ತಿತ್ವವನ್ನು ಉಳಿಸಿಕೊಟ್ಟ ನೆನಪಿಗಾಗಿ, ಶರಣರ ಸಂಸ್ಕೃತಿಯು ಗುಪ್ತಗಾಮಿನಿಯಾಗಿ ಸಮಾಜದಲ್ಲಿ ಉಳಿದುಬಂದ ಪ್ರತೀಕವಾಗಿ ಈ ಪರಂಪರಾಗತ ಕಲೆಯನ್ನು ಇಂದಿಗೂ ಅಭಿವ್ಯಕ್ತಿಸುತ್ತಿದ್ದೇವೆ ಎನ್ನುವ ವಿಷಯವನ್ನು ಅವರು ಈ ಮೂಲಕ ಜನತೆಗೆ ಮುಟ್ಟಿಸುತ್ತಾರೆ.

### ೪.೨.೪ ಜಕ್ಕಲಿಯ ಶರಣರ ನಾಟಕ :

ಅಂಗಡಿಯವರ ತಾಯಿಯ ತವರು ಜಕ್ಕಲಿ. ಅಲ್ಲಿಯೇ ಹುಟ್ಟಿದ ಇವರನ್ನು ಜನರು ಪ್ರೀತಿಯಿಂದ 'ಜಕ್ಕಲಿ ಮಾಸ್ತರ'ರೆಂದೇ ಕರೆಯುತ್ತಿದ್ದರು. ಸಹಜವಾಗಿ ಜಕ್ಕಲಿಯಲ್ಲಿನ ಬದುಕು ಇವರ ನಾಟಕಕ್ಕೂ ವಸ್ತುವಾಗಿರಬೇಕು. ಜಕ್ಕಲಿಯಲ್ಲಿ ದೊಡ್ಡಮೇಟಿ ಅಂದಾನಪ್ಪನವರ ಜೊತೆಗೆ ಅವರು ಸ್ವಾತಂತ್ರ್ಯ ಚಳುವಳಿಯಲ್ಲಿ ಪರೋಕ್ಷವಾಗಿ ಭಾಗಿಯಾದುದು ತಿಳಿದು ಬರುತ್ತದೆ. ಜಕ್ಕಲಿ 'ಜವಹರಲಾಲ ನೆಹರು' ಅವರನ್ನು ಬರಮಾಡಿಕೊಂಡು ಈ ಭಾಗದ ಸ್ವಾತಂತ್ರ್ಯ ಚಳುವಳಿಗೆ ವಿಶೇಷ ಮೆರಗನ್ನಿತ್ತ ಭೂಮಿ. ಕ.ಬ.ಅಂಗಡಿಯವರ ಕವಿ ಹೃದಯ ಸಹಜವಾಗಿ ಈ ಎಲ್ಲ ಪ್ರಕ್ರಿಯೆಗಳಿಗೆ ಸ್ಪಂದಿಸುತ್ತ ಬಂದಿದೆ. "ಇವರು ಹೋದ ಕಡೆಗೆಲ್ಲ ತಮ್ಮ

ಸಂಶೋಧನಾ ಪ್ರವೃತ್ತಿಯಿಂದ ಆ ಊರು, ಅಲ್ಲಿಯ ಸಂಸ್ಕೃತಿ, ಅದು ಯಾರ ಪ್ರಭಾವಕ್ಕೆ ಒಳಗಾಗಿದೆ, ಅಲ್ಲಿಯ ಐತಿಹಾಸಿಕತೆಯನ್ನು ಮತ್ತು ಆ ಪರಿಸರದೊಂದಿಗೆ ೧೨ನೆಯ ಶತಮಾನದ ಬಸವಾದಿ ಶಿವಶರಣರ ಸಂಬಂಧಗಳನ್ನು ಪರಾಮರ್ಶಿಸುತ್ತಿದ್ದರು.[೫] ಆ ದೃಷ್ಟಿಯಿಂದ ಜಕ್ಕಲಿಯ ಪರಿಸರದಲ್ಲೂ ಶಿವಶರಣರ ಸಹಚಾರವು ಕಂಡು ಬಂದಿರಬೇಕು. ಈ ಕುರಿತ ನಾಟಕ ಕೃತಿಯೇ 'ಜಕ್ಕಲಿಯ ಶರಣರ ನಾಟಕ'ವೆಂಬುದು ಅಧ್ಯಯನದಿಂದ ಬರುವ ಅಭಿಮತ. ಈ ಕುರಿತು ಹೆಚ್ಚಿನ ಸಂಶೋಧನೆಗಳು ನಡೆದಲ್ಲಿ ಇವರ ವಿಚಾರಗಳಿಗೆ ಜೀವ ಸಿಗಬಹುದು. ಇದು ಇಂದು ಅನುಪಲಬ್ಧವಾಗಿರುವ ಕೃತಿ. ಈ ಕೃತಿ ಉಪಲಬ್ಧವಾದಲ್ಲಿ ಈ ನಾಟಕದ ಪರಿಪೂರ್ಣ ಆಶಯಗಳನ್ನು ತಿಳಿಯಲು ಸಾಧ್ಯವಾಗುತ್ತದೆ. ಒಟ್ಟಿನಲ್ಲಿ ಈ ಕೃತಿಯೊಂದು ವಿಶೇಷ ಕೃತಿಯಾಗುವುದಲ್ಲಿ ಮತ್ತು ವಿಭಿನ್ನ ನಾಟಕ ಕೃತಿಯಾಗುವುದಲ್ಲಿ ಸಂಶಯವಿಲ್ಲ.

### ೪.೨.೫ ಘನಮಹಿಮರು ನಾಟಕ :

'ಘನಮಹಿಮರು' ನಾಟಕ ಕೃತಿ ಉಪಲಬ್ಧವಿದೆ. ಆದರೆ ಇದರ ಕೊನೆಯ ಕೆಲವು ಪುಟಗಳು ಹರಿದುಹೋಗಿವೆ. ಹೀಗಾಗಿ ಈ ನಾಟಕದ ಪೂರ್ಣ ಆವೃತ್ತಿಯು ಸಿಗುವುದಿಲ್ಲ. ಈ ಕೃತಿಯ ೪೮ ಪುಟಗಳು ಮಾತ್ರ ಲಭ್ಯವಿರುತ್ತವೆ. 'ಘನಮಹಿಮರು' ಇದು ಶಿವಶರಣೆಯರನ್ನು ಕುರಿತು ಬರೆದ ಮಹತ್ವದ ನಾಟಕವಾಗಿದೆ. 'ಘನಮಹಿಮ'ರಲ್ಲಿ ಐದು ಶರಣೆಯರ ವ್ಯಕ್ತಿತ್ವವನ್ನು ಪರಿಚಯಿಸುವ ಕಾರ್ಯವನ್ನು ಇವರು ಮಾಡಿದ್ದಾರೆ. ಪುಷ್ಪ ೧, ೨, ೩, ೪, ೫ ಎಂದು ಪ್ರತಿಯೊಂದು ವ್ಯಕ್ತಿತ್ವ ಪರಿಚಯದ ಅಂಕಣಕ್ಕೆ ಹೆಸರನ್ನಿಡಲಾಗಿದೆ. ಪುಷ್ಪ ೧ ರಲ್ಲಿ ಆಯ್ದಕ್ಕಿ ಲಕ್ಕಮ್ಮನವರ ವ್ಯಕ್ತಿತ್ವವನ್ನು ಪರಿಚಯಿಸಿದ್ದಾರೆ.

ಪುಷ್ಪ ೧ ರಲ್ಲಿ ನಾಟಕದ ವಸ್ತು ಆಯ್ದಕ್ಕಿ ಮಾರಯ್ಯ-ಲಕ್ಕಮ್ಮನವರ ಪರಿಪೂರ್ಣ ದೃಶ್ಯ ಲಭ್ಯವಿದೆ. ಪುಷ್ಪ ೨ ರಲ್ಲಿ ಮೋಳಿಗೆಯ ಕಾಯಕದ ಮಹಾದೇವಿ – ಮಾರಯ್ಯ ಶರಣರ ವ್ಯಕ್ತಿತ್ವದ ಅನಾವರಣ ಮಾಡುತ್ತಾರೆ. ಮೋಳಿಗೆಯ ಕಾಯಕದ ಮಹಾದೇವಿ ಮತ್ತು ಮಾರಯ್ಯನವರ ಕುರಿತ ನಾಟಕ ಪೂರ್ಣ ಲಭ್ಯವಾಗಿರುವುದಿಲ್ಲ. ಮುಂದಿನ ಅಂಕಗಳಾದ ೩, ೪, ೫ ಕೂಡ ಲಭ್ಯವಿಲ್ಲದ ಕಾರಣ ಈ ಕೃತಿ ಅಪೂರ್ಣವೆನಿಸುತ್ತದೆ. ಆದರೆ ಈ ಪ್ರತಿಯೊಂದು ಅಂಕಗಳಲ್ಲಿ ಬೇರೆ ಬೇರೆ ವ್ಯಕ್ತಿತ್ವಗಳ ಅನಾವರಣವಿರುವುದರಿಂದ ಮೊದಲ ಅಂಕಕ್ಕೆ ಯಾವ ಭಾದೆಯೂ ಆಗಲಾರದು.

ಲಭ್ಯವಿದ್ದಷ್ಟು ನಾಟಕ ವಸ್ತುವನ್ನು ವಿವೇಚಿಸಿದಾಗ ಕೆಲವು ಸೂಕ್ಷ್ಮತೆಗಳು ಅರ್ಥವಾಗುತ್ತವೆ. ಈ ಕೃತಿಯನ್ನು ಓದುತ್ತಾ ಹೋದಂತೆ ಸಹೃದಯನನ್ನು ಕಟ್ಟಿ ಹಾಕುತ್ತದೆ. ಈ ಕಾಲದಲ್ಲಿ ನಾಟಕ ಪ್ರಕಾರಕ್ಕೆ ಉಪಯೋಗಿಸುವ ತಾಂತ್ರಿಕತೆಯನ್ನು ಇಲ್ಲಿ ಬಳಸಿದಂತೆ ಕಾಣುವುದಿಲ್ಲ. ಅಂದ ಮಾತ್ರಕ್ಕೆ ಇದರ ಆಶಯಕ್ಕೇನೂ ಕೊರತೆಯಾಗಿಲ್ಲ. ಪ್ರಕಟನೆಗೊಂಡ ಈ ಕೃತಿಯಲ್ಲಿಯೇ ಕ.ಬ.ಅಂಗಡಿಯವರು ತಮ್ಮ ಕೈ ಬರಹದಿಂದ ಕೆಲವು ಮಾರ್ಪಾಡುಗಳನ್ನು ಮಾಡಿದ್ದಾರೆ. ಸರಸಿ ಎಂದು ಬರುವ ಪಾತ್ರವನ್ನು ಸುಶೀಲಕ್ಕನೆಂದೂ, ವನವನ್ನು ಅಕ್ಕನ ಬಳಗವೆಂದೂ ಮಾರ್ಪಡಿಸಿದ್ದಾರೆ. ಬಹುಶಃ ಮುಂದಿನ ಪ್ರಕಟಣೆಯಲ್ಲಿ ಈ ಮಾರ್ಪಾಡುಗಳನ್ನು ಮಾಡಿಕೊಂಡಿರಬಹುದು. ಈ ಕೃತಿಯಲ್ಲಿ ಅವರು ಹೇಳಬೇಕೆಂದಿರುವ ಆಶಯಗಳು ಅಷ್ಟೊಂದು ಪರಿಣಾಮಕಾರಿಯಾಗಿ ಅಭಿವ್ಯಕ್ತಗೊಳ್ಳಲಿಲ್ಲವೆಂದೂ ಅದಕ್ಕೆ ಪ್ರತಿಯಾಗಿ ೧೯೮೫ರಲ್ಲಿ 'ಮುತ್ತೈದೆಯರೈವರು' ಎಂಬ ಕೃತಿಯನ್ನು ಮುಂದೆ ರಚಿಸಿದರೆಂದು ಅವರ ಮಗನಾದ ಉಮೇಶ ಅಂಗಡಿಯವರಿಂದ ತಿಳಿದುಬರುತ್ತದೆ.

ಸುಮಂಗಲೆ ಮತ್ತು ಸುಶೀಲಕ್ಕ ಎಂಬುವ ಎರಡು ಪಾತ್ರಗಳನ್ನು ಸೃಷ್ಟಿಸಿ ಆ ಪಾತ್ರಗಳ ಮೂಲಕ ತಮ್ಮ ಒಳಗಿರುವ ಚಿಂತನೆಯನ್ನು ಹೊರಹೊಮ್ಮಿಸುವ ಪ್ರಕ್ರಿಯೆ ಇಲ್ಲಿ ನಡೆದಿದೆ. ಸುಮಂಗಲೆ ಮತ್ತು ಸುಶೀಲಕ್ಕ ಪಾತ್ರಗಳ ಸಂಭಾಷಣೆಯ ಮೂಲಕ ಜಗತ್ತಿಗೆ ಇಂದು ಮಹಾವಿಭೂತಿ ಜಗಜ್ಜ್ಯೋತಿ ಬಸವಣ್ಣನವರ ತತ್ತ್ವಾದರ್ಶಗಳ ಅವಶ್ಯಕತೆಯನ್ನು, ಅವರ ಚರಿತ್ರೆಯನ್ನು ಕಾಲಕಾಲಕ್ಕೆ ಅಧ್ಯಯನ ಮಾಡುವ ತುರ್ತನ್ನೂ ಹೇಳುತ್ತಾರೆ. ಈ ಅಂಶಗಳು ಸಂವಿಧಾನ ಬದ್ಧ ಭಾರತಕ್ಕೆ ಬಸವನ ತತ್ತ್ವಗಳ ಪ್ರಸ್ತುತತೆ ಎಷ್ಟಿದೆ ಎಂಬುದನ್ನು ತಿಳಿಸುತ್ತದೆ. ಸುಶೀಲಕ್ಕನು ಪಾಂಡವರ ವನವಾಸ, ಅಲ್ಲಿ ದುರ್ವಾಸರ ಆತಿಥ್ಯದ ಕಾರಣದಿಂದ ಪಾಂಡವರಿಗಾದ ಆಯಾಸ, ಅದರಲ್ಲಿ ದ್ರೌಪದಿಯ ಶೀಲ-ಸಭ್ಯತೆ, ಆಕೆಯ ದೇವಭಕ್ತಿ ಮೊದಲಾದವುಗಳನ್ನು ವರ್ಣಿಸುವುದರಿಂದ ಪ್ರಾರಂಭಗೊಂಡು ಭಾರತ ಮಹಿಳೆಯರಲ್ಲಿ ದ್ರೌಪದಿಯಂತಹ ಪಾವನ ಚರಿತ್ರರು ಸಿಗುವುದು ದುರ್ಲಭ. ಅದರಲ್ಲೂ ದಕ್ಷಿಣಾ ಪಥದಲ್ಲಿ ದುರ್ಲಭವಷ್ಟೇ ಅಲ್ಲ, ಸಿಗುವದೇ ಇಲ್ಲವೆಂದೂ ಹೇಳುವವರೆಗೆ ವರ್ಣಿಸುವುದನ್ನು ಬಣ್ಣಿಸಿದ್ದಾರೆ. ಇದು ಒಂದು ಕಾಲದಲ್ಲಿ ಉತ್ತರದವರು ಉಚ್ಚರೆಂದೂ, ದಕ್ಷಿಣದವರೂ ನೀಚರೆಂದೂ ವಿವೇಚಿಸುತ್ತಿದ್ದ ರೀತಿಯನ್ನು ತೋರಿಸುತ್ತದೆ. ಉತ್ತರದವರು ದೇವಮಾನವರೆಂದೂ, ದಕ್ಷಿಣದವರು ರಾಕ್ಷಸ ವಂಶವರೆಂದೂ ವಿವೇಚಿಸುವ ರೀತಿಯನ್ನೂ ತೋರಿಸುತ್ತದೆ. ಇದು ಆರ್ಯ-ದ್ರಾವಿಡ ಸಂಸ್ಕೃತಿಯ ಸಂಘರ್ಷವನ್ನೂ ಸೂಚಿಸುತ್ತದೆ.

ಉತ್ತರ-ದಕ್ಷಿಣಗಳು ರಾಮ-ರಾವಣರ ಸಂಘರ್ಷವಾಗಿಯೂ ತೋರ್ಪಡುತ್ತದೆ. ಈ ರೀತಿಯ ಹೊಸ ಚಿಂತನೆಗಳಿಗೆ ಅಲ್ಲಿ ಅವಕಾಶವಿದೆ.

ಕಾಯಕ ತತ್ತ್ವವನ್ನು ಹುಟ್ಟು ಹಾಕಿದ ಶರಣರು ಅದಕ್ಕೆ ನೀಡಿದ ಪ್ರಾಶಸ್ತ್ಯವನ್ನು ಹಲವಾರು ಚಿಂತಕರು, ವಿಮರ್ಶಕರು ತಮ್ಮ ತಮ್ಮ ದೃಷ್ಟಿಕೋನದಿಂದ ವಿವೇಚಿಸಿ, ಕಾಯಕತತ್ತ್ವಕ್ಕೆ ಹೊಸದೊಂದು ವ್ಯಾಖ್ಯಾನ ಬರೆದಿರುವುದು ಸತ್ಯವೇ. ಇಲ್ಲಿ 'ಆಯಿದು ಕೊಳ್ಳುವದು-ಆಯ್ಕೆ' ಅಂದರೇನು ಎಂಬುದನ್ನು ಸುಲಲಿತವಾಗಿ ವಿವೇಚಿಸಿದ್ದಾರೆ. "ಪ್ರಪಂಚವಿದು ಸತ್ಯಾ ಸತ್ಯಗಳ ಮಿಶ್ರಣವು. ಈ ಪ್ರಪಂಚದ ಬಳಕೆಯೆಂದರೆ ಸತ್ಯಾಸತ್ಯಗಳ ಬಳಕೆ. ಈ ಮಿಥ್ಯಾಸತ್ಯಗಳ ಬಳಕೆಯಿಂದಲೇ ಪಥ್ಯವಾದುದನ್ನು ಎಂದರೆ ಶರಣರು ಹೇಳುವಂತೆ ಸಚ್ಚಿದಾನಂದ ಸ್ವರೂಪವನ್ನು ಹುಡುಕುವುದೇ ಆಯುವ ಕ್ರಿಯೆ ಅಥವಾ ಆಯ್ಕೆಯು. ಸತ್ಯಾಸತ್ಯ, ಜ್ಞಾನಾಜ್ಞಾನ, ಶುಚ್ಯಶುಚಿ, ಧರ್ಮಾಧರ್ಮ, ಕೊಳಕು-ಬೆಳಕು, ಆಚಾರ-ಅನಾಚಾರ, ಕಸ-ಕಸವರ, ನ್ಯಾಯಾನ್ಯಾಯ, ಹೇಯ-ಪೇಯ, ಸ್ಥೂಲ-ಸೂಕ್ಷ್ಮ, ರಾಗ-ವಿರಾಗ, ಬೇಕು-ಬೇಡ, ಅಲ್ಲಹುದು ಇತ್ಯಾದಿಗಳ ತಾರತಮ್ಯವನ್ನರಿತು ಸತ್ಯ-ಶುದ್ಧ-ಪಥ್ಯವಾದದನ್ನು ನಿಶ್ಚಯಿಸಿ ಅದನ್ನು ಕ್ರಿಯೆಯಲ್ಲಿಳಿಸುವದೇ ಆಯ್ಕೆಯ ಲಕ್ಷಣ. ಶರಣ ಸಾಹಿತ್ಯದಲ್ಲಿ ಆಯುವ ಕ್ರಿಯೆಗೆ ಪಾವಿತ್ರ್ಯ ಅಥವಾ ಚಿದ್ಭಾವನೆಯೆಂದು ಅರ್ಥವಿದೆ. ಸತ್ಯ-ಶುದ್ಧವಾದ ಆಯ್ಕೆಯೆಂದರೆ ಆತ್ಮನ ಅರುಹಿನ ಕುರುಹು ! ಆಯುಷ್ಯದಲ್ಲಿ ಆನಂದಮಯ ಕ್ರಿಯೆಯೆಂದರೆ ಉತ್ತಮ ಆಯ್ಕೆ !"[೧೦]

"ಜಗತ್ತಿಗೆ ಅಮರ ಸಂದೇಶವನ್ನು ನೀಡುವುದು ಶರಣ ಜೀವನದ ರಹಸ್ಯವು. ಬ್ರಹ್ಮಾಂಡ ಪ್ರಸಾದವೆನಿಸಿದ ಕಾಳು-ಕಡಿಗಳನ್ನು ಕಡಡೆಗಣಿಸಲಾಗದೆಂದು ಸಂದೇಶವನ್ನು ನೀಡುವುದೇ ಅವರು ಕೈಗೊಂಡ ಕಾಯಕದ ಕರ್ಮವು."[೧೧] ಶರಣರ ಈ ತತ್ವಾಚರಣೆಯೇ ಲಕ್ಕಮ್ಮನದು. ಶಿವ-ಜೀವರ ಅವಿರಳ ಸಂಬಂಧವೇ ಶರಣ ತತ್ವದ ತಿರುಳು. ನಿಷ್ಕಾಮ ಭಕ್ತಿಯಿಂದ ಗುರು-ಲಿಂಗ-ಜಂಗಮ-ದಾಸೋಹದ ಕಾಯಕದಲ್ಲಿ ನಿರತಳಾಗಿರುವಳು. ಆ ಮೂಲಕ ತನ್ನ ಗಂಡನಿಗೆ ಮಾರ್ಗದರ್ಶಕಳಾಗಿರುವಳು. ದ್ರೌಪದಿಯನ್ನು ಮತ್ತು ಆಯ್ದಕ್ಕಿ ಲಕ್ಕಮ್ಮನನ್ನು ತೌಲನಿಕವಾಗಿ ನೋಡುತ್ತ ಅವರಿಬ್ಬರಲ್ಲಿರುವ ನಡೆ-ನುಡಿಯ ವ್ಯತ್ಯಯಗಳನ್ನು ಅಂಗಡಿಯವರು ಇಲ್ಲಿ ಸೂಚ್ಯವಾಗಿ ನೀಡುತ್ತಾರೆ.

"ದ್ರೌಪದಿಯು ತನಗೊದಗಿದ ಅಡೆತಡೆಗಳ ನಿವಾರಣೆಗಾಗಿ ತನ್ನ ಪತಿಯಂದಿರ ಅಥವಾ ಶ್ರೇಷ್ಠ ಮಾನವನಾಗಿ ಹಿಂಬಾಲಿಸಿ ನಡೆಯುವ ಅಧಿಕಾರಿಯೆ ಹೊರ್ತು ತಾನು ಪರಮಾತ್ಮ ತತ್ವವನ್ನು ಅಳವಡಿಸಿಕೊಂಡರೂ ಪರಮಾತ್ಮನಾಗುವ ಅಧಿಕಾರ ತನಗಿಲ್ಲೆಂದು

ತಿಳಿಯಬೇಕಾಗುತ್ತದೆ. ಆದರೆ ಲಿಂಗ ನಿಷ್ಠೆಯಿಂದ ಲಿಂಗ ಶರೀರಿಯಾದ ಲಕ್ಕಮ್ಮನ ಆಗು-ಹೋಗುಗಳ ಕ್ಷೇಮ ಚಿಂತನೆಗಾಗಿ ಪರಮಾತ್ಮನೇ ಅವರ ಬೆನ್ನು ಹತ್ತುವದು ವ್ಯಕ್ತವಾಗುತ್ತದೆ. ಇದರಿಂದ ಲಿಂಗ ನಿಷ್ಠೆಯಿಂದ ಲಿಂಗಮಯ ಶರೀರಿಯಾಗಿ ಆತ್ಮ ವಿಕಾಸದಿಂದೆ ಜೀವನು ಶಿವನೇ ಆಗುತ್ತಾನೆಂದು ಸ್ಪಷ್ಟವಾಗುತ್ತದೆ, ಆದುದರಿಂದ ಲಕ್ಕಮ್ಮ ದೇವಿಯು ಮಾನವಳಲ್ಲ; ಮಾನವಾತೀತ ಮಹಾದೇವಿ"[೧೨] ಎನ್ನುವುದು ಇವರ ಅಭಿಮತ.

ಬಡವ-ಬಲ್ಲಿದರ, ರಾಜ-ರಾಣಿಯರ, ಸಂತ-ಸಾಧುಗಳ, ಯೋಗಿ-ಯೋಗಿಣಿಯರ ಚರಿತ್ರೆಯನ್ನು ನಾವು ಕೇಳಿರಬಹುದು. ಮಾನವ-ಮಾನವನಾಗಿ, ದೇವ ಮಾನವನಾಗಿ ತನ್ನಲ್ಲಿ ಅಡಗಿಸಿಕೊಂಡಿರುವ ಅದ್ಭುತ ಶಿವಶಕ್ತಿಯನ್ನು ತೋರುವ ಲಕ್ಕಮ್ಮದೇವಿಯಂತಹ ಶರಣೆಯರ ಚರಿತ್ರೆ ಅಜರಾಮರವಾಗಿ ಉಳಿಯುತ್ತದೆ ಮತ್ತು ಉಳಿಯಬೇಕು ಎನ್ನುವ ಚಿಂತನೆ ಅಂಗಡಿಯವರದ್ದಾಗಿದೆ.

ಅನ್ನ, ಪ್ರಸಾದದ ಮಹಿಮೆಯನ್ನು ಕವಿ ಲಕ್ಕಮ್ಮ ದೇವಿಯ ಸಂಭಾಷಣೆಯೊಂದಿಗೆ ಹೀಗೆ ನೀಡಿದ್ದಾರೆ. "ಸರ್ವೇಂದ್ರಿಯಂಗಳಲ್ಲಿ ಲಿಂಗವನ್ನು ಸಂಬಂಧಿಸಿದ ಲಿಂಗೋಪಭೋಗಿಗಳಾದ ಶರಣರು ಅನ್ನ, ವಸ್ತ್ರ, ವಾಯು, ರೂಪ, ರಸ, ಗಂಧಾದಿ ಜಡವಸ್ತುಗಳಿಂದ ತೃಪ್ತರಾಗದೆ, ಅವು ತಮ್ಮ ಜಡತನನ್ನು ಕಳೆದುಕೊಂಡು ಪ್ರಸಾದ ರೂಪವಾದಾಗ ಮಾತ್ರ ಅವುಗಳಿಂದ ತೃಪ್ತರಾಗುವರು. ಇದನ್ನು ಮನಸ್ಸಿನಲ್ಲಿ ತಂದರೆ ಜಡಕ್ಕೆ ಅವಧಿಯೂ(ಆಯುಷ್ಯ) ಪರಿಮಿತಿಯೂ ಉಂಟು. ಅಜಡ(ಪ್ರಸಾದ)ಕ್ಕೆ ನಿರವಧಿ, ನಿರವಯ, ನಿರಂಜನತ್ವಗಳುಂಟು."[೧೩] ಪ್ರಸಾದದ ಪ್ರಸನ್ನತೆಯನ್ನು ತಿಳಿಸುಕೊಡುವ ಕವಿ ಶರಣರ ಒಕ್ಕು ಮಿಕ್ಕಿನ ಪ್ರಸಾದವೆಂದರೆ ಅದು ಸಕಲ ಚರಾಚರ ಜಗತ್ತಿಗೆ ಉಣಿಸಿ, ತಣಿಸಿ ಇನ್ನೂ ಉಳಿಯುವುದೋ ಅದು ಮಿಕ್ಕ ಪ್ರಸಾದವು. ಈ ಪ್ರಸಾದವು ಶರಣರ ಕೃಪೆ ವಿಶೇಷದಿಂದ ಅಮೃತವಾಗಿ ಪರಿಣಮಿಸುವುದು. ಎನ್ನುವಲ್ಲಿ ಕವಿಗಳ ಪ್ರಸಾದದ ಪರಿಭಾಷೆ ಇಲ್ಲಿ ಅಭಿವ್ಯಕ್ತವಾಗುತ್ತದೆ.

ದ್ರೌಪದಿಯಂತಹ ಪವಿತ್ರ ಪಾವನೆಯರು ದಕ್ಷಣಾ ಪಥದಲ್ಲಿ ಸಿಗಲಾರರು ಎಂಬುದನ್ನು ಅಲ್ಲಗಳೆಯುತ್ತ 'ಬರಿಗಣ್ಣಿನಿಂದ ನೋಡುವವರಿಗೆ ಚಂದ್ರ-ಸೂರ್ಯರೇ ವಿಶ್ವದಲ್ಲಿ ಘನ-ಗ್ರಹ-ನಕ್ಷತ್ರಗಳೆಂಬಂತೆ ನಿನ್ನ ತಿಳುವಳಿಕೆ' ಎನ್ನುವ ಉಪಮಾತೀತ ವಾಕ್ಯ ನಿಜಕ್ಕೂ ವೀರಶೈವ ಧರ್ಮ ತತ್ತ್ವಗಳನ್ನು ಪರಾಮರ್ಶಿಸಿದಾಗ ಮಾತ್ರ ಅವುಗಳಲ್ಲಿಯ ವೈಚಾರಿಕತೆ ಮತ್ತು ಸಾತ್ವಿಕ ಬದುಕಿನ ಸಿದ್ಧಾಂತಗಳು ಅರ್ಥವಾಗುತ್ತವೆ ಎನ್ನುವುದನ್ನು ಸೂಚಿದರೆ, ಇದೇ ವಾಕ್ಯವು ಲೌಕಿಕ-ಪಾರಮಾರ್ಥಿಕ ಬದುಕುಗಳೆರಡನ್ನು ಬೆಸೆದುಕೊಂಡಂತೆ

ಕಾಣುವ ಶರಣರ ಜೀವನವನ್ನು ಸಮೀಪದಿಂದ ನೋಡಲು ಬೇಕಾದ ದೂರದೃಷ್ಟಿಯನ್ನೂ ಪ್ರತಿನಿಧಿಸುತ್ತದೆ. ಈ ಗೀತೆ ಆಯ್ದಕ್ಕಿ ಮಾರಯ್ಯ ಮತ್ತು ಲಕ್ಕಮ್ಮನವರ ಇಡಿಯಾದ ಬದುಕನ್ನು ಅನಾವರಣಗೊಳಿಸುತ್ತದೆ. ಈ

"ಅನಾದಿ ಜಂಗಮ ಅನಾದಿ ಜಂಗಮ..........."

ನಾಟಕದಲ್ಲಿ ಅಲ್ಲಲ್ಲಿ ಕೆಲವು ಹಾಡುಗಬ್ಬಗಳನ್ನು ಬರೆದಿದ್ದಾರೆ. ಆ ಹಾಡುಗಬ್ಬಗಳು ನಾಟಕದ ಸಂದರ್ಭವನ್ನು ಸಮಯೋಚಿತವಾಗಿ ವ್ಯಾಖ್ಯಾನಿಸುತ್ತವೆ. ತಮ್ಮ ಹಾಡುಗಬ್ಬದ ಮೂಲಕ ಅನುಭವ ಮಂಟಪವನ್ನು ಕಣ್ಣಿಗೆ ಕಟ್ಟುವ ರೀತಿ ದೃಶ್ಯಿಸಿದ್ದಾರೆ. ಅದಕ್ಕೊಂದು ಉದಾಹರಣೆ

"ಶರಣೆಯ ನೋಡನುಭವ ಮಂಟಪವ,

ಶರಣರ ನುಡಿಯೊಳು ತಿರುಳಿನ ........."

ಈ ನಾಟಕದಲ್ಲಿ ತಾವು ಕಂಡುಂಡ ವಚನ ಸಾಹಿತ್ಯವನ್ನು ಅತ್ಯುತ್ತಮವಾಗಿ ಬಳಸಿದ್ದಾರೆ. ಆಯ್ದಕ್ಕಿ ಮಾರಯ್ಯನವರ ಮತ್ತು ಆಯ್ದಕ್ಕಿ ಲಕ್ಕಮ್ಮನವರ ಹಲವಾರು ವಚನಗಳನ್ನು ಪುಷ್ಪ ೧ರಲ್ಲಿ ನೀಡಿದ್ದಾರೆ. ಆ ಎಲ್ಲ ವಚನಗಳೂ ನಾಟಕದ ಸಂದರ್ಭಕ್ಕೆ ಅನುಗುಣವಾಗಿ ಮೂಡಿ ಬರುತ್ತವೆ. ಹೀಗಾಗಿ ಎಷ್ಟೋ ಸಶಕ್ತ ವಚನಗಳು ಈ ನಾಟಕ ಕೃತಿಯಲ್ಲಿ ಸಮಯೋಚಿತವಾಗಿ ಕಂಡುಬರುತ್ತವೆ. ವಚನಗಳಿಗೆ ಟೀಕೆ-ಟಿಪ್ಪಣಿಗಳನ್ನು ಬರೆಯಲು ಸಮರ್ಥರಾಗಿದ್ದ ಇವರಿಗೆ ಇಲ್ಲಿ ಹೆಚ್ಚು ಅನುವಾಗಿದೆ. ನಾಟಕದ ವಸ್ತುವನ್ನು ಸಾಮಾನ್ಯವಾಗಿ ಪೌರಾಣಿಕ ಹಿನ್ನಲೆಯಲ್ಲಿಯೇ ನೋಡಿದರೂ ಅದರಲ್ಲಿ ಸಾಮಾಜಿಕ ಅಂಶಗಳನ್ನು ಹುಲುಸಾಗಿ ನೋಡಬಹುದು. ಇದಕ್ಕೆ ಕಾರಣ ಬಸವಾದಿ ಶಿವಶರಣರ ಮೂಲಧ್ಯೇಯ ಧಾರ್ಮಿಕ ಹರವಿನೊಂದಿಗೆ ಸಾಮಾಜಿಕ ಪ್ರಜ್ಞೆಯನ್ನು ಬಿತ್ತುವುದು. ಹೀಗಾಗಿ ೧೨ನೆಯ ಶತಮಾನದ ಕನ್ನಡನಾಡಿನ ಇತಿಹಾಸ ಪ್ರಸಿದ್ಧ ನಾಡಾದ ಕಲ್ಯಾಣ, ಅದರ ಪರಿಸರದಲ್ಲಿ ಅರಳಿನಿಂತ ಶರಣಜೀವನ, ಧ್ಯೇಯ-ಧೋರಣೆ, ಸಂದೇಶ-ಸಾಧನೆಗಳ ಸಾಂಸ್ಕೃತಿಕ ವಿವರಣೆಗಳೂ ಈ ನಾಟಕದಲ್ಲಿ ದೃಶ್ಯಾವಳಿಗೊಂಡಿವೆ.

ಎರಡನೆಯ ಅಂಕದಲ್ಲಿ ಸೀತೆಯ ವ್ಯಕ್ತಿತ್ವವನ್ನು ನೋಡುವ ನಾವು ಮೋಳಿಗೆಯ ಕಾಯಕದ ಮಹಾದೇವಿಯಮ್ಮನವರ ವ್ಯಕ್ತಿತ್ವವನ್ನು ಗೌಣ ಮಾಡುವುದು ತರವಲ್ಲವೆನ್ನುತ್ತಾರೆ. ಶರಣರ ಕಾಲದಲ್ಲಿ ಕಾಶ್ಮೀರವನ್ನು 'ಸಪದಲಕ್ಷ'ವೆಂದು ಹೆಸರಿದ್ದು, ಅದರ ರಾಜಧಾನಿ 'ಮಾಂಡವ್ಯಪುರ'. ಅದರ ಅರಸ 'ಭಾಳಲೋಚನ', ಅವನ ಮಗ 'ಮಹಾದೇವ ಭೂಪಾಲ'

ಅವನ ಹೆಂಡತಿ 'ಗಂಗಾದೇವಿ'. ಇವರಿಬ್ಬರ ಮಗನಾದವನು 'ಲಿಂಗರತಿ'. ಈ ಪಾತ್ರಗಳು ನಾಟಕದ ಜೀವಾಳ.

ಸೀತೆ ಹೊನ್ನಿನ ಜಿಂಕೆಯೊಂದಕ್ಕೆ ಆಸೆ ಪಟ್ಟು ತನ್ನ, ಶ್ರೀರಾಮನ ಜೀವನವನ್ನು ದುಃಖಕ್ಕೆ ನೂಕಿದುದು ವಾಸ್ತವ. ಆದರೆ ಹಂದಿಯೊಂದು ಮಿಕ್ಕ ಪ್ರಸಾದದ ಅಗುಳೊಂದನ್ನು ತಿನ್ನುವುದರ ಮೂಲಕ ತನ್ನ ಪಾಪ ವಿಮೋಚನೆಯಾದ ಕತೆಯನ್ನು ಇಲ್ಲಿ ಉದಾಹರಿಸುತ್ತ, ಆ ಕತೆಯ ಸಾರಕ್ಕೆ ಅರಸನು ಮನಸೋತುದುದನ್ನು, ವೀರಶೈವ ತತ್ತ್ವಾಚಾರಗಳನ್ನು ವಿಸ್ತೃತವಾಗಿ ಅಧ್ಯಯನಗೈದು ಪರಿಪಾಲಿಸಲು ಪ್ರಾರಂಭಿಸಿದನೆಂದು ಹೇಳುತ್ತಾರೆ. ಇದೇ ಜಾಡನ್ನು ಅವನ ಹೆಂಡತಿಯಾದ ಮಹದೇವಿಯಮ್ಮನೂ ಪಾಲಿಸುತ್ತ ಪತಿಗಿಂತಲೂ ಹೆಚ್ಚಿನ ಸಾಧನೆಯನ್ನು ಆ ಮಾರ್ಗದಲ್ಲಿ ಮಾಡಿದಳು. ದಂಪತಿಗಳ ಪಾರಮಾರ್ಥಿಕ ಜೀವನದ ಬೆಳವಣಿಗೆಯು ಸುಳಿದೆಗೆದು ಬೆಳೆಯಹತ್ತಿತು. ಲಿಂಗಪೂಜೆ, ಅತಿಥಿ ಸತ್ಕಾರ, ಜಂಗಮ ತೃಪ್ತಿ ಇವೇ ಮೊದಲಾದ ಸತ್ಕ್ರಿಯೆಗಳು ಅರಸನಿಂದ ಮನಸಾರೆ ನಡೆಯಹತ್ತಿದವು. "ಜಂಗಮ ದಾಸೋಹವು ದಿನದಿನಕ್ಕೆ ಬೆಳೆದು ಒಂದಕ್ಕೆ ಹತ್ತಾಗಿ, ಹತ್ತಕ್ಕೆ ನೂರಾಗಿ, ಸಾವಿರಾಗಿ, ಹತ್ತುಸಾವಿರ ಜನ ಜಂಗಮರು ದಿನಾಲು ಅರಸನಿಂದ ತೃಪ್ತಿ ಪಡೆಯುತ್ತಲಿದ್ದರು. ಇಷ್ಟಾದರೂ ಅರಸನ ಇಹಭೋಗಕ್ಕೂ ಕೊರತೆಯಿರಲಿಲ್ಲ. ಐಹಿಕ ಪಾರಮಾರ್ಥಿಕ ಭೋಗಗಳೆರಡನ್ನೂ ಸಮದೃಷ್ಟಿಯಿಂದ ನೋಡಹತ್ತಿದನು. ಸತಿಸಾಧ್ವಿ ಗಂಗಾದೇವಿಯವರಲ್ಲಿ ಮಾತ್ರ ಪಾರಮಾರ್ಥಿಕ ಸಂಪತ್ತು ಅತ್ಯಧಿಕವಾಗಿ ಬೆಳೆಯಿತು. ಪತಿಯ ದೃಷ್ಟಿಯಲ್ಲಿ ದೃಷ್ಟಿಯನ್ನಿಟ್ಟು, ಆತನ ಉಭಯ ದೃಷ್ಟಿಗಳಲ್ಲೊಂದಾದ ಪಾರಮಾರ್ಥಿಕ ದೃಷ್ಟಿಯ ವಿಕಾಸಕ್ಕೆ ಕಳೆಯೇರುವಂತೆ ಆತನನ್ನು ಕೈ ಹಿಡಿದು ಕರಕೊಂಡು ಹೋಗುತ್ತಿದ್ದಳು."[೧೪] ಎನ್ನುವಲ್ಲಿ ಸೀತೆಗೂ ಮತ್ತು ಮಹಾದೇವಿಗಿರುವ ಅಂತರವನ್ನು ವಿವೇಚಿಸಿದ್ದಾರೆ.

ಈ ನಾಟಕದ ಇನ್ನೊಂದು ಮುಖದಲ್ಲಿ ಬಸವ ತತ್ತ್ವಗಳ ಬಿತ್ತನೆ, ಕಾಯಕತತ್ತ್ವದ ಸರಿಯಾದ ತಿಳುವಳಿಕೆ, ಸಾಮರಸ್ಯ–ಸಮಾನತೆ, ಪ್ರಾದೇಶಿಕ ಸಂಸ್ಕೃತಿ, ಜೀವನ ವಿಕಾಸಗೊಳ್ಳುವಲ್ಲಿ ಸ್ತ್ರೀಯ ಪಾತ್ರ ಈ ಎಲ್ಲ ಬಗೆಯ ಅಂಶಗಳು ನಾಟಕದಲ್ಲಿ ಪೂರಕವಾಗಿ ನಿಲ್ಲುತ್ತವೆ. ಸಮಾಜದಲ್ಲಿ ಇಂಥ ನಾಟಕಗಳು ಈಗೀಗ ಕಡಿಮೆಯಾಗುತ್ತಿರುವ ಹಿನ್ನೆಲೆಯಲ್ಲಿ ಆ ಕೊರತೆಯನ್ನು ಇಂತಹ ನಾಟಕಗಳು ನೀಗುತ್ತವೆ ಎನ್ನಬಹುದು. ಮನುಕುಲವನ್ನು ಶಿವಪಥ–ಬಸವಪಥಗಳತ್ತ ವಾಲಿಸುವಲ್ಲಿ, ಮಹಿಳೆಯರ ಜೀವನ ಮಟ್ಟವನ್ನು ಉದಾತ್ತವಾಗಿಯೂ, ಉಚ್ಛ್ರಾಯ ಸ್ಥಿತಿಯಲ್ಲಿಯೂ ನೋಡುವಲ್ಲಿ ಈ ನಾಟಕ ಯಶಸ್ವಿಯಾಗಿದೆ.

ಇವರು ನಾಟಕ ಕೃತಿಗಳನ್ನು ಬರೆದದ್ದಷ್ಟೇ ಅಲ್ಲ ಅವುಗಳನ್ನು "ರಂಗಭೂಮಿಗೆ ಅಳವಡಿಸುವ ಮತ್ತು ಪ್ರಯೋಗಿಸುವ ಕಾರ್ಯವನ್ನೂ ಕೈಗೊಂಡಿದ್ದಾರೆ."[೧೫] ಇವರ ನಾಟಕ ಕೃತಿಗಳನ್ನು ಒಂದು ವರ್ಗಕ್ಕೆ ಸೇರಿಸುವುದು ಕಷ್ಟಸಾಧ್ಯ. ಪ್ರತಿಯೊಂದು ನಾಟಕ ಕೃತಿಯೂ ಸಾಮಾಜಿಕವಾಗಿಯೂ, ಧಾರ್ಮಿಕವಾಗಿಯೂ, ಐತಿಹಾಸಿಕವಾಗಿಯೂ ಮತ್ತು ವೀರಶೈವ ಧರ್ಮ ತತ್ತ್ವ-ಸಂಸ್ಕೃತಿಗಳ ಹೊಳಹುಗಳಲ್ಲಿ ಹೊಸತನವನ್ನು ವಿವೇಚಿಸುತ್ತವೆ. ಹೀಗಾಗಿ ಅವರ ನಾಟಕ ಕೃತಿಗಳನ್ನು ಒಂದು ವಿಭಾಗಕ್ಕೆ ಸೀಮಿತವಾಗಿಸುವುದು ತರವಲ್ಲ. ಹೇಗೆ ಬೇಂದ್ರೆಯವರ ಸಮಗ್ರ ಸಾಹಿತ್ಯವನ್ನೂ ಕಾವ್ಯ ಪ್ರಾಕಾರ ಒಂದರಲ್ಲೇ ನೋಡಲು ಸಾಧ್ಯ. ಅದೇ ರೀತಿಯಲ್ಲಿ ಇವರ ನಾಟಕ ಕೃತಿಗಳಲ್ಲಿ ಸಮಾಜ, ಧರ್ಮ, ಇತಿಹಾಸ, ವೀರಶೈವ ತತ್ತ್ವ-ಸಂಸ್ಕೃತಿಗಳನ್ನು ಒಟ್ಟಿಗೆ ನೋಡಬಹುದಾದ ಅವಕಾಶಗಳಿವೆ.

ಆದರೆ ಈ ಕಾಲದ ನಾಟಕಕಾರರೊಂದಿಗೆ ಕ.ಬ.ಅಂಗಡಿಯವರ ಹೆಸರು ಉಲ್ಲೇಖವಾಗದಿರುವುದೇ ಅಚ್ಚರಿಯ ಸಂಗತಿ. ಬಹುಶಃ ಅವರ ಪ್ರಚಾರವಿಲ್ಲದ ಕಾರ್ಯಕ್ಷಮತೆ ಅವರನ್ನು ಪ್ರಚಾರದ ಅಬ್ಬರದಿಂದ ದೂರವೇ ಉಳಿಸಿತು. ಅವರ ಧ್ಯೇಯವೂ ಕೂಡ ತಾನೊಬ್ಬ ಸಾಹಿತಿ, ನಾಟಕಕಾರ ಆಗಬೇಕು ಎನ್ನುವುದಿರಲಿಲ್ಲ. ತಮ್ಮ ವಿಚಾರ-ಆಶಯಗಳು ಸಮಾಜದಲ್ಲಿ ನಲೆ ನಿಲ್ಲಲು ಮಾಧ್ಯಮವಾಗಿ ಮಾತ್ರ ಸಾಹಿತ್ಯವನ್ನು ಬಳಸಿಕೊಂಡಿದ್ದಾರೆ. ಆದರೂ ಅವರನ್ನು ಶರಣಕವಿಯಾಗಿ ಗುರುತಿಸುವ ಮೊದಲು ಅವರನ್ನು ನಾಟಕಕಾರರನ್ನಾಗಿ ಈ ಭಾಗದ ವಾಙ್ಮಯ ಪ್ರಪಂಚ ಗುರುತಿಸಿಯೂ ದೂರವಿಟ್ಟದ್ದು ವಿಷಾದನೀಯ.

### ೪.೩ ಸಂಖ್ಯಾವಾಚಕ ಸ್ತೋತ್ರ ಸಾಹಿತ್ಯ ಪ್ರಕಾರಗಳು :

"ದೈವಿಕೃಪೆಗಾಗಿ ಮನುಷ್ಯನ ಹೃದಯ ಮಿಡಿದ ಹಂಬಲ-ಹಾರೈಕೆಗಳ ಅಭಿವ್ಯಕ್ತಿಯೆ ಸ್ತೋತ್ರಸಾಹಿತ್ಯದ ಉಗಮಕ್ಕೆ ಮೂಲವಾಗಿದೆ. ಕನ್ನಡದಲ್ಲಿ ವೀರಶೈವ ಸ್ತೋತ್ರ ಸಾಹಿತ್ಯದ ಪ್ರಾರಂಭವನ್ನು ಉಪಲಬ್ಧ ಆಧಾರಗಳಿಂದ ಹನ್ನೆರಡನೆಯ ಶತಮಾನದ ಆದಿಯಿಂದಲೂ ಗುರುತಿಸಬಹುದಾಗಿದೆ."[೧೬] ಈ ಸಾಹಿತ್ಯ ಪ್ರಕಾರದ ಕೆಲವುಗಳಲ್ಲಿ ಅಷ್ಟಕ, ಷಟ್ಕ, ಸಪ್ತಕ, ನವಕ, ನೂರೊಂದು ನಾಮಾವಳಿಗಳು ಹೆಚ್ಚು ಪ್ರಚಲಿತವಾಗಿವೆ. ಕ.ಬ.ಅಂಗಡಿಯವರು ಇವುಗಳಲ್ಲಿ ಅಷ್ಟಕಗಳನ್ನು ಹೆಚ್ಚು ಹೆಚ್ಚು ಬರೆದಿದ್ದಾರೆ. ಅದರೊಟ್ಟಿಗೆ ಷಟ್ಕ, ನವಕಗಳು, ನೂರೊಂದು ನಾಮಾವಳಿಗಳನ್ನೂ ರಚಿಸಿದ್ದಾರೆ. ಸಂಖ್ಯಾವಾಚಕ ಸ್ತೋತ್ರ ಸಾಹಿತ್ಯವನ್ನು ಈ ರೀತಿಯಾಗಿ ವಿಭಾಗಿಸಿಕೊಳ್ಳಬಹುದು.

೧)ಅಷ್ಟಕಗಳು ೨)ಷಟ್ಕಗಳು ೩)ನವಕಗಳು ೪)ನೂರೊಂದು ನಾಮಾವಳಿ ೫)ಶತಕಗಳು ೬)ಅಷ್ಟವಿಶಂತಿಗಳು ೭)ಅಷ್ಟೋತ್ತರ ಶತ ೮)ಅಷ್ಟೋತ್ತರ ಸಹಸ್ರಾವಳಿಗಳು ೯)ಸಹಸ್ರ ನಾಮಾವಳಿಗಳು ೧೦)ದ್ವಾದಶ ಸ್ತೋತ್ರಗಳು ೧೧) ಏಕಾದಶ ನಾಮಾವಳಿಗಳು

### ೪.೩.೧ ಅಷ್ಟಕ-ಷಟ್ಕಗಳು :

ಅಷ್ಟಕ-ಷಟ್ಕಗಳನ್ನು ಇವರು ಸುಮಾರು ೧೯೫೦ರಿಂದ ಬರೆಯಲು ಪ್ರಾರಂಭಿಸಿದರು. ಈ ಬರವಣಿಗೆಯ ಹಂತ ಅವರು ಲೌಕಿಕದಿಂದ ಪರಿಪೂರ್ಣವಾಗಿ ಪಾರಮಾರ್ಥಿಕ ನೆಲೆಗಳತ್ತ ಹೊರಳಿದ ಕಾಲಮಾನವನ್ನು ಸೂಚಿಸುತ್ತದೆ. ನಾಟಕ, ಬೈಲಾಟ, ದೊಡ್ಡಾಟ, ಲಾವಣಿ, ಮಂಗಲ ಪದಗಳನ್ನು ರಚಿಸುತ್ತಲೇ ಸಾಹಿತ್ಯ ರಚಿಸಲು ಪ್ರಾರಂಭಿಸಿದ ಅಂಗಡಿಯವರಿಗೆ ಅವರ ಪರಿಸರ-ವೃತ್ತಿ-ಸಹಚಾರ-ಸಂಘಟನೆ-ವೈಚಾರಿಕತೆಗಳು ಅವರ ವಿಭಿನ್ನ ವ್ಯಕ್ತಿತ್ವ ನಿರ್ಮಾಣಕ್ಕೆ ವೇದಿಕೆಯಾದವು. ಮುರಗೋಡ ಮಹಾಂತ ಶಿವಯೋಗಿಗಳ ಒಡನಾಟ ಅವರಲ್ಲಿಯ ಲೌಕಿಕ ತರ್ಕಗಳನ್ನು ಬದಿಗಿರಿಸಲು ಸಹಾಯ ಮಾಡಿದವು. ಬದುಕು-ಬರಹಗಳೆರಡೂ ಒಟ್ಟೊಟ್ಟಿಗೆ ಅವರ ವ್ಯಕ್ತಿತ್ವ ರಚನೆಯಲ್ಲಿ, ವಿಕಾಸದಲ್ಲಿ ಮತ್ತು ಅಂತಃಶಕ್ತಿಯ ದೃಢತೆಗೆ ಬಳಕೆಯಾದವು. ಈ ಮೂಲಗಳು ಅವರ ಮನಸ್ಸಿನ ಪಟಲದಲ್ಲಿ ಮೂಡಿದ ಅಕ್ಷರಗಳನ್ನು ಸ್ತೋತ್ರ ರೂಪದಲ್ಲಿ ಅರುಹಲು ಅನುವಾದವು. ಈ ರೀತಿಯಾಗಿ ಕ.ಬ.ಅಂಗಡಿಯವರು ಸ್ತೋತ್ರ ಸಾಹಿತ್ಯ ಅಥವಾ ಭಕ್ತಿ ನಿವೇದನೆಯ ಸಾಹಿತ್ಯದಲ್ಲಿ ತೊಡಗುವಂತಾಯಿತು. ಆ ಭಕ್ತಿ ನಿವೇದನೆಯನ್ನು ಸಾಕಾರಗೊಳಿಸಲು ಅವರು ಆಯ್ದುಕೊಂಡದ್ದು ಅಷ್ಟಕ ಮತ್ತು ಷಟ್ಕಗಳ ರಚನೆಗಳನ್ನು. ಈ ರಚನಾತ್ಮಕ ವೈವಿಧ್ಯತೆಯು ಅವರ ಸಾಹಿತ್ಯ ಮತ್ತು ಸಾಂಸ್ಕೃತಿಕ ಬೆಳವಣಿಗೆಗೆ ನಿದರ್ಶನವಾಗಬಲ್ಲವು.

ಈ ಭಾಗದಲ್ಲಿ ಮತ್ತು ಈ ಕಾಲಾವಧಿಯಲ್ಲಿ ಅಷ್ಟಕ-ಷಟ್ಕಗಳ ರಚನೆಯನ್ನು ಮಾಡಿದವರು ಬಹಳ ವಿರಳವೆಂದೆ ಹೇಳಬೇಕು. ಇಲ್ಲವೆಂದರೂ ಅತಿಶಯೋಕ್ತಿಯಲ್ಲ. ಈ ಕಾಲಾವಧಿಯಲ್ಲಿ ನವೋದಯ ಸಾಹಿತ್ಯ ತನ್ನ ಅಸ್ತಿತ್ವಕ್ಕಾಗಿ ಪಾಶ್ಚಿಮಾತ್ಯರ ಸಾಹಿತ್ಯವನ್ನೂ ಅರಗಿಸಿಕೊಳ್ಳುತ್ತಿತ್ತು. ರಾಜಕೀಯವಾಗಿ, ಸಾಮಾಜಿಕವಾಗಿ ಆಂಗ್ಲರ ಭಾಷೆ-ಭಾವಗಳು ಭಾರತೀಯತೆಯ ಮೇಲೆ ಪ್ರಭಾವ ಬೀರುತ್ತಿದ್ದವು. ಅಂತಹ ಸಂದರ್ಭದಲ್ಲಿ ವೀರಶೈವ ಸಮಾಜದ ಪುನರುತ್ಥಾನವೂ ಬಹು ಭರದಿಂದ ಸಾಗುತ್ತಿತ್ತು. ಇಂಥ ಸಂಧಿ ಕಾಲದಲ್ಲಿ ಸಮಾಜದ ಅವಿಭಾಜ್ಯ ಅಂಗವಾಗಿ ಬದುಕುತ್ತಿದ್ದ ಕವಿಗಳಲ್ಲಿ ಸಹಜವಾಗಿ ಈ ಕಾಲಾನುಭವವೂ ಪ್ರಭಾವ ಬೀರಿತು.

'ಪ್ರಾರ್ಥನೆ', 'ಸ್ತೋತ್ರ' ಎಂಬುವ ಪದಗಳನ್ನು ಪಾರಿಭಾಷಿಕವಾಗಿ 'ಪಾರಮಾರ್ಥ'ದ ಸವಿಯುಣ್ಣಲು ಬಳಸಲಾಗಿದೆ. ಮನಸ್ಸಿನಲ್ಲಿ ಹೊಯ್ದಾಡುವ ವಿಷಯಾಚರಣೆಗಳನ್ನು ಸ್ಥಾಯಿಗೊಳಿಸಿ, 'ಸ್ತೋತ್ರ', 'ಪ್ರಾರ್ಥನೆ'ಗಳ ಮೂಲಕ ಅಂತರಂಗದ ಬಿಗಿ ತರಂಗಗಳನ್ನು ವಿರಮಿಸುವಂತೆ ಮಾಡಿ, ಹೊಸ 'ಚೈತನ್ಯ' ತರಂಗಗಳನ್ನು ಹುಟ್ಟು ಹಾಕುವ ಕಾರ್ಯವನ್ನು ದಾರ್ಶನಿಕರೆಲ್ಲರೂ ಮಾಡಿದ್ದಾರೆ. ಈ ಪ್ರಕ್ರಿಯೆಯನ್ನು ವೈಜ್ಞಾನಿಕವಾಗಿಯೂ ಒಪ್ಪಿಕೊಳ್ಳಲಾಗಿದೆ. ಭಾವನೆಗಳ ಅಭಿವ್ಯಕ್ತಿಗಾಗಲಿ ಅಥವಾ ಅವುಗಳನ್ನು ಹಿಡಿದಿಡುವ ಕಾರ್ಯದಲ್ಲಿ 'ಶಬ್ದ'ಗಳ ಕಾರ್ಯ ಮಹತ್ವ ಪಡೆದಿರುತ್ತದೆ. ಈ 'ಶಬ್ದ' ಪ್ರಕ್ರಿಯೆಯನ್ನೇ 'ಸ್ತೋತ್ರ', 'ಮಂತ್ರ', 'ಪ್ರಾರ್ಥನೆ' ಮತ್ತು 'ಸ್ತುತಿ'ಗಳೆಂದೂ ಕರೆಯಲಾಗಿದೆ, ಶಬ್ದಕ್ಕಿರುವ ಅಂತಃಶಕ್ತಿಯ ಮತ್ತು ಅನಂತ ಶಕ್ತಿಯ ಅರಿವು ಇಲ್ಲಿ ನಮಗಾಗುತ್ತದೆ. "ಸಾಹಿತ್ಯ ಕ್ಷೇತ್ರದಲ್ಲಿ ಹುಲುಸಾಗಿ ಬೆಳೆದರೂ ಅವಗಾಹನೆಗೆ ಒಳಗಾದ ಈ ಸಾಹಿತ್ಯ ಪ್ರಬೇಧವನ್ನು ಬಳಸಿಕೊಂಡು ಅಷ್ಟಕ-ಷಟ್ಕಗಳ ರೂಪದಲ್ಲಿ ಅವರು ಭಕ್ತಿ ಸಾಹಿತ್ಯವನ್ನು ಪ್ರಚಾರಕ್ಕೆ ತರುವ ಕಾರ್ಯವನ್ನು ಕೈಗೊಂಡಿದ್ದಾರೆ. ಈ ಮೂಲಕ ನಶಿಸಿಹೋಗುತ್ತಿರುವ ಅಷ್ಟಕ-ಷಟ್ಕಗಳ ಸಾಹಿತ್ಯ ಪರಂಪರೆಯನ್ನು ಉಳಿಸಿಕೊಟ್ಟ ಹೆಮ್ಮೆಯೂ ಅವರದು."[೧೭] ಕನ್ನಡದಲ್ಲಿ ಅಷ್ಟಕ ಸಾಹಿತ್ಯದ ಬೆಳವಣಿಗೆ ಕಂಡುಬರುತ್ತದೆ. ಆದರೆ ಷಟ್ಕಗಳ ಬೆಳವಣಿಗೆಯಲ್ಲಿ ಆ ರೀತಿಯ ಪ್ರಖರತೆ ಇಲ್ಲ. ಅಷ್ಟಕ ಸಾಹಿತ್ಯ ರಚನೆಯಾದರೂ ಅಂದುಕೊಂಡಷ್ಟು ಬೆಳಕಿಗೆ ಬಂದಿರುವುದಿಲ್ಲ. ಕೆಲವೇ ಕೆಲವು ಅಧ್ಯಯನ ಕೃತಿಗಳನ್ನು ನೋಡಬಹುದು. ಹೀಗಾಗಿ ಇಲ್ಲಿ ಅಷ್ಟಕ-ಷಟ್ಕ ಸಾಹಿತ್ಯ ಪ್ರಕಾರದ ಒಂದು ಸ್ಥೂಲ ಅಧ್ಯಯನ ಮಾಡಲಾಗಿದೆ.

" 'ಸಂಸ್ಕೃತ' ಭಾಷೆಯ ಸಹಚರ್ಯದಿಂದ ಹಲವಾರು ಸಾಹಿತ್ಯ ಪ್ರಕಾರಗಳು ಕನ್ನಡಾದಿಯಾಗಿ ಅನೇಕ ಭಾಷೆಗಳಿಗೆ ಲಭಿಸಿದಂತೆ ಸಂಸ್ಕೃತ ಮೂಲದಿಂದಲೇ ಬಂದದ್ದು ಅಷ್ಟಕ-ಷಟ್ಕ ಸಾಹಿತ್ಯ. ಈ ಸಾಹಿತ್ಯ ರೂಪಗಳನ್ನು ಭಕ್ತಿಯ ನಿವೇದನೆಗಾಗಿ ಹೆಚ್ಚು ಬಳಸಲಾಗಿದೆ. ಸಂಸ್ಕೃತದಲ್ಲಿ ಈ ಸಾಹಿತ್ಯಕ್ಕೆ ಒಂದು ವಿಶೇಷ ಸ್ಥಾನವೂ ಇದೆ. ಸಂಸ್ಕೃತದ ಪ್ರಮುಖ ಕವಿಗಳೂ ಅಷ್ಟಕಗಳನ್ನು ಬರೆದಿದ್ದಾರೆ. 'ಸ್ತುತಿ'ಯೇ ಈ ಪ್ರಕಾರದ ಮೂಲ ಧ್ಯೇಯ. ವಾಲ್ಮೀಕಿಯ 'ಗಂಗಾಷ್ಟಕ', ಪ್ರಲ್ಹಾದನ 'ಶ್ರೀಹರ್ಯಷ್ಟಕ'ಗಳನ್ನು ಸಂಸ್ಕೃತದ ಪ್ರಮುಖ ಅಷ್ಟಕಗಳ ಸಾಲಿಗೆ ಸೇರಿಸಬಹುದು. ಅದರಂತೆ 'ಪುಷ್ಕರಾಷ್ಟಕ', 'ಸರಸ್ವತ್ಯಷ್ಟಕ'ದಂತಹ ಕೆಲವು ಅಷ್ಟಕಗಳನ್ನು ಪುರಾಣ ಸಾಹಿತ್ಯದಲ್ಲೂ ನೋಡಬಹುದು. 'ಅನ್ನಪೂರ್ಣಾಷ್ಟಕ', 'ಜಗನ್ನಾಥಾಷ್ಟಕ', 'ಗುರ್ವಾಷ್ಟಕ' ದಂತಹ ೨೦ಕ್ಕೂ ಹೆಚ್ಚು ಅಷ್ಟಕಗಳನ್ನು ಶಂಕರಾಚಾರ್ಯರು ರಚಿಸಿದ್ದಾರೆ. ತಮ್ಮ ತಮ್ಮ ಇಷ್ಟದೇವತೆಗಳನ್ನು ಅನುಲಕ್ಷಿಸಿ ನೂರಾರು ಅಷ್ಟಕಗಳನ್ನು ಬರೆಯಲಾಗಿದೆ. 'ಅಗಸ್ತ್ಯಾಷ್ಟಕ', 'ತಾರಾಷ್ಟಕ', 'ನರ್ಮದಾಷ್ಟಕ',

'ಮಹಾಲಕ್ಷ್ಮ್ಯಷ್ಟಕ'ದಂತಹ ಹಲವಾರು ಅಷ್ಟಕಗಳು ಇದಕ್ಕೆ ಉದಾಹರಣೆ. ಅಷ್ಟಕ ಸಾಹಿತ್ಯ ಪ್ರಾಚೀನವಾದ ಸಾಹಿತ್ಯ ಮತ್ತು ಕನ್ನಡ ಸಾಹಿತ್ಯಕ್ಕೆ 'ವಸ್ತು'ವನ್ನು ನೀಡಿದ ಸಾಹಿತ್ಯ ಪ್ರಾಕಾರ. ಇಲ್ಲಿ ಚಂಪೂ, ಲಘುಕಾವ್ಯ, ಶತಕ, ತಾರಾವಳಿ, ದಂಡಕದಂತಹ ಪ್ರಾಕಾರಗಳ ರಚನೆಗೂ ಪ್ರೇರಕವಾಗಿದೆ.[೧೮]

## ೪.೩.೨ ಕನ್ನಡದಲ್ಲಿ ಅಷ್ಟಕ ಸಾಹಿತ್ಯ :

ಕಾಲಕಾಲಕ್ಕೆ ಕನ್ನಡ ಸಾಹಿತ್ಯ ಕ್ಷೇತ್ರ ಬದಲಾಗುತ್ತಾ ಸಾಗಿದೆ. ಇದು ಜೀವಂತ ಭಾಷೆಯೊಂದರ ಲಕ್ಷಣ ಕೂಡ. ಹೊಸತನವನ್ನು ಕಂಡುಕೊಳ್ಳುತ್ತಾ ಚಂಪೂ, ರಗಳೆ, ವಚನ, ಷಟ್ಪದಿ, ಸಾಂಗತ್ಯ, ತ್ರಿವಿಧಿ ಮೊದಲಾದ ಸಾಹಿತ್ಯ ಪ್ರಕಾರಗಳಿಗೆ ಜನ್ಮ ನೀಡಿದೆ. ಅದರಂತೆ 'ಅಷ್ಟಕ' (ಫಾರ್ಮ್) ಎಂಬ ಪ್ರಕಾರ ಕೂಡ ಕನ್ನಡದಲ್ಲಿ ತನ್ನದೆ ಆದ ಅಸ್ತಿತ್ವವನ್ನು ಹೊಂದಿದೆ. 'ಭಕ್ತಿ ನಿವೇದನೆ'ಯೇ ಈ ಪ್ರಕಾರದ ಮುಖ್ಯ ಧ್ಯೇಯವಾದರೂ ಇದರಲ್ಲಿಯೂ ವಿವಿಧತೆಯನ್ನು ಗುರುತಿಸಲು ಸಾಧ್ಯ. ವ್ಯಕ್ತಿ–ಸ್ಥಳ–ತತ್ತ್ವಗಳಂತಹ ವಿಷಯಗಳಿಂದ ಭಕ್ತಿಯ ಓಘವನ್ನು ವಿಭಿನ್ನವಾಗಿಸಿದೆ. ಮಾನವನ ಮುಕ್ತಿ ಸಾಧನೆಗೊಂದು ಮಾರ್ಗವಾಗಿ ತೋರುತ್ತದೆ. "ಕನ್ನಡ ಅಷ್ಟಕ ಸಾಹಿತ್ಯವನ್ನು ಸುಮಾರು ೮೦೦ರಲ್ಲಿದ್ದ ಸೈಗೊಟ್ಟಿ ಶಿವಮಾರನಿಂದ ರಚಿತವಾದ 'ಶಿವಮಾರಮತ', 'ಗಜಾಷ್ಟಕ'ದಿಂದ ಗುರುತಿಸಲಾಗಿದೆ."[೧೯] ಅಂದರೆ ಇದು "ಚಂಪೂ ಪೂರ್ವ ಕಾಲಾವಧಿಯಿಂದಲೇ ಪ್ರಚಲಿತವಿತ್ತು ಎನ್ನುವುದಿಲ್ಲಿ ಸ್ಪಷ್ಟವಾಗುತ್ತದೆ.ಇದನ್ನು ಕನ್ನಡ ಸಾಹಿತ್ಯದ ಮೊದಲ ಅಷ್ಟಕವೆಂದು ತಿಳಿಯಬಹುದಾಗಿದೆ."[೨೦] ಈ ಕೃತಿಯ ನಂತರ ಮೂರು ಶತಮಾನಗಳವರೆಗೆ ಅಷ್ಟಕಗಳು ರಚನೆಯಾದುದು ಎಲ್ಲಿಯೂ ಕೇಳಿ ಬರುವುದಿಲ್ಲವಾದರೂ ಆ ಕಾಲಮಾನದಲ್ಲಿ ಅಷ್ಟಕಗಳು ರಚನೆಯಾಗಿಲ್ಲ ಎಂಬುದನ್ನು ಒಪ್ಪುವಂತಿಲ್ಲ.

೧೨ನೆಯ ಶತಮಾನದ ಶಿವಶರಣರ ಕಾಲಕ್ಕೆ ಬಂದರೆ ಅದಕ್ಕೆ ಇಂಬು ನೀಡುವಂತೆ ಕೇಶಿರಾಜನ ಹೆಸರು ಕೇಳಿ ಬರುತ್ತದೆ. "ಕೇಶಿರಾಜನು ನಿತ್ಯ ತನ್ನ ಪೂಜಾ ಸಮಯದಲ್ಲಿ 'ಅಷ್ಟಕ'ಗಳನ್ನು ಹಾಡುತ್ತಿದ್ದನೆಂದು"[೨೧] ತಿಳಿದುಬರುತ್ತದೆ. ಶಿವಶರಣರು ಸಹಿತ ಅಷ್ಟಕ ರಚನೆಯಲ್ಲಿ ತೊಡಗಿದ್ದರೆಂಬುದು ತಿಳಿಯುತ್ತದೆ. ಆದರೆ ಲಭ್ಯವಿರುವ ಅಷ್ಟಕ ರಚನೆಗಳಲ್ಲಿ ಅವರ ಅಂಕಿತನಾಮ, ಸ್ಥಳ, ಕಾಲಗಳ ವಿವೇಚನೆಯು ಕಂಡು ಬರುವುದಿಲ್ಲವಾದರೂ ಅವುಗಳನ್ನು ನಿಗದಿತವಾಗಿ, ಖಚಿತವಾಗಿ ಇವರೇ ಬರೆದಿದ್ದಾರೆ ಎಂದು ಹೇಳಲು

ಬರುವುದಿಲ್ಲ. ಈ ತೊಡರು-ತೊಂದರೆಗಳು ಕನ್ನಡದಲ್ಲಿ ಅಷ್ಟಕ ಸಾಹಿತ್ಯ ರಚನೆಯ ಅಧ್ಯಯನವನ್ನು ಕುಂಟಿತಗೊಳಿಸಿದೆ.

### ೪.೩.೩ ವೀರಶೈವ ಸಾಹಿತ್ಯದಲ್ಲಿ ಅಷ್ಟಕ-ಷಟ್ಕಗಳು :

ವೀರಶೈವ ಸಾಹಿತ್ಯ ಬಲು ಹುಲುಸಾಗಿ ಬೆಳೆದ ಸಾಹಿತ್ಯ ಪ್ರಪಂಚ. ಇದಕ್ಕೆ ಕಾರಣಗಳು ಹಲವಾರು. ಬಸವಾದಿ ಪ್ರಮಥರು ವಚನ ರಚನೆಯಲ್ಲಿ ತೊಡಗಿ ಜನಸಾಮಾನ್ಯನಿಗೆ ಸಾಹಿತ್ಯ ಕೈಗೆಟುಕುವಂತೆ ಮಾಡಿದರು. ಈ ಹಂತದಲ್ಲಿ ಶಿಕ್ಷಣ-ಸಮಾನತೆಗೆ ಆಧ್ಯತೆ ದೊರೆತದ್ದು ಸ್ತ್ರೀಯರು, ದಲಿತರು, ದುಡಿವ ಶ್ರಮಿಕ ವರ್ಗದ ಜನರು ತಮ್ಮೊಳಗಿದ್ದ ಭಾವತೀವ್ರತೆಯನ್ನು ಅಭಿವ್ಯಕ್ತಿಸಲು ವೀರಶೈವ ಸಮಾಜ ಸಾಹಿತ್ಯ ರಚನೆಯ ಮೂಲಕ ವೇದಿಕೆ ನಿರ್ಮಿಸಿತು. ೧೨ನೆಯ ಶತಮಾನದ ನಂತರವೂ ಇದನ್ನು ಕಾಯ್ದುಕೊಂಡು, ೧೬ನೆಯ ಶತಮಾನದಲ್ಲಿ ಸಿದ್ಧಲಿಂಗ ಯತಿಗಳು ಮತ್ತು ಅವರ ಶಿಷ್ಯ-ಪ್ರಶಿಷ್ಯ ಪರಂಪರೆ ಸಂಪಾದನೆಯ ಕಾರ್ಯದಲ್ಲಿ ತೊಡಗಿಕೊಂಡಿದ್ದು. ತದನಂತರ ೧೯ನೆಯ ಶತಮಾನದಲ್ಲಿ ಶಿಕ್ಷಣ ಕ್ರಾಂತಿಯೇ ನಡೆಯುವಲ್ಲಿ ಹಾನಗಲ್ಲ ಕುಮಾರ ಶಿವಯೋಗಿಗಳ ಸಮಾಜ ಸಂಘಟನೆಯ ಪ್ರಕ್ರಿಯೆಗಳು. ಈ ಎಲ್ಲ ವಿಷಯಗಳು ವೀರಶೈವ ಸಮಾಜದ ಜೊತೆ ಜೊತೆಗೆ ಸಾಹಿತ್ಯವನ್ನು ಔನ್ನತ್ಯಕ್ಕೇರಿತು. ಸಾವಿರಾರು ಪುರಾಣಗಳು, ಪ್ರವಚನಗಳು, ಕೃತಿಗಳು, ರಗಳೆಗಳು, ಚಂಪೂ ಕಾವ್ಯಗಳು, ಸಾಂಗತ್ಯಗಳು, ಭಕ್ತಿಗೀತೆಗಳು, ವಚನಗಳು ರಚನೆಯಾದವು. ಅಲ್ಲಲ್ಲಿ ಅಷ್ಟಕ-ಷಟ್ಕ ಸಾಹಿತ್ಯ ರಚನೆಯೂ ನಡೆದು ಬಂದಿತು. ಆದರೆ ಸಂಸ್ಕೃತದಲ್ಲಿ ಸಿಕ್ಕ ನೆಲೆ-ಬೆಲೆಗಳು ಕನ್ನಡದಲ್ಲಿ ಅಷ್ಟಕ ಸಾಹಿತ್ಯಕ್ಕೆ ಸಿಕ್ಕಿಲ್ಲ. ಅದಕ್ಕೂ ಹಲವಾರು ಕಾರಣಗಳು ಇರಬಹುದು. ಆದರೆ ಉಪಲಬ್ಧ ಕನ್ನಡ ಅಷ್ಟಕ ಸಾಹಿತ್ಯವನ್ನು ಶಾಸ್ತ್ರೀಯವಾಗಿ ಅಧ್ಯಯನಕ್ಕೊಳಪಡಿಸಿದರೆ ಈ ಸಾಹಿತ್ಯದಲ್ಲಿರಬಹುದಾದ ಸತ್ವವನ್ನೂ ಮತ್ತು ಕನ್ನಡದಲ್ಲಿ ಅವುಗಳ ನೆಲೆಯನ್ನು ಗುರುತಿಸಬಹುದು. "ಪ್ರಮಥರು, ಪುರಾತನದಶಗಣ, ಅರವತ್ತುಮೂರು ಪುರಾತನರು, ಶರಣರು, ಶರಣೆಯರನ್ನೂ ಕುರಿತು ಅವರ ಜೀವನ, ತತ್ತ್ವಗಳ, ಸ್ಥಳ, ಸಂಸ್ಕಾರಗಳ ಕುರಿತು ಅನೇಕ ಅಷ್ಟಕಗಳು ರಚನೆಯಾಗಿವೆ. ಕನ್ನಡದಲ್ಲಿ ಜೈನ-ವೀರಶೈವ-ಬ್ರಾಹ್ಮಣ ಕವಿಗಳಿಂಥ ವಿಪುಲವಾಗಿ ಅಷ್ಟಕ ಸಾಹಿತ್ಯ ರಚನೆಗೊಂಡಿದೆ."[೨೨]

## ೪.೩.೪ ಅಷ್ಟಕಗಳ ಸಂಕ್ಷಿಪ್ತ ಸ್ವರೂಪ :

ಸಂಖ್ಯಾವಾಚಿ ಅಷ್ಟಕವು 'ಅಷ್ಟ' ಎಂಬ ಶಬ್ದದಿಂದ ರೂಪಿತವಾಗಿದೆ. 'ಅಷ್ಟ' ಎಂದರೆ 'ಎಂಟು' ಎನ್ನುವುದನ್ನು ಸೂಚಿಸುತ್ತದೆ. 'ಷಟ್ಕ' ಎನ್ನುವುದು ಸಂಖ್ಯೆ 'ಆರ'ನ್ನು ಸೂಚಿಸುತ್ತದೆ. ಇವುಗಳಂತೆಯೇ ಸಂಖ್ಯೆಗಳನ್ನಾಧರಿಸಿ ರಚಿಸಿದ ಸಾಹಿತ್ಯ ಪ್ರಕಾರಗಳು ನವಕ, ಶತಕ, ಷಟ್ಕ, ಅಷ್ಟ ವಿಶಂತಿ, ಅಷ್ಟೋತ್ತರ ಶತಕ, ಅಷ್ಟೋತ್ತರ ಸಹಸ್ರ, ಸಹಸ್ರ ನಾಮಾವಳಿ, ದ್ವಾದಶ ಸ್ತೋತ್ರಗಳು, ಏಕಾದಶ ನಾಮಾವಳಿಗಳನ್ನು ನೋಡಬಹುದು.

ಭಾರತೀಯರಲ್ಲಿ ಸಂಖ್ಯೆಗಳ ಕುರಿತು ಸಾಕಷ್ಟು ಕುತೂಹಲಕಾರಿ ವಿಚಾರಗಳಿವೆ. ಸಂಖ್ಯಾಶಾಸ್ತ್ರವನ್ನು ಜಗತ್ತಿಗೆ ನೀಡಿದವರು ಭಾರತೀಯರು. ಈ ಸಂಖ್ಯೆಯ ಕುತೂಹಲತೆಯು ಸಾಹಿತ್ಯಕ್ಕೂ ಅಂಟುಕೊಂಡಿದೆ. ಐದು, ಎಂಟು, ಎಂಟರಿಂದ ಕೂಡಿದ ಇಪ್ಪತ್ತೆಂಟು, ನೂರೆಂಟು, ಸಾವಿರದೆಂಟು, ನೂರೊಂದು, ನೂರು, ಸಾವಿರ, ಸಾವಿರದೊಂದು ಇಂತಹ ಹಲವಾರು ಸಂಖ್ಯೆಗಳ ಬಗೆಗೆ ವಿಶೇಷ ಕುತೂಹಲ ಉಳ್ಳವರಾಗಿದ್ದಾರೆ. ಪಾವಿತ್ರ್ಯ ಭಾವನೆಯೊಂದು ಪರಂಪರಾಗತವಾಗಿ ಬೆಳೆದು ಬಂದಿದೆ. ಈ ಸಂಖ್ಯೆಗಳಿಗನುಗುಣವಾಗಿ ದೇವರನಾಮ, ಸ್ಥಳನಾಮ, ವ್ಯಕ್ತಿನಾಮಗಳನ್ನು ನೆನೆಯುತ್ತ ಹೋದರೆ ಶುಭ ಪ್ರಾಪ್ತಿಯಾಗುತ್ತದೆ ಎನ್ನುವ ನಂಬಿಕೆ. ಈ ನಂಬಿಕೆಯಲ್ಲಿ ಫಲಪ್ರಾಪ್ತಿಯೇ ಪ್ರಮುಖ ವಿಷಯ. ಈ ವಿಷಯವೇ ಇಂತಹ ಸಾಹಿತ್ಯ ರಚನೆಗೆ ಕಾರಣವಾಗಿವೆ.

ಎಂಟು ಪದ ಗುಚ್ಛದಿಂದ ಕೂಡಿದ ಅಷ್ಟಕಗಳಲ್ಲಿ(ಒಂಭತ್ತು ಪದ ಗುಚ್ಛ ನವಕದಲ್ಲಿ, ಆರು ಪದ ಗುಚ್ಛ ಷಟ್ಕದಲ್ಲಿ) ಫಲಶೃತಿ ರೂಪ, ಕವಿಯ ಪರಿಚಯವನ್ನೂ ಕೆಲವೊಮ್ಮೆ ಕಾಣಬಹುದು. ಮೊದ ಮೊದಲು ಅಷ್ಟಕ-ಷಟ್ಕಗಳಲ್ಲಿ ಎಂಟು ಮತ್ತು ಆರು ಪದ್ಯಗಳೇ ಸೀಮಿತವಾಗಿದ್ದರೆ, ಕಾಲಾಂತರದಲ್ಲಿ ಅವುಗಳು ೯, ೧೦, ೨೫, ೫೦ ಪದ್ಯಗಳವರೆಗೂ ವಿಸ್ತರಿಸಿಕೊಂಡಿರುತ್ತವೆ. ಈ ಕುರಿತು ವಿಶ್ಲೇಷಿಸಿದಾಗ ಬಹುಶಃ ಕಾಲಕಾಲಕ್ಕೆ ಅವುಗಳ ಬಳಕೆಯಲ್ಲಿ ಕೆಲವು ಪದ್ಯಗಳು ಸೇರಿಕೊಂಡಿರಬಹುದು. ಕಾಲಾಂತರದಲ್ಲಿ ಮೂಲ ಅಷ್ಟಕ-ಷಟ್ಕಗಳಿಗೆ ಧಕ್ಕೆಯಾಗಿ ಅಲ್ಲಿ ಹೊಸ ಪದ್ಯಗಳು ಸೇರಿಕೊಂಡಿರಬಹುದು. ಆದರೂ ಇವುಗಳ ತಲೆಬರಹ 'ಅಷ್ಟಕ', 'ಷಟ್ಕ'ಗಳಾಗಿಯೇ ಉಳಿದಿರುವುದನ್ನು ಗಮನಿಸಬಹುದು. ಸಮಯದ ಅಭಾವವಿರುವ ಮತ್ತು ಭಕ್ತಿ ನಿವೇದನೆಗೆ ಸಂಕ್ಷಿಪ್ತ ರೂಪ ನೀಡುವ ಉದ್ದೇಶದಿಂದ ಈ ಸಾಹಿತ್ಯದ ಅನುಕೂಲತೆಗಳನ್ನು ಬಳಸಿಕೊಳ್ಳಲಾಗಿದೆ. ಅಷ್ಟಕದ ವಸ್ತುವಿನ ಕುರಿತು

ಮಾಹಿತಿಗಳು, ಭಾವನೆಗಳು ಕಡಿಮೆ ಅವಧಿಯಲ್ಲಿ ಅಭಿವ್ಯಕ್ತಗೊಳ್ಳಬೇಕೆನ್ನುವುದೇ ಇಲ್ಲಿ ಮೂಲ ಉದ್ದೇಶ.

### ೪.೩.೫ ಕ.ಬ.ಅಂಗಡಿಯವರ ಅಷ್ಟಕಗಳು, ಷಟ್ಕಗಳು, ನವಕಗಳು, ಸ್ತೋತ್ರಗಳು, ಭಜನಾವಳಿಗಳು, ಮಂಗಳ ಗೀತೆಗಳು :

### ೪.೩.೫.೧ ಮೃತ್ತುಂಜಯನ ಪೊತ್ತು ತೇರು ಸಾಗುತಿದೆ. (ಅಷ್ಟಕ) :

ಧಾರವಾಡ ಮೃತ್ಯುಂಜಯ ನಗರದ ಮುರುಘಾ ಮಠದಲ್ಲಿ ದಿನಾಂಕ ೧೪-೨-೧೯೬೨ನೆಯ ಮಂಗಳವಾರ ನಡೆದ ಮದಥಣೀ ಶಿವಯೋಗಿಗಳವರ ರಥೋತ್ಸವದ ಸುಪ್ರಸಂಗದಲ್ಲಿ ಲಿಂ. ಮೃತ್ಯುಂಜಯ ಮಹಾಸ್ವಾಮಿಗಳ ನೆನೆದು 'ಮೃತ್ಯುಂಜಯನ ಪೊತ್ತು ತೇರು ಸಾಗುತಿದೆ' ಎಂಬ ಅಷ್ಟಕವನ್ನು ರಚಿಸಿದ್ದಾರೆ. ಎಂಟು ನುಡಿಗಳುಳ್ಳ ಈ ಅಷ್ಟಕದಲ್ಲಿ ಎರಡು ಸಾಲಿನ ಪಲ್ಲವಿಯಿದೆ.

"ತೇರು ಸಾಗುತಿದೆ ಶ್ರೀಮದಥಣೀ ಶಿವಯೋಗಿ

ಚಾರು ಮುರುಘೇಂದ್ರ ಶಿವಭಕ್ತಿ ರಸಮಯ ಯೋಗಿ"

ಈ ಅಷ್ಟಕವು ಕ.ಬ.ಅಂಗಡಿಯವರ ಇಷ್ಟದೈವವಾದ ಮುರುಘಾ ಮಠದ ಮೃತ್ಯುಂಜಯಪ್ಪ ಸ್ವಾಮಿಗಳನ್ನು ಕುರಿತು, ಮದಥಣೀ ಶಿವಯೋಗಿಗಳ ರಥೋತ್ಸವ ಪ್ರಸಂಗದಲ್ಲಿ ಹೆಣೆದು ಹಾಡಿದ್ದಾರೆ. ಈ ಅಷ್ಟಕದ ಪ್ರತಿಗಳನ್ನು ಆ ರಥೋತ್ಸವದ ಸಮಯದಲ್ಲಿ ಮುದ್ರಿಸಿ ಅಲ್ಲಿ ನೆರೆದ ಭಕ್ತ ಜನಸಮುದಾಯಕ್ಕೆ ಹಂಚಿ ತಮ್ಮೊಳಗಿನ ಭಕ್ತಿ ಸುಧೆಯನ್ನು ಅನ್ಯರೊಂದಿಗೂ ಹಂಚಿಕೊಂಡಿದ್ದಾರೆ.

"ಚರ ಸಾರ್ವಭೌಮ ಚಿನ್ಮೂಲಾದ್ರಿನಾಥನಾ

ವರ ಕೃಪಾಲಯದೊಳು ಶ್ರೀಮದಥಣೀ ಯೋಗಿ

ಪರ ಜಂಗಮಾರ್ಯನಾಶೀರ್ವಾದ ಮೆತ್ತದಿಂ

ಗುರುತನವ ಪೊತ್ತಾತ ಮೃತ್ಯುಂಜಯನ ಪೊತ್ತ.........೧"

ಅಷ್ಟಕದ ಮೊದಲ ನುಡಿ ಇದು. ಸಹಜವಾಗಿ ಅಷ್ಟಕದ ಎಲ್ಲ ಗುಣ-ವಿಶೇಷಗಳನ್ನು ಇಲ್ಲಿ ನೋಡಬಹುದು. ಆದಿಪ್ರಾಸವನ್ನು 'ಚರ', 'ವರ', 'ಪರ', 'ಗುರು' ಶಬ್ದಗಳು ತೋರ್ಪಡಿಸುತ್ತವೆ. ಶರಣ ಪರಂಪರೆಯ ಮುಂದುವರೆದ ಭಾಗದಂತಿರುವ ಮೃತ್ಯುಂಜಯ ಶಿವಯೋಗಿಗಳ ಪ್ರಭಾವಕ್ಕೆ ಒಳಗಾದವರು.

ಅಷ್ಟಕದ ಕೊನೆಯ ನುಡಿಯಲ್ಲಿ

"ಪರಮಗುರು ತಾನಯ್ಯ ಬಸವಣ್ಣನವತಾರ

...............ಕರವೀರನೆಬ್ಬಿಸಿದ ಮೃತ್ಯುಂಜಯನ ಪೊತ್ತ"

ಅಷ್ಟಕದ ಕೊನೆಯಲ್ಲಿ ಶಿವಯೋಗಿ ಕೃಪಾ ಪಾತ್ರರು, ಗದುಗಿನ ಅಂಗಡಿ ಕರವೀರಪ್ಪ ಮತ್ತು ಅವರ ಪುತ್ರ-ಪೌತ್ರರು, ಎಂದು ಬರೆದಿರುತ್ತಾರೆ. ಇದೂ ಕೂಡ ಅಷ್ಟಕಗಳ ಒಂದು ಗುಣ ವೈಶಿಷ್ಟ್ಯವನ್ನು ಪ್ರತಿನಿಧಿಸುತ್ತದೆ. ತಾವು ಅಷ್ಟಕವನ್ನು ಬರೆದು, ಪಠಣ ಮಾಡಿ ತಮ್ಮ ಭಕ್ತಿಯನ್ನು ನಿವೇದನೆ ಮಾಡಿ, ಗುರುವಿನಿಂದ ಫಲಾಪೇಕ್ಷೆಯನ್ನು ಬಯಸುತ್ತಾರೆ. ಆ ಫಲಾಪೇಕ್ಷೆಯಲ್ಲಿ ಅವರ ಕುಟುಂಬ- ಪರಿವಾರವನ್ನೂ ಭಾಜನರನ್ನಾಗಿ ಮಾಡುತ್ತಾರೆ. ಸಂಪೂರ್ಣ ಶರಣಾಗತಿ ಅಷ್ಟಕಗಳ ಭಾವ ಸಂವೇದನೆ ಮತ್ತು ಮೂಲ ಧ್ಯೇಯ. ಅದಿಲ್ಲಿ ಸಾಕಾರವಾಗಿದೆ.

ಅಷ್ಟಕದ ಕೊನೆಯ ನುಡಿಯಲ್ಲಿ ತಮ್ಮ ಹೆಸರನ್ನು ಉಚ್ಚರಿಸಿ, ತಮ್ಮ ಪಾರಮಾರ್ಥಿಕ ಸಾಧನೆಗೆ ಮೃತ್ಯುಂಜಯ ಮಹಾಸ್ವಾಮಿಗಳೇ ಕಾರಣರು ಎಂಬುದನ್ನು ಭಕ್ತಿಯಿಂದ ಸ್ಮರಿಸಿದ್ದಾರೆ. ಈ ಸ್ತುತಿ ಪದ್ಯಗಳ ರೀತಿಯೇ ಹೀಗೆ. ತಮ್ಮ ಭಕ್ತಿ ನಿವೇದನೆಗೆ ಅವು ಸಶಕ್ತ ಮಾರ್ಗವಾಗಿ ಪರಿಣಮಿಸುತ್ತವೆ. ಪ್ರತಿ ನುಡಿಯು 'ಮೃತ್ಯುಂಜಯನ ಪೊತ್ತ' ಎನ್ನುವ ಶಬ್ದದಿಂದಲೇ ಮುಕ್ತಾಯವಾಗುತ್ತದೆ. ಇದು ಅಷ್ಟಕಗಳ ಮತ್ತೊಂದು ಗುಣವೂ ಕೂಡ. ಶಬ್ದಗಳಿಗಿರುವ ಶಕ್ತಿ ಸಾಮರ್ಥ್ಯವಿಲ್ಲಿ ತೋರಿಬರುತ್ತದೆ. ತೇರು ಸಾಗುವ ದೃಶ್ಯವನ್ನೇ ಶಬ್ದಗಳು ಕಟ್ಟಿಕೊಡುತ್ತವೆ. ನುಡಿಗಳಲ್ಲಿ ಕೆಲವು ಶಬ್ದಗಳನ್ನು ದಪ್ಪದಾದ ಅಕ್ಷರಗಳಲ್ಲಿ ಕಾಣಿಸಿದ್ದಾರೆ. ಅವುಗಳ ಅರ್ಥ ಸಾಮರ್ಥ್ಯವನ್ನು ಕೆಳಗಡೆ ಅಡಿ ಟಿಪ್ಪಣಿಯಲ್ಲಿ ನೀಡಿದ್ದಾರೆ. ಈ ಅಡಿ ಟಿಪ್ಪಣಿ ಅಷ್ಟಕವನ್ನು ಓದುವಾಗ ಅಲ್ಲಿ ಗುರುತಿಸಲ್ಪಟ್ಟ ಶಬ್ದಗಳ ಸಮಯೋಚಿತ ಅರ್ಥವನ್ನು ನೀಡುತ್ತದೆ. ಸಹೃದಯನ ಭಾವಕ್ಕೆ ತಕ್ಕಂತೆ ಈ ಶಬ್ದಗಳು ತಮ್ಮ ಅರ್ಥವಂತಿಕೆಯನ್ನು ಮೈಗೂಡಿಸಿಕೊಳ್ಳುತ್ತವೆ.

**ಶಬ್ದ ಸಂಪದ:**

'ಚರ ಸಾರ್ವಭೌಮ' ಎನ್ನುವುದಕ್ಕೆ 'ಚಿತ್ರದುರ್ಗದ ಜಗದ್ಗುರು' ಎನ್ನುವ ಅರ್ಥವನ್ನು ನೀಡಿದ್ದು ಇದು ವೀರಶೈವ ಧರ್ಮದ 'ಜಂಗಮತ್ವ'ವನ್ನು ಪ್ರತಿಪಾದಿಸುತ್ತದೆ.

'ಮೊತ್ತ' ಎನ್ನುವುದಕ್ಕೆ 'ಧನ' ಎನ್ನುವ ಅರ್ಥ ನೀಡಿದ್ದು, ಇದು ಬದುಕಿನ ಒಟ್ಟಾರೆ ಮೊತ್ತವನ್ನು ಅಂದರೆ ಮನುಷ್ಯನ ಕೊನೆಯ ಹಂತ ಲಿಂಗಾಂಗ ಸಾಮರಸ್ಯ, ಮುಕ್ತಿ, ದೈವತ್ವವನ್ನು ಪ್ರತಿಪಾದಿಸುತ್ತದೆ.

'ತಿರಿದು' ಎನ್ನುವುದಕ್ಕೆ 'ಭಿಕ್ಷೆಬೇಡಿ' ಎನ್ನುವ ಅರ್ಥ ನೀಡಿದ್ದು, ಭಿಕ್ಷೆಬೇಡಿ ಎನ್ನುವುದನ್ನು ಅಪಾರ್ಥ ಮಾಡಿಕೊಳ್ಳುವಂತಿಲ್ಲ. ಇಲ್ಲಿ ಅದರ ಅರ್ಥ, ಜೀವನ ಮೌಲ್ಯಗಳನ್ನು ಸಂಚರಿಸಿ ಆಯ್ದುಕೊಳ್ಳುವುದು ಎಂಬುದನ್ನು ದನಿಸುತ್ತದೆ. ಸತ್ಯ, ಶಿವ, ಸರಳತೆ, ಸೌಜನ್ಯಗಳೇ ಆ ಮೌಲ್ಯಗಳಾಗಿವೆ.

'ನಿಲವು' ಎನ್ನುವುದಕ್ಕೆ 'ಬೋರ್ಡಿಂಗ್' ಎನ್ನುವ ಅರ್ಥವನ್ನು ನೀಡಿದ್ದು, ಅದು ಬದುಕಿನ ಸ್ಥಿರತೆಯನ್ನು ಪ್ರತಿಪಾದಿಸುತ್ತದೆ.

'ಗರುವರ' ಎನ್ನುವುದಕ್ಕೆ 'ಪಥವಿಧರರ', 'ಕೀರ್ತಿಪರರ' ಎನ್ನುವ ಅರ್ಥವನ್ನು ನೀಡಿದ್ದು, ಇಲ್ಲಿ 'ಗರು' ಎಂದರೆ 'ಶಕ್ತಿ', 'ಬುದ್ಧಿವಂತಿಕೆ' ಎನ್ನುವ ಅರ್ಥ ವ್ಯಕ್ತವಾಗುತ್ತದೆ.

'ಕರ್ತೃಪದ' ಎನ್ನುವುದಕ್ಕೆ 'ಕಮ್ಮಟ ಶಾಲೆ' ಎನ್ನುವ ಅರ್ಥವನ್ನು ನೀಡಿದ್ದು 'ಪದ' ಎನ್ನುವುದು 'ಪಾದ-ಜಾಗೆ-ಪ್ರದೇಶ' ಎನ್ನುವ ಅರ್ಥವನ್ನು ಕಲ್ಪಿಸುತ್ತವೆ. ಶರಣ ತತ್ವಗಳನ್ನು ಬಿತ್ತರಿಸುವ ಜಾಗೆ, ಪ್ರದೇಶ ಎನ್ನುವ ಅರ್ಥವನ್ನೂ ಅವು ನೀಡುತ್ತವೆ.

'ತನ್ನವರ' ಎನ್ನುವುದಕ್ಕೆ 'ಶರಣರ' ಎಂಬ ಅರ್ಥವನ್ನು ವಿಶದಪಡಿಸಿದ್ದಾರೆ. ಇಲ್ಲಿ ವೀರಶೈವ ತತ್ವದ ಎಲ್ಲರೂ ನಮ್ಮವರು ಎನ್ನುವ ಅರ್ಥ ಹೆಚ್ಚು ಸೂಚ್ಯವಾಗುತ್ತದೆ.

'ಸೂಕ್ಷ್ಮಾಂಗ' ಎನ್ನುವುದಕ್ಕೆ 'ಲಿಂಗತನು' (ಗದ್ದುಗೆ) ಎನ್ನುವ ಅರ್ಥ ನೀಡಲಾಗಿದ್ದು, ಅದು ಆತ್ಮದ ವಾಸಸ್ಥಾನವಾಗಿದೆ. ಆತ್ಮದ ನೆಲೆಯಾಗಿದೆ.

'ಕರವೀರ' ಎನ್ನುವುದಕ್ಕೆ 'ಅಷ್ಟಕ ಕರ್ತೃ' ಮತ್ತು 'ಬೋರ್ಡಿಂಗಿನ ಹಳೆಯ ವಿದ್ಯಾರ್ಥಿ' ಎನ್ನುವ ತಿಳುವಳಿಕೆಯನ್ನು ನೀಡಲಾಗಿದೆ. ಈ ಅರ್ಥವನ್ನು ಹೆಚ್ಚು ವಿಶ್ಲೇಷಿಸಿದಾಗ ವೀರಕಾರ್ಯಗಳನ್ನು ಗೈದ ಸಮರ್ಥ, ನಿಜ ವೀರಶೈವ ಎನ್ನುವ ಅರ್ಥವೂ ಗ್ರಾಹ್ಯವಾಗುತ್ತದೆ.

'ಪುರಾತನರ ಮಂದಿರ' ಎನ್ನುವುದಕ್ಕೆ '೬೩ ಪುರಾತನರ ಹೆಸರಿನ ವಿದ್ಯಾರ್ಥಿಗಳ ಕೋಣೆ' ಎನ್ನುವ ತಿಳುವಳಿಕೆಯನ್ನು ನೀಡಲಾಗಿದೆ. ೬೩ ಪುರಾತನರ ಇರುವನ್ನು ನಮ್ಮ ಅರಿವಿಗೆ ತಂದುಕೊಡುವ ವಸತಿ ನಿಲಯವೆಂದೂ, ಆ ವಸತಿ ನಿಲಯವಿರುವವರೆಗೂ ೬೩ ಪುರಾತನರನ್ನು ನೆನೆಪಿಗೆ ತರುವಂತಹ ಕಾರ್ಯವೆಂಬುದೂ ಕೂಡ ಇಲ್ಲಿ ವಿಧಿತವಾಗುತ್ತದೆ.

ಈ ರೀತಿಯಾಗಿ ಕ.ಬ.ಅಂಗಡಿಯವರ ಅಷ್ಟಕಗಳ ದೃಷ್ಟಿ ಭಕ್ತಿ ನೀವೇದನೆಯಷ್ಟೇ ಅಲ್ಲದೆ ಸಮಾಜದ ಮತ್ತು ಸಮಕಾಲೀನ ವಸ್ತು-ಸ್ಥಿತಿಗಳನ್ನೂ ಜೀವಂತವಾಗಿಡುವ ಕಾರ್ಯ ಮಾಡುತ್ತವೆ. ಇದೇ ಮಾದರಿಯಲ್ಲಿ ಅವರ ಇನ್ನೊಂದು ಅಷ್ಟಕ 'ಹಾವೇರಿ ಶಿವಬಸವ ಸ್ವಾಮಿ ಚರಣಕ್ಕೆ ಶರಣಾಷ್ಟಕ'.

### ೪.೩.೫.೨ ಬಸವೇಶ್ವರಾಷ್ಟಕ ೧ ಮತ್ತು ೨ :

ಕ.ಬ.ಅಂಗಡಿಯವರು ಸಾಹಿತ್ಯ ರಚಿಸಲು ಆರಂಭಿಸಿದ ಮೊದಮೊದಲು ಬರೆದ ಅಷ್ಟಕಗಳಿವು. ಈ ಅಷ್ಟಕಗಳು ಅವರ 'ಬಸವ ಭಜನಾ ಮಾಲೆ'ಯಲ್ಲಿ ಪ್ರಕಟಣೆಗೊಂಡಿವೆ. ಮೊದಲ ಅಷ್ಟಕವಾದ

"ಶಿವಪೂಜಾರತ ಮೋದಹಸ್ತಯುಗತಾಂ ಕ್ಷೇತ್ರಾಶೆಯಿಂ ಪಾದವುಂ

................................................................ ನೀಂ ರಕ್ಷಿಸೈ ಭಕ್ತರಾ"

ಇದರಲ್ಲಿ ಬಸವಣ್ಣನವರ ಸರ್ವ ಇಂದ್ರೀಯಗಳು ಪೂಜಾರ್ಹವಾದಂತಹಗಳು. ಫಲಾಪೇಕ್ಷಿತ ಭಕ್ತನ ಆಶೋತ್ತರಗಳನ್ನು ಪೂರೈಸಬಲ್ಲವುಗಳಾಗಿವೆ ಎಂಬುದನ್ನು ತೋರ್ಪಡಿಸುತ್ತವೆ. 'ಪರೋಪಕಾರಾರ್ಥಂ ಇದಂ ಶರೀರಂ' ಎಂಬ ದಿವ್ಯ ವಾಣಿಯ ಪ್ರತಿಧ್ವನಿ ಇಲ್ಲಿದೆ.

"ಧರ್ಮಗ್ಲಾನಿರಮೋಘಭಕ್ತಿ ಸುಖಸಾಮ್ರಾಜ್ಯೇ ವಿವೇಕಾದಿ

.......................................... ಮಾಂ ಪಾಹಿರೇ ಸರ್ವದಾ"

ಈ ಎರಡನೆಯ ಅಷ್ಟಕದಲ್ಲಿ ಬಸವಣ್ಣನವರು ಲೋಕ(ಸಮಾಜ) ಹಿತಕ್ಕಾಗಿ ಕಾರಣೀಕ ಪುರುಷರಾಗಿ ಬಂದರೆಂಬ ವಿಷಯವನ್ನು ಪ್ರತಿಪಾದಿಸುತ್ತದೆ. ಈ ಎರಡು ಅಷ್ಟಕಗಳು ಹೆಚ್ಚು ಸಂಸ್ಕೃತ ಭೂಯಿಷ್ಠತೆಯಿಂದ ಕೂಡಿವೆ.

### ೪.೩.೫.೩ ಅರಭಾವಿ ಚಿದಾರಣ್ಯ ಪುಣ್ಯಕ್ಷೇತ್ರ ದುರದುಂಡಿ ನವಮಮಹಾಂತ ಶಿವಯೋಗಿ ಸ್ತೋತ್ರಾಷ್ಟಕಂ:

"ಅರಭಾವಿ ಚಿದಾರಣ್ಯ ದುರದುಂಡಿಯೋಗಿಸುರಭೂಜವು ದಯಪಾಲಿಸಿದ ನವಫಲಗಳಲ್ಲಿ ಶ್ರೀ ಮಹಾಂತ ಪ್ರಭುಫಲವು ಒಂಭತ್ತನೆಯದು. ಇದು ಯೋಗಿ ಫಲದಿನಿರಸದ ನವನೀತವು! ಈ ನವನೀತವನ್ನು ಅನುಭೋಗಿಸದಿರಬಹುದು ನಾನು; ಆದರೆ ಅದರಸದ್ವಾಸನೆಯ ಕಿರಿದರಿಂದ ತೃಷೆಗೊಂಡು ಈ ಸ್ತೋತ್ರಾಷ್ಟಕವನ್ನು ರಚಿಸಿದ್ದೇನೆ."[೨೩] ಎಂದು ಮೊದಲು ಕೈಬರಹದಲ್ಲಿಯೇ ಬರೆದು ಮಹಾಂತ ಶಿವಯೋಗಿಗಳಿಗೆ ಅರ್ಪಿಸಬೇಕೆಂದುಕೊಂಡಿದ್ದ ಕ.ಬ.ಅಂಗಡಿಯವರಿಗೆ ಎಡೆಯೂರ ಸಿದ್ಧಲಿಂಗರ ಭಕ್ತರಾದ ವೀರಪ್ಪ ಲಕ್ಷ್ಮಪ್ಪ ಅಂಗಡಿ, ಎಂಬುವ ಕಾಂಟ್ರ್ಯಾಕ್ಟರ ಗದಗ ಇವರು ಅಷ್ಟಕವನ್ನು ಮುದ್ರಿಸುವಲ್ಲಿ ಪ್ರೋತ್ಸಾಹ ತೋರಿದುದರ ಫಲವಾಗಿ ಅಷ್ಟಕವು ಮುದ್ರಣಗೊಂಡಿದೆ. ಈ ಅಷ್ಟಕವು 'ಮುರಗೋಡ ಮಹಾಂತ ಶಿವಯೋಗಿಗಳ ನಡೆ–ನುಡಿ–ಬೆಡಗಿನ ಮಾಲೆ' ಕೃತಿಯಲ್ಲಿ ಪ್ರಕಟಣೆಗೊಂಡಿದೆ. ಅಷ್ಟಕದ ಸಾಲುಗಳು ವಚನ–ವಿವೇಚನೆಗಳಿಂದ ಪ್ರಭಾವಿತವಾದದನ್ನು ನೋಡಬಹುದು.

"ವರಮಾತಾಪಿತ ನೀನೆ ಎಂದು ಕರೆಯಲ್ ಮುದ್ದನ್ನೆ ನೀ ನೀಡುವೇ

................................................................ಬೇಳ್ಪಂ ಮಹಾಂತಪ್ರಭೋ

### ೪.೩.೫.೪ ಶ್ರೀಗಂಧ ಪಾದುಕಾರ್ಪಣಾಷ್ಟಕಂ :

ಈ ಅಷ್ಟಕವು ಕ.ಬ.ಅಂಗಡಿಯವರೊಳಗಿನ ನಿಜಭಕ್ತನನ್ನು ಅಭಿವ್ಯಕ್ತಗೊಳಿಸುವಲ್ಲಿ ಸಹಾಯಕಾರಿಯಾಗುತ್ತದೆ. ತಮ್ಮ ಆತ್ಮತೃಪ್ತಿಗಾಗಿ ಮುರಗೋಡ ಮಹಾಂತ ಶಿವಯೋಗಿಗಳಿಗೆ ಶ್ರೀಗಂಧ ಪಾದುಕೆಗಳ ಕಾಣಿಕೆಯನ್ನು ಅರ್ಪಿಸಿ, ಪಾದಕ್ಕೆ ತೊಡಿಸಿ ಪೂಜಿಸಿದಾಗ ಹೆಣೆದ ಸ್ತೋತ್ರಾಷ್ಟಕವು. ಆ ಪಾದರಕ್ಷೆಗಳು(ಆವುಗೆ) ಇಂದಿಗೂ ಅವರ ಮನೆಯಲ್ಲಿ ಪೂಜಿಸಲ್ಪಡುತ್ತವೆ.

"ತೊಡಿಸುವೆವು ಪಾದುಕೆಯ ಗುರುವರನ ಪಾದಕ್ಕೆ
ಮಡಿಮನದ ಮುರಗೋಡ ಶಿವಯೋಗಿ ಚರಣಕ್ಕೆ"



'ಕ.ಬ.ಅಂಗಡಿಯವರ ಮನೆಯಲ್ಲಿ ಪೂಜಿಸಲ್ಪಡುತ್ತಿರುವ ಮುರಗೋಡ ಮಹಾಂತ ಶಿವಯೋಗಿಗಳ ಪಾದರಕ್ಷೆಗಳು. ಈ ಕುರಿತು ಒಂದು ಅಷ್ಟಕವನ್ನೂ ಕೂಡ ಬರೆದಿದ್ದಾರೆ.

ಈ ಭಾವ ಪರಿಪೂರ್ಣ ಶರಣಾಗತಿಯನ್ನು ಸೂಚಿಸುತ್ತದೆ. ಇವರು ತಮ್ಮ ಸಮಕಾಲೀನರಿಗಿಂತ ಭಿನ್ನವಾಗುವುದು ಈ ದೃಷ್ಟಿಕೋನದಲ್ಲಿಯೇ. ಸಾಹಿತ್ಯವನ್ನು ತಮ್ಮ ಜೀವನದ ಲೌಕಿಕ-ಪಾರಮಾರ್ಥಿಕ ತೃಷೆಯನ್ನು ಹಿಂಗಿಸಿಕೊಳ್ಳಲು ಬಳಸಿದರು. ಇದು ಅದೆಷ್ಟು ಜನರಿಗೆ ಲಭ್ಯವಾಗುವುದೋ. ಈ ಲೌಕಿಕ-ಪಾರಮಾರ್ಥಿಕ ಬೆಸುಗೆ ಅವರನ್ನು ಬದುಕಿನಿಂದ, ಭವದಿಂದ ವಿಮುಖರಾಗದಂತೆ ತಡೆಯಿತು. ಈ ಅಷ್ಟಕವು ತುಂಬಾ ಸರಳವಾದ, ಸುಲಲಿತ ಮತ್ತು ಮೃದು ಭಾಷೆಯಿಂದ ರಚಿತವಾಗಿದೆ. ಅಷ್ಟಕದ ಶಬ್ದಗಳನ್ನು ಪರಿಶೀಲಿಸಿದಾಗ ಅವುಗಳಿಂದಲೇ ಇವರ ಮೃದು ವ್ಯಕ್ತಿತ್ವ ತಿಳಿಯುತ್ತದೆ. ಈ ಎರಡು ನುಡಿಗಳು ಅವರ ಭಾಷಾ ನಮ್ರತೆಗೆ ಉದಾಹರಣೆಗಳು :

"ಕರೆದೆತ್ತಿ ಹಾಲನಿಡುವಾ ತಾಯಿ ನೀ ಗುರುವೆ

ಹೊರಗೊಳಗು ಜ್ಞಾನವಿಡುವಾ ತಂದೆ ಜಂಗಮವೆ

ಪರಮಪದಕಾರಕಾಷ್ಟಾವರಣ ಮೂರುತಿಯೆ

ಶರಣೆಂದು ತೊಡಿಸುವೆವು ತವಪದಕೆ ಪಾದುಕೆಯ"

ಇದೇ ದಾಟಿಯಲ್ಲಿ 'ಶ್ರೀ ಮುರಗೋಡ ಶಿವಯೋಗಿ ಶ್ರೀಪಾದ ಸ್ತೋತ್ರಾಷ್ಟಕ'ವೂ ಮೂಡಿಬಂದಿದೆ.

### ೪.೩.೫.೫. ಶ್ರೀ ಮುರಗೋಡ ಶಿವಯೋಗಿ ಶ್ರೀಪಾದ ಸ್ತೋತ್ರಾಷ್ಟಕ :

ಮುರಗೋಡ ಮಹಾಂತ ಶಿವಯೋಗಿಗಳೆಂದರೆ ಜಂಗಮ ಶಾಸನವೆಂದು ಧಾರವಾಡ ಮೃತ್ಯುಂಜಯ ಮಠದ ಮಹಾಂತಪ್ಪ ಅಪ್ಪಗಳು ಹೇಳಿದ್ದಾರೆ. ಅಪ್ಪಗಳು ಈ ರೀತಿ ಹೇಳುವುದನ್ನು ಪೂರ್ಣ ಮನದಲ್ಲಿ ತಂದು, ಮುರಗೋಡ ಮಹಾಂತಜ್ಜನ ದಿವ್ಯ ಚರಿತ್ರವನ್ನು ಭಕ್ತಿಯಿಂದ ಪಠಿಸಿದವಂಗೆ ಆತನು ಗುರಿವಿನ ಗುರು ಪರಮ ಗುರುವೆಂದು ಕಾಣದಿರಲಾರನು. ಅಂತೆಯೇ ಅಜ್ಜನು ಸದರಿನಲ್ಲಿ ಕುಳಿತಾಗ ದರ್ಶನಕ್ಕಾಗಿ ಬಂದ ಭಕ್ತರೆಲ್ಲರೂ ಆತನ ಪಾದುಕೆಗಳನ್ನು ಮುಟ್ಟಿ , ತಲೆಯ ಮೇಲೆ ಹೊತ್ತು ತಾವು ಧನ್ಯರೆನ್ನುತ್ತ ಆತನನ್ನು ಸ್ತುತಿಸುವುದು ಸಹಜವಾಗಿದ್ದಿತು. ಇದನ್ನು ನೆನೆದು 'ಗುರುಪಾದವೆನ್ನ ಮಸ್ತಕದಿ' ಎಂಬ ಕವನ ಮಾಲೆಯನ್ನು ಹೆಣೆದು ಹಾಡಲಾಗಿದೆ.

"ಎನ್ನ ಮಸ್ತಕದಿ ರಾಜಿಪುದು ಶ್ರೀ ಗುರುಪಾದ

ಚೆನ್ನ ಮುರಗೋಡ ಶಿವಯೋಗೀಶ ಗುರುಪಾದ"

ಈ ಅಷ್ಟಕವು ತುಂಬಾ ಸರಳ, ಸುಲಲಿತ ಮತ್ತು ಮೃದು ಭಾಷೆಯಿಂದ ಕೂಡಿದೆ. ಈ ಅಷ್ಟಕಗಳಲ್ಲಿ ಅವರ ಮೃದು ವ್ಯಕ್ತಿತ್ವ ಅಭಿವ್ಯಕ್ತಿಗೊಳ್ಳುತ್ತಿದೆ. ಇಲ್ಲಿಯೂ ಆದಿ-ಅಂತ್ಯ ಪ್ರಾಸಗಳು, ಅಷ್ಟಕದ ಗುಣ ಲಕ್ಷಣಗಳನ್ನು ನೋಡಬಹುದು. 'ಗುರುಪಾದ' ಎನ್ನುವ ಶಬ್ದದಿಂದ ಎಲ್ಲ ಸಾಲುಗಳು ಅಂತ್ಯಗೊಳ್ಳುವವು. ಅಷ್ಟಕದಲ್ಲಿ ಅಂಗಡಿಯವರ ಇಷ್ಟದೈವವಾದ ಮುರಗೋಡ ಮಹಾಂತ ಶಿವಯೋಗಿಗಳನ್ನು ಸ್ಮರಿಸುವುದಷ್ಟೇ ಅಲ್ಲ ಸಂಪೂರ್ಣ ಶರಣಾಗತಿಯನ್ನು ಸೂಚಿಸುತ್ತದೆ. ಶರಣಾಗತಿ ಭಾವತೀವ್ರತೆಯೆ ಅಷ್ಟಕಗಳ ರಚನೆಗೆ ಮುಖ್ಯ ಕಾರಣವಾಗಿದೆ. ಇನ್ನೊಂದು ಗಮನಿಸಬೇಕಾದ ಅಂಶವೆಂದರೆ ಇವರ ಸಾಹಿತ್ಯದ ಮೂಲ ಆಶಯಗಳಾದ ಸಾಮಾಜಿಕ ಬದಲಾವಣೆಯ ಪ್ರಜ್ಞೆಯನ್ನು ಜಾಗೃತಗೊಳಿಸುವುದು ಮತ್ತು ನೈತಿಕ ಮೌಲ್ಯಗಳನ್ನು ಉಳಿಸಿಕೊಳ್ಳುವುದು, ಲೌಕಿಕ ಪಾರಮಾರ್ಥಿಕ ಬದುಕನ್ನು ಹದಗೊಳಿಸಿ ಬದುಕುವ ಕಲೆಯನ್ನು ಕರಗತ ಮಾಡಿಕೊಳ್ಳಲು ಮಾರ್ಗದರ್ಶಿಯಾಗುವ ಅಂಶಗಳನ್ನು ಅವರ ಪ್ರತಿಯೊಂದು ನುಡಿಗಳಲ್ಲೂ ವ್ಯಾಖ್ಯಾನಿಸಬಹುದು. ಇದಕ್ಕೆ ಈ ಅಷ್ಟಕದ ನುಡಿಗಳು ಉದಾಹರಣೆಯಾಗಿವೆ.

"ತನ್ನರಿವೆ ತನ್ನ ಗುರುವೆಂಬುದೀ ಗುರುಪಾದ

...............................ನೀಡಬಲ್ಲದಿದು ಶ್ರೀಪಾದ"

"ಸಾವಿಂಗೆ ಕೆಡಿಂಗೆ ನಿಲುಕದಿಹ ಗುರುಪಾದ

.........................ತಾನೊದಗಿಪುದು ಗುರುಪಾದ"

### ೪.೩.೫.೬ ಹಾನಗಲ್ಲ ಕುಮಾರ ಶಿವಯೋಗಿ ಸ್ತೋತ್ರಾಷ್ಟಕ :

ಈ ಅಷ್ಟಕ ಅನುಪಲಬ್ಧವಾಗಿದೆ. ಹೀಗಾಗಿ ಅಷ್ಟಕದ ಕುರಿತು ಹೆಚ್ಚಿನ ಮಾಹಿತಿ ಸಿಗುವುದಿಲ್ಲ. ಆದರೆ ಈ ಅಷ್ಟಕವೂ ಕೂಡ ಅಂಗಡಿಯವರ ಜೀವನ ತಿರುವಿಗೆ ಕಾರಣರಾದ ಹಾನಗಲ್ಲ ಕುಮಾರ ಶಿವಯೋಗಿಗಳ ಕುರಿತು ಶರಣಾರ್ಥಿ ಭಾವ ಹಿನ್ನೆಲೆಯಲ್ಲಿ

ರಚಿತವಾಗಿರಬಹುದು. ಅಷ್ಟಕದ ರಚನೆಯನ್ನು ವಿವೇಚಿಸಲು ಅಷ್ಟಕವು ಲಭ್ಯವಿರುವುದಿಲ್ಲವಾದರೂ ಅವರ ಭಕ್ತಿ ನಿವೇದನೆಯನ್ನು ಅರ್ಥೈಸಿಕೊಳ್ಳಬಹುದು.

### ೪.೩.೬ ಷಟ್ಕಗಳು :

ಕ.ಬ.ಅಂಗಡಿಯವರು ಷಟ್ಕಗಳನ್ನು ಕೂಡ ರಚಿಸಿದ್ದಾರೆ. ಅಷ್ಟಕದ ಪ್ರಭೇಧಗಳಲ್ಲಿಯೇ ಗುರುತಿಸಬಹುದಾದ ಷಟ್ಕಗಳು ಆರು ನುಡಿಗಳ ಪದ್ಯ.

### ೪.೩.೬.೧ ಗಣಸಹಸ್ರ ಪ್ರಭಾಪುಂಜ ಮಹಾಂತ ಪ್ರಭು ಸ್ತೋತ್ರಷಟ್ಕಂ :

"ಸರ್ವಾಂಗಲಿಂಗಿಯಾದ ಶಿವಯೋಗಿಯು ಪ್ರತಿದಿನ ಮುಂಜಾನೆ ಲಿಂಗಪೂಜಾ ನಂತರ ತಮ್ಮ ಸದರಿಗೆ ಬಂದು ಪೀಠಾಸನ್ನರಾಗಿ ಗಣಸಹಸ್ರ ನಾಮವನ್ನು ಪಠಿಸಿ, ತನ್ಮಯರಾದಾಗಿನ ದಿವ್ಯ ದೃಶ್ಯವು, ಅವರು ನಿತ್ಯ ಲಿಂಗಪೂಜೆಯನ್ನು ಮಾಡುವಾಗಲೂ ಪುಣ್ಯಾತ್ಮರ ಹೃದಯಕ್ಕೆ ನಿಲುಕದಿರದು. ಆ ದೃಶ್ಯವನ್ನೇ ಸ್ಮರಿಸಿ, ಈ ಷಟ್ಕವನ್ನು ರಚಿಸಿ ಪಠಿಸಲಾಗಿದೆ."[೨೪] ಈ ಷಟ್ಕ ಪಠಣದಿಂದ ತಮ್ಮ ಆತ್ಮವನ್ನು ತೃಪ್ತಿಗೊಳಿಸಲು ಪ್ರತಿಯೊಬ್ಬ ಶಿವಶರಣ-ಶರಣೆಯರಿಗೆ ಅನುವುಂಟು ಕವಿ ಹೇಳುವಂತೆ ಈ ಷಟ್ಕದ ರಚನೆಯ ಉದ್ದೇಶವೂ ಕೂಡ ಭಕ್ತಿ ನಿವೇದನೆಯೇ ಆಗಿದೆ. ಕವಿ ಮುರಗೋಡ ಮಹಾಂತ ಶಿವಯೋಗಿಗಳ ಪರಮಭಕ್ತರು ಮತ್ತು ಅನುಯಾಯಿಗಳು. ಅವರ ದರ್ಶನವೆಂದರೆ ಅವರಿಗೊಂದು ಹಬ್ಬ. ಅವರ ಲಿಂಗಾನುಷ್ಠಾನವನ್ನು ಕಣ್ಣಾರೆ ಕಂಡುಂಡ ಅಂಗಡಿಯವರು ಒಂದು ಸಂದರ್ಭವನ್ನು ಹೀಗೆ ನೆನೆದಿದ್ದಾರೆ. "ಒಂದು ದಿನ ಶಿವಯೋಗಿಗಳು ನಿತ್ಯದ ಲಿಂಗಾನುಷ್ಠಾನಾಂತರ ಸದರಿನೊಳು ಕುಳಿತು, ನಿತ್ಯದಂತೆ ಗಣಸಹಸ್ರ ನಾಮಾವಳಿಯ ಪಠಣವನ್ನು ಮಾಡಿ ಮುಗಿಸಿದ್ದರು. ದರ್ಶನಕ್ಕೆಂದು ಹೋಗಿ ನಮಸ್ಕರಿಸಿ ಕುಳಿತೆ. 'ಇದು ಗಣಸಹಸ್ರ ನಾಮಾವಳಿ ಹಳೆಯ ಪ್ರತಿ, ಇದನ್ನು ಓದತಾ ಓದುತ ಹೊಸದಾಗಿ ಬರೆದು ಪ್ರತಿ ಮಾಡಿ ಕೊಡಿರಪಾ' ಎಂದಾಗ ಕೊಡಲು, ಅಪ್ಪಣೆಯಂತೆರಡು ಪ್ರತಿಗಳನ್ನು ಮಾಡಿ, ನಮಿಸಿ ಸನ್ನಿಧಿಗರ್ಪಿಸಿ ಕುಳಿತೆ. ಒಂದನ್ನು ತೆಗೆದುಕೊಂಡು ಮತ್ತೊಂದನ್ನು ನನಗೆ ಕೊಟ್ಟು ತಾವು ಓದುತ್ತ 'ನೀವೂ ಪಠಣ ಮಾಡಬೇಕ್ರಪ' ಎಂದಪ್ಪಣೆ ಮಾಡಿದರು. ಅದನ್ನು ಶಿರಸಾವಹಿಸಿ, ಪ್ರತಿನಿತ್ಯ ಪಠಸುತ್ತ ೧೦೦೮ ದಿನಗಳ ನಂತರ, ಶ್ರೀಗಳವರನ್ನು ಸವದತ್ತಿಯಲ್ಲಿದ್ದ ಇಂಜನೀಯರನಾದ ನನ್ನ ಜೇಷ್ಠ ಪುತ್ರನ ಮನೆಗೆ ಆಮಂತ್ರಿಸಿ, ಕರೆತಂದು ಸಹಸ್ರ ಬಿಲ್ವದಳಗಳಿಂದ ಪೂಜ್ಯರ ಪಾದ ಪೂಜೆಯನ್ನು ಮಾಡಿ, ಆಶೀರ್ವಾದವನ್ನು ಪಡೆದುದು

ನಮ್ಮ ನೆಮ್ಮದಿಯ ಬಾಳಿಗೆ ನಾಂದಿಯಾದುದನ್ನು ಸ್ಮರಿಸುತ್ತಾರೆ."[೨೫] ಈ ಮಾತುಗಳಿಂದ ಅವರ ಭಕ್ತಿ ಆಸ್ವಾದನೆಯನ್ನು ಅರ್ಥೈಸಿಕೊಳ್ಳಬಹುದು. ಷಟ್ಕದ ಅಡಿ ಟಿಪ್ಪಣಿಯಲ್ಲಿ ಶಬ್ದಗಳ ಅರ್ಥವನ್ನು ನೀಡಿದ್ದಾರೆ. ಪ್ರಥಮಗಣ – ೪೬೫, ರುದ್ರಗಣ ೧೭೧, ಯೋಗಾಚಾರ್ಯ ವೃಷಭಗಣ – ೨೮, ಪುರಾತನರು – ೬೩, ಷೋಡಷರು ತೇರಸರು ದಶಗಣರು – ೩೯, ಅಮರಗಣ – ೨೩೪ ಇವೆಲ್ಲವುಗಳು ಸೇರಿ ಗಣ ಸಹಸ್ರ(೧೦೦೮)ಗಳಾಗುತ್ತವೆ.

### ೪.೩.೬.೨. ಸಹಸ್ರ ಬಿಲ್ವಾರ್ಪಣ ಪಾದ ಪೂಜಾ ಷಟ್ಕ :

ಈ ಅಷ್ಟಕವು ಉಪಲಬ್ಧವಿರುವುದಿಲ್ಲ. ಈ ಅಷ್ಟಕಕ್ಕೆ ಸಂಬಂಧಪಟ್ಟ ಕೆಲವು ಮಾಹಿತಿಗಳೆಂದರೆ ಇದನ್ನು ಕ.ಬ.ಅಂಗಡಿಯವರು ಮುರಗೋಡ ಮಹಾಂತ ಶಿವಯೋಗಿಗಳ ಆಶಿರ್ವಾದದಂತೆ ಅವರಿಗೆ ಗಣಸಹಸ್ರ ನಾಮಾವಳಿಗಳನ್ನು ಕೈಬರಹದಲ್ಲಿ ಎರಡು ಪ್ರತಿಗಳನ್ನು ಬರೆದುಕೊಟ್ಟು ಅವರ ಅಪೇಕ್ಷೆಯಂತೆ ೧೦೦೮ ದಿನಗಳವರೆಗೆ ತಾವೂ ಕೂಡ ಸಹಸ್ರ ನಾಮಾವಳಿಯನ್ನು ಪಠಣ ಮಾಡಿ ತಮ್ಮ ಮನೆಗೆ ಮಹಾಂತರನ್ನು ಬರಮಾಡಿಕೊಂಡು ಅವರ ಪಾದ ಪೂಜೆಯನ್ನು ಮಾಡಿ, ಆ ಸಮಯದಲ್ಲಿ ೧೦೦೮ ಬಿಲ್ವಪತ್ರಿ ದಳಗಳನ್ನು ಸಮರ್ಪಿಸಿ ಪುನಿತ ಭಾವನೆಯನ್ನು ಹೊಂದಿದ ಸಂದರ್ಭದಲ್ಲಿ ರಚಿತವಾಗಿರಬಹುದಾಗಿದೆ. ಈ ಷಟ್ಕವೂ ಕೂಡ ಅವರ ಉತ್ಕಟ ಭಕ್ತಿಯ ನಿದರ್ಶನವಾಗಿದೆ.

### ೪.೩.೬.೩ ಹಸನ ನುಡಿ ಮುತ್ತುಗಳೆಂಬ ಮಂಗಲ ಷಟ್ಕ :

ಈ ಅಷ್ಟಕವು ಉಪಲಬ್ಧವಿರುವುದಿಲ್ಲ. ಈ ಅಷ್ಟಕಕ್ಕೆ ಸಂಬಂಧಪಟ್ಟ ಕೆಲವು ಮಾಹಿತಿಗಳೆಂದರೆ ಮುರಗೋಡ ಮಹಾಂತ ಶಿವಯೋಗಿಗಳ ವ್ಯಕ್ತಿತ್ವ ಬಹಳ ಮೃದುವಾದದ್ದು. ಅವರ ಪ್ರವಚನದಲ್ಲಿ ಸರಳತೆಯಿರುತ್ತಿತ್ತು. ಪ್ರತಿಯೊಂದು ಮಾತುಗಳು ಮುತ್ತುಗಳಂತೆ ಬೆಲೆಯುಳ್ಳವುಗಳೂ ಮತ್ತು ವೀರಶೈವ ತತ್ತ್ವಸಾರವೇ ತುಂಬಿರುವ ಮಾತುಗಳು. ಆದರೆ ಮಹಾಂತರು ತಾವು ಕಂಡುಂಡ ಅನುಭಾವವನ್ನು, ಸೀಮಾತೀತ ಸೈದ್ಧಾಂತವನ್ನು ಮಕ್ಕಳಿಗೆ ಹೇಳುವ ರೀತಿ ಮುದ್ದು ಮುದ್ದಾಗಿತ್ತು. ಅವರ ನುಡಿಗಳನ್ನೆ ಆಯ್ದುಕೊಂಡು ಒಂದೆಡೆ ಸೇರಿಸಿ, ಕವಿ ಮುರಗೋಡ ಮಹಾಂತ ಶಿವಯೋಗಿಗಳ ನಡೆ–ನುಡಿ–ಬೆಡಗನ್ನು ಇಲ್ಲಿ ತೋರಿದ್ದಾರೆ. ಈ ಕೆಲವು ನುಡಿಗಳು :

"ಬನ್ನಿರಪಾ, ಕೂಡ್ರಿ; ಒಳಗೆ ಹೋಗಿ ಮುಖ ತೊಳೆದು ಪ್ರಸಾದ ಕೊಳ್ಳಿರಪಾ"[೨೬]

"ಶರಣರಂದರ ಅವರು ಬೇರೆಯಲ್ಲರಪಾ. ನಮ್ಮ ಹಾಗ ಈ ಪ್ರಪಂಚದಾಗ ಇದ್ದವರ. ಆದರ ನಮ್ಮ ಹಾಗ ಈ ಸಂಸಾರದ ಬೇಗೆ ಅವರಿಗೆ ತಟ್ಟುವದಿಲ್ರಪಾ. ಅದರ ಬೆಸುಗೆಗೆ ಅವರು ಬೆಂದು ಹೋಗೂದಿಲ್ರಪಾ. ಅವರು ಗೆದ್ದ ಕಾಳ್ರಪಾ. ಅದು ಹ್ಯಾಗಂದರ, ಈಗ ಒಬ್ಬರು ಮನ್ಯಾಗ ಕಾಳು ಕುದಿಯಾಕ ಇಟ್ಟಾರಪಾ. ಅವರು ಅವನ್ನ ಎಷ್ಟ ಕುದಿಸಿದರು ಎಲ್ಲಾ ಕಾಳು ಕುದಿಯೂದಿಲ್ರಪಾ. ಅವುಗಳಲ್ಲಿ ಒಂದಾದರೂ ಬೇಯದೆ ಗಟ್ಟಿಯಾಗಿ ಇರತೈತ್ರಪಾ. ಅದಕಾಳ ಗೆದ್ದಕಾಳ್ರಪಾ. ಉಳಿದ ಕಾಳು ಕುದ್ದ ಕಾಳ್ರಪಾ. ಈ ಪ್ರಪಂಚದಾಗ ಗೆದ್ದ ಕಾಳಿನಂತೆ, ಶರಣರಪಾ. ಕುದ್ದ ಕಾಳಿನಂತೆ, ಉಳಿದವರಪಾ."[೨೭]

"ಎಲ್ಲಾರ್ಹಾಂಗ ಶರಣರಿಗೆ ಮನೆ, ಮಠ, ಹೊಲ, ದುಡ್ಡು ದುಗಾಣಿ ಇರೋದಿಲ್ಲೇನ್ರಪಾ ? ಇರತಾವು. ಅವನ್ನೆಲ್ಲ ನಾವು ಮಾಡೇವಿ. ನಾವು ದುಡದೇವಿ. ನಾವು ಗಳಿಸೇವಿ. ಅವು ನನ್ನವು. ಇವು ನನ್ನವು. ಹೀಗ ನಾವು ಅವುಕ ಅಂಟಿಗೊಂಡು ಬಿಟ್ಟಿರತೀವರಪಾ. ಆದರ ಶರಣರು ಅವೆಲ್ಲವು ಶಿವನದು. ಶಿವ ಕಟ್ಟಿಸ್ಯಾನ. ಶಿವ ಮಾಡ್ಯಾನ ಅಂತ ನಿರ್ಲಿಪ್ತರಾಗಿರತಾರೆಪಾ. ಹಾಗಾದರೆ ಶಿವ ಅವನ್ನ ಭೋಗಿಸ್ತಾನೇನರಪ; ಇಲ್ಲ. ಅವನ್ನ ಯಾಕ ನಿರ್ಮಿಸಬೇಕ್ರಪಾ? ಅದೀವಲ್ರಪಾ. ನಾವೆಲ್ಲರೂ ಶಿವನ ಮಕ್ಕಳು. ನಮಗಾಗಿ ಮಾಡ್ಯಾನ್ರಪಾ ತನಗಾಗಿ ಅಲ್ರಪಾ!!"[೨೮] ಈ ನುಡಿ-ಮುತ್ತುಗಳು ಇಲ್ಲಿ ಪ್ರಸ್ತುತವೇಕೆಂದರೆ ಮುರಗೋಡ ಮಹಾಂತ ಶಿವಯೋಗಿಗಳ ಮುಗ್ಧ ವ್ಯಕ್ತಿತ್ವಕ್ಕೆ ಮನಸೋತು ಶರಣಾಗಿದ್ದ ಕ.ಬ.ಅಂಗಡಿಯವರಿಗೇ ಮಹಾಂತರು ಸರ್ವಸ್ವವೂ ಆಗಿದ್ದರು. ಅವರ ಹಾವ-ಭಾವ-ನುಡಿ-ನಿಲುವುಗಳು ಇವರಿಗೆ ಅತೀವ ಪ್ರಭಾವವನ್ನು ಮಾಡಿದ್ದವು. ಇದು ಸಂಪೂರ್ಣ ಶರಣಾಗತಿಯ ಹಂತ. ಈ ಹಂತದಲ್ಲಿದ್ದವರು ಮಾತ್ರ ಅಷ್ಟಕ-ಷಟ್ಕದಂತವುಗಳನ್ನು ಬರೆಯಲು ಸಾಧ್ಯ. ಈ ಅಷ್ಟಕ ಶ್ರೀಗಳಲ್ಲಿಯ ತನ್ಮಯತೆ ಮತ್ತು ಶರಣಾರ್ಥಿ ಭಾವವನ್ನು ಸೂಚಿಸುತ್ತದೆ. ಆನಂತರ ಈ ರೀತಿಯ ಪ್ರಯೋಗಗಳನ್ನು ಅನ್ಯ ಲೇಖಕರೂ ಮಾಡಿದ್ದಾರೆ. ಈ ರೀತಿಯ ಮಹಾಂತರ ನುಡಿಯ ಬೆಡಗನ್ನು ಅಂಗಡಿಯವರು ರಚಿಸಿದ 'ಶ್ರೀ ಮುರಗೋಡ ಮಹಾಂತ ಶಿವಯೋಗಿಗಳ ನಡೆ-ನುಡಿ-ಬೆಡಗಿನ ಮಾಲೆ'ಯಲ್ಲಿ ಹೆಚ್ಚು ಹೆಚ್ಚು ನೋಡಲು ಸಿಗುತ್ತವೆ.

### ೪.೩.೭ ನವಕಗಳು :

ನವಕ ಎಂಬುದು ಒಂಭತ್ತು ನುಡಿಗಳುಳ್ಳ ಪದ್ಯ ರಚನಾಶೈಲಿ. ಇವುಗಳನ್ನೂ ಸಹ ಭಕ್ತಿ ನಿವೇದನೆಯ ಸಾಧನಗಳಾಗಿ ಬಳಸಿಕೊಳ್ಳಲಾಗಿದೆ. ಈ ದಿನಗಳಲ್ಲಿಯೂ ಕೂಡ




ಬಸವ ಸಂದೇಶ - ಶ್ರೀ ಬಸವೇಶ್ವರ ಅಷ್ಟ ಶತಮಾನೋತ್ಸವ
ಸಮಿತಿ, ಹಾವೇರಿ

ಒಂಭತ್ತು ನುಡಿಗಳನ್ನು ಬಳಸಿ ಕಾವ್ಯ ರಚನೆಯಾಗುತ್ತಿದ್ದರೂ, ಮುಕ್ತವಾದ ಸಾಹಿತ್ಯ ರಚನೆಯ ಕಾರಣದಿಂದ ಆ ಕಾವ್ಯಗಳಿಗೆ ನವಕಗಳೆಂದು ಕರೆಯಲು ಆಗುತ್ತಿಲ್ಲವೆನೋ. ಇವರ ಒಂದೇ ಒಂದು ನವಕ ಮಾಲೆ 'ಬಸವ ಶರಣಾರ್ಥಿ ನವಕ ಮಾಲೆ' ಉಪಲಬ್ಧವಿದೆ. ಕವಿ ಪ್ರತಿದಿನ ತಮ್ಮ ಲಿಂಗಪೂಜಾನುಷ್ಠಾನ ಸಮಯದಲ್ಲಿ ತಮ್ಮ ಕಣ್ಣಿಗೆ ಕಟ್ಟುವ ದೃಶ್ಯವನ್ನು ಈ ನವಕದಲ್ಲಿ ಹಿಡಿದಿಟ್ಟಿದ್ದಾರೆ. ಇದು ಶರಣಾರ್ಥಿ ಭಾವ ಕಂಡುಬರುವುದಕ್ಕಿಂತಲೂ ಅವರ ಸೃಜನಾತ್ಮಕತೆಗೆ ಒಂದು ಉತ್ತಮ ಉದಾಹರಣೆಯಾಗಿ ಕಾಣುತ್ತದೆ. ಹಾವೇರಿಯಲ್ಲಿ ನಡೆದ 'ಶ್ರೀ ಬಸವೇಶ್ವರ ಅಷ್ಟಶತಮಾನೋತ್ಸವ'ದ ಸವಿನೆನಪಿಗಾಗಿ ಪ್ರಕಟಿಸಿದ 'ಬಸವ-ಸಂದೇಶ' ಎನ್ನುವ ಸ್ಮರಣ ಸಂಚಿಕೆಯಲ್ಲಿ ಈ ನವಕ ಮುದ್ರಿತಗೊಂಡಿದೆ.

ಮೊದಲನೆಯ ನುಡಿಯಲ್ಲಿ, ಬೆಳಗಿನಲ್ಲಿ ಎದ್ದು ಪೂಜಾಕೈಂಕರ್ಯಗಳನ್ನು ನಿರ್ವಹಿಸುವ ವಿಧಿ-ವಿಧಾನಗಳನ್ನು, ಅಲ್ಲಿ ಶರಣ ಸಮೂಹವೇ ಅಡಗಿರುವ ದೃಶ್ಯಾವಳಿಯನ್ನು ಕಂಗಳು ಅನುಭವಿಸುತ್ತವೆ ಎನ್ನುವ ಅವರ ಸಮರ್ಪಣಾ ಮನೋಸ್ಥಿತಿಯನ್ನೂ ಕಾಯಕದ, ಆರಂಭಕ್ಕಿಂತಲೂ ಮುನ್ನ ಬಸವಣ್ಣನ ನೆನೆದರೆ ಸಿಗುವ ಆನಂದವನ್ನೂ, ಕಾಲ ಕಾಲಕ್ಕೂ ಬಸವ ತತ್ತ್ವಗಳ ಪ್ರಸ್ತುತತೆಯನ್ನೂ ಈ ನವಕ ಅಭಿವ್ಯಕ್ತಿಸುತ್ತದೆ. ಅವರ ಈ ವಿಚಾರಪರತೆ ಮಡಿವಾಳ ಮಾಚಿದೇವರ ವಚನವನ್ನು ನೆನಪಿಗೆ ತರುತ್ತದೆ.

"ಸುಖವೊಂದು ಕೋಟಿ ಬಂದಲ್ಲಿ ಬಸವಣ್ಣನ ನೆನೆಯುವೆ

ದುಃಖವೊಂದು ಕೋಟಿ ಬಂದಲ್ಲಿ ಬಸವಣ್ಣನ ನೆನೆಯುವೆ"

'ಅಣ್ಣನ ಬೆಳಗಿನ ಪೂಜೆ'ಯನ್ನು ಸ್ಮರಿಸಿ ವಿಭಿನ್ನವಾಗಿ ಬರೆದಿರುವ ಈ ನವಕ ಕ.ಬ.ಅಂಗಡಿಯವರ ಮತ್ತೊಂದು ಭಕ್ತಿ ನಿವೇದನೆಯ ಸಶಕ್ತವಾದ ಮಾಧ್ಯಮವಾಗಿದೆ. ತಾವು ಕಂಡುಂಡ ಅನುಭಾವ ರಸಬುಗ್ಗೆಯನ್ನು ಸಹೃದಯರಿಗೂ ಉಣಬಡಿಸುವ ಅವರ ಉದ್ದೇಶ ಈಡೇರಿದೆ.

"ಶಿವಸಮಯ ಬೆಳಗಿನೊಳು ಗುರುಬಸವ ಶರಣೆಂಬೆ

ಶಿವಶರಣ ಹೃನ್ಮಂದಿರದ ಬೆಳಕು ನೀನೆಂಬೆ"

ಬೆಳಗಿನೊಳು ಬೇಗೆದ್ದು ಮಿಂದು ಮಡಿಯನ್ನುಟ್ಟು

.........................................ನೋಡಯ್ಯ ಕೃಪೆಯಿಟ್ಟು




ಶ್ರೀ ಬಸವೇಶ್ವರ ಭಜನಾ ಮಾಲೆ ಕಿರುಗ್ರಂಥ

## ೪.೩.೮ ಭಜನಾವಳಿಗಳು :

ನಮ್ಮ ಕನ್ನಡ ಪರಂಪರೆಯ ಭಾಗವಾಗಿ ಭಜನೆಗಳು ಇಂದಿಗೂ ಉಳಿದು ಬಂದಿವೆ. ಗ್ರಾಮೀಣ ಪರಿಸರದಲ್ಲಿ ಇಂದಿಗೂ ಭಜನೆಯ ಹಲವು ರೂಪಗಳನ್ನು ನೋಡಬಹುದು. ಅಷ್ಟಕ-ಷಟ್ಕ-ನವಕಗಳಂತೆಯೇ ಭಜನೆಗಳು ಭಕ್ತಿ ನಿವೇದನೆಯ ಸಾಧನಗಳಾಗಿಯೇ ಬಳಕೆಯಾಗಿವೆ. ಆದರೆ ಈ ಭಜನಾವಳಿಗಳ ವಿಶೇಷತೆಯೆನೆಂದರೆ ಅವು ಸಂಗೀತಕ್ಕೆ ಅಳವಡಿಸುವ ತಂತ್ರಗಾರಿಕೆಯನ್ನು ಹೊಂದಿರುತ್ತವೆ. ಭಜನೆಗಳ ರಚನೆಕಾರರಿಗೆ ಸಂಗೀತದ ಜ್ಞಾನ ಅತ್ಯವಶ್ಯಕವಾದುದು. ಸಂಗೀತ ಪ್ರಧಾನವಾದ ಈ ಭಜನೆಗಳು ಸಂಘ-ಸಂಸ್ಥೆ-ಮಠ-ಮಾನ್ಯಗಳ ಆಶ್ರಯದಲ್ಲಿ ಇಂದಿಗೂ ಜೀವಂತವಾಗಿ ಉಳಿದಿವೆ. 'ಬಸವ ಭಜನಾ ಮಾಲೆ' ಎನ್ನುವ ಕೃತಿಯಲ್ಲಿ ಅವರ ಈ ಎಲ್ಲ ಭಜನೆಗಳು ಲಭ್ಯವಾಗುತ್ತವೆ.

ರೈತಾಪಿ ವರ್ಗದ ಜನ ದಿನವೆಲ್ಲ ಕಷ್ಟಪಟ್ಟು ದುಡಿದು ತಮ್ಮ ಮನಸ್ಸಿನ ನೆಮ್ಮದಿಗಾಗಿ ಸಂಜೆಯ ಹೊತ್ತು (ಆಡು ಭಾಷೆಯಲ್ಲಿ ಮೂರುಸಂಜೆಯ ಹೊತ್ತು) ಕಟ್ಟೆ-ಗುಡಿ-ಗುಂಡಾರಗಳಂತಹ ಸಾಮಾಜಿಕ ತಾಣಗಳಲ್ಲಿ ಜನರ ಸಮೂಹದಲ್ಲಿ ಈ ರೀತಿಯ ಭಜನೆಗಳನ್ನು ಹಾಡುವುದು ರೂಢಿ. ಇದು ಮನಸ್ಸಿನ ಜಢವನ್ನು, ದೇಹದ ದಣಿವನ್ನು ತಣಿಸುವ ಪ್ರಕ್ರಿಯೆಯಾಗಿಯೂ ತೋರುತ್ತದೆ. ವೈಜ್ಞಾನಿಕವಾಗಿಯೂ ಸಂಗೀತ-ಸಾಹಿತ್ಯ ಕಲೆಗಳು ಮನುಷ್ಯನ ಅಂತರಂಗ-ಬಹಿರಂಗಗಳ ಶುದ್ಧತೆಗೆ ಸಹಾಯಕಾರಿಯಾದ ಅಂಶಗಳಾಗಿವೆ.

ಈ ದೃಷ್ಟಿಯಿಂದ ಕ.ಬ.ಅಂಗಡಿಯವರು ಭಜನಾವಳಿಗಳನ್ನು ರಚಿಸಿದುದು ತಿಳಿದುಬರುತ್ತದೆ. ಅವುಗಳ ರಾಗಗಳನ್ನು ಅಥವಾ ಧಾಟಿಯನ್ನೂ ಕೂಡ ಅಲ್ಲಿ ಹೇಳಿದ್ದಾರೆ. ಆ ಧಾಟಿಯಲ್ಲಿ ಹಾಡಿದಾಗ ಈ ಭಜನಗೆಗಳ ಸಂವಹನ ಸಾಧ್ಯ. ಭಜನೆಗಳು ದೈವ-ಜೀವಗಳ ನಡುವಿನ ಭಾಷೆಯಾಗಿಯೂ ಗುರುತಿಸಲ್ಪಟ್ಟಿವೆ. ಈ ಭಜನಾವಳಿಗಳ ರಚನೆಯ ಉದ್ದೇಶವನ್ನು ಕವಿ ಹೀಗೆ ಹೇಳಿದ್ದಾರೆ. "ಸುಖ ಶಾಂತಿಗಾಗಿ ಸರ್ವ ಜನರು ಪ್ರಯತ್ನಿಸುತ್ತಾರೆ. ಮತ್ತು ಸುಖದ ಮಾರ್ಗಗಳನ್ನು ಅನೇಕ ರೀತಿಯಿಂದ ತರ್ಕಿಸುತ್ತಾರೆ. ಅಷ್ಟೈಶ್ವರ್ಯದಿಂದ ಸುಖ-ಶಾಂತಿಯು ಲಭಿಸುತ್ತದೆಂದು ಕೆಲವರು, ಧನ-ಕನಕಾದಿ ಪರಿಪೂರ್ಣತೆಯಿಂದೆಂದು ಕೆಲವರು, ಪುತ್ರಪೌತ್ರಾದಿಗಳಿಂದೆಂದು ಕೆಲವರು, ಹೀಗೆ ಭಿನ್ನ ಭಿನ್ನ ಜನರು ಭಿನ್ನ ಭಿನ್ನ ರೀತಿಗಳಿಂದ ಸುಖ-ಶಾಂತಿಗಳ ನೆಲೆಯನ್ನು ಬಗೆಯಲಿಚ್ಛಿಸುವರು. ಸೂಕ್ಷ್ಮ ರೀತಿಯಿಂದ ವಿಚಾರಿಸಿದಲ್ಲಿ, ಎಲ್ಲಬಗೆಯ ಅವರ ಈ ಕಲ್ಪನೆಗಳು

ಯಥಾರ್ಥವಾದುವು; ಏಕೆಂದರೆ ಇವೆಲ್ಲ ಕೇವಲ ಭೌತಿಕ ವಿಚಾರ ಸರಣಿಯೊಳಗಿವೆ. ಭೌತಿಕ ಸಂಪತ್ ಶೋಧಕ ಬುದ್ಧಿಯೂ, ತದನುರೂಪಾನುಕೂಲತೆಗಳೂ, ಮನುಷ್ಯನಿಗೆ ಬೇಕಾದಷ್ಟು ಇದ್ದರೂ ಆತನು ನಿಜಸುಖ-ಶಾಂತಿಯೊಳಗಾಗನು. ಇದು ಅನುಭವದಿಂದ ನಿಜವಾದುದು. ಕ್ಷಣಮಾತ್ರ ಮನಸ್ಸನ್ನು ಇವುಗಳಿಂದ ಬೇರ್ಪಡಿಸಿ, ಪರಮಾತ್ಮನ ಆಗಾಧ ಲೀಲೆಗಳನ್ನೂ ಪರಮಾತ್ಮ ಭಜಕರ ನಿತ್ಯ ಕರ್ತವ್ಯ ಕರ್ಮಗಳನ್ನೂ ಕೃತಜ್ಞತಾ ಬುದ್ಧಿಯಿಂದ ಸ್ಮರಿಸಿ, ತಾಳ ಮೇಳದಿಂದ ಹಾಡಹತ್ತಿದರೆ, ಮನುಷ್ಯನಿಗೆ ಆನಂದ ಲಹರಿಯು ಹೊಳೆಯದಿರಲಾರದು. ಸಂಸಾರ ಧರ್ಮಿಗಳಾದವರು ನಿಜಸುಖ ಶಾಂತಿಲೋಲುಪ್ತರಾಗಬೇಕೆಂಬ ಅಭಿಲಾಷೆಯು ತಮಗಿದ್ದರೆ, ದಿನದ ತುಸುವೇಳೆಯಲ್ಲಿಯಾದರೂ, ಈಶ ಭಜನೆಯಲ್ಲಿ ನಿರತರಾಗಬೇಕೆಂದು ಸಹಜ."[೯] ಎನ್ನುವ ಅವರ ನುಡಿಗಳು ಸುಖ-ಶಾಂತಿಯನ್ನು ಅರಸಿಕೊಂಡು ಹೊರಡುವ ಮನುಷ್ಯನ ಗೊಂದಲ ಗೂಡಾದ ಮನಸ್ಸನ್ನು ತೋರ್ಪಡಿಸುತ್ತವೆ. ಮನದ ಅಂಗಳಲದಲ್ಲಿ ನಿತ್ಯ-ಸತ್ಯವಾಗಿ ಉಳಿಯುವ ಸುಖ-ಶಾಂತಿಗಳು ತನ್ನ ನಮ್ಮಲ್ಲಿಯೇ ಇದ್ದರೂ ಅವುಗಳನ್ನು ಜಗತ್ತಿನ ಸುತ್ತಲೆಲ್ಲ ಹುಡುಕುತ್ತಾನೆ. ಇದು ಆಗಬಾರದು ಎನ್ನುವ ಕವಿ ಅಂತರಂಗವನ್ನು ಶುದ್ಧವಾಗಿಟ್ಟುಕೊಳ್ಳಲು ಭಜನೆಯಂತಹ ಸಾಧನಗಳು ಸಶಕ್ತ ಎಂದು ಹೇಳುತ್ತಾರೆ.

ಬಸವ ಭಜನೆಯಿಂದ ಆನಂದ ಲಹರಿಯು ಸಹಜವಾಗಿ ಉದಯಿಸಿ ತಾದಾತ್ಮ ಬುದ್ಧಿಯಿಂದ ಪರಮಾತ್ಮನಿಗೆ ಆತ್ಮವನ್ನೇ ಸಮರ್ಪಣ ಮಾಡುವ ಹವ್ಯಾಸವು ಮನುಷ್ಯನಿಗೆ ಸುಲಭವಾಗಿ ಪ್ರಾಪ್ತವಾಗುವದು. ಬಸವ ಭಜನಾನಂದಾಸಕ್ತರು ಸಂಸಾರ ಸುಖವನ್ನು ಭೋಗಿಸುತ್ತ ಧರ್ಮಜಾಲವನ್ನು ಸಹಜವಾಗಿ ತರಿಸಬಲ್ಲರು. ತಾಳ ಸಮ್ಮೇಲನದ ಭಜನೆಯಿಂದ ಹರಿದಾಡುವ ಮನವನ್ನು ಸ್ಥಿರಪಡಿಸಿಕೊಳ್ಳಬಹುದು.ಇಂಪಾದ ಭಜನೆಯ ಸೌಖ್ಯಕ್ಕೆ ಕರ್ಣಗಳು ಏಳಿಸಿ ರಾಗದ್ವೇಷಾದಿಗಳನ್ನೂ ದೂರವಿರಿಸಬಹುದು. "ಬಸವನ ಚರಿತೆಯು ಲೋಕಕ್ಕೆ ಆದರ್ಶೀಭೂತವಾದುದರಿಂದ, ಆತನ ಗುಣಾನುವಾದನವ ಮಾಡಲೆಳಿಸಿ ಈ 'ಭಜನಾ ಮಾಲೆಯು' ರಚಿಸಿದ್ದಾಗಿದೆ"[೨೦] ಈ ಎಲ್ಲ ಭಜನಾ ಪದ್ಯಗಳ ಕೊನೆಯಲ್ಲಿ ವಿಶೇಷ ಸೂಚನೆಯನ್ನು ಕ.ಬ.ಅಂಗಡಿಯವರು ನೀಡಿದ್ದಾರೆ. "ಶ್ರೀ ಬಸವೇಶ್ವರ ಭಜನಾ ಪದ್ಯಗಳ ಧಾಟಿಗಳನ್ನು, ರಾಮದುರ್ಗ ಸಂಸ್ಥಾನ ಮೆಣಸಗಿ ಗ್ರಾಮದ 'ಶ್ರೀ ಬಸವೇಶ್ವರ ಭಜನಾ ಸಂಘದವರಿಂದಲೂ, ಶ್ರೀಯುತ ವೀರಪ್ಪ ಅಣ್ಣ ಉಮಚಗಿ ಶಹಪೂರಪೇಟ ಗದಗ ಇವರಿಂದಲೂ ತಿಳಿದುಕೊಳ್ಳತಕ್ಕದ್ದು."[೨೧] ಈ ಸೂಚನೆ ಕ.ಬ.ಅಂಗಡಿಯವರ ಭಜನೆ, ಪದ್ಯಗಳನ್ನು ಮೆಣಸಗಿಯಲ್ಲಿ ಮತ್ತು ಗದುಗಿನಲ್ಲಿ ಹಲವಾರು ಭಜನಾ ಸಂಘಗಳೂ ಹಾಡುತ್ತಿದ್ದವೆಂಬುದಕ್ಕೆ ಸಾಕ್ಷಿಯಾಗಿದೆ. ಈ ಎಲ್ಲ ಭಜನೆಗಳೂ ಬಸವಣ್ಣನವರ ವ್ಯಕ್ತಿ ವೈಶಿಷ್ಟ್ಯಗಳನ್ನು ಕೊಂಡಾಡುವುದೇ ಆಗಿವೆ. ಉದಾಹರಣೆಗೆ

"ಭಜನೆಯ ಮಾಡುವ ಬನ್ನಿ ।

ಬಸವನ । ಭಜನೆಯ ಮಾಡುವ ಬನ್ನಿ ॥

ರಸೆಯೊಳು ನಿಜಸುಖ । ದಿಶೆಯನು ತೋರುವ ।

ಬಸವ ಪುನಿತನ । ನೊಸೆಯುತೆ । ಸರ್ವರು..........." [ಪಲ್ಲವಿ]

'ಪಾಲಿಸು ನಮ್ಮನು ಬಸವೇಶ', 'ಪಾಡಿರಿ ಪಾಡಿರಿ ನಾಮವನು' , 'ಭ್ರಾಂತಿಪೋಗದೆ ಬಸವ', 'ಮಂತ್ರವ ಜಪಿಸೋ ಮನುಜ', 'ಜ್ಞಾನಿಯು ನೀನೋ ಬಸವ', 'ಶೈವಾನಂದದಿ ರಕ್ತನೋ', 'ಚಿರಸುಖ ಕಾರಣ ಶ್ರೀಮಾನ್ ಬಸವ', 'ಪಾಹಿ ಬಸವನೆ ಪಾಹಿ ಬಸವನೆ', 'ಕಾಯಬಾರದೆ ಬಸವ ನೀ', 'ಬಸವ ಬಸವ ಬಸವ ಬಸವ ಭವಹರನೆ', 'ಪಾಲಿಸು ಬಸವ ಕೋರುವೆ ಪ್ರೇಮವ', 'ಬಸವೇಶನ ಭಜಿಸೋ ಹೇ ಮನವೇ' ಎನ್ನುವ ಈ ಭಜನಾವಳಿಗಳು ಬೇರೆ ಬೇರೆಯ ರಾಗ, ತಾಳಗಳನ್ನು ಬಳಸಿ ರಚಿಸಿರುವ ಈ ಭಜನಾವಳಿಗಳು ಬಸವಣ್ಣನವರ ಪಾರಿಭಾಷಿಕ ನೆಲೆಯನ್ನು ಗುರುತಿಸುತ್ತವೆ.

### ೪.೩.೯.ಸ್ತೋತ್ರ-ಸ್ವಾಗತ ಗೀತೆಗಳು ;

೧) ಗೋಡಚಿ ವೀರಭದ್ರ ಸ್ತೋತ್ರ ಮತ್ತು ಸ್ವಾಗತ ಗೀತೆ

೨) ಜಗದನ್ನದಾನಿ ಮೃಡಗಿರಿ ಜಗದ್ಗುರು ಸ್ತೋತ್ರ

೩) ನಾಮಾವಳಿತ್ರಯ

೪) ಜಯಬಸವ ನಾಮಾವಳಿ

## ೪.೪ ಕಿರು ಗ್ರಂಥಗಳು :

ಹಲವಾರು ಸಂಘ-ಸಂಸ್ಥೆಗಳನ್ನು ಹುಟ್ಟು ಹಾಕುತ್ತ, ಸಮಾನ ಮನಸ್ಕರನ್ನು ಮತ್ತು ಸಮಾನ ವಯಸ್ಕರನ್ನು ಒಂದು ವೇದಿಕೆಯಲ್ಲಿ ತಂದು, ಅವರಲ್ಲಿಯ ಶಕ್ತಿಯನ್ನು, ಯುಕ್ತಿಯನ್ನು ಕ್ರೂಢಿಕರಿಸಿ ಆ ಮೂಲಕ ಸಾಮಾಜಿಕ-ಧಾರ್ಮಿಕ-ಶೈಕ್ಷಣಿಕ ಬದಲಾವಣೆಗೆ ಸತತವಾಗಿ ಕ.ಬ.ಅಂಗಡಿಯವರು ಶ್ರಮಿಸಿದರು. ಈ ಎಲ್ಲ ಬದಲಾವಣೆಗಳಿಗೆ ಸಾಹಿತ್ಯವನ್ನು ಮಾಧ್ಯಮವನ್ನಾಗಿಸಿಕೊಂಡು ಸಾಹಿತ್ಯದ ಹಲವಾರು ಪ್ರಬೇಧಗಳಲ್ಲಿ ಪ್ರಯೋಗಗಳನ್ನು ಮಾಡಿದರು. ಈ ಹಂತದಲ್ಲಿ ಅವರು ಬರೆದ ಹಲವಾರು ಕಿರುಗ್ರಂಥಗಳೂ ಬಹು ಮುಖ್ಯ

ಪಾತ್ರವನ್ನು ವಹಿಸಿವೆ. ತಾವಂದುಕೊಂಡ ಮತ್ತು ತಾವು ಕಂಡುಕೊಂಡ ಜೀವನ ಸತ್ಯಗಳನ್ನು ಮಿತ್ಯಗಳನ್ನು ಗದ್ಯದಲ್ಲೂ ಮತ್ತು ಪದ್ಯದಲ್ಲೂ ಅಭಿವ್ಯಕ್ತಿಸಲು ಕಿರುಗ್ರಂಥಗಳ ಸಹಾಯವನ್ನು ಪಡೆದುಕೊಂಡರು. ಇವುಗಳು ತಮ್ಮ ಗಾತ್ರದಲ್ಲಿ ಚಿಕ್ಕವಾದರೂ ಅವುಗಳ ವಸ್ತುವಿನಲ್ಲಿ, ವಿಷಯ ಪ್ರಖರತೆಯನ್ನು ಕಾಣಬಹುದು.

ಸ್ವಾತಂತ್ರ್ಯಾನಂತರದ ಮತ್ತು ಕನ್ನಡದಲ್ಲಿ ನವೋದಯ ಸಾಹಿತ್ಯ ಕಾಲಿಡುವ ಸಮಯದಲ್ಲಿ ಅಂದಿನ ಕನ್ನಡದ ನೂರಾರು ಸಣ್ಣ-ಪುಟ್ಟ ಸಂಗತಿಗಳನ್ನು ಮನಸ್ಸಿನಲ್ಲಿ ಮೆಲುಕು ಹಾಕುವ, ಅವುಗಳ ಸವಿಯನ್ನು ಪುನರ್‌ಆಸ್ವಾಧಿಸುವ ಉದ್ದೇಶದೊಂದಿಗೆ ಕನ್ನಡದಲ್ಲಿ ಮೂಡಿಬಂದ ಭಾವಪ್ರಭೇದ 'ಕಿರುಗ್ರಂಥ'. ಓದುಗರಿಗೆ ಹೆಚ್ಚಿನ ವಿಷಯವ್ಯಾಪ್ತಿಯನ್ನು ಕಡಿಮೆ ಅವಧಿಯಲ್ಲಿ ನೀಡುವುದು ಕೂಡ ಈ ಕಿರುಗ್ರಂಥಗಳ ಉದ್ದೇಶವಾಗಿದೆ. ಕಿರುಗ್ರಂಥಗಳ ಉದ್ದೇಶದಂತೆ ಕ.ಬ.ಅಂಗಡಿಯವರ ರಚನೆಗಳಲ್ಲಿ ಅವರ ಅನುಭಾವದ ಭಾಂಡಾರವೇ ಅಲ್ಲಿದೆ. ಅವರು ವಿಚಾರಿಸುವ, ವಿಮರ್ಶಿಸುವ, ತರ್ಕಿಸುವ ಪ್ರತಿಯೊಂದು ವಿಚಾರಗಳನ್ನು ಕಿರು ಗ್ರಂಥಗಳಲ್ಲಿ ಬರೆದಿದ್ದಾರೆ. ಅಲ್ಲಿ ಆಧ್ಯಾತ್ಮ, ಸಂಸಾರ, ಶಿಕ್ಷಣ, ಸಮಾಜ, ವಿಜ್ಞಾನ, ರಾಜಕೀಯ, ಸಮಾಜದ ಪ್ರತಿಯೊಂದು ವರ್ಗ, ಅವರ ಹಿತ-ಚಿಂತನೆಗಳು ಹೀಗೆ ಅವರು ಬಹತೇಕ ಎಲ್ಲ ಕ್ಷೇತ್ರಗಳಲ್ಲಿ ಜ್ಞಾನಾರ್ಜನೆಯನ್ನು ಮಾಡಿದವರಾಗಿದ್ದರು ಎಂಬುದು ಅವರ ಈ ಕಿರುಗ್ರಂಥಗಳಿಂದ ತಿಳಿದುಬರುತ್ತದೆ. ಹೊರ ನೋಟದಲ್ಲಿ ಒಬ್ಬ ಪಾರಮಾರ್ಥಿಕ ಜೀವಿಯಾಗಿ ಕಂಡರೂ ಅವರ ಲೌಕಿಕ ವ್ಯಕ್ತಿತ್ವ ಕೂಡ ಇಲ್ಲಿ ಅನಾವರಣವಾಗಿದೆ. ಅವರು ಬರೆದಿರುವ ಕಿರುಗ್ರಂಥಗಳ ಸಂಖ್ಯೆ ಇಷ್ಟೇ ಎಂದು ಹೇಳಲಾಗದು.

### ೪.೪.೧ ಅನುಭವದೂಟ :

ಇಲ್ಲಿ ಇವರ ವಿಚಾರ ಲಹರಿಯನ್ನು ಒಮ್ಮೆ ಗಮನಿಸಬೇಕು. ಈ ಕೃತಿಗಳು ಅವರು ಕೃತಿ ರಚನೆಗೆ ತೊಡಗಿಸಿಕೊಂಡ ಪ್ರಾರಂಭದ ಕೃತಿಗಳಾಗಿವೆ. ಬಸವಣ್ಣನವರ ಅಪಾರವಾದ ಪ್ರಭಾವವನ್ನು ಮತ್ತು ತಮ್ಮ ತಂದೆಯವರ ಬಗೆಗೆ ಅಪಾರ ಪ್ರೀತಿ ಮತ್ತು ಆರಾಧನಾ ಭಾವನೆ ಅವರಲ್ಲಿ ಕಾಣುತ್ತದೆ. ಈ ವಿಷಯಗಳು ಮುಂದೆ ಅವರ ಬದುಕಿನ ಕಟ್ಟಡವನ್ನು ಗಟ್ಟಿಯಾಗಿ ನಿರ್ಮಾಣ ಮಾಡುವಲ್ಲಿ ಸಹಕಾರಿಯಾಗಿವೆ.

ಕೃತಿಯನ್ನು ೧೯೫೪ರಲ್ಲಿ ಬರೆದಿದ್ದಾರೆ. ಒಂಭತ್ತು ಹಂತಗಳನ್ನು ಮಾಡಿಕೊಂಡು ವಿಷಯವನ್ನು ಅನುಕ್ರಮವಾಗಿ ಉಣಬಡಿಸಿದ್ದಾರೆ. 'ಅರ್ಪಣ'ದಲ್ಲಿ ಬಸವಣ್ಣನವರ ವಚನವೊಂದನ್ನು ಸ್ಮರಿಸಿ, ಬಡತನದಲ್ಲಿ ತಮಗೆ ಕೊರತೆಯಾದರೂ ತಮ್ಮ ಮಕ್ಕಳಿಗೆ ಯಾವ ಕೊರತೆ ಇಲ್ಲದಂತೆ ಸಾಕಿ ಬೆಳೆಸಿ ತಾವು ದುಡಿದ ಹಿರಿಯ ಪಾಲನ್ನು ಮಕ್ಕಳ ಏಳ್ಗೆಗಾಗಿಯೇ ಮೀಸಲಿಟ್ಟ, ನೆರೆ-ಹೊರೆ, ಊರು-ಜನರಿಗೆಲ್ಲ ಬಂಧುವಾಗಿ, ಗೆಳೆಯರಾಗಿ ಬಸವಣ್ಣನವರ ತತ್ತ್ವಗಳನ್ನು ಅನುಷ್ಠಾನಕ್ಕೆ ತಂದುಕೊಂಡ ತಮ್ಮ ತಂದೆಯವರನ್ನು ಸ್ಮರಿಸಿದ್ದಾರೆ. ಈ ತಮ್ಮ ಅನುಭವಗಳೇ ಹಾಡುಗಬ್ಬ<sup>ಿ</sup>ಗಳೆಂದು ಕರೆದಿದ್ದಾರೆ.

ಸಾಮಾಜಿಕ ಚಿಂತನೆಯಲ್ಲಿ ಧಾರ್ಮಿಕ ಮೌಲ್ಯಗಳನ್ನು ಸರಿಯಾಗಿ ಅರ್ಥೈಸಿಕೊಂಡರೆ ಅದೊಂದು ಅನುಭವದೂಟವೇ ಸರಿ. ಶಿಕ್ಷಣ ಇಲಾಖೆಯಲ್ಲಿ ತಮ್ಮ ವೃತ್ತಿಯನ್ನು ನಿರ್ವಹಿಸುತ್ತಿದ್ದ ಕ.ಬ.ಅಂಗಡಿಯವರ ಚಿಂತನೆಗಳು ಇಂದಿನ ಕೆಲವು ಶೈಕ್ಷಣಿಕ ನ್ಯೂನ್ಯತೆಗಳನ್ನು ಸರಿಪಡಿಸುವಲ್ಲಿ ಸಹಕಾರಿಯಾಗಿವೆ. ಬಸವಣ್ಣನವರ ಗಾಢವಾದ ಪ್ರಭಾವಕ್ಕೆ ಒಳಗಾಗಿರುವ ಇವರು ಬಸವಾದಿ ಶಿವಶರಣರ ಜೀವನದ ಕಲೆಯನ್ನು ಅರ್ಥೈಸಿಕೊಂಡು ಅದನ್ನು ತನ್ನದೇ ಆದ ರೀತಿಯಲ್ಲಿ ಸಮಾಜಕ್ಕೆ ನೀಡುವ ಕೆಲಸ ಈ ಕೃತಿಗಳಿಂದ ಕಾಣಸಿಗುತ್ತದೆ. ಲಿಂಗವಂತರ ತತ್ತ್ವ ಸಂಸ್ಕೃತಿಗಳನ್ನು ಹೃದಯಪೂರ್ವಕವಾಗಿ ಹೆಣೆದದ್ದನ್ನು ಗುರುತಿಸಬಹುದು. ಪ್ರತಿಯೊಂದು ಕೃತಿಯು ಲೌಕಿಕವಾಗಿದ್ದರೂ ಅದರೊಳಗೆ ಆಧ್ಯಾತ್ಮಕತೆಯು ತುಂಬಿಕೊಂಡು ಜೀವನೋತ್ಸಾಹವನ್ನು ಇಮ್ಮಡಿಸುತ್ತದೆ. ಇಲ್ಲಿ ಲೇಖಕರ ಬುದ್ಧಿ-ಕೌಶಲ್ಯವನ್ನು ಪರಿಚಯ ಮಾಡಿಕೊಡುತ್ತವೆ. "ಬರೆವೆನಿಲ್ಲಿ ಲೌಕಿಕಮನಲ್ಲಿ ಜಿನಾಗಮಮಂ" ಎನ್ನುವ ಆದಿಕವಿ ಪಂಪನ ಚಿಂತನೆ ಲೌಕಿಕ ಮತ್ತು ಪಾರಮಾರ್ಥಿಕವಾಗಿರುವುದು ಕಂಡು ಬರುವ ಸತ್ಯ. ಈ ಸತ್ಯದ ಸ್ತುತ್ಯತೆಯನ್ನು ಈ ಕಾಲದವರೆಗೂ ಉಳಿಸಿಕೊಂಡು ಬಂದ ಅವೆರಡನ್ನು ಒಂದೇ ಕೃತಿಯಡಿ ಹೆಣೆದ ಶ್ರೇಯ ಅನುಭದೂಟದಲ್ಲಿದೆ.

'ಧ್ವಜವಂದನ' ಎಂಬ ಪದ್ಯದಲ್ಲಿ, "ಕ್ರಾಂತಿಯ ಕಹಳೆಯ ಧ್ವನಿಯಿಂದ ಮುಸುಕಿದ ಈ ಪ್ರಸಂಗದಲ್ಲಿ ಪ್ರತಿಯೊಂದು ಜನಾಂಗವೂ ತಮ್ಮದಾದೊಂದು ಧ್ವಜದ ಅಡಿಯಲ್ಲಿ ಸೇರಿ, ತಮ್ಮ ಸಂಸ್ಕೃತಿ ಸಾಹಿತ್ಯಾದಿಗಳನ್ನು ಕಾಯ್ದುಳಿಸಿ, ಬೆಳೆಯಿಸಿ, ಬಾಳಿನ ಸೊಗಸನ್ನು ಹೊಂದಿ ನಲಿಯಲಪೇಕ್ಷಿಸುವಂತೆ, ವೀರಶೈವರಾದರೂ ತಮ್ಮದಾದ ಷಟ್ಸ್ಥಲ ಧ್ವಜದಡಿಯಲ್ಲಿ ಸೇರಿ ತಮ್ಮತನವನ್ನು ಉಳಿಸಿ, ಬೆಳೆಯಿಸಿ ಬಾಳಿನ ಬೆಳಕನ್ನು ಹೊಂದಲು, ಒತ್ತರದಿಂದಲ್ಲವಾದರೂ, ಮಂದವಾಗಿ ಮುಂದು ಬರುತ್ತಿರುವರು. ಅವರ ಈ ಮಾಂದ್ಯವು ತೀವ್ರವಾಗಿ, ಮಹತ್ತಾಗಿ

ಎಲ್ಲರ ಹೃದಯದಲ್ಲಿ ಸೇರಿ ಬೆಳೆದು ಬಾಳಲೆಂಬಾಶೆಯಿಂದ, ಷಟ್ಸ್ಥಲ ಧ್ವಜ ಸಂದೇಶವನ್ನು ಬಾಲ-ಬಾಲಿಕೆಯರ ಗೀತೆಯಲ್ಲಿರಿಸಿದುದಾಗಿದೆ."[೩೩] ಅವರ ಈ ಮಾತುಗಳು ಭಾರತೀಯತೆಯನ್ನು ಗೌರವಿಸುವವರು ತಮ್ಮ ಪ್ರಾದೇಶಿಕತೆ, ಸಂಸ್ಕೃತಿ, ರೀತಿ, ನೀತಿಗಳನ್ನು ಗಟ್ಟಿಗೊಳಿಸಿಕೊಳ್ಳಬೇಕೆಂಬುದುದಾಗಿದೆ. ಸಮಕಾಲೀನ ಕವಿಯಾದ ಕನ್ನಡಕ್ಕೆ ದೀಪವನ್ನು ಹಚ್ಚಿ ಬೆಳಗಿಸಿದ ಡಾ. ಕಿ.ಎಸ್.ಕರ್ಕಿಯವರ

"ಈ ನಾಡಿನಲಿ ನಾನು ಮೂಡಿ ಬಂದುದೆ ಸೊಗಸು

ಭಾರತವ ಪ್ರೀತಿಸುವ ಭಾಗ್ಯವೆನ್ನದಾಯ್ತು"

ಎಂಬುದು ಕವಿಗಳಿಬ್ಬರ ಆಶಯಗಳು ಸಮವಾಗಿರುವುದು ಮತ್ತು ಸಕಾಲಿಕವಾಗಿರುವುದು ಕಂಡುಬರುವುದು. ದೇಶದಲ್ಲಿ ಬೇರೆ ಬೇರೆ ಸಮಾಜ-ಧರ್ಮಗಳು ತಮ್ಮ ಒಗ್ಗಟ್ಟನ್ನು ಪ್ರದರ್ಶಿಸುತ್ತಿದ್ದ ಕಾಲದಲ್ಲಿ ರೈತಾಪಿ ಕುಟುಂಬ ವರ್ಗವೇ ಹೆಚ್ಚಾಗಿರುವಂತಹ ಮತ್ತು ಶಿಕ್ಷಣದಲ್ಲಿ ಹಿಂದುಳಿದ ವರ್ಗವಾದ ಲಿಂಗಾಯತರು ಸಂಘಟನಾತ್ಮಕವಾಗಿ ಬಲಗೊಳ್ಳುವುದು ತೀರ ತಡವಾಯಿತು. ತಡವಾದರೂ ಸಹಿತ ತಾಳ್ಮೆ ಮತ್ತು ಮುಂದಾಲೋಚನೆಯ ದಾರಿಯಿಂದ ಅದನ್ನು ಸಾಧಿಸಿಕೊಳ್ಳೋಣ ಎಂಬುದು ಅವರ ನಿಲುವಾಗಿದೆ. ಬಹುಶಃ ಇವತ್ತಿಗೆ ಅವರ ಈ ನಿಲುವು ಸಾಕಷ್ಟು ಸಾಕಾರವೂಗೊಂಡಿದೆ. ಜಗತ್ತಿನಲ್ಲಿ ಶೇ. ೮೭ % ರಷ್ಟು ಶಿಕ್ಷಣವೆತ್ತ ಸಮಾಜ ಲಿಂಗಾಯತ- ವೀರಶೈವ ಸಮಾಜ. ಈ ವಿಷಯವನ್ನು ಗಮನಿಸಿದಾಗ ಸರಿಸುಮಾರು ೧೦೦-೧೫೦ ವರ್ಷಗಳಿಂದ ನಿರಂತರವಾದ ಮತ್ತು ಅಗಣಿತವಾದ ಸೇವೆಯನ್ನು ಸಮಾಜೋನ್ನತಿಗಾಗಿ ಸಲ್ಲಿಸಿದ ಹಲವಾರು ಮಹಿಮರು ನೆನಪಿಗೆ ಬರುತ್ತಾರೆ.

"ವಂದಿಸಲು ಬನ್ನೀಗ ಮಂಗಲದ ಶ್ರೀಧ್ವಜಕೆ

ತಂದಿರ್ದ ಸಂದೇಶವೀಯುವಾ ಶ್ರೀಧ್ವಜಕೆ ॥"

"ಭಾರತದ ಸಂಸ್ಕೃತಿಯ ಸಾರವನು ಬೀರುತ್ತ

.............................. ಸೇರುವಾ ನಲಿಯುತ್ತ"

ಈ ಧ್ವಜವು ಎಲ್ಲರೂ ಒಂದೆಂಬ, ಸಮಾನರೆಂಬ ತಿಳುವಳಿಕೆಯನ್ನು ನೀಡುತ್ತದೆ. ಗುರು-ಲಿಂಗ-ಜಂಗಮರು ಸರಿಸಮಾನರು, ಎಲ್ಲರೂ ಲಿಂಗಧಾರಿಗಳು ಅಂದ ಮೇಲೆ ಅಲ್ಲಿ ಕುಲಬೇಧವಿಲ್ಲ, ಒಡೆಯರು-ಆಳುಗಳನ್ನು ಒಂದಾಗಿ ನಿಲ್ಲಿಸುವುದು ಲಿಂಗತತ್ವ

ಒಡಹುಟ್ಟಿದವರಂತೆ ಎಲ್ಲರನ್ನೂ ಕೂಡಿಸಿ ದೇಶದ ಕೌಟುಂಬಿಕ ವ್ಯವಸ್ಥೆಯನ್ನು ಬಲಪಡಿಸುತ್ತದೆ. ಷಟ್ಸ್ಥಲ ಧ್ವಜದ ಪರಿಕಲ್ಪನೆಯ ಚಿತ್ರಣವನ್ನು ಅವರ ಸಂಪಾದಿತ ಕೃತಿ 'ಧರ್ಮಾಚಾರ' ದ ಮುಖಪುಟದಲ್ಲಿ ನೋಡಬಹುದಾಗಿದೆ. ಆ ಚಿತ್ರದ ಪರಿಕಲ್ಪನೆಯು ಇವರ ಆಳವಾದ ವೀರಶೈವ ತತ್ತ್ವಗಳ ತಿಳುವಳಿಕೆಯನ್ನು ಮನನ ಮಾಡಿಸುತ್ತದೆ.

ಈ ಕೃತಿಯ ಎರಡನೆಯ ಪದ್ಯ 'ಪಾದವ ಹಾಕೋ ಬಸವ' "ವಿಶ್ವಪ್ರೇಮಿಯಾದ ಬಸವಣ್ಣನವರು ಕನ್ನಡಿಗರ ಹೃದಯ ಸ್ವಾಮಿಯು. ಕಲ್ಯಾಣದಲ್ಲಿ ಸ್ಥಾಪಿಸಿದ ಅನುಭವ ಮಂಟಪದ ಕಾರಣದಿಂದ ಭಾರತೀಯರ ಭಾಗ್ಯದ ಸಂಸ್ಕೃತಿಯ ಪಡಿಯಚ್ಚೂ ಬಸವಣ್ಣನವರಾಗಿದ್ದರು. ಅಂದಿನ ಅವರ ವೈಚಾರಿಕತೆ ಇಂದಿಗೂ ಎಲ್ಲರಿಗೆ ಕಂಪಾಗಿ ಇಂಪಾಗಿ ಪರಿಣಮಿಸುವದು. ಆದುದರಿಂದ ಆ ಮಹಾತ್ಮರ ನೆನಹು ಭಾರತೀಯರ ವಿಶೇಷತಃ ಕನ್ನಡಿಗರ ಪ್ರತಿದಿನದ ಜಪವಾಗಿದೆ. ಆದಕಾರಣ ಪ್ರತಿಯೊಬ್ಬ ಕನ್ನಡಿಗನು, ಈ ಕ್ರಾಂತಿಯುಗದಲ್ಲಿ, ಮಹಾನುಭಾವನ ಬರವಿಗಾಗಿ ಭಕ್ತಿವಶರಾಗಿ ತಾಳಮೇಳಗೊಂಡು"[೩೪]

"ಪಾದವ ಹಾಕೋ ಬಸವ ! ಕನ್ನಡ,

ಭೂಮಿಗೆ ಪಾದವ ಹಾಕೋ ॥"

"ಅಂದಿನ ಅನುಭವ ಮಂಟಪವೆಲ್ಲಿ ?

.............................. ತೋರಲು ನೀ........ ಪಾದವ ಹಾಕೋ॥

ಎಂದು ಹಾಡುತ್ತಿದ್ದಾರೆ. ಸಂಘಟನಾತ್ಮಕ ಕಾರ್ಯಗಳನ್ನು ಬೆಂಬಲಿಸುತ್ತಿದ್ದ ಅಂಗಡಿಯವರು ಈ ಗೀತೆಯ ಮೂಲಕ ಬಸವಣ್ಣನವರು ಹುಟ್ಟು ಹಾಕಿದ ಸಂಘಟನೆ 'ಅನುಭವ ಮಂಟಪ'ದ ವಿಶೇಷತೆಗಳನ್ನು ಹೇಳುತ್ತಾ, ಇಂದಿನ ಸಂಘಟನಾತ್ಮಕ ವ್ಯವಸ್ಥೆಗಳು ಅಂದುಕೊಂಡ ಮಟ್ಟಿಗೆ ಯಶಸ್ವಿಯಾಗದಿರುವ ಕಾರಣವನ್ನು ಹುಡುಕಿದ್ದಾರೆ. ಒಮ್ಮನ, ಒಮ್ಮತವಿಲ್ಲದೆ ಜಾತಿ, ಧರ್ಮ, ಅಂಧಕಾರಗಳ ಸುಡುಬಿಸಿಲಲ್ಲಿ ಬಿತ್ತಿ ಬೆಳೆಯುವಲ್ಲಿ ತಲ್ಲೀನರಾಗಿರುವ ನಾವುಗಳು ಕಾಯಕವನ್ನು ಮರೆಯುತ್ತಿದ್ದೇವೆ. ಕಾಯಕದಿಂದ ವಿಮುಖತೆ ನಮ್ಮಲ್ಲಿ ಆಲಸ್ಯವನ್ನು ಆಹ್ವಾನಿಸುತ್ತಿದ್ದೇವೆ. ಈ ಎಲ್ಲ ನ್ಯೂನ್ಯತೆಗೆ ಅಕ್ಕನ ವಾಣಿ, ಶರಣರ ನುಡಿಗಳು ಹೆಚ್ಚು ಪರಿಹಾರಾತ್ಮವಾಗಿರುವವು ಎನ್ನುವುದು ಅವರ ಅಭಿಮತ.

ಈ ಕೃತಿಯ 'ಅನುಭವ ಮಂಟಪ'ವೆನ್ನುವ ಹಾಡುಗಬ್ಬದಲ್ಲಿ ಅವರ ವಿಶೇಷ ಸಾಮಾಜಿಕ ಕಾಳಜಿಯೊಂದು ಬೆಳಕಿಗೆ ಬರುತ್ತದೆ. ಬಸವಾದಿ ಶರಣರು ಅಂದು 'ಅನುಭವ

ಮಂಟಪ' ಎನ್ನುವ ವೇದಿಕೆಯನ್ನು ರಚಿಸಿಕೊಂಡು ಸಮಾಜದ ಚಿತ್ರಣವನ್ನು ಬದಲಿಸುವ ಹಂಬಲದೊಂದಿಗೆ ಸಂಘಟಿತರಾದ ಕಾರಣವೇ ಇಂದು ಮಠ-ಮಾನ್ಯಗಳು ಹುಟ್ಟಿಕೊಂಡದ್ದು. ಈ ಮಠ ಮಾನ್ಯಗಳು ಅನುಭವ ಮಂಟಪದ ಪ್ರತೀಕವೇ ! ಆ ಮಠ-ಮಾನ್ಯಗಳು ಇಂದು ಹೆಚ್ಚಿನ ಜವಾಬ್ದಾರಿಯುತ ಸ್ಥಾನದಲ್ಲಿ ನಿಂತುಕೊಂಡು ಬಸವಣ್ಣನವರ ಆ ಆಶಯಗಳನ್ನು ಸಾಕಾರ ಮಾಡಬೇಕಾಗಿದೆ. ಅದರ ಅರಿವಿಲ್ಲದೆ ಅವುಗಳು ನಿರಸ ವಿಷಯಗಳ ಜೊಂಜಾಟವಾಗುವ ಲಕ್ಷಣಗಳಿದ್ದು, ಅದರಿಂದ ಹೊರಬರುವ ಆಶಯವನ್ನು ವ್ಯಕ್ತಪಡಿಸುತ್ತಾರೆ.

"ಶರಣೆಯೆ ನೋಡನುಭವಮಂಟಪವ ।

ಶರಣರ ನುಡಿಯೊಳು ತಿರುಳಿನ ವಿಭವ ॥"

"ಅಂದಿನ ಕಲ್ಯಾಣೆದುವೇನವ್ವಾ,

...........ಇಂದಿಂತಿಹ ಮಂಟಪ ಬೇಕವ್ವಾ ॥"

ಈ ಕೃತಿಯ 'ಶರಣೆಯರ ಹೊಲಿಗೆ' ಮತ್ತು 'ಶರಣೆಯರ ಹೆಣಿಕೆ' ಪದ್ಯಗಳಲ್ಲಿ ಲಿಂಗಾಯತರ ಬಾಳು ವಿಶಿಷ್ಟವಾದುದು ಎಂಬುದನ್ನು ಹೇಳುತ್ತಾ ವೀರಶೈವ ಲಿಂಗಾಯತ ತತ್ವಗಳನ್ನು ಸುಲಭವಾಗಿ ತಿಳಿಸಿಕೊಡುವ ಪ್ರಕ್ರಿಯೆಯನ್ನು ಮಾಡುತ್ತಾರೆ. ಇವುಗಳ ಮುಖ್ಯ ಉದ್ದೇಶ ಸಮಾಜದ ಸ್ತ್ರೀ ಬಳಗವನ್ನು ಜಾಗೃತಗೊಳಿಸುವುದೇ ಆಗಿದೆ. 'ಹೊಲಿಗೆ', 'ಹೆಣಿಕೆ' ಪದಗಳ ಔಚಿತ್ಯ ನಿಜಕ್ಕೂ ಅರ್ಥಪೂರ್ಣ. 'ಹೆಣಿಕೆ' ಎಂಬುದು ಕಟ್ಟುವ ಪರಭಾಷೆಯಾದರೆ, 'ಹೊಲಿಗೆ' ಎನ್ನುವುದು ಅರ್ಥಪೂರ್ಣ ಅಥವಾ ಪ್ರಮಾಣಬದ್ಧ ಅಥವಾ ರಚನಾತ್ಮಕ ಅಥವಾ ತುಲನಾತ್ಮಕ ಕಟ್ಟುವ ಕಾರ್ಯ ಎಂಬುದನ್ನು ಅರ್ಥೈಸುತ್ತದೆ. ಅದರೊಟ್ಟಿಗೆ 'ಹೊಲಿಗೆ' ಎನ್ನುವುದು ಹರಿದು ಹೋದದ್ದನ್ನು ಜೋಡಿಸಿಕೊಂಡು ಒಪ್ಪವಾದ ಆಕಾರಕ್ಕೆ ತಂದು ಅದನ್ನು ಬಳಸಿಕೊಳ್ಳುವುದು ಎಂದಾಗುತ್ತದೆ. ಇದರ ಹಿನ್ನೆಲೆಯಲ್ಲಿ ಸಮಗ್ರ ಸಮಾಜದ ಸ್ತ್ರೀ ಶಕ್ತಿಯ ಕ್ರೂಡೀಕರಣ ಮತ್ತು ಅದರ ಸದುಪಯೋಗ ಸಮಾಜಕ್ಕೆ ಸಲ್ಲಬೇಕೆಂಬ ಆಶಯವಾಗಿದೆ. ಹೊಲಿಕೆ-ಹೆಣಿಕೆ ಪದ್ಯಗಳು ವೀರಶೈವರ ಬಾಳು ಇಹ-ಪರಗಳ ಸಮನ್ವಯ ಎಂಬುದನ್ನು ಸರ್ವರಿಗೂ ಸಾರಿ ಹೇಳುತ್ತವೆ.

"ಕೌದಿಯ ಹೊಲಿಯುವ ಬಾರೌ ಶರಣೆ

ಕೌದಿಯೆ ಕೈಲಾಸವು ಕೇಳ್ ಶರಣೇ ॥"

ಈ ಸಾಲುಗಳು ಜೀವನವನ್ನು ಕೌದಿಗೆ ಹೋಲಿಸುತ್ತವೆ. ಯಾವ ಕೌದಿ ಹೊದಿಕೆಯಾಗುತ್ತದೋ ನಮ್ಮನ್ನು ರಕ್ಷಿಸುತ್ತದೋ ನಮ್ಮ ತನು-ಮನವನ್ನು ಚಳಿ-ಗಾಳಿ-ಮಳೆಯ ಪ್ರಭಾವದಿಂದ ಹೊರಬರುವಂತೆ ಮಾಡುತ್ತದೆಯೋ, ಸೊಂಪಾದ ನಿದ್ದೆಗೆ ಅವಕಾಶ ಮಾಡಿಕೊಡುತ್ತದೆಯೋ ಆ ಕೌದಿಯಂತೆಯೇ ಜೀವನದಲ್ಲಿ ನಮ್ಮ ನಡೆ-ನುಡಿಗಳ, ಆಚಾರ-ವಿಚಾರಗಳ ಮಟ್ಟ ನಮ್ಮ ತನು-ಮನವನ್ನು ರಕ್ಷಿಸುತ್ತವೆ. ನಮ್ಮ ಬದುಕನ್ನು ಸವರಿಸುತ್ತವೆ. ಆ ಪರಿಭಾವ-ಭಾಷೆ ಜೀವನದೊಳಗೆ ಗಟ್ಟಿಯಾಗಿ ನಿಂತರೆ ಅದುವೇ ಕೈಲಾಸ. ಶಿವಶರಣರು ಹೇಳುವಂತೆ ಸ್ವರ್ಗ-ನರಕಗಳಿಲ್ಲ. ಬದುಕಿನ ಕೆಡಕು ಒಳಿತು ಎನ್ನುವ ತಿಳುವಳಿಕೆಗಳೇ ಸ್ವರ್ಗ-ನರಕಗಳು ಎನ್ನುವ ಮಹತ್ತರ ಸಂದೇಶ ಈ ಪದ್ಯದ ಮೂಲಕ ಅಭಿವ್ಯಕ್ತವಾಗುತ್ತದೆ.

"ಜಂಗಮ ! ಭಕ್ತ ಬಣಿಜಿಗನೆಂದು

ಗಾಣಿಗ ಸಿಂಪಿಗ ! ನೆಯ್ಗಿಗನೆಂದು

ಸಲ್ಲದ ಮಾತಿನ ಹರಕವನೊಂದು

ಮಾತೆಯ ವಸ್ತ್ರದಿ ಕಾಣುವೆವಿಂದು"

ಅಧ್ಭುತವಾದ ಪರಿಕಲ್ಪನೆ ಮತ್ತು ಕವಿತ್ವ ಶಕ್ತಿ ಇದು. ಸಮಾಜವೆಂಬ ಶುಭ್ರ ಬಟ್ಟೆಯಲ್ಲಿ ಜಂಗಮ, ಬಣಿಜಿಗ, ಪಂಚಮಸಾಲಿ, ಗಾಣಿಗ, ಸಿಂಪಿಗ, ನೆಯ್ಗಿಗ, ಸಾದರ ಎಂಬುವ ಬಣ್ಣಗಳನ್ನು ಎರಕ ಹೊಯ್ದು ಅವುಗಳ ಜೊತೆಗೆ ಬೆಳೆಯುವುದನ್ನು ಮರೆತು ಅಲ್ಲಸಲ್ಲದ ಮಾತಿನ ಬಿರುಸನ್ನು ಕಾಣುತ್ತಿದ್ದೇವೆ. ಅವನು ಉಚ್ಛ, ಇವನು ನೀಚ, ಅವನು ಉಳ್ಳವ, ಇವನು ಅಳಿದವ ಎಂದು ದೋಷಾರೋಪಣ ಪಟ್ಟಿಯನ್ನು ಮಾಡಿಕೊಂಡು ಬಸವಾದಿ ಶರಣರ ಮೂಲ ಧ್ಯೇಯಗಳನ್ನು ಮರೆತು ಮತ್ತೊಮ್ಮೆ ಕಚ್ಚಾಡುತ್ತಿದ್ದೇವೆ. 'ಮಾತೆಯ ವಸ್ತ್ರದಿ' ಎನ್ನುವುದು ಕನ್ನಡಮ್ಮನ ಸ್ಥಿತಿಯನ್ನು ವರ್ಣಿಸುತ್ತದೆ.

"ಅಷ್ಟಾವರಣವು ನಮ್ಮಯ ಅಂಗ,

ಪಂಚಾಚಾರವು ನಮ್ಮಯ ಪ್ರಾಣ,

ಷಟ್ಸ್ಥಲ ತತ್ವವೆ ನಮ್ಮಯ ಮಾರ್ಗ,

ಇವುಗಳ ಯೋಜನೆ ನಮ್ಮಯ ಹೊಲಿಗೆ"

ಇಂದಿನ ಬದುಕಿಗೆ ವೀರಶೈವ-ಲಿಂಗಾಯತ ತತ್ವಾನುಷ್ಠಾನಗಳಾದ ಅಷ್ಟಾವರಣ, ಪಂಚಾಚಾರ, ಷಟ್ಸ್ಥಲಗಳ ಮಾರ್ಗಗಳನ್ನು ಶಾಸ್ತ್ರೀಯವಾಗಿ ಅಳವಡಿಸಿಕೊಳ್ಳಬೇಕಿದೆ ಎನ್ನುತ್ತವೆ ಈ ಸಾಲುಗಳು. ಇದೇ ವಿಚಾರವನ್ನು 'ಶರಣರ ಹೆಣಿಕೆ'ಯಲ್ಲೂ ಕಾಣಬಹುದು.

"ಷಟ್ಕೋಣೆಮ್ಮನ ಮೊದಲಿನ ನಕ್ಷೆ

..................................ಪರತರ ನಕ್ಷೆ"

'ನೇಗಿಲಯೋಗಿ' ಎಂಬ ಪದ್ಯದಲ್ಲಿ "ಒಕ್ಕಲಾಗಿ ಒಕ್ಕಲುತನ ಮಾಡುವ ಒಕ್ಕಲಿಗ (ರೈತ)ನು ಮುಕ್ಕಣ್ಣನಲ್ಲದೆ ಅನ್ಯನಲ್ಲ ! ಒಕ್ಕಲಿಗನೂ ಅವನ ಪರಿವಾರವೂ ಮರ್ತ್ಯಲೋಕಕ್ಕೆ ಇಳಿದ ಶಿವನ ಪರಿವಾರವೆಂಬುದು ಸಿದ್ಧಾಂತ. ಇದನ್ನೇ ಇಲ್ಲಿ ಕಾಣಬಹುದಾಗಿದೆ."[೩೫] ಸರ್ವಸಂಘ ಪರಿತ್ಯಾಗಿಯಾಗಿ, ಸುಖ-ಭೋಗಗಳನ್ನು ತೊರೆದು, ಮಣ್ಣಲ್ಲಿ ಮಣ್ಣಾಗಿ ದೇಶಕ್ಕೆ ಅನ್ನ ನೀಡುವ ರೈತ ನಿಜವಾಗಿಯೂ ಯೋಗಿ. ಈ ಸುಯೋಗ ದೈವತ್ವವನ್ನು ಮುಟ್ಟಲು ಇರುವ ಮಹಾ ದಾರಿ.

'ಒಕ್ಕಲಿಗ ಒಕ್ಕದಿರೆ ಬಿಕ್ಕವುದು ಜನವೆಲ್ಲ' ಎನ್ನುವ ಕವಿವಾಣಿ ಕೃಷಿಕನ ಮಹತ್ವವನ್ನು ಸಾರಿ ಹೇಳುತ್ತದೆ. ಈ ಮಹತ್ವವನ್ನು ಶಿವನನ್ನು ನೇಗಿಲಯೋಗಿ ಎಂದು ಕರೆದು ಶಿವನ ವೇಷ-ಭೂಷಣಗಳನ್ನು ರೈತನ ಜೊತೆ ಹೋಲಿಕೆ ಮಾಡಿ, ಹೊಸ ಕಲ್ಪನೆಯನ್ನು ಹೊಸೆದಿದ್ದಾರೆ. ರಾಷ್ಟ್ರಕವಿ ಕುವೆಂಪು ರೈತನನ್ನು ನೇಗಿಲಯೋಗಿ ಎಂದು ಕರೆದು 'ಉಳುವ ಯೋಗಿಯ ನೋಡಲ್ಲಿ' ಎಂದು ರೈತನ ಕಷ್ಟ-ಸುಖಗಳನ್ನು ಅಭಿವ್ಯಕ್ತಗೊಳಿಸಿದರು. ಆದರೆ ಕ.ಬ.ಅಂಗಡಿಯವರು ಶಿವನ ಪ್ರತಿಯೊಂದು ಅವನ ಚಲನವಲನಗಳಲ್ಲಿ ರೈತನನ್ನೇ ಕಾಣುತ್ತಾರೆ. ಶ್ರೀ ಕ.ಬ.ಅಂಗಡಿಯವರ ಈ ಕಲ್ಪನೆಗೆ ಅವರು ಹಳ್ಳಿಯ ಮೂಲದ ವಾತಾವರಣದಲ್ಲಿ ಬೆಳೆದುದೇ ಕಾರಣವಾಗಿದೆ. ಅಲ್ಲಿಯ ಬಡ ಜನರೊಂದಿಗೆ, ಶ್ರಮಿಕರೊಂದಿಗೆ, ರೈತಾಪಿ ವರ್ಗದ ಜನರೊಟ್ಟಿಗೆ ಪ್ರೀತಿಯ ಬದುಕನ್ನು ಹಂಚಿಕೊಂಡದುದರ ಫಲವೆ ಅವರ ಈ ಪದ್ಯ.

"ವನೆ ನೇಗಿಲಯೋಗಿ ದುಡಿಯುತ,

ಲಿರುವನೆಲ್ಲರಿಗಾಗಿ ಸತತ......."

ಭಕ್ತರಿಗಾಗಿ, ಅವರ ಒಳಿತಿಗಾಗಿ ಸತತವಾಗಿ ಶಿವನು ದುಡಿಯುತ್ತಿರುತ್ತಾನೆ. ನಮ್ಮ ಭಕ್ತಿಯ ಪರೀಕ್ಷೆಯನ್ನು ಅವನೆಂದಿಗೂ ಮಾಡಲಾರ. ಅವನೊಬ್ಬ ಸಾದಾ ಸೀದಾ ರೈತನು. ಅವನಿಗೆ

ಇಲ್ಲಸಲ್ಲದ ರೂಪುರೇಷೆಗಳನ್ನು ತೊಡಿಸುವುದು ಬೇಡ. ಅವನಲ್ಲಿ ಅನಗತ್ಯವಾದ ಭಯ ಬೇಡ. ಅವನೆಲ್ಲಿದ್ದಾನೆ ? ಅವನಿರುವುದೇ ಪ್ರತಿಯೊಬ್ಬನಲ್ಲಿ. ಅವರವರ ಮನಸ್ಸಿನಲ್ಲಿ. ಆ ಮನಸ್ಸನ್ನು ಉತ್ತುವ ಬಿತ್ತುವ ಮತ್ತು ಸರಿಯಾದ ಬೆಳೆ ಬೆಳೆಯುವ ಕಾರ್ಯವನ್ನು ಅವರವರೇ ಮಾಡಬೇಕಾಗುತ್ತದೆ. ಜ್ಞಾನ-ಅರಿವು-ಶಿಕ್ಷಣಗಳ ಮೂಲಕ ಇದನ್ನು ಸಾಧಿಸಿಕೊಳ್ಳಲು ಹವಣಿಸಬೇಕು. ಮಸನ್ನು ಪ್ರಾಂಜಲವಾಗಿರಲು ತನ್ನಷ್ಟಕ್ಕೆ ತಾನೇ ಕಾರ್ಯಗಳು ಸಾಕಾರವಾಗುತ್ತವೆ ಎಂಬುದನ್ನು ಅವರ ಈ ಕಾವ್ಯ ನಿನದಿಸುತ್ತದೆ. ಈ ತತ್ತ್ವಗಳು ಬಸವಾದಿ ಶರಣರ ತತ್ತ್ವ ವಿವೇಚನೆಗಳಲ್ಲದೆ ಮತ್ತೇನಲ್ಲ.

"ತಲೆಗೆ ಸುತ್ತಿದ ಉರುಟು ಬಟ್ಟೆಯೆ,

..........................................ಆದಿ ಶೇಷನು!........"

ಭಕ್ತರು ಮಾಡಬೇಕಾದ ನಿಜವಾದ ಪೂಜೆ ಯಾವ ರೀತಿಯಾಗಿರಬೇಕು ಅನ್ನುವುದು ಇಲ್ಲಿ ಸ್ಪಷ್ಟವಾಗಿ ಹೇಳಿದ್ದಾರೆ. ಹೂಡಿದ ಎರಡು ಎತ್ತುಗಳನ್ನು ನಂದಿ(ಬಸವ)ನೆಂದು ನಂಬಿ, ನೇಗಿಲನ್ನು ಗಣಪತಿಯ ರೂಪದಲ್ಲಿ ಪ್ರಥಮತಃನಾಗಿ ಪೂಜಿಸಿ, ಶುದ್ಧ ಬುದ್ಧಿ-ಬಲ-ಭಾವದಿಂದ ಕಾಯಕ ನಿರತನಾದರೆ ನಾವು ಮಾಡುವ ಕ್ಷೇತ್ರ(ಹೊಲ)ದಲ್ಲಿ ಫಲವತ್ತಾದ ಬೆಳೆ ಬೆಳೆದಲ್ಲಿ ಅದುವೇ ಕೈಲಾಸವಾಗಿ ತೋರುತ್ತದೆ. ಕೈಲಾಸವನ್ನು ಕಾಣುವ ಹುಚ್ಚು ಆಸೆಯಿಂದ ಲೌಕಿಕ ಬದುಕನ್ನು ಹಾಳು ಮಾಡಿಕೊಂಡು, ಇತ್ತ ಪಾರಮಾರ್ಥದ ನೆಲೆಯೂ ಸಿಗಲಾರದೆ ಎಲ್ಲಿಯೂ ಸಲ್ಲದೆ ತೃಣ ಸಮಾನವಾಗಿ ಆಗಿ ಹೋದ ಹಲವಾರು ಉದಾಹರಣೆಗಳನ್ನು ನಾವು ನೋಡಬಹುದು.

### ೪.೪.೨ ಅಮರವಾಣಿ :

ಈ ಕೃತಿ ಇವರ ಮಹತ್ವದ ಕೃತಿಗಳಲ್ಲೊಂದು. ಈ ಕೃತಿಯು ಅವರಿಗೆ ಅವರದೇ ಆದ ಬರಹದ ಶೈಲಿಯನ್ನು, ಮತ್ತು ಸಮಾಜದಲ್ಲಿ ಬರಹಗಾರನೆಂಬ ಗುರುತನ್ನು ತಂದು ಕೊಟ್ಟ ಕೃತಿ. ಈ ಕೃತಿ ಚಿಕ್ಕದಾಗಿದ್ದರೂ ಅದರ ವಿಷಯ ಮಾತ್ರ ವಿಶಾಲ ಹರವುಳ್ಳದ್ದು. "ಜಗತ್ತಿನ ಶ್ರೇಷ್ಠ ಸಂಸ್ಕೃತಿಗಳಲ್ಲಿ ಭಾರತದ ಸಂಸ್ಕೃತಿಯು ಹೆಚ್ಚಿನ ಸ್ಥಾನವನ್ನು ಪೆಡೆದಿರುವದು. ಅದು ಭದ್ರವಾದ ನೀತಿ ತತ್ತ್ವಗಳ ತಳಹದಿಯ ಮೇಲೆ ಆಸರಗೊಂಡಿರುವದೇ ಅಮೃತಮಯವಾದುದೂ ಎಂದು ತಿಳಿಯಲಪೇಕ್ಷಿಸುವವರು ಕನ್ನಡ ಸಾಹಿತ್ಯ ಪ್ರಪಂಚದಲ್ಲಿ ಕಾಲಿಡಬೇಕು. ಶರಣರ ಅನುಭಾವ ಗೀತೆಗಳು, ದಾಸರ ಉಗಾಭೋಗಗಳು, ಹಳ್ಳಿಗರ

ಜಯಬಸವ ಗ್ರಂಥಮಾಲೆ ೫.

# ಅಮರವಾಣಿ



ಬಸವಾವತಾರ ೮೨೩

ಅಂಗಡಿ ಕರವೀರಪ್ಪ

ಅಮರವಾಣಿ ಕಿರುಗ್ರಂಥ

ಹಾಡುಗಳು ಅನುಭವಿಗಳ ಹಿತೋಕ್ತಿಗಳು ಭಾರತೀಯರ ಸಂಸ್ಕೃತಿ-ಸಭ್ಯತೆಗಳ ನವನೀತದ ಸವಿಯನ್ನು ಎಲ್ಲರಿಗೂ ಒದಗಿಸುತ್ತವೆ."[೩೬] ಈ ಉದ್ದೇಶವನ್ನು ಪೂರೈಸುವದಕ್ಕಾಗಿಯೆ ಈ ಗ್ರಂಥವು ಬರೆಯಲ್ಪಟ್ಟದ್ದಾಗಿದೆ

"ನೀತಿ ಪ್ರಧಾನವಾದ ಜೀವನಯಾತ್ರೆಯು ಮನುಷ್ಯನಿಗೆ ಬೇಕು. ಅಂದರೇನೇ ಆತನು ಪಶುತ್ವದಿಂದ ದೂರಾಗಿ ಮಾನವನಾಗಿ ದೇವತ್ವವನ್ನು ಪಡೆಯಬಲ್ಲನು. ನೀತಿಯಿಂದಾಚರಿಸಿ ಅಮರರಾಗಿ ಮಾನವತೆಯ ಪೂರ್ಣತೆಯಿಂದ ಘನಮಹಿಮರಾದವರ ಅಮೃತೋಕ್ತಿಗಳ ಆಧಾರವಾಗಿ ಈ ಗ್ರಂಥ ರಚನೆಯು ಆಗಿದೆ."[೩೭] ಈ ಕೃತಿಯ "ಪಾಠಶಾಲೆಯ ಬಾಲಕರಿಗೆ ದಿನಕ್ಕೊಂದು ನುಡಿಯಂತೆ ಅಮೃತವಾಣಿಯನ್ನು ಗುರುಗಳಾದವರು ಹೇಳಿ, ಅಮರವಾಣಿಯ ಮಧುವಿನ ಮಾಧುರ್ಯವನ್ನು ವಿದ್ಯಾರ್ಥಿಗಳಿಗೆ ಹಚ್ಚಿ, ಅದಕ್ಕೊಂದು ಸಣ್ಣ ಕಥೆಯನ್ನು ಜೋಡಿಸಿ ಬರೆದು ತೆಗೆಯಲು ಹೇಳಿದ್ದಾದರೆ ಬಾಲಕರ ಬರೆಹದಲ್ಲಿ ಒಂದು ಬಗೆಯ ರುಚಿಯೂ ಸಂಸ್ಕೃತಿಯ ಹಳಕುಗಳೂ ಸಿಗದೆ ಇರಲಾರವು. ಇದರಂತೆ ಹಳ್ಳಿಯ ವಾಚನಾಲಯದ ಹಾಗೂ ಸಾಹಿತ್ಯ ಪರೀಕ್ಷೆಯ ವಿಧ್ಯಾರ್ಥಿಗಳಿಗೆ ಈ ಪುಸ್ತಕದ ವಾಚನವು, ಅದರ ನೀತಿ ದಯಾಧರ್ಮಾದಿ ಆಚರಣೆಗಳ ಸಂವರ್ಧನೆಗೆ ಅತ್ಯಂತ ಮಾರ್ಗದರ್ಶಕವಾಗಿ ಪರಿಣಮಿಸದೆ ಇರಲಾರದು"[೩೮] "ಗ್ರಂಥದ ಹೆಸರೇ ಹೇಳುವಂತೆ ಅಮರವಾಣಿಯೂ ಹೌದು, ಅಮರರವಾಣಿಯೂ ಹೌದು. ದೇವನ ಅಸ್ತಿತ್ವದಿಂದ ಮೊದಲುಗೊಂಡು ಮಾನವನ ಸರ್ವಾಂಗೀಣ ಉನ್ನತಿಗೆ ಸಹಾಯಕವಾಗುವ ವಿಷಯಗಳವರೆಗೆ ಅಮೂಲ್ಯ ಸಂದೇಶವನ್ನು ಈ ಗ್ರಂಥವು ಹೊತ್ತಿದ್ದು, ಅರಿದು, ಆಚರಿಸಿ, ಆಡಿದ ಅನುಭಾವಿಗಳ ಅನುಭವದೂಟದ ಸವಿಯನ್ನು ಎಲ್ಲರಿಗೂ ಉಣಿಸುವದಾಗಿದೆ. ಶಿವಶರಣರ, ದಾಸರ, ಸಾಧು-ಸಂತರ, ಭಗವಾನ್ ಶ್ರೀ ಕೃಷ್ಣನ, ಮಹಾತ್ಮಗಾಂಧಿ ಮೊದಲಾದ ಘನಮಹಿಮರ ಅಮೃತೋಕ್ತಿಗಳಿಂದ ಎಲ್ಲರನ್ನು ತಣಿಸುವಂತಹುದು ಆಗಿದೆ."[೩೯]

ಇವರು ಶಿಕ್ಷಣ ತಜ್ಞರು. ಶಿಕ್ಷಣದಲ್ಲಿ ಮೂಲಭೂತವಾಗಿ ಯಾವುದರ ಅವಶ್ಯಕತೆಯಿದೆ ಎನ್ನುವುದನ್ನು ಸಂಪೂರ್ಣವಾಗಿ ಅಧ್ಯಯನಕ್ಕೊಳಪಡಿಸಿ ಅರ್ಥೈಸಿಕೊಂಡಿದ್ದವರು. ಹೀಗಾಗಿ ಅವರು ಜೀವನಾಧಾರಿತ ಶಿಕ್ಷಣಕ್ಕೆ ಒತ್ತು ಕೊಟ್ಟರು. ಶಿಕ್ಷಣ ಬರೀ ಹಣ ಗಳಿಕೆಯ ಮಾಪನವಾದ ಇಂದಿನ ದಿನಗಳಲ್ಲಿ ಚಿಂತನೆಗಳಿಗೆ ಹೆಚ್ಚು ಬಲ ಬರುತ್ತದೆ. ಈ ಕೃತಿಯಲ್ಲಿ ಬಸವಾದಿ ಶರಣರ ವಚನಗಳೂ, ದಾಸರ ಪದಗಳೂ, ಗಾಂಧೀಜಿಯವರ ನುಡಿಗಳೂ, ಸರ್ವಜ್ಞನ ತೀಕ್ಷ್ಣ ಮಾತುಗಳು, ಭಗವತ್ಗೀತೆಯ ಸಾರವೂ,

ಮುಪ್ಪಿನ ಷಡಕ್ಷರಿಗಳು, ಮಹಮ್ಮದ್ ಪೈಗಂಬರರು ಹೀಗೆ ಹಲವಾರು ಕಾರಣಿಕ ಪುರುಷರ ಹಿತೋಕ್ತಿಗಳನ್ನು ಸಮಯೋಚಿತವಾಗಿ ಬಳಸಿಕೊಂಡಿದ್ದಾರೆ.

ಇಂದು ಶಿಕ್ಷಣದಲ್ಲಿಯೂ ಕೋಮುವಾದ, ಜಾತಿವಾದದಂತಹ ಹೊಸ ಹೊಸ ಸಮಸ್ಯೆಗಳನ್ನು ಕಾಣುತ್ತಿರುವ ಹಿನ್ನೆಲೆಯಲ್ಲಿ ಶ್ರೀ ಕ.ಬ.ಅಂಗಡಿಯವರ ಶೈಕ್ಷಣಿಕ ನೀತಿ ಇಂದಿಗೆ ಬಹಳ ಪ್ರಸ್ತುತವಾಗುತ್ತದೆ. ಮಾತೃಭಾಷೆಯ ಶಿಕ್ಷಣವನ್ನೇ ಸರ್ಕಾರಗಳು ತುಳಿಯುತ್ತಿರುವ ಹಿನ್ನೆಯಲ್ಲಿ ಶ್ರೀ ಕ.ಬ.ಅಂಗಡಿಯವರ ಭಾಷಾಪರವಾದ ಕೃತಿಗಳು ಬಹಳ ಪ್ರಸ್ತುತವಾಗುತ್ತವೆ.

### ೪.೪.೩ ಮುರಗೋಡ ಮಹಾಂತಜ್ಜನವರ ಮಹಿಮೆ :

ಈ ಕೃತಿಯು ಶ್ರೀ ಕ.ಬ.ಅಂಗಡಿಯವರ ಮತ್ತು ಶ್ರೀ ಮುರಗೋಡ ಮಹಾಂತ ಶಿವಯೋಗಿಗಳ ಅವಿನಾಭಾವ ಸಂಬಂಧವನ್ನು ತೋರ್ಪಡಿಸುತ್ತದೆ. ಗದುಗಿನ ತೋಂಟದಾರ್ಯ ಮಠದ 'ವೀರಶೈವ ಪ್ರಗತಿಶೀಲ ಯುವಕ ಸಂಘ'ದ ಸಂಚಾಲಕತ್ವದಲ್ಲಿ ೨೩ನೆಯ ವಾರದ ಶಿವಾನುಭವ ಕಾರ್ಯಕ್ರಮದಲ್ಲಿ ಶತಾಯುಷಿಗಳಾಗಿ ಬಾಳಿ ಬೆಳಗಿದ ಮುರಗೋಡ ಮಹಾಂತ ಶಿವಯೋಗಿಗಳ ಪ್ರಥಮ ಪುಣ್ಯತಿಥಿಯ ಆಚರಣೆಯ ಸಂದರ್ಭದಲ್ಲಿ ಶ್ರೀ ಕ.ಬ.ಅಂಗಡಿಯವರು ಈ ಕೃತಿಯನ್ನು ಬರೆದಿರುತ್ತಾರೆ.

"ಒಮ್ಮೆ ಮೈಲಾರ ಬಸವಲಿಂಗ ಶರಣರ ಗುರುಕರಣ ತ್ರಿವಿಧಿಯನ್ನೋದುತ್ತಿರಲು, ಆ ತ್ರಿಪದಿಯೊಳಗಿನ ಜ್ಞಾನಜಂಗಮಲಿಂಗ, ಮುಮುಕ್ಷು ಜಂಗಮ, ಚರಲಿಂಗಗಳ ಬಗೆಗೆ ತಿಳಿಯಲು ಮನಸ್ಸು ಇಚ್ಛಿಸಿತು. ಆಗ ಭಾವದೊಳಗೆ ಮುರಗೋಡ ಮಹಾಂತ ಶಿವಯೋಗಿಗಳವರ ದಿವ್ಯ ತೇಜವು ಮೂಡಿತು. ಒಡನೆಯೇ ಈ ಚರಲಿಂಗನ ಚಾರು ಚರಿತೆಯ ಸಾರವನ್ನು ಜನಕುಣಿಸಬೇಕೆಂಬ ಹಂಬಲವುಂಟಾಯಿತು. ಅದು ಆ ಮಹಿಮನ ಪ್ರೇರಣೆಯಿಂದ ಬರೆಹ ರೂಪದಲ್ಲಿ ಬಂದಿತು."[೪೦] ಎಂಬುದಾಗಿ ಕವಿ ಹೇಳಿದ್ದಾರೆ.

ಮುರಗೋಡ ಮಹಾಂತ ಶಿವಯೋಗಿಗಳ ಜೀವನಸಾರವನ್ನು ಸಂಕ್ಷಿಪ್ತವಾಗಿ ಈ ಕೃತಿಯಲ್ಲಿ ನೀಡುತ್ತಾ, ಅವರ ಸಮಾಜೋ ಸಾಧನೆಗಳನ್ನು, ಧಾರ್ಮಿಕ ಚಿಂತನೆಗಳನ್ನು ಈ ಕೃತಿಯಲ್ಲಿ ಮೂಡಿಸಿದ್ದಾರೆ. ಇಲ್ಲಿ ಅವರು ನೀಡಿರುವ ವಿಷಯಗಳನ್ನು ನಾವು ಪವಾಡಗಳು ಎನ್ನುವಂತಿಲ್ಲ. ಸಾಮಾಜಿಕವಾಗಿ ಅವರು ಸ್ಪಂದಿಸಿದ ಅಪೂರ್ವ ಸೇವೆಯನ್ನು ಈ ಕೃತಿಯ ಮೂಲಕ ತಿಳಿದುಕೊಳ್ಳಬಹುದು. ಇಲ್ಲಿ ಅಂಗಡಿಯವರು ಮಹಾಂತ ಶಿವಯೋಗಿಗಳ

ಪೂಜ್ಯ ಮುರಗೋಡ ಅಜ್ಜನವರ
ಪ್ರಥಮ ವರ್ಷದ ಪುಣ್ಯತಿಥಿ
(ಫಾ. ಶು. ೧೧) ಸ್ಮರಿಸಿ
ಪ್ರಕಟಿಸಿದುದು

# ಮುರಗೋಡ ಮಹಾಂತಜ್ಜನವರ ಮಹಿಮೆ



ಪ್ರಕಾಶಕರು :
ವೀರಶೈವ ಪ್ರಗತಿಶೀಲ ಯುವಕ ಸಂಘ
ಗದಗ-ಬೆಟಗೇರಿ

ಮುರಗೋಡ ಮಹಾಂತಜ್ಜನವರ ಮಹಿಮೆ ಕಿರು ಗ್ರಂಥ

ಒಂದು ದೃಷ್ಟಾಂತವನ್ನು ತೆಗೆದುಕೊಂಡು ಕ್ರಿಯಾ ದೀಕ್ಷಾ ಸಮಯದಲ್ಲಿ ಗುರು-ಶಿಷ್ಯರ ಬೇಡಿಕೆ-ನೀಡಿಕೆಗಳನ್ನು ತಮ್ಮ ಪದಗಳಲ್ಲಿ ವಿಶೇಷವಾಗಿ ಕಟ್ಟಿಕೊಟ್ಟಿದ್ದಾರೆ.

**ಭಕ್ತರ ಬೇಡಿಕೆ:** "ಎನಿತೋ ಶಾಸ್ತ್ರವನೋದಿ ಬಳಲಿದೆ

......................ಯೋಗಲಿಂಗವನು"

ಗುರುವೇ ಭವದ ಬಾಧೆಯನ್ನು ಹೋಗಲಾಡಿಸು, ಭೋಗ-ಮೋಕ್ಷಗಳೆರಡನ್ನು ಬೇರೆ ಬೇರೆಯೆಂದು ತಿಳಿಯದೆ ಜೀವನದ ನಡುವೆ ಬರುವ ಸುಖ-ದುಃಖಗಳನ್ನು ಸಮತೂಕದಿಂದ ಸ್ವೀಕರಿಸುವ ಮನೋಬಲವನ್ನು ತೋರಿಸು. ಎಷ್ಟೊಂದು ಓದಿದರೂ, ಕ್ಷೇತ್ರ ಪರ್ಯಟನೆ ಮಾಡಿದರೂ, ಶುದ್ಧ ತೀರ್ಥದಲ್ಲಿ ಮುಣಿಗೆದ್ದರೂ ಯಾವ ಲಾಭಗಳಿಲ್ಲ. ಭವದ ಹಂಗು ಹರಿದಿಲ್ಲ. ಭಕ್ತಿಯ ಪರಾಕಾಷ್ಠತೆಯನ್ನು ತಲುಪಲಾಗುತ್ತಿಲ್ಲ. ಗುರು ಶಿಷ್ಯನಿಗೆ ಅಂಗಲಾಚಿ ಬೇಡುವ ಪರಿಯಿದು. ಅದಕ್ಕೆ ಗುರುವಿನ ಪ್ರತಿಕ್ರಿಯೆ ಹೀಗಿದೆ.

**ಗುರುವಿನ ನೀಡಿಕೆ :**

"ಲಿಂಗ ಪಂಚಾಚಾರ ಷಟ್ಸ್ಥಲ

......................ಸತ್ಯ ದರ್ಶನವು"

ಗುರುವು ಶಿಷ್ಯನಿಗೆ ನೀಡುವ ಅಭಯವಿಂತಿದೆ. "ಲಿಂಗ ಸಂಗಿಯಾದರೆ ನಿನ್ನ ಈ ಎಲ್ಲ ಪ್ರಶ್ನೆಗಳಿಗೆ ಉತ್ತರವೆಂದು ಹೇಳುತ್ತಾರೆ. ಲಿಂಗವೆಂದರೆ ಪಂಚಾಚಾರ, ಲಿಂಗವೆಂದರೆ ಷಟ್ಸ್ಥಲ, ಲಿಂಗವೆಂದರೆ ಅಷ್ಟಾವರಣ, ಲಿಂಗದಿಂದಲೇ ಮಂಗಳವು, ಲಿಂಗದಿಂದಲೇ ಶಿವಯೋಗ ಸಾಮಿಪ್ಯವು, ಲಿಂಗದಿಂದಲೇ ಬಸವಾದಿ ಶರಣರ ಜೀವನದ ಸತ್ಯ ದರ್ಶನವು" ಎಂದು ಗುರುವು ಶಿಷ್ಯನಿಗೆ ಬೋಧನೆಗೈಯುತ್ತಾರೆ.

ಅವರ ಪಾರಮಾರ್ಥಿಕದ ಹಸಿವನ್ನು ಇಲ್ಲಿ ಗುರುತಿಸಬಹುದು. ಆಧ್ಯಾತ್ಮದ ಆಳವನ್ನು ಅನುಭವಿಸುವ ಅವರ ಕಾತುರತೆಯನ್ನು ಇಲ್ಲಿ ಕಂಡುಕೊಳ್ಳಬಹುದು. ಈ ದೃಷ್ಟಿಯಿಂದ ಇದು ಒಂದು ಮುಖ್ಯವಾದ ಆಧಾರವಾಗಿದೆ. ಅಷ್ಟಾವರಣ, ಷಟ್ಸ್ಥಲ, ಪಂಚಾಚಾರಗಳನ್ನು ಬದುಕಿನುದ್ದಕ್ಕೂ ಆಚರಿಸಿಕೊಂಡು ಬಂದ ಅನುಭೂತಿ ಅವರದಾಗಿದೆ. ಗದುಗಿನ ಡಾ. ಪಂ. ಪುಟ್ಟರಾಜ ಕವಿ ಗವಾಯಿಗಳು ಇವರನ್ನು [೮೦]'ಅಷ್ಟಾವರಣ ನಿಷ್ಠಾಗರಿಷ್ಠ' ಎಂದೂ ಕರೆದಿರುವುದು ಈ ಮಾತನ್ನು ಸಾಕ್ಷಿಕರಿಸುತ್ತದೆ.

## ೪.೪.೪ ಮುತ್ತೈದೆಯರೈವರು :

'ಮುತ್ತೈದೆಯರೈವರು' ಕೃತಿ ಇವರ ವೈಚಾರಿಕ ಮತ್ತು ಸಂಶೋಧನಾರ್ಹ ಕೃತಿ ಎಂದುಕೊಂಡರೂ ತಪ್ಪಲ್ಲ. ಹೊಸ ದೃಷ್ಟಿಕೋನದಲ್ಲಿ ವಿಷಯವೊಂದನ್ನು ವಿವೇಚಿಸುವ ಅದನ್ನು ಪ್ರಯೋಗಕ್ಕೆ ಒಳಪಡಿಸುವ ಅವರ ಕ್ರಿಯಾಶೀಲತೆಯನ್ನು ಈ ಕೃತಿಯಿಂದ ತಿಳಿದುಕೊಳ್ಳಬಹುದು.

" ಅಹಲ್ಯಾ, ದ್ರೌಪದೀ, ಸೀತಾ, ತಾರಾ, ಮಂಡೋದರೀ

ತಥಾ ಪಂಚಕನ್ಯಾಂ ಸ್ಮರೇನ್ನಿತ್ಯಂ ಪಾಪಂ ಹರೇತ್"

ಹೀಗೆಂದು ಪ್ರಾರ್ಥಿಸಲ್ಪಡುವ ಪೂಜ್ಯ ಭಾರತೀಯ ಮಹಿಳೆಯರಂತೆ, ಜಗತ್ತಿನ ಮಾನವ ವರ್ಗಕ್ಕೆ ತೋರಿದ ಬಸವಣ್ಣನವರ ಸಮತಾವಾದ ಧರ್ಮ ವಿಧಾನದಲ್ಲಿ ನಡೆದು, ಪಾವನಶೀಲರೆನಿಸಿ ಸರ್ವತ್ರಸರ್ವರಿಂದ ಸದಾ ಪೂಜಿಸಲ್ಪಡುವ ನೀಲಲೋಚನೆ, ಮಲ್ಲಿಗಮ್ಮ, ಅಕ್ಕಮಹಾದೇವಿ, ಲಕ್ಕಮ್ಮ ಹಾಗೂ ಮಹಾದೇವಿಯಮ್ಮ ಈ ಐವರೂ ಇರುವುರು ಉಂಟು ಎನ್ನುವ ವಿವೇಚನೆಯಲ್ಲಿ ತೊಡಗಿಸಿಕೊಂಡದ್ದಾರೆ.

ಈ ಮಾತುಗಳಿಂದ ಈ ಕೃತಿ ರಚನೆಗೆ ಕಾರಣವು ಅರ್ಥವಾಗುತ್ತದೆ. ಪಾತಿವ್ರತ್ಯದ ಪರಮತೆಯ ಬಗೆಗೆ ತಮ್ಮ ಮನದಾಳದ ಸತ್ಯ ಸಂಗತಿಗಳನ್ನು ಸಮಾಜದ ಎದುರು ಪ್ರತಿಪಾದಿಸಿದ್ದಾರೆ. ಇದರ ಮೂಲಕ ಬಸವಾದಿ ಪ್ರಮಥರ ಸಾಮಾಜಿಕ ಕ್ರಾಂತಿಯ ಸಂದರ್ಭದಲ್ಲಿ ವಿಶೇಷ ಚಿಂತನೆಗೆ, ವಾಸ್ತವ ಬದುಕಿನ ಹಿರಿಮೆಗೆ, ಈ ಶರಣೆಯರಿಂದಾಗಿರುವ ಸತ್ಕಾರ್ಯಗಳ ಮನನ, ಅಭ್ಯಾಸ ಮತ್ತು ಚಿಂತನೆ ಹೆಚ್ಚುವರಿಯಾಗಿ ನಡೆದಂತಿಲ್ಲ. ಈ ದಿಸೆಯಲ್ಲಿ ಇಂದಿನ ಸಮಾಜ ಚಿಂತಕರು ಸಂಶೋಧಕರು ಕಾರ್ಯತತ್ಪರರಾದಂದು ಇಂದು ನಮ್ಮ ಸಮಾಜ ಬಯಸುತ್ತಿರುವ ಸ್ತ್ರೀ ಪುರುಷ ಸಮಾನತೆ, ಇಂದಿಗೂ ಬೇರೂರಿರುವ ಸ್ತ್ರೀ ಬಗೆಗಿನ ಕೀಳರಿಮೆಗಳ ಮೇಲೆ ಬೆಳಕು ಬೀಳುವುದು ಸಾಧ್ಯ. ಇಂತಹ ಸಾಧ್ಯತೆಗೆ ಕಾಲೋಚಿತ ಈ ಕೃತಿ ಆಧಾರವಾಗುವುದರಲ್ಲ ಸಂಶಯವಿಲ್ಲ.

ಇಂದಿಗೂ ಪಂಚಕನ್ಯೆಯರಿಗೆ ಸಲ್ಲುತ್ತಿರುವ ಗೌರವ ಮತ್ತು ಸ್ಥಾನ ಮಾನಗಳಿಗೆ ಸಮಾನಾಂತರವಾಗಿ ಬಸವಾದಿ ಪ್ರಮಥರ ಕಾಲದ ಶರಣೆಯರ ಪ್ರೌಢ, ಪ್ರಬುದ್ಧ ಮತ್ತು ಅನುಭಾವಿಕ ನೆಲೆಗಳಲ್ಲಿ ಎತ್ತರಕ್ಕಿರುವ ಈ ಶರಣೆಯರಾದ 'ನೀಲಲೋಚನೆ, ಮಲ್ಲಿಗಮ್ಮ,

ಅಕ್ಕಮಹಾದೇವಿ, ಮಹಾದೇವಿಯಮ್ಮ, ಲಕ್ಕಮ್ಮ ಇವರಿಗೂ ಸಲ್ಲಬೇಕು ಎನ್ನುವುದು ಶ್ರೀ ಕ.ಬ.ಅಂಗಡಿಯವರ ವಿಚಾರಪರತೆ.

"ವೀರಶೈವ ಸಿದ್ಧಾಂತದ ರೀತ್ಯಾ ಶರಣ ಸಂಪ್ರದಾಯ ನಿಷ್ಠರಾದ ಮುತ್ತೈದೆಯರ ಸ್ಮರಣೆಗೈಯ್ಯುವದು ಶರಣ ಶರಣೆಯರ ದಿವ್ಯ ಕರ್ತವ್ಯ. ಗುರು-ಲಿಂಗ-ಜಂಗಮ ಸಂಸ್ಕೃತಿಗೆ ಹೊರಗಾದವರ ಸ್ಮರಣೆ ಶರಣ ತತ್ತ್ವಕ್ಕೆ ಹೊರತಾಗುವದರಿಂದ ಅಚ್ಚ ವೀರಶೈವರು ಶರಣೆಯರ ಸ್ಮರಣೆಯನ್ನೂ ಗೈಯಲೆಂದು ಹಾನಗಲ್ಲ ಮಹಾಸ್ವಾಮಿಗಳವರು ಸೂಚಿಸಿದ್ದು ಅವರ ದೂರದೃಷ್ಟಿ ವ್ಯಕ್ತವಾಗಿದೆ."[೪೧] ಆ ಗುರುವಿನ ಆಶಯವನ್ನು ಈ ಕೃತಿಯ ರಚನೆಯ ಮೂಲಕ ನಡೆಸಿಕೊಟ್ಟಿದ್ದಾರೆ.

"ಶರಣರ ಅಥವಾ ಬಸವಣ್ಣನವರ ವಿನೂತನ ತತ್ವದಂತೆ ಶರಣಸತಿ ನಿತ್ಯ ಮುತ್ತೈದೆಯರ ಲೌಕಿಕಪತಿ ಪಂಚತ್ವವನ್ನು ಪಡೆದರೂ ಅರ್ಥಾತ್ ಲಿಂಗೈಕ್ಯನಾದರೂ ಲಿಂಗಪತಿಯನ್ನು ಪಡೆದ ಶರಣೆಯ ಮುತ್ತೈದೆತನಕ್ಕೆ ಚ್ಯುತಿಬಾರದು. ಏಕೆಂದರೆ ಆ ಶರಣೆಯಾತ್ಮವು ಅವಿನಾಶಿಲಿಂಗ ರೂಪದಿಂದ ಆಕೆಯ ಐದೆತನದ ರಕ್ಷೆಯಾಗಿ ಸದಾ ಬೆಳಗುತ್ತಿರುವದು. ಆದ್ದರಿಂದ ಇಂತಹ ಶರಣ-ಶರಣೆಯರಿಬ್ಬರೂ ಲಿಂಗಪತಿಗೆ ತಮ್ಮ ಶರಣ ಸತಿತ್ವವನ್ನು ತೋರಿ, ನಡೆದುಕೊಳ್ಳಬೇಕಾಗುವದು. ಇಂಥ ನಿತ್ಯ ಮುತ್ತೈದೆತನವನ್ನು ಪಡೆದ ಈ ಐವರು ಶರಣೆಯರ ಸ್ಮರಣೆ ಅತ್ಯವಶ್ಯ"[೪೨] ಶರಣರ ಈ ವಿಚಾರ ತತ್ಪರತೆಗಳು ಸಮಾಜದಲ್ಲಿ ಗಂಡ ಸತ್ತ ನಂತರ ಹೆಣ್ಣನ್ನು ನಡೆಸಿಕೊಳ್ಳುತ್ತಿದ್ದ ರೀತಿ ಮತ್ತು ಸತಿ ಪದ್ಧತಿಯಂತಹ ಅನಿಷ್ಟ ಪದ್ಧತಿಗಳನ್ನು ಕಿತ್ತೊಗೆಯಲು ಸಹಾಯಕಾರಿಯಾದ ಅಂಶವಾಗಿವೆ. ಈ ಸಾಮಾಜಿಕ ದೃಷ್ಟಿಕೋನದಿಂದ ಸಾರ್ವಕಾಲೀಕವಾಗಿ ಸಲ್ಲುವ ಶಿವಶರಣೆಯರನ್ನು ಮತ್ತು ಅವರ ಜೀವನ ಅನುಕ್ರಮಣಿಕೆಯನ್ನು ಹೆಚ್ಚು ಹೆಚ್ಚು ಜನಮುಖಿಯಾಗುವಂತೆ ಪ್ರೇರೆಪಿಸಲೆಂಬುದು ಉದ್ದೇಶವಾಗಿದೆ.

"ನೀಲಲೋಚನೆ ಮಲ್ಲಿಗಮ್ಮನು, ಕಾಲಕಾಮರ ತೂರಿದಕ್ಕನು,

...........................................ಮುಂದಿಹನಯ್ಯ ನಿಜದಿಂದೆ !"

ಎಂದು ಸ್ಮರಿಸಿ, ಸಾಗರವನ್ನು ಸಾಸಿವೆ ಕಾಳಿನಲ್ಲಿ ಹಿಡಿದಿಟ್ಟ ಕುಸುರು ಕಾರ್ಯ ಇವರ ಸೃಜನಶೀಲತೆಯಲ್ಲಿ ಕಂಡು ಬರುವುದು. "ಈ ಬೆಳಕಿನ ಪ್ರಭಾವಲಯದಲ್ಲಿ ಕಣ್ತೆರೆದು ನೋಡಲು, ಶರಣ ಸತಿಲಿಂಗ ಪತಿಭಾವದ ಬಸವಣ್ಣ-ನೀಲಾಂಬಿಕೆ, ಮಡಿವಾಳ ಮಾಚಿತಂದೆ-ಮಲ್ಲಿಗಮ್ಮ, ಮೋಳಿಗೆಯ ಮಾರಯ್ಯ-ಮಹಾದೇವಮ್ಮ, ಆಯ್ದಕ್ಕಿ ಮಾರಯ್ಯ-

ಲಕ್ಕಮ್ಮ ಹಾಗೂ ಪಾರಮಾರ್ಥಿಕ ಪ್ರಪಂಚವನ್ನು ಸಲ್ಲಿಸಿದ ಚನ್ನಮಲ್ಲಿಕಾರ್ಜುನಯ್ಯ-ಅಕ್ಕಮಹಾದೇವಿಗಳಿವರ ದಾಂಪತ್ಯ ಜೀವನದ ದಿವ್ಯ ಭವ್ಯ ಚರಿತ್ರೆಯನ್ನು ತೋರುತ್ತದೆ. ಒಮ್ಮೊಮ್ಮೆ ಚಂದ್ರಮನಿಗೆ ರಾಹು ಅಡ್ಡ ಬಂದಾಗ್ಗೆ ಆತನಿಗೆ ಕುಂದು ತಟ್ಟಬಹುದಾದರೂ ಸತ್ಯವ್ರತಶೀಲರೀ ದಾಂಪತ್ಯವರ್ಗದ ವೃತ್ತಿಯಲ್ಲಿ ತಿಲಮಾತ್ರವಾದರೂ ಯಾವ ಕಾಲಕ್ಕೂ ಕುಂದು ತೋರದು. ಅಂತೆಯೇ ಬಸವಣ್ಣನವರ ಭಕ್ತಿ ಪ್ರಭೆಯು ಇವರತ್ತ ಬಿದ್ದಿತು."[೪೩]

"ಜಗತ್ ಸೃಷ್ಟಿ ಸ್ಥಿತಿಲಯಾದಿಗಳು ತತ್ತ್ವಬದ್ಧವಾಗಿ ನಡೆಯುತ್ತಿರುವುದಕ್ಕೆ ಶಿವ-ಶಕ್ತಿಯರ ಹೊಂದಾಣಿಕೆಯೇ ಕಾರಣವಾಗಿರುವಂತೆ ಬಸವಣ್ಣನವರ ದಾಂಪತ್ಯ ಜೀವನವು ಜಗತ್ತಿಗೆ ಆದರ್ಶಮಯವಾಗಿ ತೋರಿ ಬೆಳಗುತ್ತಿರುವುದಕ್ಕೆ ಈ ಸತಿಪತಿಗಳ ಹೊಂದಿಕೆಯು ಇದ್ದಿತು. ಆದ್ದರಿಂದಲೇ ಅವರು ಲೋಕಕ್ಕೆ ಆದರ್ಶ ವಸ್ತುಗಳಾದರು."[೪೪] ಈ ವಿಷಯದಲ್ಲಿ ನೀಲಲೋಚನೆಯ ಪಾತ್ರವು ವಿಶೇಷ ಮಹತ್ವದ್ದು. ಏಕೆಂದರೆ ಅಣ್ಣನವರ ಲೌಕಿಕ ಹಾಗೂ ಪಾರಮಾರ್ಥಿಕ ವಿಷಯಗಳಲ್ಲಿ ಮುಂದಡಿಯಿಡುವ ಗತಿಗೆ, ನೀಲಲೋಚನೆಯ ವೈಚಾರಿಕತೆ ಪೂರಕವಾಗುತ್ತದೆ. "ಮಡದಿಯೆನ್ನಲಾಗದು ಬಸವಂಗೆ ಎನ್ನನು ಬಸವನೊಳಗಾನಡಗಿದೆ."[೪೫] ಎನ್ನುವ ವಚನ, 'ಬಸವನ ಅನುಭವದಿಂದ ವಿವರವ ಕಂಡು ವಿಚಾರಪತ್ನಿಯಾದೆನಯ್ಯಾ' ಎಂದು ಹೇಳುವುದು ತಾನು ಬಸವನ ಭೌತಿಕ ಪತ್ನಿಯಲ್ಲ; ವಿಚಾರ ಪತ್ನಿ (ಇನಟೆಲ್ಯಾಕ್ಚುವಲ್ ಕಂಪ್ಯಾನಿಯನ್) ಎಂಬುದು 'ನೋಡು ನೋಡು ನೋಡು ನೋಡು ನೋಡು ಲಿಂಗವೇ' ಅವಳ ಈ ನುಡಿಗಳಲ್ಲಿ ಸಾಧಾರವಾಗುತ್ತದೆ. ವೇದೋಪನಿಷತ್ತುಗಳು ಹೆಂಡತಿ ಆದವಳು ತಾಯಿ, ಸಹೋದರಿ, ಮಂತ್ರಿ, ರಂಭೆ, ಕ್ಷಮಾಯಾ ಧರಿತ್ರಿಯಾಗಿರಬೇಕೆಂದು ನುಡಿಯುತ್ತವೆ. ಆದರೆ ವೀರಶೈವ ಧರ್ಮಪ್ರಾಪಂಚಿಕ ಮತ್ತು ಪಾರಮಾರ್ಥಿಕ ಸ್ತರಗಳಲ್ಲಿ ಪುರುಷನಷ್ಟೇ ಸ್ತ್ರೀಗೆ ಅವಕಾಶ ನೀಡಿ, 'ಉಭಯ ಪ್ರಧಾನ ಕುಟುಂಬ ಪದ್ಧತಿ'ಯನ್ನು ಅನುಮೋದಿಸುತ್ತ ಅವರು ವೈಚಾರಿಕ ದಂಪತಿಗಳಾಗಿ ಶರಣಸತಿ ಲಿಂಗಪತಿ ಭಾವದಿಂದ ಬದುಕುವುದನ್ನು ಈ ಕೃತಿಯು ಬಲವಾಗಿ ಸಮರ್ಥಿಸುತ್ತದೆ. ಇಂದಿನ ಸಮಾಜ ನೀರಿಕ್ಷಿಸುವ ಸಮತೆ, ಸಮತಾಭಾವಗಳು ಬಸವಾದಿ ಪ್ರಮಥರರ ಬಳುವಳಿಯಾಗಿವೆ.

"ಸತ್ಯಶೀಲಳು ಮಲ್ಲಿಗಮ್ಮನು

ನಿತ್ಯ ನಿರ್ಮಲ ನೈಜ ಬಲದಿಂ

ಭೃತ್ಯಭಾವಂದಳೆದು ಮಡಿವಾಳ ಪತಿ ಪಾದವನು

ಅತ್ಯಧಿಕ ಶಿವಭಕ್ತಿ ಜಲದೊಳು

ತತ್ತ್ವವಿಧಿಯಿಂದೊಳೆದು ಬಹುಕೃತ

ಕೃತ್ಯಳಾದಳ ಚರಣಕಾನುಂ ನಮಿಪೆ ನಲವಿಂದೆ"

ಎನ್ನುವ ಲೇಖಕರ ಈ ನುಡಿಗಳು ಮಡಿವಾಳ ಮಾಚಿ ತಂದೆಯ ಪುಣ್ಯಸ್ತ್ರೀ ಮಲ್ಲಿಗಮ್ಮನು ಶರಣ ಬಳಗದಲ್ಲಿ ನಿತ್ಯ ನೂತನವಾಗಿ ನಿಲ್ಲವಾಕೆ ಎಂಬ ಸತ್ಯವನ್ನು ವ್ಯಕ್ತಗೊಳಿಸುತ್ತವೆ. ಜನಪದದಲ್ಲಿ "ಲೋಕದೊಳಗಿರ್ದೂ ಇಲ್ಲದ ಮಹಿಮರ್ಗೆತ್ತುವೆವಾರತಿಯ ಇತ್ಯಾದಿ ಮಂಗಲಗೀತೆಯನ್ನು ಸೌಮಂಗಲೆಯರು ಹಾಡುತ್ತ ತಮ್ಮ ಐದೆತನವನ್ನು ಕಾಯ್ದುಕೊಳ್ಳಲು ಮಹಿಮರನಿಂತು ಪ್ರಾರ್ಥಿಸುತ್ತಾರೆಂದ ಮೇಲೆ ಮಲ್ಲಿಗಮ್ಮನೂ ಆ ಐದು ಮುತ್ತೈದೆಯರೈವರಲ್ಲಿ ಪ್ರಾರ್ಥಿಸಲ್ಪಡುತ್ತಿರುವುದು ಈ ಮಹಿಮಳ ಘನ ಐದೆತನವನ್ನು ಸೂಚಿಸುತ್ತಿದೆ."[೪೬] ಮಡಿವಾಳ ಮಾಚಿತಂದೆಗೆ ಮಲ್ಲಿಗಮ್ಮ ಎನ್ನುವ ಹೆಂಡತಿಯಿರುವುದಾಗಿ ಹೇಳುತ್ತಾರೆ. ಅದನ್ನು ಸಮರ್ಥಿಸುತ್ತಾರೆ ಕೂಡ.

ಇತಿಹಾಸದಲ್ಲಿ ಮಲ್ಲಿಗಮ್ಮನನ್ನು ಗುರುತಿಸಿರುವುದು ವಿರಳವಾಗಿದೆ. ಶರಣ-ಶರಣೆಯರ ಜೀವನ-ಸಾಧನೆಗಳನ್ನು, ವಚನ-ರಚನೆಗಳನ್ನು ಅಧ್ಯಯನಗೈಯುವುದರ ಮೂಲಕ ಹೊಸ ಹೊಸ ವಿಷಯಗಳನ್ನು ಹೊರಹಾಕಲಾಗುತ್ತಿದೆಯಾದರೂ ಮಲ್ಲಿಗಮ್ಮನ ಬಗೆಗೆ ಹೆಚ್ಚಿನ ಅಧ್ಯಯನ ನಡೆಯಲಿಲ್ಲವೆಂದೆ ಹೇಳಬೇಕು. ಇದಕ್ಕೆ ಕಾರಣ ಕೆಲವು ಅಸ್ಪಷ್ಟ ವಿಚಾರಗಳು. ಕೆಲವರ ಪ್ರಕಾರ ಮಡಿವಾಳ ಮಾಚಿದೇವರಿಗೆ ಹೆಂಡತಿ ಇರಲಿಲ್ಲವೆಂದೂ, ಕೆಲವರು ಮಲ್ಲಿಗಮ್ಮ ಹೆಸರಿನ ಹೆಂಡತಿಯಿದ್ದು, ಆಕೆ ಬಹು ಬೇಗನೆ ಐಕ್ಯಳಾಗಿರಬೇಕು ಹೀಗಾಗಿ ಮಡಿವಾಳ ಮಾಚಿದೇವರ ಜೀವನ ಚರಿತ್ರೆಯಲ್ಲಿ ಗೌಣವಾಗಿದ್ದಾಳೆ ಎಂದೂ ಅಭಿಪ್ರಾಯ ಪಡುತ್ತಾರೆ. ಆದರೆ ಮಲ್ಲಿಗಮ್ಮನ ಕುರಿತು ಸಿಗುವ ಜನಪದ ಹಾಡುಗಳು ಮತ್ತು ಕೆಲವು ಶಾಸನಗಳು ಅವಳ ಇರುವಿಕೆಯನ್ನು ಖಚಿತ ಪಡಿಸುತ್ತವೆ.

"ಮಾಚಯ್ಯನಾ ಮಡದಿ ಸೂಚನೆಯನೀಯುತಲಿ

ಯಾಚನೆಯು ಬೇಡ ಪತಿದೇವ! ನೀನೆನ್ನ

ನಾಚದಲೆ ಹಿಂಡು ಎದೆರಗುತ॥"[೪೭]

"ಪತಿಯ ಕಾಯಕಾಗಿ ಎದೆಗೊಟ್ಟ ಮತಿವಂತೆ

...........................ಹೂವಾದಾಕೆ ಶಿವಪದಕೆ."[೪೮]

"ಮುತ್ತೈದಿ ನಿನ್ನ ಮರಣ ಎತ್ತ ಹೋದರು ಪೂಜೆ

ಕತ್ತೂರಿನಾತವಿದ್ದಂತೆ ! ಜಗದೊಳಗೆ

ಉತ್ತಮರ ಮನಕೆ ಕಾಯಕವು."[೪೯]

ಎನ್ನುವ ಈ ನುಡಿಗಳು ಮಡಿವಾಳ ಮಾಚಿತಂದೆಗಳಿಗೆ ಹೆಂಡತಿ ಇರುವುದನ್ನೂ ಮತ್ತು ಅವಳ ಹೆಸರು ಮಲ್ಲಿಗಮ್ಮನೆಂಬ ವಿಷಯವೂ ಅವಳ ತ್ಯಾಗ ಬಲಿದಾನಗಳಿಗೆ ಸಾಕ್ಷಿಯಾಗುತ್ತವೆ.

"ಶಿವಶರಣ ಶರಣೆಯರ ಬಳಗದ ಚಾರಿತ್ರ್ಯ ಸಂಶೋಧಕ ವರ್ಗದ ಬಹುಜನರು ಯಾರೀ ಮಲ್ಲಿಗಮ್ಮನೆಂದು ಕೇಳಬೇಕಾದರೆ, ಈ ತಾಯಿ ಪತಿ ಭಕ್ತಿಯನ್ನು ಎಷ್ಟೊಂದು ಗೌಪ್ಯವಾಗಿ ನಡೆಸುತ್ತ, ಪರಶಿವ ಕೃಪೆಗೆ ಪಾತ್ರಳಾಗಿದ್ದಳೆಂದು ತೆಗೆಯುವ ವಿಷಯ."[೫೦]

ಶರಣ ಸಂಪ್ರದಾಯದಲ್ಲಿ ಸತಿ–ಪತಿ ಇಬ್ಬರಿಗೂ ಸರಿಸಮಾನ ಸ್ಥಾನಮಾನ. ಈ ಕ್ರಿಯೆಯು ಅರ್ಥವತ್ತಾಗಿ ನಡೆದು ಬಂದಿರುವುದೇ ಸತ್ಯ. ಈ ದಾಂಪತ್ಯ, ಸಹಬಾಳ್ವೆಯಿಂದಲೇ ಶರಣರು ಮರಣವನ್ನೂ ಗೆದ್ದರು, ಮಾಯೆಯನ್ನೂ ಗೆದ್ದರು, ಭವವನ್ನೂ ಗೆದ್ದರು. "ಜಾಣ ಲೌಕಿಕ ಪಾರಮಾರ್ಥಿಕವೆರಡನು ಮಾಣದೆ ನಡೆಸುತಲಿಹನಿಂತು ಸುಜ್ಞಾನೋಕ್ತಿಯಂತೆ ಈ ದಂಪತಿಗಳ ಸಂಸಾರ ಬಹು ಸರಸಾಗಿ ಲೋಕಕ್ಕೆ ಅನುಭವಾಮೃತವನ್ನು ನೀಡುತ್ತ ನಡೆದಿರುತ್ತಿರುವುದಕ್ಕೆ ಇವರಿಬ್ಬರ ಅಂಕಿತನಾಮಗಳೇ ಅನ್ವರ್ಥಕ ಪೂರ್ಣವಾಗಿದ್ದನ್ನು ಇಲ್ಲಿ ಕಾಣಬಹುದು. ಹೇಗೆಂದರೆ ಮಡಿ ಎಂದರೆ ಪರಿಶುದ್ಧ ಸ್ಥಿತಿ; ವಾಳ ಎಂದರೆ ಗಂಟು ಅಥವಾ ಗಡ್ಡೆ; ಮಾಚಯ್ಯನೆಂದರೆ ಎಂದೂ ಮುಟ್ಟಾಗದ ಅರ್ಥಾತ್ ಮೈಲಿಗೆಯಾಗದ ಸ್ಥಿತಿಯಿಂದ ದೂರಿದ್ದವ; ಒಟ್ಟಿನಲ್ಲಿ ಮಡಿವಾಳ ಮಾಚಯ್ಯನೆಂದರೆ ಪರಿಶುದ್ಧ ಸ್ಥಿತಿಗೆ ಎಂದೂ ಮುಟ್ಟುಚಟ್ಟುಗಳನ್ನಂಟಿಸಿಕೊಳ್ಳದ ಪರಮ ಸ್ಥಿತಿಯನ್ನು ಹೊದ್ದು ಕೊಂಡಿರುವವನೆಂದರ್ಥ. ಇದರಂತೆ ಮಲ್ಲಿಗಮ್ಮನೆಂದರೆ ಸಚ್ಚಾರಿತ್ರಮಯ ಕಾಯಕವನ್ನೇ ಕೃತಿಗಿಳಿಸಿ, ಸದ್ವಾಸನೆಯನ್ನು ಸುತ್ತಲೂ ಬೀರುತ್ತಿರುವ ಅಮ್ಮವ್ವೆಯೇ ಮಲ್ಲಿಗಮ್ಮನೆಂದರ್ಥ; ಇಂತಿವೆ ಇವರ ಅಂಕಿತ ನಾಮಗಳು."[೫೧]

ಮಲ್ಲಿಗಮ್ಮನು ಮುಂದಾಗಿ ತನ್ನ ಬೆನ್ನನ್ನೇ ಕಲ್ಲು, ಕಣ್ಣು ಗುಡ್ಡಿಯನ್ನೇ ನೀಲಿ, ಮೆದುಳನ್ನೇ ಗಂಜಿ ಹಾಗೂ ರಕ್ತವನ್ನೇ ಶುದ್ಧ ಜಲವನ್ನು ಮಾಡಿ, ಆನಂದ ಭಾವದೊಡನೆ

"ಥಕ್‌ಥಕ್" ಕುಣಿಯುತ್ತ ಮುಗಿದ ಕೈಬಾಗಿದ ತಲೆಯುಳ್ಳವಳಾಗಿ 'ಹೂಂ ಪತಿದೇವ, ಶರಣರ ವಸ್ತ್ರಗಳನ್ನೇ ಮಡಿ ಮಾಡಿ ಕೊಡಿರಿ' ಎಂದು ಪ್ರಾರ್ಥಿಸಿದಳು. ಇದನ್ನೆಲ್ಲ ನೋಡಿದ ಮಾಚರಸ 'ನೀ ಸಾಮಾನ್ಯ ವಸ್ತುವಲ್ಲ, ಆ ಹಿಪ್ಪರಗಿಯ ಸಂಗಮನಾಥನೇ ನಿನ್ನ ಆತ್ಮಸ್ವರೂಪಿಯಾಗಿ ಅರ್ಥಾತ್ ಮಂಗಲಮಯ ಲಿಂಗರೂಪಿಯಾಗಿ ವಿಲಾಸ ನಡೆಸಿದ್ದಾನೆಂದ ಮೇಲೆ ನಿನಗೆ ನಾನೇನು ಅಪ್ಪಣೆ ನೀಡಬಲ್ಲೆ; ಎಂದು ಅವಳಿಗೆ ಶರಣು ಹೋಗುವನು.

ಮಲ್ಲಿಗಮ್ಮನ ಈ ತ್ಯಾಗ-ಮನೋಭಾವ ಇತಿಹಾಸದಲ್ಲಿ ಮುಚ್ಚಿ ಹೋಗಿದೆ. ಲೇಖಕರು ಈ ಕುರಿತು ಬೆಳಕನ್ನು ಹರಿಸಿದ್ದಾರೆ. ಸಂಶೋಧಕರಿಗೊಂದು ಸವಾಲನ್ನು ನೀಡಿದ್ದಾರೆ. ಮಲ್ಲಿಗಮ್ಮನ ಬಗೆಗೆ ಹೆಚ್ಚಿನ ಸಂಶೋಧನೆಗಳು ನಡೆದು ಆ ಶಿವಶರಣೆಯ ಬದುಕಿನ ಮೇಲೆ ಕ್ಷ-ಕಿರಣ ಇನ್ನೂ ಬೀಳಬೇಕಿದೆ. ಅದರ ಒಂದು ಕಾರ್ಯಾರಂಭವನ್ನು ಕ.ಬ.ಅಂಗಡಿಯವರು ಈ ಕೃತಿಯ ಮೂಲಕ ಮಾಡಿದ್ದಾರೆ.

ಕನ್ನಡ ನಾಡು ಕಂಡ ಮೊದಲ ಕವಿಯತ್ರಿ ಮತ್ತು ಸನ್ಯಾಸಿನಿ ಅಕ್ಕಮಹಾದೇವಿ. ಇವರ ಚರಿತೆಯನ್ನು ಹಲವಾರು ಲೇಖಕರು ಕಾಲಕಾಲಕ್ಕೆ ಬರೆದಿರುತ್ತಾರೆ. ಅದೇ ರೀತಿ ಅವಳನ್ನು ಹೊಸ ಹೊಸ ದೃಷ್ಟಿಕೋನಗಳಿಂದ ವಿಮರ್ಶಿಸುವ ಕಾರ್ಯ ನಡೆದಿರುತ್ತದೆ. ಈ ಐವರಲ್ಲಿ ವಿಶೇಷವಾದ ವ್ಯಕ್ತಿತ್ವವುಳ್ಳವಳು ಅಕ್ಕಮಹಾದೇವಿ. ಲೌಕಿಕ ಜಗತ್ತಿಗೆ ಸನ್ಯಾಸಿನಿಯಾಗಿ ತೋರಿ ಪಾರಮಾರ್ಥಿಕ ಪ್ರಭೆಯಲ್ಲಿ ತನ್ನ ದೇವರಾದ ಚೆನ್ನಮಲ್ಲಿಕಾರ್ಜುನನನ್ನು ಗಂಡನೆಂದು ಸ್ವೀಕರಿಸಿ ತನ್ನ ದಾಂಪತ್ಯಕ್ಕೆಲ್ಲೂ ಕುಂದು ಬರದಂತೆ ಬದುಕಿದವಳು. ಕನ್ನಡದ ಹೆಣ್ಣುಮಕ್ಕಳ ಆಧ್ಯಾತ್ಮ ಧ್ವನಿಗೆ ಕೊರಳಾದಾಕೆ. ಸಾವಿರಾರು ಕೃತಿಗಳು ಅಕ್ಕಮಹಾದೇವಿಯ ಕುರಿತು ರಚನೆಯಾಗಿದ್ದರೂ ಪ್ರತಿ ಕೃತಿಯಲ್ಲೂ ಅವಳ ಹೊಸ ವ್ಯಕ್ತಿತ್ವ ದರ್ಶನವಾಗುತ್ತದೆ.

ಅದೇ ರೀತಿಯಾಗಿ ಮೋಳಿಗೆಯ ಮಹಾದೇವಮ್ಮನ ಕುರಿತು

"ಮೋಳಿಗೆ ಕಾಯಕದಯ್ಯನ ಪಾದವ ಪಿಡಿದು

ಬಾಳಿಗೆ ಬೆಲೆ ತಂದಮ್ಮನ ನಿಜದಿಂ ನೆನೆದು

ಕಾಲನ ಬಾಧೆಯ ಕೀಳುತ್ತತ್ತದನೆಸೆದು

ಕೇಳುವೆವಮ್ಮಾ ರಕ್ಷಿಸೇ !! ನೀ ಮುಂಬಂದು"

'ಆ ಮಹಾತಾಯಿ ಯಾರು ?' ಎಂಬ ಶೀರ್ಷಿಕೆಯಡಿ ಮೋಳಿಗೆಯ ಮಹಾದೇವಮ್ಮನವರನ್ನು ಸಂಕ್ಷಿಪ್ತವಾಗಿ ಪರಿಚಯಿಸಿದ್ದಾರೆ. 'ಆಗಿನ ಕಾಶ್ಮೀರ ನಾಡಿನ ಧಾರ್ಮಿಕ ಸ್ಥಿತಿ' ಎನ್ನುವ ಶೀರ್ಷಿಕೆಯಡಿ ೧೨ನೆಯ ಶತಮಾನದಲ್ಲಿ ಭಾರತದಲ್ಲಿರಬಹುದಾದ ಧಾರ್ಮಿಕ ಸಂವೇದನೆಗಳನ್ನು ಸಂಕ್ಷಿಪ್ತವಾಗಿ ಬಿಡಿಸಿಟ್ಟಿದ್ದಾರೆ.

ಈ ಕಾಶ್ಮೀರ ನಾಡಿನ ದೊರೆ ಮಹಾದೇವ ಭೂಪಾಲನೇ ಮೋಳಿಗೆಯ ಮಾರಯ್ಯ. ಅವನ ಮಹಾರಾಣಿಯೇ ಮಹಾದೇವಮ್ಮ. ಇವಳ ಮೊದಲಿನ ಹೆಸರು ಗಂಗಾಂಬಿಕೆ. "ಕಾಶ್ಮೀರ ದೊರೆ ಮಹಾದೇವ ಬೂಪಾಲನು ಸಕಲೈಹಿಕಭೋಗ ಭಾಗ್ಯಂಗಳಿಂದೊಡಗೂಡಿ ತನ್ನ ಹಾಗೂ ತನ್ನ ಪ್ರಜಾಹಿತಕ್ಕಾಗಿ ಕರ್ತವ್ಯವನ್ನು ಚೆನ್ನಾಗಿ ಸಾಗಿಸುತ್ತಿದ್ದರೂ ಪಾರಮಾರ್ಥಿಕಾಚಾರ ವಿಚಾರಗಳಲ್ಲಿ ತೋರುವ ಸರ್ವಸಮತಾಭಾವವು ತಮ್ಮೊಳಗೆ ಕಾಣದಿರುವುದನ್ನು ತಿಳಿದು, ಈ ದ್ವೈತಭಾವದಸ್ಥಿತಿಗೆ ಕಾರಣವಾವುದಿರಬೇಕೆಂದು ಹಳಿಹಳಿಪಡುತ್ತ ಚಿಂತನಗೊಳ್ಳುತ್ತಲಿದ್ದನು. ಇಂತಿರುವಾಗ ಸತ್ಯಸ್ವರೂಪದ ವಸ್ತುಸ್ಥಿತಿಯನ್ನು ಸದಾ ತನ್ನ ಪತಿಗೆ ಅರಿಕೆ ಮಾಡಿಕೊಡುತ್ತಿದ್ದ ಗಂಗಾಂಬಿಕೆಯು ಮುಂಬಂದು, ಅಯ್ಯಾ ಪ್ರಾಣೇಶ, ಜಾಣನಾತನು ಲೌಕಿಕ ಪಾರಮಾರ್ಥಿಕವೆರಡನು ಮಾಣದೆ ನಡೆಸುವನಿಂತು ಎಂಬ ಅನುಭಾವಿಗಳ ನುಡಿಯಂತೆ ಆಚಾರವುಳ್ಳವನೇ ಜಾಣ ಅರ್ಥಾತ್ ಮಹಾಜ್ಞಾನಿಯೆನಿಸುವನು. ಇಂಥವನ ಆಚಾರ ವಿಚಾರಗಳೇ ಸತ್ಯಸ್ಥಿತಿಯನ್ನು ಹೊತ್ತಂತಿಹವು ! ಎಂದು ತನ್ನ ಪತಿರಾಯಂಗೆ ಅರಿಕೆ ಮಾಡಿಕೊಂಡಳು."[೩೨] ಇಬ್ಬರೂ ಅಣ್ಣ ಬಸವಣ್ಣನತ್ತ ಹೋಗಲು ನಿರ್ಧರಿಸುತ್ತಾರೆ. ಬಸವಣ್ಣನವರಲ್ಲಿ ಹಾಗೆ ಹೋಗುವುದಾದರೂ ಹೇಗೆ? ಸತ್ಯ-ಶುದ್ಧ ಕಾಯಕವೊಂದನ್ನು ಹೊತ್ತುಕೊಂಡು ಹೋಗಬೇಕು ಎಂದು ಗಂಗಾಂಬಿಕೆ ನುಡಿದಾಗ ಮೋಳಿಗೆಯ ಕಾಯಕವನ್ನು (ಕಟ್ಟಿಗೆ ಹಾಕುವುದು) ಹೊತ್ತು ಕೊಂಡು ಹೋಗಲು ನಿರ್ಧರಿಸಿದರು. ಅದರಂತೆ ಕಲ್ಯಾಣಕ್ಕೆ ಬಂದು ಬಸವಣ್ಣನವರ ಕಾಯಕ ನಿರತ ಪರೀಕ್ಷೆಯಲ್ಲಿ ಉತ್ತೀರ್ಣರಾಗಿ ಶರಣ ದಂಪತಿಗಳಾಗಿ ಬಾಳಿ ಬದುಕಿದರು.

"ಶರಣರ ಬಾಗಿಲ ಮುಂದಣ ಅಕ್ಕಿಯ ತರಿಸಿ,

ಹರುಷದೊಳನ್ನವನಾಗಿಸಿ ಜಂಗಮಕುಣಿಸಿ,

ಸರಸದಿ ಬಂದ ಪ್ರಸಾದವ ನಲವಿಂದುಂಡು,

ಮೆರೆಯುವ ಲಕ್ಕಮ ತಾಯಿಯ ಕಂಡು,



ಅಣ್ಣನ ದಾರಿತೋರಿದ

ಕಾರಣಿಕ ಶಿವಯೋಗಿ

# ಶ್ರೀ ಹಾನಗಲ್ಲ ಕುಮಾರಸ್ವಾಮಿ

ಬೆಲೆ: ೦—೪೦

ವೀರಶೈವ ಪ್ರಗತಿಶೀಲ ಯುವಕ ಸಂಘ, ಗದಗ-ಬೆಟಗೇರಿ.

ಅಣ್ಣನ ದಾರಿ ತೋರಿದ ಕಾರಣಿಕ ಶಿವಯೋಗಿ ಶ್ರೀ ಹಾನಗಲ್ಲ ಕುಮಾರಸ್ವಾಮಿ ಕಿರುಗ್ರಂಥ

ಶೀರ್ಷಿಕೆಯನ್ನು ಗಮನಿಸಿದಾಗ ಕ.ಬ.ಅಂಗಡಿಯವರ ಮೇಲೆ ಹಾನಗಲ್ಲ ಶ್ರೀಗಳ ಪ್ರಭಾವವನ್ನು ಗುರುತಿಸಬಹುದು.

ಈ ಶೀರ್ಷಿಕೆ ಹಾನಗಲ್ಲ ಕುಮಾರಸ್ವಾಮಿಗಳನ್ನು ಕಾರಣಿಕ ಪುರುಷನೆಂಬುದನ್ನು ವಿವೇಚಿಸಿದರೆ, ಬಸವಣ್ಣ ಮತ್ತು ಸಮಕಾಲೀನ ಬದುಕಿನೊಂದಿಗೆ ಮಧ್ಯವರ್ತಿಯಾಗಿ ನಿಲ್ಲುವವರು ಹಾನಗಲ್ಲ ಕುಮಾರಸ್ವಾಮಿಗಳು. ಬಸವಣ್ಣನ ಕಾರ್ಯವನ್ನು ಪುನರುತ್ಥಾನ ಮಾಡಲು ಬಂದವರು ಎಂಬ ಸ್ಪಷ್ಟ ಚಿತ್ರವನ್ನು ನೀಡುತ್ತದೆ. ಬಸವಣ್ಣನವರು ಬದುಕಿದ ದಾರಿಯಲ್ಲಿಯೇ ತಾವು ಬದುಕಲು ದಾರಿ ತೋರಿದವರೂ ಎಂಬಂರ್ಥವನ್ನೂ ಇಲ್ಲಿ ವಿಶದಪಡಿಸಬಹುದು. ಕುಮಾರ ಶಿವಯೋಗಿಗಳ ಬಗೆಗೆ ಬರೆದ ಅನೇಕ ಕಥೆ–ಪುರಾಣ–ಕಾದಂಬರಿ–ಚರಿತ್ರ ಕುಸುಮಗಳಿದ್ದರೂ ಈ ಕೃತಿಯಲ್ಲಿ ಕಂಡುಬರುವ ಕೆಲವು ವಿಚಾರಗಳು ಅಧ್ಯಯನದ ದೃಷ್ಟಿಯಿಂದ ದಾಖಲಾರ್ಹ ವಿಷಯಗಳು. ಹಾನಗಲ್ಲ ಕುಮಾರಸ್ವಾಮಿಗಳ ಮತ್ತು ಅಂಗಡಿಯವರ ಒಡನಾಟ್ಲ ಮುಖ್ಯ ವಿಷಯವಾಗಿದೆ. ಕ.ಬ.ಅಂಗಡಿಯವರೇ ಹೇಳುವಂತೆ "೧೯೧೨ನೆಯ ಇಸವಿ ಮುಲ್ಕೀ ಪರೀಕ್ಷೆ ಪಾಸಾದ ವರುಷ. ಪಾಲಕರೊಂದಿಗೆ ಶಿವಯೋಗಮಂದಿರಕ್ಕೆ ಸನ್ನಿಧಿ ದರ್ಶನಕ್ಕೆ ಹೋದೆ. ಅಲ್ಲಿ ನನ್ನ ಹಾಗೆಯೇ ಕೆಲವರು. ಅಲ್ಲದೆ ಸಂಸ್ಕೃತ, ಇಂಗ್ಲೀಷ ಕಲಿತವರೂ, ಕಲಿಯಬೇಕೆಂಬವರೂ; ಗಾನ, ವಾದನ, ನಾಟಕ, ಪುರಾಣ, ಕೀರ್ತನ ಕಲಾಪೇಕ್ಷಿಗಳೂ; ವಿಭೂತಿ–ಶಿವದಾರ–ಪೀಠಿಕೆ–ಶಲಾಮೂರ್ತಿಗಳ ತಯಾರಕರೂ, ಪಟುವರ್ಗವೂ, ದೇವರುಗಳೂ, ಸಮಾಜ ಹಿತಚಿಂತಕವರ್ಗವೂ ಆ ಸನ್ನಿಧಿಯಲ್ಲಿದ್ದುದು ಕಂಡಿತು. ಈ ಎಲ್ಲ ಬಳಗದೊಡನೆ ಶ್ರೀಗಳವರ ವಿಚಾರಣೆಯು ನಡೆಯುತ್ತಲೇ ಇದ್ದಿತು; ನಡೆದಿತ್ತು. ಶ್ರೀಗಳವರಿಗೆ ನಮಸ್ಕರಿಸಿ ಅಲ್ಲಿಂದ ತಿರುಗುತ್ತಿದ್ದವರಿಂದ 'ಮಹಾತ್ಮ, ಪುಣ್ಯವಂತ, ನಮ್ಮಪ್ಪ, ಸಮಾಜದ ತಂದೆ, ಬಡವರ ಬಂಧು, ಬಸವಣ್ಣ ಹುಟ್ಟಿ ಬಂದ್ಹಾಂಗ ಬಂದಾನ' ಎಂಬ ಉದ್ಗಾರವನ್ನು ಕೇಳಿಯೂ, 'ತಮ್ಮ, ನೀನು ಇನ್ನೂ ಹೆಚ್ಚಿಗೆ ಕಲಿ; ಏನಾದರೂ ಬೇಕಿದ್ದರೆ ಬಂದು ಕೇಳತಾ ಇರು' ಎಂದು ನನಗೆ ತೋರಿದ ಶ್ರೀಗಳವರ ಅನುಕಂಪ ಭಾವನೆಯನ್ನು ನೆನೆದೂ ಸಂತೋಷಗೊಂಡು ತಿರುಗಿದೆ; ಆಗಾಗ ಶ್ರೀಗಳವರ ದರ್ಶನಕ್ಕೂ ಹೋಗುತ್ತಲೂ ಇದ್ದೆ."[೫೪] ಎಂದು ನೆನದಿದ್ದಾರೆ. ಇಂತಹ ಮಹಾವಿಭೂತಿ ಸದಾಶಿವಯೋಗಿ ಬಾಲ್ಯದಿಂದ ಲಿಂಗೈಕ್ಯರಾಗುವವರೆಗೆ ಈ ಸಮಾಜ ಕಲ್ಯಾಣಕ್ಕೆ ಕರುಣಾ ದೃಷ್ಟಿಯಿಂದ ಸಲ್ಲಿಸಿದ ಸೇವೆಯು ಅನುಪಮ. ಅವರ ಚರಿತ್ರೆ ಅಜರಾಮರ. ಅವರ ಜೀವನಾನುಕಂಪೆಯನ್ನು ವಸ್ತವನ್ನಾಗಿಟ್ಟುಕೊಂಡು ಈ ಕಿರು ಹೊತ್ತಿಗೆ ರಚಿತವಾಗಿದೆ. ಹಾನಗಲ್ಲ ಕುಮಾರ ಶಿವಯೋಗಿಗಳ ವ್ಯಕ್ತಿತ್ವವನ್ನು ಕಣ್ಣಾರೆ ಕಂಡು ಅದರ ಸವಿಯನ್ನೂ ಉಂಡ ಲೇಖಕರಿಗೆ ಸಹಜವಾಗಿ ಕುಮಾರಸ್ವಾಮಿಗಳು ಮಾನಸ ಗುರುವಾಗಿ ನಿಲ್ಲುತ್ತಾರೆ.

ಬದುಕಿಗೆ ತಿರುವು ನೀಡಿದ ಆ ಗುರುವನ್ನು ತಮ್ಮ ಕರ್ತೃತ್ವದ ಶಕ್ತಿಯಿಂದ ಶಬ್ದಗಳಲ್ಲಿ ಹಿಡಿದಿಡುವ ಪ್ರಯತ್ನವನ್ನು ಈ ಕಿರು ಹೊತ್ತಿಗೆಯಲ್ಲಿ ಮಾಡಿದ್ದಾರೆ. ಶಿವಶರಣರ ತತ್ತ್ವಗಳನ್ನು ಅರ್ಥೈಸಿಕೊಂಡು ಅದೇ ದಾರಿಯಲ್ಲಿ ಬದುಕಿದ ಕೆಲವೇ ಕೆಲವು ಮಹಿಮರಲ್ಲಿ ಹಾನಗಲ್ಲ ಕುಮಾರ ಶಿವಯೋಗಿಗಳೂ ಒಬ್ಬರು. ಅಂತಹ ಶಿವಯೋಗಿ-ಸಾಧಕರ ಕಣ್ಣಿಗೆ ಬಿದ್ದ ಕ.ಬ.ಅಂಗಡಿಯವರ ಬಾಳು ಕೂಡ ಪರುಷ ಮಣಿಯಾಯಿತು. ಇವರ ಅನುಪಮ ಕತೃತ್ವ ಶಕ್ತಿಯಿಂದ ಹೊರಬಂದ ಈ ಕಿರು ಕೃತಿಯು ಈ ನೆಲದಲ್ಲಿ ಬದುಕುವ ಶ್ರೀಸಾಮಾನ್ಯನ ಪ್ರತಿ ಹೆಜ್ಜೆಗಳಿಗೆ ಭಾವನೆಗಳ ತುಡಿತಕ್ಕೆ ಬೆಳಕನ್ನಿತ್ತು ಅವರವರ ಗುರಿಯನ್ನು ತಲುಪಿಸುವಲ್ಲಿ ಬೇಕಿರುವ ಪ್ರಣತಿಯಂತಿದೆ.

ಜಾಗೃತಗೊಂಡ ಸಮಾಜದ ವ್ಯಾಖ್ಯಾನಕ್ಕೆ, ಸಾಮಾಜಿಕ ಸಂಘಟನೆಗಳನ್ನು ಕಟ್ಟಿ-ಬೆಳೆಸುವ ಪ್ರಕ್ರಿಯೆಗೆ, ಸಾಹಿತ್ಯ ಕಲೆಗಳನ್ನು ಸಮಾಜದ ಅಭ್ಯುದಯಕ್ಕಾಗಿ ವಿನಿಯೋಗಿಸುವ ಕಲೆಗಳಿಗೆ ಕಾರಣರಾದವರು ಕುಮಾರಸ್ವಾಮಿಗಳು.

"ಜನನಿ ಜನ್ಮ ಭೂಮಿಶ್ಚ ಸ್ವರ್ಗಾದಪಿ ಗರೀಯಸಿ"

ಗುರು, ತಂದೆ, ತಾಯಿ, ತಾನು ಹುಟ್ಟಿದ ಭೂಮಿ, ಆಡುವ ಭಾಷೆ ಸರ್ವಶ್ರೇಷ್ಠವಾದವುಗಳು. ಮನುಷ್ಯನೋರ್ವನ ಹುಟ್ಟು ಮತ್ತು ವ್ಯಕ್ತಿತ್ವದ ಬೆಳವಣಿಗೆಯಲ್ಲಿ ಕಾರಣವಾಗುವಂತಹುದು. ಅವರ ಸೇವೆ, ಅವರ ಆರೈಕೆ, ಅವರ ಮಾತಿಗೆ ಮನ್ನಣೆ ನೀಡುವುದು ಶಿವನ ಪೂಜೆಗೆ ಸಮಾನ. ಅನ್ಯ ದೈವದ ಕಲ್ಪನೆಯೇ ಇಲ್ಲಿ ಅನವಶ್ಯಕ. ಇಂದು ಮತ್ತು ಮುಂದೆಂದೂ ಶಿಕ್ಷಣದಲ್ಲಿ ಇಂತಹ ವಿಷಯಗಳನ್ನು ನೀಡುವಂತಾಗಬೇಕು. ಸಂಮೃದ್ಧ, ಸೌಹಾರ್ದ ಮತ್ತು ಸ್ವಾಸ್ಥ್ಯ ಸಮಾಜದ ನಿರ್ಮಾಣದಲ್ಲಿ ಈ ಆಕರಗಳು ಪ್ರಮುಖ ಪಾತ್ರವಹಿಸುತ್ತವೆ. ಈ ವಿಷಯ ವಿಚಾರಗಳು ವ್ಯಕ್ತಿಯೋರ್ವನ ಮನೋಬಲವನ್ನು ಜೀವನ ಪಥದ ತಳಹದಿಯನ್ನು ಗಟ್ಟಿ ಮಾಡುತ್ತವೆ. 'ಶಿಕ್ಷಣ' ತಜ್ಞರಾಗಿ ಕ.ಬ.ಅಂಗಡಿಯವರ ಈ ವಿಚಾರಗಳು ಸಮಯೋಚಿತವಾಗಿವೆ.

ಇಲ್ಲಿ ಪ್ರತಿಯೊಂದು ನುಡಿಯು ಬಸವಾದಿ ಶರಣರ ಸೂನ್ನುಡಿಗಳಾಗಿದ್ದು, ಸರಳವಾದ ಭಾಷೆಯಲ್ಲಿ ಓದಿಸುತ್ತಾ ಸಾಗುವ ಅವರ ಈ ಹಾಡುಗಬ್ಬ ಅವರಿಗೆ ಬಸವಾದಿ ಪ್ರಮಥರರ ಮೇಲಿದ್ದ ಭಕ್ತಿ ನಿಷ್ಠೆಯನ್ನು ತೋರ್ಪಡಿಸುತ್ತದೆ. ಅದರೊಟ್ಟಿಗೆ ಗದ್ಯದಲ್ಲಿ ಅವರು ನೀಡುವ ವಿವರಣೆಯು ಅವರ ಭಾಷಾ ಸಾಮರ್ಥ್ಯವನ್ನು ತೋರ್ಪಡಿಸುತ್ತದೆ.

"ಎಂಟು ವರುಷಗಳ ಎಳೆಯ. ಆಗಿನ ಹೆಸರು ಹಾಲಯ್ಯ, ತಂದೆಯನ್ನು ಕಳಕೊಂಡ ಕಂದ. ಸರ್ವಕ್ಕೂ ತಾಯಿಯೇ ಆತಗೆ. ಊಟಕ್ಕೆ ಬಡವ, ಸಂಸ್ಕೃತಿಗೆ ಬಲ್ಲಿದ. ತಿರಿದುಂಬ ಕಾಯಕ, ತಿಳುವಳಿಕೆಯ ನಾಯಕ. ಒಂದು ದಿನ ಮಧ್ಯಾಹ್ನ ಊಟದ ಸಮಯ, ಕಂತೆಯ ಭಿಕ್ಷೆಯಿಂದ ಬಂದುದೊಂದೇ ರೊಟ್ಟಿಯಿದೆ, ಅದನ್ನೇ ಮಗು ಹಾಲಯ್ಯನ ಕರೆದು, ತಾಯಿ ನೀಲಮ್ಮ ಅವನಿಗೆ ನೀಡುವವಳಿದ್ದಳು. ಅಷ್ಟರಲ್ಲಿ 'ಹಸಿವೆ ಭಿಕ್ಷೆಯನ್ನಿಕ್ಕಿ' ಎಂದೋರ್ವ ಮುದುಕಯ್ಯನು ಬಾಗಿಲಿಗೆ ನಿಂತ. ತಾಯಿ ನೀಲಮ್ಮ 'ಏ ಸ್ವಾಮಿ ಮುದುಕ.......' ಎಂದೆನ್ನುವವಳಿದ್ದಳು; ಹಾಲಯ್ಯ 'ಚಟಕ್ಕನೆ' ಎದ್ದು ತನಗಾಗಿದ್ದ ರೊಟ್ಟಿಯನ್ನು ತಕ್ಕೊಂಡು, ಆ ಸ್ವಾಮಿಗೆ ನೀಡಿಯೇ ಬಿಟ್ಟ. ಮಗು, ಇದೇನು ಮಾಡಿದಿ. ನಿನಗಾಗಿದ್ದದ್ದೊಂದೇ ರೊಟ್ಟಿ, ನೀನು ಉಪವಾಸ ಮಾಡಬೇಕಾಯಿಲ್ಲ ! ಎಂದಳಾ ತಾಯಿ."[೩೩] ಈ ಉದಾಹರಣೆಯೊಂದಿಗೆ ಕ.ಬ.ಅಂಗಡಿಯವರಲ್ಲಿದ್ದ ಗದ್ಯ ಸಾಹಿತ್ಯದ ಸಾಮರ್ಥ್ಯವನ್ನು ಗುರುತಿಸಬಹುದಾಗಿದೆ. ಒಬ್ಬ ವ್ಯಕ್ತಿಯ ನೂರು ವರುಷಗಳ ಜೀವನದ ಸುಧಿರ್ಘತೆಯನ್ನು ಇಷ್ಟೊಂದು ಸಂಕ್ಷಿಪ್ತವಾಗಿ ಚಿತ್ರಿಸಲು ಸಮರ್ಥ ಗದ್ಯವೊಂದರಿಂದಲೇ ಸಾಧ್ಯ. ಇಂತಹ ಗದ್ಯಶೈಲಿಯು ಇವರ ಬರವಣಿಗೆಯ ಜೀವಾಳವಾಗಿದೆ. ಯಶಸ್ವಿಯೂ ಆಗಿದ್ದಾರೆ.

'ಅದರಕ್ಕೆ ಕಹಿ, ಉದರಕ್ಕೆ ಸಿಹಿ, ಪ್ರಸಂಗ' ಎಂಬ ತಲಬರಹದಡಿ "ಗಾವಠಿ ಶಾಲಾ ಶಿಕ್ಷಕನಾದ, ಕಲಿಸುತ್ತ ಕಲಿತು ಕಲಿತು ಲೋಕಶಿಕ್ಷಕನಾದ, ಸಮಾಜ ರಕ್ಷಕನಾದ. ಶಾಲಾ ಗುರು ಕಾಯಕ ವೃತ್ತಿಯಾಂತ ಹಾಲಯ್ಯ ಕಲಿಸಿ, ಕಲಿಸಿ, ಕಲಿಯುತ್ತ ಕಲಿಸಿ, ಕಲಿತವರನ್ನೂ ಮೀರಿ, ಮೀರಿದುದನ್ನು ಎಂದರೆ ಪರವಸ್ತುವಿನ ಬಗೆಯನ್ನರಿತು ಬಲ್ಲಿದನಾದ. ಶರಣರ ವಚನ ಶಿವಾನುಭವ ಶಾಸ್ತ್ರಗಳ ಅಭ್ಯಾಸದಿಂದ ಮಹಾನುಭಾವಿಗಳ ಶ್ರೇಣಿಯಲ್ಲಿ ಗಣಿಸಲ್ಪಟ್ಟವರಿಂದ ಕಾಲ ಪರಿಸ್ಥಿತಿಯಂತೆ ದ್ವೈತಾದ್ವೈತಾದಿ ತತ್ತ್ವಗಳ ವಿಮರ್ಶೆಯತ್ತ ಮತಿಗತಿಯುಳ್ಳವನಾದ."[೩೪] ಎನ್ನುವ ಲೇಖಕರ ನುಡಿಗಳು ಕುಮಾರಸ್ವಾಮಿಗಳ ಬದುಕಿನ ಆಧ್ಯಾತ್ಮದ ಬೆಳವಣಿಗೆಯನ್ನು ಗುರುತಿಸುತ್ತದೆ.

'ಋಣ ಮುಕ್ತ ಕುಮಾರ' ಎನ್ನುವ ಶೀರ್ಷಿಕೆಯಡಿ ಹಾನಗಲ್ಲ ಕುಮಾರ ಶಿವಯೋಗಿಗಳು ಸಂಸಾರವನ್ನು ತ್ಯಾಗಮಾಡಿ ಸಮಾಜವನ್ನು ಬಲಪಡಿಸುವ ಇಚ್ಛೆಯನ್ನು ಹೊಂದಿದ ಚಿತ್ರಣವಿದೆ. ಅವರ ಭಾಷೆಯ ಸರಳತೆಗೆ, ಸಮಾಜದ ಕಳಕಳಿ ಅಭಿವ್ಯಕ್ತಿಗೆ ಈ ಸಂಭಾಷಣೆಗಳು ಹೆಚ್ಚು ಪ್ರತಿಕ್ರಿಯಿಸುತ್ತವೆ. "ಮುಚ್ಚಿಡಲೇಕಮ್ಮ ದಟ್ಟ ದರಿದ್ರತೆಯಿಂದ ಬಳಲುವ ವೀರಶೈವ ಸಮಾನದ ಸರ್ವೋನ್ನತೆಗೆ ಸೇವೆ ಸಲ್ಲಿಸಬೇಕೆಂದು ಕೌಮಾರ್ಯ ವ್ರತಧಾರಿಯಾಗಿದ್ದೇನೆ. ನಿನ್ನ ಪಾದಸಾಕ್ಷಿಯಾಗಿ ಈ ವ್ರತಪಾಲನೆಗೆ ಸರ್ವ ಬಗೆಯಿಂದಲೂ

ತ್ಯಾಗಕ್ಕೂ ಸಿದ್ಧನು. ಈ ನಿನ್ನ ಲೌಕಿಕ ತಾಯ್ತನದ ಋಣ ಭಾರದ ಪರಿಹಾರಕ್ಕಾಗಿ ನಿನ್ನನ್ನು ಪ್ರಾರ್ಥಿಸುವೆ. ಹರಸಿ, ಕೃಪೆಮಾಡು"[೫೭] ಎನ್ನುವಲ್ಲಿ ವೀರಶೈವ ಸಮಾಜದ ಅಂದಿನ ಧಾರುಣ ದೃಶ್ಯದ ಮೇಲೆ ಬೆಳಕು ಹರಿಸುತ್ತಾರೆ.

"ಎಲ್ಲ ದೇಶವು ಗ್ರಾಮಪಳ್ಳಿಮಠ ಮನೆಯಡವಿ

ಎಲ್ಲವ ಸಮಗಾಣ್ಬರಲ್ಲಮನಂಶಿಕರೆಂದು

ಬಲ್ಲ ಶ್ರೀಗುರುವೆ ಕೃಪೆಯಾಗು"

'ಜಂಗಮ ತತ್ತ್ವಮೂರ್ತಿ' ಎನ್ನುವ ಶೀರ್ಷಿಕೆಯಡಿ ಹಾನಗಲ್ಲ ಕುಮಾರ ಶಿವಯೋಗಿಗಳು ಮತ್ತು ಮಲ್ಲಣಾರ್ಯರು ಸಮಾಜದ ಚಿಂತನೆಯಲ್ಲಿ ಏಕೆ ಮತ್ತು ಹೇಗೆ ತೊಡಗಿದರೆಂಬುದನ್ನು ತಿಳಿಸುತ್ತಾರೆ. "ಬೆಳಕನು ನೀಡಲು ಬನ್ನಿ ಬಸವ, ತಿಳಿಮನವೀಯಲು ಬನ್ನಿ ಬಸವಾ......."

"ಈ ಪರಿ, ಇಂದಿನ ದುಸ್ಥಿತಿಯನ್ನೆತ್ತಿ ವೀರಶೈವ ಸಮಾಜ ಪುರುಷನು ಅಣ್ಣ-ಬಸವಣ್ಣನನ್ನು ಕರೆಯುತ್ತಿರುವ ದೈನ್ಯ ಭಾವವನ್ನು ತಿಳಿದು, ಕನಿಕರಗೊಂಡು ಸಮಾಜೋದ್ಧಾರದ ಕಾಯಕ ದೀಕ್ಷೆಯನ್ನು ತಾಳಿ; ಗುರು-ಲಿಂಗ-ಜಂಗಮಕೆ ತಿರಿದು ಭಕ್ತಿಯ ಮಾಡಿ, ಪರವನು ಕಾಂಬಾತ ಸ್ವಯ ಜಂಗಮ; ತತ್ತ್ವಜ್ಞಾನವ ತನ್ನವರ್ಗೆ ಬೋಧಿಸುತ ಪೃಥ್ವಿ ಸಂಚಾರ ಕರ್ತನಾದಾತ ಚರ ಜಂಗಮ; ಶಿವಸಾಮ್ರಾಜ್ಯವನು ಕವಡಿಗೆ ಸಮಗಂಡು ತನ್ನವರ ಪಾವನವ ಮಾಡುವಾತ ಪರಜಂಗಮನೆಂಬ ಜಂಗಮ ತತ್ತ್ವವನ್ನು ಪಾಲಿಸುತ್ತ ಸಮಾಜಕ್ಕೆ ಸೇವೆ ಸಲ್ಲಿಸಹತ್ತಿದರು."[೫೮]

ಅವರ ಈ ತ್ಯಾಗವು ಆಗಿನ ಸಮಾಜದ ಪೂಜ್ಯರಿಗೂ ಗುರು-ಹಿರಿಯರಿಗೂ ಹಿಡಿಸಿತು. ಅನೇಕ ಪ್ರಮುಖರೂ ತಮ್ಮ ಹೃತ್ಪೂರ್ವಕ ತನು-ಮನ-ಧನಗಳ ಬೆಂಬಲವನ್ನು ನೀಡಲು ಸಿದ್ಧರಾದರು ಮತ್ತು ಹಾನಗಲ್ಲ ಪೂಜ್ಯರ ಸಂಚಾಲಕತ್ವದಲ್ಲಿ ಆಗಾಗ ಕೂಡಿ ಸಮಾಜೋದ್ಧಾರ ಕ್ರಿಯಾಲೋಚನೆ ನಡೆಸಹತ್ತಿದರು. ಈ ನುಡಿಗಳು ಸಾಮಾಜಿಕ ಆಂದೋಲನವೊಂದು ಹೇಗೆ ಹುಟ್ಟು ಪಡೆಯುತ್ತದೆ ಎನ್ನುವದರ ಸಾದೃಶ್ಯವನ್ನು ಪ್ರಕಟಗೊಳಿಸುತ್ತದೆ. .

ಹಾನಗಲ್ಲ ಗುರು ಕುಮಾರರು ಸಮಾಜದ ಎಲ್ಲ ಹಂತಗಳನ್ನು ಸದೃಢಗೊಳಿಸಲು ಪ್ರಯತ್ನಿಸಿದ್ದಾರೆ ಆದರೆ ಅದು ಆಧ್ಯಾತ್ಮಿಕ ದೃಷ್ಟಿಕೋನದ ಹಿನ್ನೆಲೆಯಲ್ಲಿ. "ತತ್ತ್ವವು ಜ್ಞಾನ-

ಸಂಸ್ಕೃತಿಗಳ ನಿಧಿಯಾದರೆ, ಶುದ್ಧ ಕಾಯಕವು, ಜನಾನುರಾಗಕ್ಕೆ ಪಾತ್ರವಾದುದು."[೫೯] ಗಾನ ಕಲಾಚಾತುರ್ಯರ ತರಬೇತಿಗಾಗಿ ಗಾನ ಶಿಕ್ಷಣಾಲಯಗಳನ್ನು ಏರ್ಪಡಿಸಿದರು. ಅದರ ಫಲವಾಗಿ ಲಿಂ. ಗಾನಯೋಗಿ ಪಂಚಾಕ್ಷರ ಗವಾಯಿಗಳು, ರಾಜಗುರು ಬಸವರಾಜರು, ಪಂ. ಪುಟ್ಟರಾಜ ಗವಾಯಿಗಳು ಇವರೇ ಮೊದಲಾದವರು ಸಮಾಜಕ್ಕೆ ಈ ವಿಧವಾಗಿ ಸೇವೆ ಸಲ್ಲಿಸಿದುದು ಅಮೋಘ; ಅಪಾರ. ಇವರೆಲ್ಲರೂ ಕುಮಾರೇಶನ ಕೃಪಾ ಕಂದರೇ ಎನ್ನುವುದು ಇಲ್ಲಿ ಮುಕ್ಯ ಅಂಶ.

### ೪.೪.೬ ಶ್ರೀ ಶರಣ ಕ್ಷೇತ್ರ ಗೊಡಚಿವಸ್ತು ಮಡಿವಾಳ ಮಾಚಿತಂದೆ :

'ಶ್ರೀ ಶರಣಕ್ಷೇತ್ರ ಗೊಡಚಿವಸ್ತು ಮಡಿವಾಳ ಮಾಚಿತಂದೆ' ಎಂಬ ಈ ಕೃತಿ ಇವರ ಸಂಶೋಧನಾ ಕೃತಿಗಳಲ್ಲೊಂದು. ಸಂಶೋಧನಾ ಪ್ರವೃತ್ತಿಯು ಇವರು ವೃತ್ತಿಯಲ್ಲಿರುವಾಗಲೇ ಅಳವಡಿಸಿಕೊಂಡಿರುವಂತಹುದು. ತಾವು ಶಿಕ್ಷಕರಾಗಿ, ಶಿಕ್ಷಣಾಧಿಕಾರಿಗಳಾಗಿ ಹೋದ ಕಡೆಗಳಲೆಲ್ಲ ಸಂಶೋಧನಾ ದೃಷ್ಟಿಕೋನವಿಟ್ಟುಕೊಂಡು ಅಲ್ಲಿಯ ಪರಿಸರ, ಸಮಾಜ, ಜನಜೀವನ, ಆ ಪ್ರದೇಶದ ಮೇಲೆ ಯಾರ ಪ್ರಭಾವ, ಅದು ಸಗರನಾಡು, ಶರಣರ ನಾಡೋ, ಬಸವಾದಿ ಶರಣರು ಆ ಕ್ಷೇತ್ರದಲ್ಲಿ ನೆಲೆ ನಿಂತಿದ್ದರೆ? ಮುಂತಾದ ಗಹನ ವಿಷಯಗಳನ್ನು ಅಧ್ಯಯನಕ್ಕೊಳಪಡಿಸುತ್ತಿದ್ದರು. ಗೊಡಚಿ ವೀರಭದ್ರೇಶ್ವರ ಇವರ ಮನೆದೇವರು. ಮೇಲಾಗಿ ಗೊಡಚಿ ವೀರಭದ್ರನ ಮಹಾಭಕ್ತರು. ಹೀಗಾಗಿ ಗೊಡಚಿಯಲ್ಲಿ ೧೯೩೩ರಿಂದಲೇ ಸಂಘಟನಾತ್ಮಕವಾಗಿ ಗೊಡಚಿ ಸೇವಾ ಸಂಘ, ಬಸವ ಶಿವಾನುಭವ ಮಂಟಪಗಳನ್ನು ನಿರ್ಮಿಸಿ ಆ ಕ್ಷೇತ್ರದ ಅಭಿವೃದ್ಧಿಗೆ ಕಾರಣರಾಗಿದ್ದಾರೆ. ಗೊಡಚಿ ಕ್ಷೇತ್ರವು ಇವರ ಕಾರ್ಯಕ್ಷೇತ್ರವೂ ಆಗಿತ್ತು.

ಈ ಕೃತಿ ರಚನೆಗೆ ಕಾರಣಗಳನ್ನು ನೀಡಿದ್ದಾರೆ. "ಭಾರತದಲ್ಲಿ ಪೂಜಿಸಲ್ಪಡುವ ಅನೇಕ ವೀರಭದ್ರ ಕ್ಷೇತ್ರಗಳಲ್ಲಿ ಶರಣ ಕ್ಷೇತ್ರ ಗೊಡಚಿ ವಿಶಿಷ್ಟವಾದುದು. ಬಹಳ ಕಡೆ ಸ್ಥಾವರವೆನಿಸುವ ಲಿಂಗ ಹಾಗೂ ಮೂರ್ತಿಗಳ ಪೂಜೋತ್ಸವಂಗಳು ವೀರಶೈವ ಸಂಸ್ಕಾರ ಕ್ರಿಯೆಗಳಿಲ್ಲದೆ ನಡೆಯುತ್ತಿದ್ದರೆ, ಇಲ್ಲಿ ಮಾತ್ರ ಶರಣ ಧರ್ಮ ಪ್ರತಿಷ್ಠಿತ ಕ್ರಿಯಾಚರಣೆಗಳಿಂದ ನಡೆಯುತ್ತಿರುವುದೇ ಇದರ ವೈಶಿಷ್ಟ್ಯ!"[೬೦] 'ಸ್ಥಾವರಕ್ಕಳಿವುಂಟು ಜಂಗಮಕ್ಕಳಿವಿಲ್ಲ'ಎಂಬುದನ್ನು ನಿತ್ಯನೂತನವಾಗಿಸುವ ಕ್ಷೇತ್ರ ಇದಾಗಿದೆ.

ಕಲ್ಯಾಣ ಕ್ರಾಂತಿಯಿಂದಾಗಿ, ಬಸವಣ್ಣನವರ ಅಪ್ಪಣೆಯಂತೆ ಉಳುವೆಯತ್ತ ಸಾಗಿರುವ ಚೆನ್ನಬಸವಾದಿ ಶರಣ ಬಳಗವು, ಮಡಿವಾಳ ಮಾಚಿ ತಂದೆಗಳ ನೇತೃತ್ವದಲ್ಲಿ

ಶರಣಕ್ಷೇತ್ರ ಗೊಡಚಿ ವಸ್ತು



ಮಡಿವಾಳ

# ಮಾಚಿತಂದೆ



ಶ್ರೀ ಗೊಡಚಿ ವೀರಭದ್ರೇಶ್ವರ ಕ್ಷೇತ್ರ ಸೇವಾಸಂಘ
ಗೊಡಚಿ.

ಶರಣಕ್ಷೇತ್ರ ಗೊಡಚಿ ವಸ್ತು ಮಡಿವಾಳ ಮಾಚಿತಂದೆ

ಬಂದು, ಗೊಡಚಿ ಪ್ರದೇಶದಲ್ಲಿ ನೆಲೆಗೊಂಡಿದ್ದುದೇ ಈ ವಿಶೇಷತೆಗೆ ಕಾರಣ. 'ಶರಣಂ ಮೆಟ್ಟಿದ ನೆಲಮೇ ಪಾವನ ಕ್ಷೇತ್ರಮಲಾ' ಎಂಬ ಅನುಭವೋಕ್ತಿಯನಿಲ್ಲಿ ಸಾದರಪಡಿಸುವ ವಿಶೇಷತೆ ಈ ಕ್ಷೇತ್ರಕ್ಕಿದೆ.

ಮಡಿವಾಳ ಮಾಚಿದೇವರ ಚರಿತ್ರೆಗೆ ಹೊಸ ಬೆಳಕನ್ನು ನೀಡಿದ್ದಾರೆ. ಸಂಶೋಧನಾರ್ಹವಾದ ವಿಷಯಕ್ಕೆ ಈ ಕೃತಿಯ ಮೂಲಕ ಮುನ್ನುಡಿ ಬರೆದಿದ್ದಾರೆ. ಆ ಮುನ್ನುಡಿಯನ್ನು ಆಧಾರವಾಗಿಟ್ಟು ಹೆಚ್ಚಿನ ಸಂಶೊಧನೆಗಳು ನಡೆದಲ್ಲಿ ಮಡಿವಾಳ ಮಾಚಿದೇವರ ಕುರಿತ ಸತ್ಯಗಳು ಸಮರ್ಪಕವಾಗಿ ಹೊರಬರುವಂತಾಗುತ್ತದೆ. "ವಿಶ್ವಕ್ಕೆ ೧೨ನೆಯ ಶತಮಾನದಲ್ಲಿ ಧಾರ್ಮಿಕ ಬೆಳಕನ್ನು ಹಾಗೂ ಕಾಯಕದ ಹಿರಿಮೆಯನ್ನು ತೋರಿಸಿದ ಬಸವ, ಚೆನ್ನಬಸವ, ಅಲ್ಲಮಪ್ರಭು, ಮೋಳಿಗೆಯ ಮಾರಯ್ಯ, ಮೊದಲಾದ ಶರಣರಲ್ಲಿ ಪ್ರಸಿದ್ಧರಾದ ಮಡಿವಾಳ ಮಾಚಿತಂದೆಗಳ ಚರಿತ್ರೆಯನ್ನು ಇದುವರೆಗೂ ಯಾರೂ ವಿಶೇಷ ರೀತಿಯಲ್ಲಿ ಬರೆದಂತೆ ಕಾಣುವದಿಲ್ಲ. ಮಾಚಿದೇವರ ಚರಿತ್ರೆಯನ್ನು ಐತಿಹಾಸಿಕ ದೃಷ್ಟಿಯಿಂದ ವಿಚಾರಿಸಿ ಬರೆದು ಅವರ ಜೀವನ ಚರಿತ್ರೆಯ ಮೇಲೆ ಹೊಸ ಬೆಳಕನ್ನುಂಟುಮಾಡಿದ ಕೀರ್ತಿಯು ಕವಿ ಕರವೀರಪ್ಪನವರಿಗೆ ಸಲ್ಲುತ್ತದೆಂದು ಹೇಳಬಹುದು"-[೧] ಎನ್ನುವ ಮಾತುಗಳು ಅಂದಿನ ದಿನಗಳಲ್ಲಿ ಅವರಿಗಿದ್ದ ಹೊಸತನವನ್ನು ವಿವೇಚಿಸುವ ಶಕ್ತಿ ಸಾಮರ್ಥ್ಯವನ್ನು ತೋರಿಸುತ್ತದೆ.

ತಾವು ರಚಿಸಿದ ಈ ಗ್ರಂಥದಲ್ಲಿ ಶರಣರು ನೆಲೆಸಿದ, ಲಿಂಗಾನುಷ್ಠಾನಂಗೈದ, ಲಿಂಗೈಕ್ಯರಾದ, ಅತ್ತಿತ್ತ ಸಂಚರಿಸಿ ಪಾದಹಾಕಿದ ಇತ್ಯಾದಿ ಸ್ಥಳಗಳನ್ನು ಮಡಿವಾಳ ಮಾಚಿತಂದೆ, ಮುದ್ದುವೀರಣ್ಣ, ದಿಗಂಬರೇಶ್ವರ ಗುಡಿ, ಶರಣರ ಪ್ರಸಾದ ನಿಲಯಸ್ಥಾನ, ಶರಣರ-ಶರಣೆಯರ ವೀರಗಲ್ಲುಗಳು, ಕೂಗುಬಸಪ್ಪನ ಗಿಡ, ಚೆನ್ನಬಸವಣ್ಣನ ಭೂಗತ ಗುಡಿ, ಅಂಚಡಿ ಬಸಪ್ಪನಕಟ್ಟಿ, ರಣಬಾಜಿಮಡು, ಬಸವ ಶಿವಾನುಭವ ಮಂಟಪಾದಿಗಳ ಭಾವಚಿತ್ರ ಹಾಗೂ ಅವುಗಳ ಹೆಸರಿನೊಡನೆ ಐತಿಹಾಸಿಕ ಪೂರ್ಣ ವಿಷಯವನ್ನು ವಿವರಿಸಿದುದೂ ಅಲ್ಲದೆ "ಈ ಕ್ಷೇತ್ರಕ್ಕೆ 'ಶರಣಕ್ಷೇತ್ರ ಗೊಡಚಿವಸ್ತು ಮಡಿವಾಳ ಮಾಚಿತಂದೆ'ಯೆಂದು ಹೆಸರಿಸಿದುದೂ ಔಚಿತ್ಯ ಪೂರ್ಣ ವಿಷಯ."-[೨] ಸಂಶೋಧನಾ ದೃಷ್ಟಿಯನ್ನು ಹೊಂದಿ, ಗೊಡಚಿ ಕ್ಷೇತ್ರವನ್ನು ಗಮನಿಸಿದಾಗ ಅಲ್ಲಿ ಶರಣರ ಸಮೂಹವೇ ಕಂಡು ಬಂದಿದೆ. "ಈ ಕ್ಷೇತ್ರವನ್ನು ಬೆಳಗುತ್ತಿರುವ ದಿವ್ಯವಸ್ತು ಹತ್ತೆಂಟು ಸಾವಿರ ವರುಷಗಳ ಹಿಂದಿನಿಂದ ನಡೆದುಬಂದ, ಕಾಳಾಮುಖ-ಪಾಶುಪತ-ಶೈವಾದಿ ಮೂರ್ತಿ ಪೂಜಕ ಪಂಥದವರ ಆರಾಧನೆಗೊಳಗಾದ ಸ್ಥಾವರವೆನಿಸುವ ಈ ವೀರಭದ್ರ ಹಾಗೂ ಕಾಳಿಕಾಭವಾನೀ

ಮೂರ್ತಿಗಳಲ್ಲ; ಆದರೆ ಕಲ್ಯಾಣದಿಂದ ಬಂದಿಲ್ಲಿನಿಂದ ಶರಣರ ಮುಂದಾಳು ಮಡಿವಾಳ ತಂದೆಯವರ ತಪೋನುಷ್ಠಾನಾದಿ ಕ್ರಿಯಾದಿಗಳಿಗೆ ಆಶ್ರಯಂಗೊಟ್ಟ ಮಂಗಲ ಪ್ರಭೆಯಿಂದ ರಾರಾಜಿಸುತ್ತಲಿಹ ಗೊಡಚಿ ಗಿಡದಡಿಯಲ್ಲಾತನ ವೀರ ಶ್ರೀ ಪ್ರತಿಕವಾಗಿದ್ದ ಗಣಾಚಾರ ವ್ರತಬದ್ಧನಾಗಿ ಲೋಕೋದ್ಧಾರಂಗೈಯುವ, ಶುದ್ಧ ಮುಗ್ಧ ಯಾತ್ರಿಕರಿಂದ ಪೂಜಿಸಲ್ಪಡುವ, ಮುದಿವೀರಣ್ಣ (ಮುದ್ದು ವೀರಣ್ಣ)ನೆಂದೆನಿಸಿಕೊಂಡು ಇಂದಿಗೂ ಬೆಳಗುತ್ತಿದ್ದಾನೆ.”[೬೩] ಇದಕ್ಕೆ ಸರಿಯಾಗಿ ಈ ಕ್ಷೇತ್ರದ ಮಹಿಮೆಯನ್ನು ಅಧ್ಯಯನ ಮಾಡಿದ ಮತ್ತೊಬ್ಬ ಮಹಾ ಶಿವಯೋಗಿ ಮುರಗೋಡ ಮಹಾಂತಜ್ಜನವರ ನುಡಿಗಳನ್ನು ಕೂಡ ಅವರು ಆಧಾರವಾಗಿಟ್ಟುಕೊಂಡು ತಮ್ಮ ಅಧ್ಯಯನವನ್ನು ಕೈಗೊಂಡಿದ್ದಾರೆ. ಅದರ ಪೂರ್ವಾಪರಗಳನ್ನು ಈ ಕೃತಿಯಲ್ಲಿ ಕಾಣಬಹುದಾಗಿದೆ. ಹೀಗಾಗಿ 'ಶ್ರೀ ಶರಣಕ್ಷೇತ್ರ ಗೊಡಚಿವಸ್ತು ಮಡಿವಾಳ ಮಾಚಿತಂದೆ' ಕೃತಿಯೊಂದು ಸಂಶೋಧನಾ ಕೃತಿಯೆಂದೆ ಹೇಳಬಹುದು.

'ಪರವಸ್ತು ಮಡಿವಾಳ ಮಾಚಿ ತಂದೆ' ಎಂಬಲ್ಲಿ ಮಡಿವಾಳ ಮಾಚಿತಂದೆಯ ಕಿರು ಪರಿಚಯವನ್ನು ಮಾಡುತ್ತಾರೆ. ಪರವಸ್ತು ಎನ್ನುವ ಶಬ್ದ ಪ್ರಯೋಗವನ್ನು ಗಮನಿಸಿದಾಗ 'ನಾಶವಾಗದ' ಎಂಬ ಸಮಾನಾರ್ಥಕ್ಕೆ ಬಳಸಿದ್ದಾರೆ ಎನ್ನಿಸುತ್ತದೆ. 'ವಸ್ತು' ಎನ್ನುವ ಶಬ್ದಕ್ಕೆ 'ಭೌತಿಕಾಂಶ', 'ವಾಸ್ತವತೆ' ಎಂಬ ಪದ ಸಂವಾದಿಯಾಗಿ ಬಳಸಿದ್ದಾರೆ. ಯಾವುದು ಸತ್ಯ ಅದನ್ನು ಇಲ್ಲಿ ಬಿತ್ತರಿಸುವ ಕಾರ್ಯ ಅವರಿಂದ ಮಾಡಲ್ಪಟ್ಟಿದೆ ಎಂಬುದನ್ನು ನಾವು ಇದರಿಂದ ಅರ್ಥೈಸಿಕೊಳ್ಳಬಹುದಾಗಿದೆ. 'ಪೂರ್ವಾಶ್ರಮ ನಿರಸನ'ದಲ್ಲಿ ಮಡಿವಾಳ ಮಾಚಿತಂದೆಯ ತಂದೆ, ತಾಯಿ, ಹೆಂಡತಿಯ ಬಗೆಗೆ ವಿವರಣೆಗಳನ್ನು ನೀಡಿದ್ದಾರೆ. 'ಕಲ್ಯಾಣದ ಮಹಾಮನೆಯಲ್ಲಿ' ಮಡಿವಾಳ ಮಾಚಿತಂದೆ ಕಲ್ಯಾಣಕ್ಕೆ ಬರಲು ಕಾರಣಗಳನ್ನು ಮತ್ತು ಬಸವಣ್ಣನವರ ಮತ್ತು ಮಡಿವಾಳ ಮಾಚಿತಂದೆಯ ನಡುವಿನ ಸೌಹಾರ್ದ ಮತ್ತು ಗೌರವಯುತ ಸಂಬಂಧ ಮತ್ತು ಸಂಪರ್ಕಗಳನ್ನು ವಿವೇಚಿಸಿದ್ದಾರೆ. 'ನೂತನ ಕಲ್ಯಾಣ ಗೊಡಚಿ ಕ್ಷೇತ್ರ' ದಲ್ಲಿ ಗೊಡಚಿಯಲ್ಲಿ ಮಡಿವಾಳ ಮಾಚಿತಂದೆ ಮತ್ತು ಬಸವಣ್ಣನವರ ಭೆಟ್ಟಿ ಮತ್ತು ಅವರಿಬ್ಬರಲ್ಲಿ ನಡೆದ ಘಟನೆಗಳನ್ನು ವಿವರಿಸಿದ್ದಾರೆ. ಕಲ್ಯಾಣದಷ್ಟೇ ಗೊಡಚಿ ಕ್ಷೇತ್ರವೂ ಬಹು ಮುಖ್ಯವಾಗಿ ಕಂಡದ್ದು ಯಾಕೆ ಎಂಬ ತಿಳುವಳಿಕೆಯನ್ನು ನೀಡುತ್ತಾರೆ. 'ವೀರಶ್ರೀ ಮಡಿವಾಳ ಮಾಚಿತಂದೆ' ಯಲ್ಲಿ ವೀರಭದ್ರನ ರೂಪವನ್ನು ಮಡಿವಾಳ ಮಾಚಿದೇವನಿಗೆ ಏಕೆ ನೀಡಲಾಗಿದೆ. ಆ ತರಹದ ಹೆಸರು ಅವನಿಗೇಕೆ ಬಂದಿತು ಎಂಬುದನ್ನು ತಿಳಿಸಿದ್ದಾರೆ. 'ಉಳುವಿಯ ಹೆಬ್ಬಾಗಿಲು ಮುರಗೋಡ' ದಲ್ಲಿ ಉಳುವಿಗೆ ಹೊರಟ ಶರಣರಿಗೆ ಮುರಗೋಡ ಹೇಗೆ ಹೆಬ್ಬಾಗಿಲು ಆಯಿತು. ಅದರ ಇಂದಿನ ಸ್ಥಿತಿ-ಗತಿಯನ್ನು ವಿವರಿಸಿದ್ದಾರೆ. 'ಧಾರವಾಡ

ದಾರಿಯಾಯಿತು ಉಳುವಿಗೆ' ಎಂಬ ಶೀರ್ಷಿಕೆಯಲ್ಲಿ ಉಳುವಿಗೆ ಹೋಗುವ ಸಂದರ್ಭದಲ್ಲಿ ನಡೆದ ಘಟನಾವಳಿಗಳನ್ನು ಬಿಡಿಸಿಟ್ಟಿದ್ದಾರೆ. ಚೆನ್ನಬಸವಣ್ಣನವರ ಕಾಲಜ್ಞಾನ ನಿಜವಾದದ್ದನ್ನು ಸ್ಮರಿಸಿದ್ದಾರೆ.

ಗೊಡಚಿಯ ಬಗೆಗೆ ಕೆಲವು ವಿಷಯಗಳನ್ನು ವಿವರಿಸಿ "ಇದು ಕೊಡಚಿ(ಗೊಡಚಿ) ಎಂಬುದೊಂದು ಬಗೆಯ ಕಂಟಿಯನ್ನು ಬೆಳೆವ ಕುಗ್ರಾಮ ಸ್ಥಳವಾಗಿರಬಹುದು. ಅಥವಾ ಮೌಢ್ಯತೆಯನ್ನು ಹೊತ್ತು ಅಂಧಕಾರವನ್ನು ಸೂಸುತ್ತಿರುವ ಗೊಡಚಿಗಣ್ಣಿನ ಹಳ್ಳಿಗರ ಬೀಡಾಗಿರಬಹುದು. ಆದರೆ ಶರಣರಪಾದ ಧೂಳಿಯಿಂದ ಪವಿತ್ರ ಸ್ಥಾನವಾಗಿ ಬೆಳಗಹತ್ತಿರುವುದು ಮಾತ್ರ ನಿಜ! ಅಂತೆಯೇ ಕೆಲವು ಸಾಹಿತಿಗಳು ಚರಿತ್ರೆಗಾರರೂ ಆವುದೋ ಒಂದು ದಿವ್ಯ ಬೆಳಕಿನಪ್ರಭೆಯಿಂದ ಇಲ್ಲಿದ್ದ ಅಂಧಕಾಸುರ ರಕ್ಷಸನ ವಧೆಯಾಯಿತೆಂದೂ ಆಗ ಇಲ್ಲಿಯ ನಿವಾಸಿಗಳಿಗೆ ಗೊಡಚಿಗಣ್ಣಾಗುವ ಸ್ಥಿತಿಯು ದೂರಾಯಿತೆಂದೂ ವರ್ಣಿಸಿದ್ದುಂಟು ಈ ಸ್ಥಲವನ್ನು. ಈ ವರ್ಣನೆಯ ಹಿನ್ನೆಲೆಯನ್ನರಿತದ್ದಾದರೆ, ಇಲ್ಲಿ ನೆಲೆಸಿದ ಈ ಶರಣರ ಪ್ರಭೆಯಿಂದ ಇಲ್ಲಿಯ ನಿವಾಸಿಗಳ ಅಂಧಕಾರ ಸ್ಥಿತಿಯು ದೂರಾಗಿ, ಗೊಡಚಿಗಣ್ಣಿನ ಸ್ಥಿತಿಯ ಬದಲು, ಶರಣ ದೃಷ್ಟಿಯ ತೇಜ ಅವರಲ್ಲಿ ಮೂಡಿತೆಂದು ತಿಳಿಯಬಹುದು"[೬೪] ಎಂದು ಕವಿ ವಿಶ್ಲೇಷಿಸಿದ್ದಾರೆ.

ಗೊಡಚಿಯ ಸುತ್ತ ಮುತ್ತಲೂ ಶರಣ–ಶರಣೆಯರ ಹಲವಾರು ಕುರುಹುಗಳು ದೊರೆತಿರುವುದನ್ನು ಗುರುತಿಸಿದ್ದಾರೆ. "ಈಗಿನ ವೀರಭದ್ರ ದೇವಾಲಯದ ಗರ್ಭಗುಡಿಯ ಹಿಂದೆ ಸಣ್ಣದೊಂದು ಗುಡಿಯಿದೆ. ಅದರಲ್ಲಿ ಮುದಿವೀರಣ್ಣನ ಮೂರ್ತಿಯಿದೆ. ಇದು ಗೊಡಚಿಯೆಂಬ ಹೆಸರಿನ ಸಣ್ಣ ಗಿಡದಡಿಯಲ್ಲಿ ವೀರಮಡಿವಾಳ ಮಾಚಿತಂದೆ ಕುಳಿತು, ನಿತ್ಯಾನುಷ್ಠಾನ ಮಾಡುತ್ತಲಿದ್ದ ಸ್ಥಾನದ ರೂಪಕವಾಗಿದೆ. ಹತ್ತೊಂಬತ್ತು ನೂರನೆಯ ಇಸವಿಯ ಸುಮಾರಿಗೆ ಗೊಡಚಿಗಿಡದಡಿಯಲ್ಲಿ ಮಡಿವಾಳರ ಸ್ಮಾರಕ ಮೂರ್ತಿಯಿದ್ದುದುದನ್ನು ಆಗಿನ ಯಾತ್ರಿಕರು ಬಲ್ಲರು. ಅಷ್ಟೇ ಅಲ್ಲ; ಆತನ ಅನುಷ್ಠಾನ ಬಲದಿಂದ ಜನತೆಯ ಅಂಧಕಾರವು ಕಳಚಿದುದೂ ಆಕಸ್ಮಾತ್ತಾಗಿ ಒದಗಿದ ಯುದ್ಧದ್ದೊಂದು **[*ವೈರಿ ಮುರಾರಿಗೂ ಶರಣ ಬಳಗಕ್ಕೂ ಆಗ ಯುದ್ಧ ಪ್ರಸಂಗ]** *ಪ್ರಸಂಗದಲ್ಲಿ ಆತನ ಪ್ರತಾಪದಿಂದಲೇ ಶರಣ ಧರ್ಮಕ್ಕೆ ಸ್ಥಿರತೆ ಹಾಗೂ ಮಹತ್ವದ ಸ್ಥಿತಿಯೂ ಬಂದುದೂ ಸಕಲ ಜನತೆಯೂ ಈತನಿಗೆ ಮುದ್ದು ವೀರಣ್ಣ (ಮುದು, ಮುದಿವೀರಣ್ಣ) ನೆಂದೂ ಕರೆದು ತಮ್ಮ ಭಕ್ತಿಯನ್ನು ತೋರಹತ್ತಿತು; ಅಲ್ಲದೆ ಆತನ ಈ ವೀರಶ್ರೀ ರೂಪಕ್ಕೆ ವೀರಭದ್ರನೆಂದೂ ಕರೆದು ಪೂಜಿಸಹತ್ತಿತು.[೬೫] ಎಂದು ಆ ಸ್ಥಳಗಳ ವಿಶ್ಲೇಷಣೆ ಮಾಡಿದ್ದಾರೆ.

"ಶ್ರೀ ಕ್ಷೇತ್ರದ ಪೂರ್ವಕ್ಕೆ ಹರಿಯುತ್ತಿದ್ದ ಹಳ್ಳದ ಅಂಚಿನಲ್ಲಿ ಕಂಡು ಬರುವ ಗುಡಿ-ಗುಂಡಾರಗಳೂ, ಬೀಳುಬಿದ್ದ ಸ್ಮಾರಕ ಸ್ಥಾನಾದಿ ಮಹತ್ವದ ವಿಷಯಸೂಚಕಗಳೂ ಇವುಗಳನ್ನು ಸೂಕ್ಷ್ಮ ದೃಷ್ಟಿಯಿಂದ ವಿಮರ್ಶಿಸಿದರೆ ವಿರುಪಾಕ್ಷ ಲಿಂಗು, ದಿಗಂಬರ ದೇವಾಲಯ, ರುದ್ರಮುನಿಗಳನುಷ್ಠಾನಸ್ಥಾನ ಹಾಗೂ ಅಕ್ಕ ನಾಗಮ್ಮ, ಗಂಗಾಂಬಿಕೆ ಮೊದಲಾದ ಶರಣ ಶರಣೆಯರ ಕಾಯಕ ಸೂಚಕ ಪ್ರಸಾದ ನಿಲಯಾಸ್ಥಾನಗಳಾಗಿದ್ದವೆಂದು ಕಂಡು ಬರುತ್ತವೆ. ಇದರಂತೆ ಹಳ್ಳದ ಆಚೆ-ಈಚಿನ ದಂಡೆಯ ಪ್ರದೇಶಗಳಲ್ಲಿ ಕೂಗುಬಸಪ್ಪನ ಗುಡಿಗಂಬಗಳೂ ಕೂಗುಮಾರಿತಂದೆ ಹಾಗೂ ತುರುಗಾಯಿ ರಾಮಣ್ಣ ಮೊದಲಾದ ಶರಣರ ನಿಲಯ ಸ್ಥಾನಗಳೂ ಅಲ್ಲದೆ ಇನ್ನೂ ಅನೇಕ ಪೂಜ್ಯರುಗಳು ಲಿಂಗಾನುಷ್ಠಾನಕ್ಕೆ ಕುಳಿತ ಗದ್ದುಗೆಯ ಗುರುತುಗಳೂ ಕಂಡು ಬರುತ್ತವೆ. ಇದಲ್ಲದೆ ಸಕಲೇಶ ಮಾದರಸು ಮೊದಲಾದ ಮುತ್ಸದ್ದಿಗಳು ಕುಳಿತು, ಸಭೆ-ಸಮ್ಮೇಳನಗಳನ್ನು ನೆರೆಯಿಸಿ, ಸ್ಥಾನ ಕಾಲೋಚಿತ ವಿಷಯಗಳ ವಿಚಾರಗೋಷ್ಠಿಯನ್ನೆಸಗುತ್ತಲಿದ್ದ ಸ್ಮಾರಕ ಸ್ಥಳಗಳೂ ಉಂಟು."[೬೬] ಇವುಗಳಲ್ಲದೆ ಮಹತ್ವದ ಮೂರು ಸ್ಥಳಗಳನ್ನು ಗುರುತಿಸಿದ್ದಾರೆ. ೧) ಅಂಚಟಿಬಸಪ್ಪನ ಕಟ್ಟಿ ೨) ರಣಬಾಜಿಮಡು ೩) ಶರಣ-ಶರಣೆಯರ ವೀರಗಲ್ಲು

### ೯.೬.೧ ಅಂಚಟಿಬಸಪ್ಪನ ಕಟ್ಟಿ :

"ವೈರಿಗಳು ಈ ಶರಣಕ್ಷೇತ್ರಸ್ಥ ಮಡಿವಾಳಾದಿ ಶರಣರ ಮೇಲೆ ದಂಡೆತ್ತಿ ಬರುತ್ತಾರೆಂಬ ವಾರ್ತೆಯು ಸ್ಪಷ್ಟವಾಗಲು, ಆಗ ಚೆನ್ನಬಸವಣ್ಣನಪ್ಪಣೆಯಂತೆ ಸರ್ವರೂ ಸಮ್ಮಿಲಿತರಾಗಿ ಆ ಕ್ಷೇತ್ರವನ್ನು ಬಿಟ್ಟು ಉಳುವೆಯತ್ತ ನಡೆಯ ಹತ್ತಿದಾಗ ಶ್ರೀಕ್ಷೇತ್ರದ ಕಡೆಯ ಅಂಚಿನಲ್ಲಿ ಅಡಿಯಿಟ್ಟು ಹೊರಳಿ 'ಬಸವ' ಎಂದು ತಮ್ಮ ತಮ್ಮ ಅನುಷ್ಠಾನ ಸ್ಥಾನಕ್ಕೆ ಶರಣು ಹೊಡೆದು, ಮತ್ತೆ ತಿರುಗಿ, ಕಡಕೋಳದತ್ತ ನಡೆದರು."[೬೭] ಆಗ ಚೆನ್ನಬಸವಣ್ಣನು ಅಡಿಯಿಟ್ಟ ಈ ಸ್ಥಾನಕ್ಕೆ ಅಂಚಡಿ ಬಸಪ್ಪನ ಕಟ್ಟಿಯೆಂದು ಹೆಸರು ಬಿದ್ದಿತು. ಇಂದಿಗೂ ಈ ಸ್ಥಾನ ಪೂಜಿಸಲ್ಪಡುತ್ತದೆ ಎಂದು ತಮ್ಮ ವಿವರಣೆ ನೀಡಿದ್ದಾರೆ.

### ೪.೪.೬.೧ ರಣಬಾಜಿಮಡು :

"ಸಿದ್ನಾಳದಿಂದ ಹರಿದು ಬರುವ ಸಣ್ಣದೊಂದು ಹಳ್ಳ ವೀರಭದ್ರ ಗುಡಿಯ ಬಲಕ್ಕಿದೆ; ಅದು ನಡುವೆ ಮಡುಗೊಂಡು ಹರಿಯುತ್ತಿದೆ. ಆದರೆ ದಂಡೆಯ ಪ್ರದೇಶದಲ್ಲಿ ಸೇಂದಿ ಗಿಡಗಳ ಅಡವಿಯೊಂದು ದಟ್ಟಾಗಿ ಬೆಳೆದು ನಿಂತಿದೆ. ಅಲ್ಲಿ ಈ ಶರಣರ ಯೌದ್ಧಿಕ ಬಳಗವೂ

ಇರುತ್ತಿದ್ದಿತು; ಯುದ್ಧಪ್ರಸಂಗದಲ್ಲಿ ರಣಬಾಜಿ(ವೀರಘಂಟೆ)ಯಾಗಲು ಶರಣರೆಲ್ಲರೂ ಅಲ್ಲಿ ಕೂಡುತ್ತಿದ್ದಿತು. ಬಂದ ವೈರಿಗಳನ್ನು ನುಗ್ಗಿ ಹೊಡೆಹೊಡೆದು ಅಲ್ಲಿ ಅಡಗಿಕೊಳ್ಳಲು ಅನುವು ಇದ್ದಿತು. ಈ ಸ್ಥಿತಿಯು ಬಿಜ್ಜಳನ ಸೈನ್ಯ ಮುತ್ತಿದಾಗ ಶರಣ ಯೌಧ್ಧಿಕರಿಗೆ ಅನುಕೂಲವನ್ನಿತ್ತಿತು; ಅವರ ಸೈನ್ಯವನ್ನು ಮುರಿದು, ಶರಣರು ಕಡಕೋಳದತ್ತ ನಡೆದರು."[೬೮] ಅಂದಿನಿಂದ ಈ ದಟ್ಟಡವಿಗೆ ಹತ್ತಿದ ಹಳ್ಳದ ಮಡುವಿಗೆ ರಣಬಾಜಿ ಮಡುವೆಂದು ಹೆಸರು. ಈಗಲೂ ಇದು ಜಾತ್ರೆಯ ಭಾಕ್ತಿಕ ವರ್ಗಕ್ಕೆ ಪೂಜ್ಯಸ್ಥಳವಾಗಿದೆ.

### ೪.೪.೬.೨ ಶರಣ ಶರಣೆಯರ ವೀರಗಲ್ಲು :

"ಗೊಡಚಿ ಗ್ರಾಮ ಹಾಗೂ ದೇವಸ್ಥಾನಗಳ ನಡುವೆ ಒಂದು ಹೊಲ. ಅದರಲ್ಲಿ ಯೋಧರಂತಿರ್ದ ದಂಪತಿಗಳಿಬ್ಬರ ಶಿಲಾಪ್ರತಿಮೆಗಳು. ಅವುಗಳ ನಡುವೆ ಒಂದು ಈಶ್ವರ ಮೂರ್ತಿಯಿದೆ. ವೀರಶರಣನು ಕೈಯಲ್ಲಿ ಝುಳಪಿಸುವ ರೀತಿಯಲ್ಲಿ ಒಂದು ಖಡ್ಗವನ್ನು ಹಿಡಿದಿದ್ದಾನೆ; ಆತನ ಪತ್ನಿ (ಶರಣೆ)ಯು ಕೈಯಲ್ಲಿ ಡಾಲು ಹಿಡಿದಿದ್ದಾಳೆ; ಅವರಿಬ್ಬರೂ ವೀರಶೈವ ಚಿಹ್ನಾಂಕಿತ ದಂಪತಿಗಳಾಗಿದ್ದಾರೆ. ಬಂದ ಯಾತ್ರಿಕರಲ್ಲಿ ಕೆಲವರು ಈ ಮೂರ್ತಿಗಳು ಮಡಿವಾಳಾದಿ ಶರಣಬಳಗದಲ್ಲಿ ತಮ್ಮ ಶೌರ್ಯವನ್ನು ತೋರಿಸಿದವರ ಸ್ಮಾರಕವೆಂದೂ, ಮತ್ತುಳಿದವರು ಮತ್ತಾವ ಪ್ರಸಂಗದಲ್ಲಿ ತಮ್ಮ ಕಾಯಕವನ್ನು ತೋರಿಸಿದವರ ಸಾಂಕೇತಿಕ ಮೂರ್ತಿಗಳೆಂದೂ ಹೇಳುತ್ತಲಿರುವರು."[೬೯] ಒಟ್ಟಿನಲ್ಲಿ ವೀರಶೈವ ಶರಣ ಶರಣೆಯರು ಸತ್ಯ ನಿಷ್ಠುರ ವೀರಮಡಿವಾಳ ಮಾಚಿದೇವರಂತೆ ವೀರವೃತ್ತಿಯವರೆಂದೂ ತೋರುತ್ತಾರೆ ಎಂಬ ಅಭಿಪ್ರಾಯವನ್ನು ಅಭಿವ್ಯಕ್ತಿಸುತ್ತಾರೆ.

### ೪.೪.೬.೩ ಚೆನ್ನಬಸವಣ್ಣನ ಅನುಷ್ಠಾನ ಸ್ಥಾನ :

"ಹರಿವ ಹಳ್ಳದೀಚೆಗೆ ದೇವಾಲಯದ ಬಲಭಾಗವಿಡಿದು ಗೊಡಚಿ ಗ್ರಾಮದವರೆಗಿನ ಬಯಲು ಭೂಮಿ, ಚೆನ್ನಬಸವಾದಿ ಮಹಿಮರನೇಕರನುಷ್ಠಾನಕ್ಕಲ್ಲದೆ, ಇಡೀ ಶರಣ ಬಳಗಕ್ಕೂ ಶಿವಾನುಭವ ಮಂಟಪಕ್ಕೂ ಪ್ರಸಾದಕ್ಕೂ ಆಶ್ರಯವಾಗಿದ್ದಿತು. ಆದರೆ ಆತನ ಲಿಂಗಾನುಷ್ಠಾನ ಸ್ಥಾನವಾವುದೆಂಬುದು ನಿರ್ದಿಷ್ಟವಾಗಿದ್ದಿಲ್ಲ. ಆದರೆ ಕಳೆದ ಎಂಟೊಂಭತ್ತು ವರ್ಷಗಳ ಹಿಂದೆ ಈ ಗ್ರಾಮದ ಭಕ್ತ ಅಡಿವೆಪ್ಪಗೌಡನ ಹೊಲದಲ್ಲಿ ಆತನು ತನ್ನ ಈ ಕ್ಷೇತ್ರದಲ್ಲಿ ಉಳುವುತ್ತಿರಲು, ಭೂಗತವಾದದ್ದೊಂದು ಸಣ್ಣ ಗಚ್ಚಿನ ಗುಡಿಸಲು ಹೊರಬಿದ್ದು ಅದು ಚೆನ್ನಬಸವಣ್ಣನವರ ತಪೋನುಷ್ಠಾನಸ್ಥಲವೆಂದು ತನ್ನ ವೈಶಿಷ್ಟ್ಯದಿಂದ ಷಟ್ಸ್ಥಲ

ಬ್ರಹ್ಮಿಗಳ ಹೃದಯವನ್ನು ಸೆಳೆಯಿತು ಮತ್ತು ಗೊಡಚಿಕ್ಷೇತ್ರವನ್ನು ನಿಜ ವೀರಶೈವ ಶರಣಕ್ಷೇತ್ರವೆನ್ನಿಸಿ, ತನ್ನ ವಿಶೇಷ ಬೆಳಕನ್ನು ಸುತ್ತಲು ಪಸರಿಸಿತು. ಮಹತ್ವಪೂರ್ಣ ಈ ಶುಭ ಪ್ರಸಂಗದಲ್ಲಿ ಸಂಶೋದಕರ ಆಸಕ್ತಿಯನ್ನು ಉತ್ತೇಜನಗೊಳಿಸಿ, ಹೆಚ್ಚಿನ ಸಂಶೊದನೆಗೆ ಹಚ್ಚಿತು; ತತ್ಫಲವಾಗಿ ಗೊಗ್ಗಯ್ಯ, ಅನಿಮಿಷಯ್ಯಗಳ ದಿವ್ಯ ಚರಿತ್ರೆಯೊಡನೆ ಅನಿಮಿಷಯ್ಯಗಳಿಂದ ಅಲ್ಲಮಪ್ರಭುವಿಗೆ ಇಷ್ಟಲಿಂಗ ಪ್ರಾಪ್ತವಾದ ವಿಷಯವನ್ನು ಲೋಕದೆದುರಿಟ್ಟು ಸರ್ವರಿಗೂ ಸಮರಸ ಸಂಸ್ಥಿತಿಯ ಹಿರಿಮೆಯನ್ನು ಬೋಧಿಸಿತು."[೭೦] ಹೀಗೆ ಪ್ರಭಾವಿ ಸ್ಥಳವಾದ ಇಲ್ಲಿಗೆ ಸಾವಳಗಿ ಶಿವಲಿಂಗೇಶ್ವರ ಶಿವಯೋಗಿಗಳವರೂ ಬಂದಿದ್ದರು ಮತ್ತು ಇಲ್ಲಿಯೇ ಸಮಾಧಿಸ್ಥರಾದುದೂ, ಮೂಲ ಎಡೆಯೂರ ಸಿದ್ಧಲಿಂಗನ ಪರಂಪರೆಯಲ್ಲಿ ಹತ್ತನೆಯವರಾದ ಆದಿಲಿಂಗಸ್ವಾಮಿ[೭೧]ಗಳವರು ಈ ಕ್ಷೇತ್ರಕ್ಕೆ ಬಂದಿದ್ದರೆಂಬುದೂ ಅಲ್ಲದೆ, ಅವರ ಸಮಾಧಿಯು ಇಲ್ಲಿಯೇ ಆಗಿದೆಯೆಂದು ಕೆಲವರ ಭಾವನೆಯಿದೆ. ಒಟ್ಟಿನಲ್ಲಿ ಶರಣರ ಪಾದಧೂಳಿಬಿದ್ದುದೇ ಶರಣಕ್ಷೇತ್ರವೆಂದೂ 'ಸ್ಥಾವರಕ್ಕೆ ಅಳಿವುಂಟು, ಜಂಗಮಕ್ಕೆ ಅಳಿವಿಲ್ಲ'ವೆಂದೂ ಹೇಳುವ ವಚನಗಳಿಗೆ ಶರಣಕ್ಷೇತ್ರ ಗೊಡಚಿಯೇ ನಿದರ್ಶನ.

ಹತ್ತೊಂಭತ್ತು ನೂರೈವತ್ತನೆಯ ಇಸವಿಯ ಶಿವ ಶರಣ ಚೆನ್ನಮಹಾ ಕವಿಯು ತನ್ನ ಶರಣಲೀಲಾಮೃತ ಕಾವ್ಯದಲ್ಲಿ ಈ ವಿಷಯವನ್ನು ಕುರಿತು ಮನೋಜ್ಞವಾಗಿ ವರ್ಣಿಸಿದ ಕಾವ್ಯವನ್ನು ಉಲ್ಲೇಖಿಸುತ್ತ ಅಲ್ಲಿ ಪದ್ಯಗಳನ್ನರ್ಥೈಸಿಕೊಂಡರೆ ಈ ಮಹಾಕೊಳಗುಳವು ನಡೆದ ಸ್ಥಳಕ್ಕೆ 'ಕಡಕೋಳ'ವೆಂದೂ, ವೈರಿಗಳ ಕೋಡು ಮುರಿದ ಕ್ಷೇತ್ರಕ್ಕೆ 'ಮುರಗೋಡ'ವೆಂದೂ, ಜಯಶೀಲರಾದ ಶರಣರು ತಮ್ಮ ಆಯುಧ(ಖಂಡೆ)ಗಳನ್ನು ತೊಳೆದ ಮುರಗೋಡದ ಕೆರೆಗೆ 'ಕೆಂಗೆರೆ'ಯೆಂದೂ ಶರಣ ಸಾಹಿತಿಗಳು ಹೇಳುತ್ತಿರುವುದರಲ್ಲಿ ಯಾವುದೇ ಸುಳ್ಳಿಲ್ಲ ಎಂಬ ಅಂಶವನ್ನು ಸಮರ್ಥಿಸಿದ್ದಾರೆ.

### ೪.೪.೬.೪. ಶರಣಕ್ಷೇತ್ರ ಗೊಡಚಿವಸ್ತು ಬಯಲಾದುದು :

"ಹಿಪ್ಪರಗಿಯ ಬಯಲಲ್ಲಿ ಬಯಲಾಗಬೇಕೆದು ಬಯಸಿದ್ದ ಮಡಿವಾಳ ಮಾಚಿದೇವರಿಗೆ ಅಲ್ಲಿಗೆ ಹೊರಡುವಾಗ ಮೊದಲು ತಾವು ಕೊಡಚಿ ವೃಕ್ಷದ ನೆರಳಲ್ಲಿ ಲಿಂಗಾನುಷ್ಠಾನಗೈದುದು ನೆನಪಾಗಿ ಗೊಡಚಿ ಕ್ಷೇತ್ರದತ್ತ ಧಾವಿಸುತ್ತಾರೆ. ಅದೇ ಕೊಡಚಿ ವೃಕ್ಷದಡಿಯಲ್ಲಿ ಲಿಂಗಾನುಷ್ಠಾನ ನಿರತರಾಗಿ ಬಯಲಾಗುತ್ತಾರೆ."[೭೨] ಮಡಿವಾಳ ಮಾಚಿತಂದೆ ಐಕ್ಯಸ್ಥಳದ ಬಗೆಗಿರುವ ದ್ವಂದ್ವವನ್ನು ಕ.ಬ.ಅಂಗಡಿಯವರು ಫ.ಗು.ಹಳಕಟ್ಟಿಯವರ



ಕರ್ಮಯೋಗಿ

ಸಿದ್ಧರಾಮಪ್ಪ

ಅಂದಾನಪ್ಪ ಮಾನವಿ

ಸಿದ್ಧರಾಮಪ್ಪ ಅಂದಾನಪ್ಪ ಮಾನವಿ ಲಾ ಕಾಲೇಜ, ಗದಗ
ನಾಮಕರಣ ಮಹೋತ್ಸವದ ಸವಿನೆನಪಿಗಾಗಿ

ಕರ್ಮಯೋಗಿ ಸಿದ್ಧರಾಮಪ್ಪ ಅಂದಾನಪ್ಪ ಮಾನವಿ

ಹೇಳಿಕೆಯ ಆಧಾರದಿಂದ ನಿವಾರಿಸಿಕೊಂಡು ಐಕ್ಯಸ್ಥಳವು ಗೊಡಚಿ ಕ್ಷೇತ್ರವೆಂಬುದನ್ನು ಸಮರ್ಥಿಸುತ್ತಾರೆ.

### ೪.೪.೭ ಕರ್ಮಯೋಗಿ ಸಿದ್ಧರಾಮಪ್ಪ ಅಂದಾನಪ್ಪ ಮಾನವಿ :

೧೯೭೪ನೆಯ ಇಸ್ವಿ ನವೆಂಬರ್ ೩ನೆಯ ತಾರೀಖಿನಂದು ಕರ್ನಾಟಕದ ಹೆಮ್ಮೆಯ ಸಂಸ್ಥೆಯಾದ ಕೆ.ಎಲ್.ಇ ಸೊಸೈಟಿಯವರು ಗದುಗಿನಲ್ಲಿ ಸಿದ್ಧರಾಮಪ್ಪ ಅಂದಾನಪ್ಪ ಮಾನವಿ ಅವರ ಹೆಸರಿನಲ್ಲಿ ಲಾ (ಕಾನೂನು ವ್ಯಾಸಂಗ) ಕಾಲೇಜನ್ನು ಪ್ರಾರಂಭಿಸಿದ ದಿನ. ಅದರ ಸ್ಮರಣಾರ್ಥ 'ಕರ್ಮಯೋಗಿ ಸಿದ್ಧರಾಮಪ್ಪ ಅಂದಾನಪ್ಪ ಮಾನವಿ' ಎಂಬ ಕೃತಿಯನ್ನು ಕ.ಬ.ಅಂಗಡಿಯವರು ರಚಿಸಿದ್ದಾರೆ. ಈ ಕೃತಿಯನ್ನು ಅಂದಿನ ಉಪರಾಷ್ಟ್ರಪತಿಗಳಾದ ಬಿ.ಡಿ.ಜತ್ತಿಯವರು ಬಿಡುಗಡೆಗೊಳಿಸಿದರು. ಲೇಖಕರೇ ಹೇಳುವಂತೆ ಒಂದು ನಾಡಿನ ಒಬ್ಬ ಎತ್ತರದ ವ್ಯಕ್ತಿಯ ಚರಿತ್ರೆಯೆಂದರೆ ಆ ನಾಡಿನ ಆ ಕಾಲದ ಸಮಾಜದ ಚರಿತ್ರೆಯೇ ಆಗಿರುತ್ತದೆ. ಹೀಗಾಗಿ ಅವರ ಈ ಕೃತಿ ಸಿದ್ಧರಾಮಪ್ಪ ಮಾನವಿಯವರ ಚರಿತ್ರೆಯಷ್ಟೇ ಅಲ್ಲ ಅವರ ಪರಸರ, ವ್ಯವಹಾರ, ಜೀವನ, ಸಾಧನೆ ಎಲ್ಲ ಮುಖಗಳನ್ನು ಇಲ್ಲಿ ಅವಲೋಕಿಸಬಹುದು. ಅಂಗಡಿಯವರು ಮತ್ತು ಮಾನವಿ ಮನೆತನದವರು ಭಾವನಾತ್ಮಕವಾಗಿ ಒಬ್ಬರಿಗೊಬ್ಬರು ಹತ್ತಿರವಿದ್ದುದರಿಂದ ಮಾನವಿ ಮನೆತನದ ಪರಿಪೂರ್ಣ ಚರಿತ್ರೆಯನ್ನು ಇಲ್ಲಿ ದಾಖಲು ಮಾಡಲು ಪ್ರಯತ್ನಿಸಿದ್ದಾರೆ.

"ಒಂದು ದೇಶದ ಘನತೆ-ಗೌರವಗಳು ಕೇಲವ ಅದರ ಭೌತಿಕ ಸಂಪತ್ತೊಂದನ್ನೇ ಅವಲಂಬಿಸದೆ, ಆಧ್ಯಾತ್ಮಿಕ ಸಂಪತ್ತನ್ನೂ ಅವಲಂಬಿಸಿರುವವು. ಈ ದೃಷ್ಟಿಯಿಂದ ಅವುಗಳ ನಿಜಸಂಪತ್ತನ್ನು ಅರಿತು ತೂಗಿದಾಗ, ಭಾರತದ ಘನತೆ-ಗೌರವಗಳು ಹೆಚ್ಚಿನವೆಂಬುದು ಕಂಡು ಬರುತ್ತದೆ. ಮಾಡಿ ನೀಡುವುದು ತ್ಯಾಗವಾದರೆ, ಮಾಡಿ ನೀಡುವುದರಿಂದ ಪ್ರಾಪ್ತವಾಗುವದನ್ನುಂಡು ಆನಂದಿಸುವುದು ಭೋಗವೆನಿಸುವುದು. ಇಲ್ಲಿ ಮಾಡಿ ನೀಡುವುದು ಭೌತಿಕವಾದರೆ, ಉಂಡು ಆನಂದಿಸುವುದು ಆಧ್ಯಾತ್ಮಿಕವು. ಈ ಪ್ರವೃತ್ತಿಯೇ ಕನ್ನಡ ನಾಡಿನ ಶರಣ ಪ್ರಪಂಚದಲ್ಲಿ ಕಾಯಕಯೋಗವೆನಿಸುತ್ತದೆ. ಸೂಕ್ಷ್ಮಮತಿಗಳು ಇದಕ್ಕೇನೇ ಕರ್ಮಯೋಗವೆನ್ನುತ್ತಾರೆ. ಕನ್ನಡನಾಡು ಇಂತಹ ಕರ್ಮಯೋಗಿಗಳನ್ನು ಕಾಲಕಾಲಕ್ಕೆ ಕೊಡುತ್ತ ವಿಶ್ವಕ್ಕೇನೇ ಕಾಯಕದ ದಿವ್ಯ ಸಂದೇಶವನ್ನು ಬೀರುತ್ತಲಿರುವುದು."[೭೭] ಎಂದು ಸಿದ್ಧರಾಮಪ್ಪ ಅಂದಾನಪ್ಪ ಮಾನವಿಯವರ ಜೀವನ ಚಿತ್ರಣವನ್ನು ಬರೆಯುವಲ್ಲಿ

ಹೇಳಿದ್ದಾರೆ. ಈ ಮೂಲಕ ವ್ಯಕ್ತಿತ್ವಗಳು ದೇಶ-ಭಾಷೆಯ ಶಕ್ತಿಯಾಗಿ ಹೇಗೆ ಕಾರ್ಯ ನಿರ್ವಹಿಸುತ್ತವೆ ಎನ್ನುವುದನ್ನು ಹೇಳುತ್ತಾರೆ.

ಕರ್ನಾಟಕ, ಕನ್ನಡ ಎನ್ನುವ ಶಬ್ದದ ಪರಿಪೂರ್ಣತೆಯೇನು? ಎನ್ನುವ ಪ್ರಶ್ನೆಗೆ ನೂರಾರು ನಿಲುವುಗಳು ದೊರೆಯುತ್ತವೆ. ಈ ವಿಷಯವನ್ನು ಕುರಿತು ಶರಣರ ಪ್ರಭಾವಕ್ಕೊಳಗಾದ ಅಂಗಡಿಯವರ ನಿಲುವು ಹೀಗಿದೆ. "ಕರ್ನಾಟಕಕ್ಕೆ ಕರ್ನಾಟಕ, ಕರುನಾಡು, ಕನ್ನಾಡು, ಕನ್ನಡ ನಾಡು ಎಂದು ಬೇರೆ ಬೇರೆ ಹೆಸರುಗಳಿವೆ. ಲೌಕಿಕ ಪಾರಮಾರ್ಥಿಕಗಳನ್ನು ಸೂಚಿಸುವ ಬೇರೆ ಬೇರೆ ಮಾರ್ಗಗಳಿಂದ ಈ ಹೆಸರುಗಳಲ್ಲಡಗಿದ ಅರ್ಥವನ್ನು ವಿಶ್ಲೇಷಿಸಿದರೆ, ಶಿವಮಯವಾದ ಧ್ವನಿಯನ್ನು ಕಿವಿಗಳಿಗೆ ನೀಡುವ ನಾಡು ಕರ್ನಾಟಕ, ಸುಂದರವಾದ ಎತ್ತರವಾದ ನಿರ್ದುಷ್ಟವಾದ ಬಯಲು ಭಾವನೆಯನ್ನು ನೀಡುವ ನಾಡು ಕರುನಾಡು, ಕಸ್ತೂರಿಯಂತೆ ಕಂಪನ್ನೀವ ನಾಡು ಕನ್ನಾಡು ಮತ್ತು ಅಂತರಂಗ ಬಹಿರಂಗ ಶುದ್ಧ ದೃಷ್ಟಿ(ಕಣ್ಣು)ಯನ್ನು ತಲೆಯಿಂದ ಹಿಡಿದು ಅಡಿಗಳವರೆಗೆ ಇಟ್ಟು ಬಾಳನೌಕೆಯನ್ನು ಸಾಗಿಸುವ ಕಣ್ಣಡಿಗ (ಕಣ್ಣು + ಅಡಿಗ)ರ ಸ್ಥಲ ಸೂಚಿಸುವ ನಾಡು ಕನ್ನಡ ನಾಡು ಎಂದು ತಿಳಿದು ಬರುವುದು."[೭೪] ಈ ವಿಚಾರಗಳು ದಾರ್ಶನಿಕ ಸಂಶೋಧಕನೊಬ್ಬ ಕನ್ನಡ ನಾಡನ್ನು ಲೌಕಿಕ ಪಾರಮಾರ್ಥಿಕ ದೃಷ್ಟಿಕೋನದಿಂದ ನೋಡುವುದು ಅವರಲ್ಲಿಯ ಹೊಸತನವನ್ನು, ರಚನಾತ್ಮಕ ಶಕ್ತಿಯನ್ನು ತೋರ್ಪಡಿಸುತ್ತದೆ. ಈ ಬಗೆಗೆ ಹೆಚ್ಚು ಅಧ್ಯಯನ ಮಾಡಬಹುದು ಕೂಡ. ಅದೇ ರೀತಿ ಗದುಗಿನ ಭೌಗೋಳಿಕತೆಯನ್ನು ಬಿಚ್ಚಿಡುವ ಬಗೆಯೇ ತುಂಬಾ ವಿಭಿನ್ನವಾದುದು. ಭೂ ಸೃಷ್ಟಿಯಲ್ಲಿ ಭಾರತದಲ್ಲಿ ಮೊದಲು ಕರ್ನಾಟಕದ ಸೃಷ್ಟಿಯಾಗಿದೆ ಎನ್ನುವ ಅವರ ನಿಲುವು ಭಾವಜೀವಿಯಾದ ಮತ್ತು ದೇಶ, ಭಾಷೆಯನ್ನು ಪ್ರೀತಿಸುವ ಕವಿ ಹೃದಯವನ್ನು ಅಭಿವ್ಯಕ್ತಗೊಳಿಸಿದರೂ "ಸಮಪಾತಳಿಯುಳ್ಳ ಎತ್ತರದ ಬೈಲು ಭೂಮಿಯುಳ್ಳುದು. ಫಲಫಲಿತವಾದ ಕಸ್ತೂರಿ ಬಣ್ಣದ ಕರಿಭೂಮಿಯುಳ್ಳುದು, 'ಸುಜಲಾಂ ಸುಫಲಾಂ ಸಸ್ಯಶಾಮಲಾಂ' ಎಂಬ ಹೊಗಳಿಕೆಗೆ ಪಾತ್ರವಾದುದು. ಇದರಲ್ಲಿ ಸ್ಥಲ ಹಾಗು ಹವೆ-ನೀರು-ಬೆಳೆಗಳ ವೈಶೇಷಿಕತೆಯ ದೃಷ್ಟಿಯಿಂದ ಬೆಳವಲ ನಾಡೆಂದೆನಿಸಿದ ಪುಣ್ಯ ನೆಲದ ಕೇಂದ್ರ ಬಿಂದುವೆನಿಸಿದ ಗದುಗಿನ ನೈಸರ್ಗಿಕವಾದ ಹಿರಿಮೆ ಶ್ಲಾಘನೀಯವು."[೭೫] ಎಂಬ ಅವರ ನುಡಿಗಳು ಭೂಮಿಯ ಸತ್ವವನ್ನು, ಜನರ ಕಾರ್ಯದಕ್ಷತೆಯಿಂದಾದ ಗುಣ ವಿಶೇಷತೆಗಳನ್ನು ತೋರ್ಪಡಿಸುತ್ತವೆ. ತ್ರಿಕೂಟೇಶ್ವರ, ವೀರನಾರಾಯಣ, ಸರಸ್ವತಿ ಮತ್ತು ಕರಿದೇವರು ಮೊದಲಾದ ಜಾಗ್ರತ ಹಾಗೂ ಕಲಾತ್ಮಕವಾದ ಭವ್ಯ ಗುಡಿಗಳನ್ನು, ಲಕ್ಕುಂಡಿಯಲ್ಲಿ ಆಳಿದ ಶಿಬಿಚಕ್ರವರ್ತಿಯ ಯಜ್ಞಯಾಗಾದಿಗಳ ಮಾಹಿತಿಯನ್ನು ನೀಡುವುದರ ಮೂಲಕ ಗದುಗಿನ ಪ್ರಾಚೀನತೆಯನ್ನು ತಮ್ಮ ತೀಕ್ಷ್ಣದೃಷ್ಟಿಯಿಂದ

ಅಭಿವ್ಯಕ್ತಿಸಿದ್ದಾರೆ. ಹನ್ನೆರಡನೆಯ ಶತಮಾನದ ಮಹಾಮಹಿಮರಾದ ಅಲ್ಲಮಪ್ರಭು-ಮುಕ್ತಾಯಕ್ಕರು, ಬಸವಣ್ಣ ಹರ್ತಿ, ಕಣವಿ, ಕಪ್ಪತಗುಡ್ಡ, ಮುಳಗುಂದ, ಕುರ್ತಕೋಟಿ, ಗದದ ಮೊದಲಾದ ಸ್ಥಳಗಳಲ್ಲಿ ನಿಂತು ಲಿಂಗಾರ್ಚನೆಯನ್ನು ಮಾಡಿದ ಜಂಗಮ ಕ್ಷೇತ್ರಗಳೆಂದು ಹೇಳುತ್ತಾರೆ. ಇದೇ ಕೃತಿಯಲ್ಲಿ ಇವರು ಮಾನ್ವಿ ಚೌಕಿ ಮತ್ತು ಹೊನಗುಡಿ ಚೌಕಿಗಳನ್ನು ಉಲ್ಲೇಖಿಸಿದ್ದಾರೆ. ಈ ಚೌಕಿಗಳ ಹಿನ್ನೆಲೆಯು ಕೂಡ ಕುತೂಹಲಕಾರಿಯಾಗಿದೆ. ಈ ವಿಷಯವನ್ನು ಕುರಿತು ಅವರ ಬಿಡಿ ಲೇಖನಗಳಲ್ಲಿ ವಿಮರ್ಶಿಸಲಾಗಿದೆ.

ಸಿದ್ಧರಾಮಪ್ಪ ಅಂದಾನಪ್ಪ ಮಾನವಿಯವರ ಗೃಹಸ್ಥ ಜೀವನವನ್ನು ಹೇಳುವಲ್ಲಿ ಮದುವೆ ಮತ್ತು ಇನ್ನಿತರ ಸಾಂಪ್ರದಾಯಿಕ ವಿಚಾರಗಳನ್ನು ಮಂಡಿಸಿದ್ದಾರೆ. "ಮಾನವನ ಪವಿತ್ರ ಸಂಸ್ಕೃತಿಯ ಉಚ್ಚಮಟ್ಟದ ನಾಗರಿಕತೆಯ ದ್ಯೋತಕವೇ ಗಾರ್ಹಸ್ಥ್ಯ ಜೀವನವು. ಜಗತ್ತಿನ ಪ್ರಖ್ಯಾತ ಪಾಶ್ಚಿಮಾತ್ಯ ರಾಷ್ಟ್ರಗಳು ಭಾರತಕ್ಕೆ ಮಹತ್ವದ ಬೆಲೆಯನ್ನು ಕೊಡುವುದಾದರೆ, ಭಾರತೀಯರಲ್ಲಿ ಈ ಸಂಸ್ಕೃತಿಯು ನೆಲೆಗೊಂಡಿರುವುದೇ ಕಾರಣವು. ಸತಿಪತಿಗಳೊಂದಾದ ಭಕ್ತಿ ಹಿತವಾಗಿಪ್ಪುದು ಶಿವಂಗೆ' ಎಂದು ಹೇಳುವ ಅನುಭವದ ಸಾರವು ಪವಿತ್ರ ದಾಂಪತ್ಯ ಜೀವನವನ್ನು ನಡೆಸುವ ಶರಣ ದಂಪತಿಗಳ ಜೀವನದಲ್ಲಿ ಕಂಡುಬರುತ್ತದೆ. ದಾಂಪತ್ಯ ಜೀವನದ ಸಾರ ಅಡಗಿರುವುದು ವಂಶ ವಲ್ಲರಿಯನು ಪಡೆದು ಸುಖ-ಸಂಸಾರವನ್ನು ಹೊಂದುವುದು. ಅದು ಕಾಮವಾಸನೆಯ ತೃಪ್ತಿಗಲ್ಲ. ದಾಂಪತ್ಯ ಜೀವನದಿಂದ ಧರ್ಮ ರಕ್ಷಣೆಯಾಗುತ್ತದೆ. ವಿವಾಹವು ನಾಗರಿಕತೆಯ ಬಂಧನ; ಈ ಬಂಧನವು ಶಿಥಿಲವಾದರೆ ಧರ್ಮನಾಶ. ಪತ್ನಿಯು ನಿಮ್ಮ ಸ್ನೇಹಿತಳು, ಸಹವಾಸಿನಿಯು, ಸಹಕಾರಿಯು; ಆದರೆ ನಿಮ್ಮ ಕಾಮವಾಸನೆಯ ಯಂತ್ರವಲ್ಲ"[೭೬] ಎನ್ನುವ ನುಡಿಗಳನ್ನು ಅಭಿವ್ಯಕ್ತಿಸಿದ್ದಾರೆ. ಕರ್ಮಯೋಗಿಯ ಬದುಕನ್ನು ವಿಶ್ಲೇಶಿಸುತ್ತ ಬದುಕಿನ ಬೇರೆ ಬೇರೆ ಕ್ಷೇತ್ರಗಳನ್ನು ವಿಮರ್ಶಿಸಿ ನೋಡುತ್ತಾರೆ. ಅವರ ಬರವಣಿಗೆಯಲ್ಲಿ ಸಾದ್ಯಾಂತವಾಗಿ ಎಲ್ಲ ವಿಷಯಗಳೂ ಬಂದು ಹೋಗುತ್ತವೆ.

### ೪.೪.೮ ಜಂಗಮ ತತ್ತ್ವರೋಚಿ ರೂಪಕ- ಸುಮನ ಸಂಹಿತೆ :

ಈ ಕೃತಿ ಚಿಕ್ಕದಾದರೂ ಅದರ ಹೊಸತನದಿಂದ ಗುರುತಿಸಲ್ಪಡುತ್ತದೆ. ಗದುಗಿನ ತೋಂಟದಾರ್ಯ ಮಠ ತನ್ನ ವಿಶಿಷ್ಟ ಪರಂಪರೆಗೆ ಹೆಸರುವಾಸಿ. ಬಸವಾದಿ ಪ್ರಮಥರ ಆಶಯಗಳನ್ನು ಮತ್ತು ಎಡೆಯೂರು ಸಿದ್ಧಲಿಂಗ ಯತಿಗಳ ಪರಂಪರೆಯನ್ನು ತನ್ನೊಳಗೆ ಹಾಸುಹೊಕ್ಕಾಗಿಸಿಕೊಂಡಿರುವ ಈ ಮಠ ಪರಂಪರೆ, ಯಾವತ್ತು ಬಡವರ, ಬಲ್ಲಿದರ,

ಜಂಗಮ ತತ್ತ್ವರೋಚಿ ರೂಪಕ.

# ಸುಮನ ಸಂಹಿತೆ

ಅಂಗಡಿ ಕರವೀರಪ್ಪ

ಪ್ರಕಾಶನ ನಂ. ೩೦ ದಿ. ೧೪-೮-೧೯೩೮

ವೀರಶೈವ ಪ್ರಗತಿಶೀಲ ಯುವಕ ಸಂಘ,
ಗದಗ-ಬೆಟಗೇರಿ.

ಸುಮನ ಸಂಹಿತೆ ಕಿರುಗ್ರಂಥ

ಶೋಷಿತರ, ದಲಿತ ಪರವಾಗಿ ನಿಂತ ಇತಿಹಾಸವುಳ್ಳದ್ದು. ಅದರಲ್ಲೂ ಇಂದಿನ ೧೯ನೆಯ ಪೀಠಾಧಿಪತಿಗಳಾಗಿ ಬಂದಿರುವ ಸಿದ್ಧಲಿಂಗ ಮಹಾಸ್ವಾಮಿಗಳು ಈ ಮಠದ ಪರಂಪರೆಗೆ ಹೊಸದಾದ ಕಳಸವನ್ನಿಟ್ಟಿದ್ದಾರೆ. ಸಮಾಜದ ಎಲ್ಲ ಕ್ಷೇತ್ರಗಳಲ್ಲೂ ತಮ್ಮನ್ನು ತೊಡಗಿಸಿಕೊಂಡು, ಅಲ್ಲಿಯ ಸಿಹಿ-ಕಹಿಗಳನ್ನು ತಿಳಿದುಕೊಂಡು ಸ್ಪಂದಿಸುವ ಅವರ ನಿಲುವು ನಿಜವಾಗಿಯೂ ಅಸಾಧಾರಣವಾದುದು. ಅಂತಹ ಶರಣ ಸಂಪನ್ನರಾದ ಮಹಾಸ್ವಾಮಿಗಳನ್ನು ಗದುಗು ತನ್ನ ಉಜ್ವಲ ಬೆಳವಣಿಗೆಗಾಗಿ ಕರೆತಂದುಕೊಂಡಿದೆ ಎನ್ನಿಸುತ್ತದೆ. ಕ.ಬ.ಅಂಗಡಿಯವರ ಸಿದ್ಧಲಿಂಗ ಮಹಾಸ್ವಮಿಗಳ ತುಂಬಾ ಸಮೀಪವರ್ತಿಗಳು. ಕಿರಿವಯದ ಮತ್ತು ಬಸವನ ಕಳೆಯನ್ನು ಸೂಸುತಿರ್ಪ ಸಿದ್ಧಲಿಂಗ ಸ್ವಾಮಿಗಳಲ್ಲಿ ಲೇಖಕರಿಗೆ ಅಪೂರ್ವವಾದ ವಿಶ್ವಾಸ. ಈ ಕೃತಿಯ "ನವ ಸುಮಗಳಲ್ಲಿ ಸಿದ್ಧಲಿಂಗ ಮಹಾಸ್ವಾಮಿಗಳ ಪರಮ ಪುನೀತ ಆದರ್ಶ ದಿನಚರ್ಯೆಯೂ ಮತ್ತದರಲ್ಲಿ ಪ್ರತಿಬಿಂಬಿತವಾದ ಪುರಾತನ ಪರಂಪರಾಗತ ಮಹಾಶರಣರು ಕೈಕೊಂಡ ದಿವ್ಯಸಾಧನೆ, ಆ ಸಾಧನೆಯ ಸಿದ್ಧಿಗಾಗಿ ಜಗದೀಶನ ಕಾರುಣ್ಯಕ್ಕಾಗಿ ಅವರು ಶರಣು ಹೋಗುವುದು ಮುಂತಾದ ದಿವ್ಯಾಂಶಗಳೇ ಇವೆಯೆಂದು ನಿಃಸಂಶಯವಾಗಿ ಹೇಳಬಹುದು"[೨೭]

ಈ ಕೃತಿ ರಚನೆಗೆ ಗದುಗಿನ ತೋಂಟದ ಸಿದ್ಧಲಿಂಗ ಮಹಾಸ್ವಾಮಿಗಳು ಎಡೆಯೂರು ಸಿದ್ಧಲಿಂಗ ಯತಿಗಳ ರೂಪವಾಗಿ ಕಂಡು "ಜಗದ್ಗುರು ತೋಂಟದ ಸಿದ್ಧಲಿಂಗ ಶಿವಯೋಗಿಗಳು ತಾವು 'ಮಹಾ ಗಣಂಗಳ ಸಂಗದಲ್ಲಿ ಮೈಮರೆದೆನು' ಎಂದು ತಮ್ಮ ವಚನವೊಂದರಲ್ಲಿ ಹೇಳುವಲ್ಲಿ, ಪರವಸ್ತುವಿನ ನಿಜಸ್ಥಿತಿಯ ಅರಿವನ್ನು ಜಗತ್ತಿಗೆ ಮಾಡಿಕೊಟ್ಟದ್ದಾಗಿದೆ. ಆ ವಸ್ತುವೇ ಜಂಗಮರೂಪದಿಂದ ಧರೆಗವತರಿಸಿ ಜನಮನದ ಕಾಳಿಕೆಯನ್ನು ಕಳೆದು ನಿಜಬೆಳಕನ್ನು ಬೀರುತ್ತಲಿಹುದು; ಈ ಭಾವದ ರೋಚಿಯ ರೂಪಕವೇ ಈ ಸುಮನ ಸಂಹಿತೆ! ಮಠದಲ್ಲಿ ನಡೆವ ಶಿವಾನುಭವ ಪ್ರಸಂಗದಲ್ಲಿ ಅಭಿನವ ಜಗದ್ಗುರು ಸಿದ್ಧಲಿಂಗೇಶ್ವರರು ನೀಡುತ್ತಿರುವ ಪ್ರಾಸಾದಿಕ ವಚನ ಸಾರಸರ್ವಸ್ವದ ರುಚಿಗೆ ಸ್ಫೂರ್ತಿಗೊಂಡು"[೨೮] ಈ ಕೃತಿಯನ್ನು ಬರೆಯಲಾಗಿದೆ.

ಈ ಕೃತಿಯಲ್ಲಿ ಒಟ್ಟು ಒಂಭತ್ತು ಹಾಡುಗಬ್ಬಗಳಿವೆ. ಪ್ರತಿಯೊಂದು ಹಾಡುಗಬ್ಬ ಪ್ರಾರಂಭವಾಗುವ ಮುನ್ನ 'ಸ್ಮರಣೆ' ಎಂದು ಮೂರು ಸಾಲಿನ ಸಾಹಿತ್ಯವಿದೆ. ಆ ಸಾಹಿತ್ಯ ಆ ಹಾಡುಗಬ್ಬದ ಸಮತೋಚಿತ ವಿಷಯವನ್ನು ಗುರುತಿಸುತ್ತದೆ. ಹಾಡುಗಳು ಸಂಗೀತಕ್ಕೆ ಅಳವಡುವ ಹಾಗೆ ಸಂಗೀತ ಜ್ಞಾನದಿಂದಲೇ ರಚಿತವಾಗಿವೆ. ಹಾಡುಗಳ ರಾಗ-ತಾಳಗಳನ್ನು ಕೂಡ ಅಲ್ಲಿ ತಿಳಿಸಲಾಗಿದೆ.

'ಜಂಗಮ' ಎನ್ನುವ ಪದಕ್ಕೆ ವೀರಶೈವತ್ವದಲ್ಲಿ ಮಹತ್ತರವಾದ ಸ್ಥಾನವಿದೆ. ಸಮಾಜಮುಖಿಯಾಗಿ ತನ್ನ ಸ್ವಾರ್ಥಪರತೆಯನ್ನು ತೊರೆದು ಅಲ್ಲಲ್ಲಿ ಚರಿಸಿ, ಕೋರಾನ್ನವನ್ನು ಬೇಡಿ, ಸಮಾಜದ ಇಲ್ಲದ ವರ್ಗದವರನ್ನು ಸಲಹುವ ಮಹತ್ತರ ಹೊಣೆಗಾರಿಕೆಯನ್ನು 'ಜಂಗಮ' ಪದ ಸೂಚಿಸುತ್ತದೆ. ಅಂತಹ 'ಜಂಗಮ'ನನ್ನು ವೀರಶೈವ ಸಮಾಜದಲ್ಲಿ ಗುರುವಿನ ಸ್ಥಾನದಲ್ಲಿಟ್ಟು ನೋಡಲಾಗಿದೆ. ಸನ್ಮಾರ್ಗಕ್ಕೆ ಗುರುಪೂರ್ವ ಬೇಕಾಗುತ್ತಾನೆ. ದಾರಿ ತೋರಿ ನಮ್ಮನ್ನು ಸದಾ ಎಚ್ಚರಿಸುವವರು ಬೇಕಾಗುತ್ತಾರೆ. ಆ ಕಾರ್ಯಭಾರವನ್ನು 'ಜಂಗಮ' ಮಾಡುತ್ತಾನೆ. ಗುರುವಿನ ಆಣತಿಯಂತೆ ಸದ್ಧರ್ಮದಲ್ಲಿ ಅನ್ಯ ಸಮಾಜ ಜೀವಿಗಳು ಬದುಕಲು ಆಶಿಸುತ್ತವೆ. ತಪ್ಪಾದಾಗ ಸರಿಯಾದ ಮಾರ್ಗದಲ್ಲಿ ನಡೆಸುವ 'ಜಂಗಮ' ಹಿತವಚನವನ್ನು ಬೋಧಿಸುತ್ತ ಲೌಕಿಕ-ಪಾರಮಾರ್ಥಿಕವೆರಡನ್ನೂ ಗೆಲ್ಲುವ ದಾರಿ ತೋರಿಸುವವನೇ 'ಜಂಗಮ'. ಅಂತಹ ಜಂಗಮನನ್ನು ಗದುಗಿನ ತೋಂಟದಾರ್ಯ ಮಠಕ್ಕೆ ಬಂದ ನೂತನ ಶ್ರೀಗಳಾದ ಸಿದ್ಧಲಿಂಗ ಮಹಾಸ್ವಾಮಿಗಳಲ್ಲಿ ಕ.ಬ.ಅಂಗಡಿಯವರು ಕಂಡರಿಸುತ್ತಾರೆ. ಅವರ ವಚನಾಮೃತಗಳಲ್ಲಿ ಶಿವಾನುಭವ ಸವಿಯನ್ನು ಕಂಡುಂಡ ಇವರು ತಮ್ಮ ಜೀವನದಲ್ಲಿ ತಾವು ಕಂಡ ಇಬ್ಬರು ಮಹಾ ಶಿವಯೋಗಿಗಳ (ಹಾನಗಲ್ಲ ಕುಮಾರ ಶಿವಯೋಗಿಗಳು ಮತ್ತು ಮುರಗೋಡ ಮಹಾಂತ ಶಿವಯೋಗಿಗಳು) ನಂತರ ಇವರಲ್ಲಿ ಆ ಪ್ರಭೆಯನ್ನು ಕಾಣುತ್ತಾರೆ. ಅವರ ನಡೆ-ನುಡಿಗಳಲ್ಲಿ ಶಿವಾನುಭವದ ಸೊಗಡು ಒಂದೆಡೆ ಕಂಡರೆ, ಇನ್ನೊಂದೆಡೆ ಅವರಲ್ಲಿ ಕ್ರಾಂತಿಕಾರಕ ಮತ್ತು ಸಾಮಾಜಿಕ ಹಿನ್ನೆಲೆಯ ಹೋರಾಟವನ್ನು ಕಂಡರು. ಅಂತಹ 'ಜಂಗಮ'ನನ್ನು ಪಡೆದ ಗದುಗು ಧನ್ಯ ಎಂಬುದು ಅವರ ನಿಲುವಾಗಿದೆ.

"ಜಂಗಮ ಬಂದ ಚೆಚ್ಚರಗುಡುತ
ಜಂಗನು ನುಡಿಸುತ ನಗುತ"

ಸಮಾಜವನ್ನು ಎಚ್ಚರಿಸಲು 'ಜಂಗಮ' ಬಂದ. ಅವನು ಬಂದ ರೀತಿ ಹೇಗಿದೆಯೆಂದರೆ ಜಂಗನು (ಸಪ್ಪಳ)ವನ್ನು ಮಾಡುತ್ತ ಬಂದ. ಪಾರಮಾರ್ಥಿಕ ಸಂಪದ ಅಂದರೆ ಇಲ್ಲಿ 'ಜಂಗಮ'ನ ರೂಪವನ್ನು ನಿರ್ದಿಷ್ಟವಾಗಿ ತೋರಿದ್ದಾರೆ. ಕಾಲಿಗೆ ಕಟ್ಟಿಕೊಂಡ 'ಜಂಗ'ನು ನುಡಿಸುತ್ತ, ಸಪ್ಪಳವನ್ನು ಮಾಡುತ್ತ, ಮುಖದಲ್ಲಿ ಮಂದಹಾಸವನ್ನು ಹೊಂದಿ 'ಜಂಗಮ ಬಂದ' ಎಂಬುದು. ಅಂದರೆ ಅವನ ಬರವಿನಲ್ಲಿ ಭವಿಷ್ಯದಲ್ಲಿ ಅಡಗಿರಬಹುದಾದ ಹರ್ಷವನ್ನು ಅವನ ಮುಖದಲ್ಲಿ ನೋಡಬಹುದಿತ್ತು ಎಂಬುದಾಗಿ ಮಾರ್ಮಿಕವಾಗಿ ಹೇಳುತ್ತಾರೆ.

"ಆಪರ ವಸ್ತು, ಇವನೇನಮ್ಮಾ..................."।

'ಜಂಗಮ' ರೂಪಿ ಅವನು ಸಾಕ್ಷಾತ್ ಪರಮಾತ್ಮ. ಅವನು ಗುರು ಸ್ವರೂಪನು. ಅವನು ಹೇಗೆಲ್ಲ ತಿರುಗುತ್ತಾನೆ? ಅವನು ತಿರುಗುವ ಹಿಂದೆ ಲೋಕ ಕಲ್ಯಾಣದ ವಿಷಯವಿದೆ. ಸದುವಿನಯ, ಸದ್ಭಕ್ತಿಗಳನ್ನು ಬಿತ್ತಿ, ಪಾಪವನ್ನು ಮತ್ತು ಪಾಪದ ಕೂಪದಲ್ಲಿ ಬಿದ್ದು ನರಳುವ ಜನಸಾಮಾನ್ಯರನ್ನು ಎಚ್ಚರಿಸುತ್ತಾನೆ. ಅರುಹಿನ ಗುರುವನ್ನು ಮನದಲ್ಲಿ ನೆಲೆ ನಿಲ್ಲಿಸುತ್ತಾನೆ. ಪಾಪದ ಬೇರನ್ನು ಕಿತ್ತು ಹಾಕುತ್ತಾನೆ. ಅಂತವನನ್ನು ಮನಸ್ಸಿನ ಮನೆಯೊಳು ಬರಹೇಳುತ್ತಾರೆ.

"ಇಳಿದನು ಬಯಲಿಂ ಬಯಲಿಗೆ ಬಂದು

ಹೊಳೆಯುವ ಗದುಗಿನ ಪೀಠಕೆ ನಿಂದು

ಕಳಕಳಿಯಿಂ ಸಂಚರಿಸುತಲಿಂದು

ಕಳೆಯಲು ಭಕ್ತರ ಕೊಳೆಯನು ಇಂದು !"

ಗದುಗಿನ ತೋಂಟದಾರ್ಯ ಮಠದ ಪೀಠ ಅದು ನಿರಂಜನನ ಪೀಠ, ಅದು ಕಾಯಕ ದಾಸೋಹಗಳಿಂದ ಅಳಿಯದೇ ಉಳಿದ ಪೀಠವದು. ಅಂತಹ ಹೊಳೆಯುವ ಪೀಠಕ್ಕೆ ಕಳಕಳಿಯಿಂದ ಸಂಚರಿಸುತ್ತ, ಅಲ್ಲಿನ ಭಕ್ತರ ಕೊಳೆಯನ್ನು ತೊಳೆಯಲು ಬಂದು ನಿಂತನು ಆ ನಿರಂಜನ ಜಂಗಮನು ಎನ್ನುವ ಭಾವೋನ್ಮತೆಯನ್ನು ಕವಿ ಪ್ರದರ್ಶಿಸುತ್ತಾರೆ.

ಈ ಕೃತಿಯಲ್ಲಿ 'ಪಾದಯಾತ್ರೆ' ಎನ್ನುವ ಪದ್ಯದಲ್ಲಿನ ಈ ನುಡಿಗಳು

"ಪಾದಯಾತ್ರೆಯ ಮಾಡಬನ್ನಿರಿ

.....................................ಬನ್ನಿರಿ"

ಹೊಸದಾಗಿ ಗದುಗಿನ ತೋಂಟದಾರ್ಯ ಪೀಠಕ್ಕೆ ಬಂದ ಸಿದ್ಧಲಿಂಗ ಮಹಾಸ್ವಾಮಿಗಳು ಕೈಗೊಂಡ ಪಾದಯಾತ್ರೆಯ ಕುರಿತು, ಪಾದಯಾತ್ರೆಯನ್ನು ಮಾಡುವುದರ ಹಿಂದಿನ ಸಮಾಜಮುಖಿ ದೋರಣೆಗಳಿಂದ ಲೇಖಕರು ಪ್ರಭಾವಿತರಾಗಿರುವುದು ಕಂಡು ಬರುತ್ತದೆ. ನಮ್ಮ ಪರಂಪರಾಗತ ಸಂಸ್ಕೃತಿಯಲ್ಲಿ ತನ್ನದೆ ಆದ ಸ್ಥಾನ-ಮಾನವನ್ನು ಹೊಂದಿದೆ. ಸಾಧಕರು, ಸಿದ್ಧಿಪುರುಷರು ಪಾದಯಾತ್ರೆಯ ಮೂಲಕ ತಮ್ಮ ಸಾಧನೆಯನ್ನು ಪ್ರಾರಂಭಿಸುವ, ಹುರಿದುಂಬಿಸುವ ಕಾರ್ಯಕೈಗೊಂಡಿದ್ದಾರೆ. ಸ್ವಾತಂತ್ರ ಚಳುವಳಿಯ

ನೇತಾರರಾದ ಗಾಂಧಿಜೀಯೂ ಕೂಡ ಈ ಪಾದಯಾತ್ರೆಯ ಮೂಲಕ ಸತ್ಯಾಗ್ರಹವನ್ನು ಪ್ರಾರಂಭಿಸಿದರು. ಆ ಚಿತ್ರಣವನ್ನು ಇಲ್ಲಿ ಪ್ರತಿನಿಧಿಸಿದ್ದಾರೆ.

"ಅಡವಿ ಸೋಮಾಪುರವ ಮುಟ್ಟಲು..................."

"ಪಾಪರಹಿತನ ಬೆನ್ನಹತ್ತಲು..................................."

ಈ ನುಡಿಗಳು ಗದುಗಿನ ಸುತ್ತಲ ಪರಿಸರವನ್ನು ಅಲ್ಲಿರುವ ಶರಣಪ್ರಭೆ ಕಾಲಕಾಲದ ಕತ್ತಲೆಯನ್ನು ಹೊಡೆದೊಡಿಸುತ್ತದೆ ಎಂದು ನಂಬುವ ಕವಿ ಇಲ್ಲಿನ ಪರಿಸರದ ಕೆಲವು ಸ್ಥಳಗಳಾದ ಅಡವಿಸೋಮಾಪುರ, ಪಾಪನಾಶಿ, ಕದಾಂಪುರ, ಡಂಬಳಗಳನ್ನು ಹೆಸರಿಸಿ ಅವು ಶರಣರ ಪಾದ ಸ್ಪರ್ಶದಿಂದ ಪುನೀತಗೊಂಡ ಸ್ಥಳಗಳೆಂದು ಹೇಳುತ್ತಾರೆ.

'ಇದೆ ಶಿವಯೋಗ', 'ಅನುಭವದಡುಗೆ', 'ಎದ್ದು ಬಂದನು ನೇಗಿಲ ಯೋಗಿ', 'ಏಳಿ, ಸಮಾಜಸ್ಥಿತಿ ತಿದ್ದಲು', 'ರಕ್ಷಿಪ್ಪುಂದೆಮ್ಮಂ ಸದಾ', 'ಮೇಲ್ಮನೆಯ ಮಹಾಲಿಂಗ ಜ್ಯೋತಿ', ಎನ್ನುವ ಗೀತೆಗಳ ಮೂಲಕ ತೋಂಟದ ಶ್ರೀಗಳ ಹಿರಿಮೆಯನ್ನು ಮತ್ತು ಅವರಲ್ಲಿರುವ ಬದುಕಿನ ಕಳಕಳಿಯನ್ನು ಗುರುತಿಸುವ ಕಾರ್ಯವನ್ನು ಮಾಡಿದ್ದಾರೆ. ಒಟ್ಟಾರೆಯಾಗಿ ಈ ಕೃತಿ ವಿಭಿನ್ನ ಮತ್ತು ವಿಶಿಷ್ಟವಾಗಿದೆ.

### ೪.೪.೯ ಅಕ್ಕನ ಚರಿತ್ರೆ :

ಈ ಕೃತಿಯನ್ನು ೧೯೫೪ರಲ್ಲಿ ರಚಿಸಿದ್ದಾರೆ. ಕವಿಗಳು ತಮ್ಮ ಈ ಮಾತನ್ನು ಮೊದಲೇ ಸ್ಪಷ್ಟ ಪಡಿಸುತ್ತಾರೆ. ಅಕ್ಕನ ವಚನಗಳನ್ನು ತಾತ್ವಿಕವಾಗಿ ಅಧ್ಯಯನಕ್ಕೊಳಪಡಿಸಿ, ಆ ವಚನಗಳ ಆಧಾರದ ಮೇಲೆ ಅಕ್ಕನ ಚರಿತ್ರೆಯನ್ನು ಬರೆಯಲಾಗಿದ್ದು, ಐತಿಹಾಸಿಕ ಅಥವಾ ವಿಮರ್ಶಾತ್ಮಕ ರೀತಿಯಿಂದ ರಚನೆಯಾದದ್ದಲ್ಲ. ಅವರ ವಚನಾಧ್ಯಯನದ ಆಸಕ್ತಿ ಅಕ್ಕನ ಮತ್ತು ಇನ್ನಿತರ ಶರಣರ ವಚನಗಳನ್ನು ಓದುವಂತೆ ಮಾಡಿತು. ಅದೇ ಆಸಕ್ತಿ ಅಕ್ಕನ ಚರಿತ್ರೆಯನ್ನು ಬರೆಯಲು ಪ್ರೇರೆಪಿಸಿತು. ವಚನಗಳಲ್ಲಿಯ ಅಕ್ಕನನ್ನು ಭಾವದಲ್ಲಿ ರೂಪಗೊಳಿಸುವದು ಸುಲಭವಲ್ಲ. ಯಾಕೆಂದರೆ ಅಕ್ಕನು ಭಾವಾತೀತಳು. ಭಕ್ತಿಯಿಂದ ಭಾವವು ಹಿಡಿದಿಟ್ಟಪ್ಪನ್ನಾದರೂ ಲೆಕ್ಕಣಿಕೆಯಲ್ಲಿಳಿಸುವದೂ ಸುಲಭವಲ್ಲ ಎಂಬುದು ಅವರ ನಿಲುವಾಗಿದೆ.

# ಅಕ್ಕನ ಚರಿತ್ರೆ

S. V. [illegible]
918



ಬರೆದವರು:
**ಕರವೀರಪ್ಪ ಬಸವಪ್ಪ ಅಂಗಡಿ,**
ನಿವೃತ್ತ ಅಸಿ. ಡೆ. ಎ. ಇ. ಗದಗ.



೧೯೫೪] [೦-೬-೦

ಅಕ್ಕನ ಚರಿತ್ರೆ ಕಿರುಗ್ರಂಥ

ಚರಿತ್ರೆಗೆ ಮೊದಲು ಈ ಕೃತಿಯನ್ನು ಬರೆಯಲು ಉದ್ದೀಪನಗೊಳಿಸಿದ ಸಂಗತಿಗಳನ್ನು ಹೀಗೆ ಹೇಳುತ್ತಾರೆ.

"ಸಾವಿಲ್ಲದ ಕೇಡಿಲ್ಲದ ರೂಹಿಲ್ಲದ ಚೆಲುವಂಗಾನೊಲಿದೆನವ್ವ!.....

.......ಈ ಸಾವ ಕೆಡುವ ಗಂಡರನೊಯ್ದು ಒಲೆಯೊಳಗಿಕ್ಕು........."

ಎಂಬ ಅಕ್ಕನ ವಚನಗಳ್ನು ಆಲಿಸಿದ ಅವರಿಗೆ 'ಈ ಕೆಡುವ ಗಂಡರನೊಯ್ದು ಒಲೆಯೊಳಗಿಕ್ಕು' ಎಂಬ ನುಡಿ ವಿಶೇಷವಾಗಿ ಪರಿಣಾಮ ಮಾಡಿದೆ. ಹೆಣ್ಣನ್ನು ಮಾಯೆಯೆಂದು ಕರೆದ ಸಮಾಜದಲ್ಲಿ 'ಈ ಕೆಡುವ ಗಂಡರನೊಯ್ದು ಒಲೆಯೊಳಗಿಕ್ಕು' ಎನ್ನುವ ದನಿ ಅಪ್ರತಿಮ ಹೆಣ್ಣಿನದ್ದೇ ಇರಬೇಕೆಂದು ಊಹಿಸಿ, ಆ ಹೆಣ್ಣು ಯಾರು ? ಈ ಶಬ್ದಗಳು ಅವಳಿಂದ ಹೊರಹೊಮ್ಮವುದಾದರೆ ಅವಳ ಚರಿತ್ರೆಯನ್ನು ಒಮ್ಮೆ ಕೇಳಲೇಬೇಕು ಎನ್ನುವ ಉತ್ಸಾಹ ಅವರಲ್ಲಿ ಮೂಡಿತು. ಸಾವು-ಕೇಡು, ಸುಖ-ದುಃಖಗಳು ಹೆಣ್ಣು-ಗಂಡನ್ನೂ ಬಿಟ್ಟಿಲ್ಲ. ಅದಾಗಿಯೂ ಒಬ್ಬರಿಗೊಬ್ಬರು ಮಾಯೆಯ ರೂಪದಲ್ಲಿ ಕಾಡುತ್ತಾರಲ್ಲ? ಇದರ ಮರ್ಮವೇನು? ಬದುಕಿನ ಮೂಲವನ್ನು ಹುಡುಕುವುದರಲ್ಲಿಯೇ ಹೆಣಗುತ್ತಾರಲ್ಲ ಇದಕ್ಕೆ ಕಾರಣವೇನು? ಈ ಎಲ್ಲ ವಿಷಯಗಳನ್ನು ವಿಚಾರಿಸಲು ಅಕ್ಕನ ಈ ಒಂದು ನುಡಿ ಸಾಕಾಯಿತು.

ಇವರ ಕತೃತ್ವ ಶಕ್ತಿಗೆ ಮತ್ತೊಂದು ಉದಾಹರಣೆ. ಈ ಗದ್ಯ "ಅಕ್ಕನ ಮನೆಯೇ ಆಕೆಯ ಪಾಠಶಾಲೆ..........................ಶಂಕಿಸಿದಳು." ಇಡಿಯಾದ ಅವಳ ಗುಣ-ಸ್ವಭಾವ, ಪರಿಸರ, ಅವಳ ಮನಸ್ಥಿತಿ, ಲೌಕಿಕ-ಪಾರಮಾರ್ಥಿಕ ತಿಳುವಳಿಕೆಗಳನ್ನು ಈ ಗದ್ಯ ಭಾಗದಲ್ಲಿ ಭಾಷೆಯ ಸಂಕ್ಷಿಪ್ತತೆಯಿಂದ ತಿಳಿಸಿಕೊಡುವ ಪ್ರಯತ್ನ ಮಾಡಿದ್ದಾರೆ.

"ಆಲವು, ನೆಲವು, ಆಕಾಶವು ಒಂದೇ ಇರಲು,

ಈಳೆ, ನಿಂಬೆ, ಮಾವು, ಮಾದಲಗಳು ಹುಳಿಯಿರಲೇಕೆ ?

ಕಬ್ಬು, ಬಾಳೆ, ಹಲಸು, ನಾರೀಕೇಳಗಳು ಸಿಹಿಯಿರಲೇಕೆ ?

ಮರುಗ, ಮಲ್ಲಿಗೆ, ಪಚ್ಚೆಗೆ ಪರಿಮಳವಿರಲೇಕೆ ?"

ಎಂದು ಅದಕ್ಕೆ ಉತ್ತರವಾಗಿ,

ಒಂದೇ ಜಲವು ಹಲವು ದ್ರವ್ಯಂಗಳ ಕೂಡಿಕೊಂಡು ತನ್ನ ಪರಿಬೇರೆಯಾದಂತೆ, ಎನ್ನ ಚೆನ್ನಮಲ್ಲಿಕಾರ್ಜುನಯ್ಯನು ಹಲವು ಜಗಂಗಳ ಕೂಡಿಕೊಂಡಿರ್ದರೇನು ? ತನ್ನಪರಿ ಬೇರೆ' ಎಂದರಿತಳು. ಅವಳ ಪರಿಸರವನ್ನು ಸಾಧ್ಯಾಂತವಾಗಿ ಅಧ್ಯಯನ ಮಾಡುತ್ತ ಸಾಗುವ ಲೇಖಕರು ಇಲ್ಲಿ ನವೋದಯ ಕವಿಯಂತೆ ಅವಳ ಪರಿಸರವನ್ನು ವರ್ಣಿಸುತ್ತಾರೆ. ಇದು ಬರೀ ವರ್ಣನೆಯಲ್ಲ. ಅಲ್ಲಿ 'ಪ್ರಕೃತಿ' ಅಂದರೆ ಹೆಣ್ಣನ್ನು ಅರ್ಥೈಸಿಕೊಳ್ಳುವ ಎದೆಗಾರಿಕೆಯನ್ನು ತೋರಿದ್ದಾರೆ.

ಅಕ್ಕನ ಮದುವೆಯ ವಯಸ್ಸಿನಲ್ಲಿ ಸಹಜವಾಗಿ ಎಲ್ಲರೂ ಕೇಳುವಂತೆ ನಿನ್ನ ಗಂಡನೆಂಥವನಿರಬೇಕು ಎನ್ನುವ ಪ್ರಶ್ನೆಗೆ ಚೆನ್ನಮಲ್ಲಿಕಾರ್ಜುನನೇ ತನ್ನ ಗಂಡನೆಂದೂ ಹೇಳುತ್ತಾಳೆ. ಆದರೆ ಇಲ್ಲಿ ಕ.ಬ.ಅಂಗಡಿಯವರು ಲೌಕಿಕ ಪತಿಯ ಸ್ವಾಗತವನ್ನಾದರೂ ಮಾಡುತ್ತಿರಬಹುದು. ಯಾಕೆಂದರೆ, ಅಕ್ಕನು ಲೌಕಿಕ-ಪಾರಮಾರ್ಥಿಕ ಪ್ರಪಂಚಗಳ ಸೀಮೆಯ ಮೆದಿವರಿಯಲ್ಲಿದ್ದಾಳೆ ಎನ್ನುವದರ ಮೂಲಕ ಈ ಚರಿತ್ರೆಯನ್ನು ಓದುಗರ ಹತ್ತಿರಕ್ಕೆ ತರುವ ಪ್ರಯತ್ನ ಮಾಡಿದ್ದಾರೆ. ಸಹಜವಾಗಿ ನಮ್ಮ ನಿಮ್ಮಂತೆ ಅಕ್ಕನೂ ಎಂದು ತಿಳಿಯುವ ಮನಸ್ಸುಗಳನ್ನು ಅಲ್ಲಿ ಹುಟ್ಟುಹಾಕುತ್ತಾರೆ. ಅಂದರೆ ಇಲ್ಲಿ ಅಕ್ಕನೆಂದರೆ ಅತೀಮಾನುಷ ಶಕ್ತಿಯೆಂಬ ತಿಳುವಳಿಕೆಯಿಂದ ಹೊರಗೆ ಬಂದು ತಮ್ಮ ಜೀವನದ ಚಿತ್ರಣವನ್ನು ಅದರಲ್ಲಿ ಕಾಣುವಂತಾಗಬೇಕೆನ್ನುವುದು ಕವಿಯ ಉದ್ದೇಶ. 'ಅವರು ಇವರು! ನಿನಗೆ ಪತಿಯಾದರೆ?' ಎಂದು ಸಹಜ ಪ್ರಶ್ನೆಗಳು. 'ಚೆಲುವ ಚೆನ್ನಮಲ್ಲಿಕಾರ್ಜುನನಲ್ಲದೆ ಅನ್ಯರಿಗೆ ಈ ದೇಹ ಸಲ್ಲದು' ಎಂಬುದು ಅವಳ ಉತ್ತರವಾದರೂ ಇಲ್ಲಿಯ ಉದ್ದೇಶ 'ಅಲೌಕಿಕವಾದುದನ್ನು ಲೌಕಿಕರು ನಂಬುವದು, ನಂಬಿ ಸಾಧಿಸುವದು ಅಸಾಧ್ಯ. ಅಸಾಧ್ಯವಾದುದನ್ನೇ ಸಾಧಿಸಲು ಆತುರತೆ ಅಕ್ಕನಿಗೆ ಅನುಚಿತ' ಎಂಬ ಸಂದೇಶವನ್ನು ಓದುಗರಿಗೆ ರವಾನಿಸುತ್ತಾರೆ.

ಕ.ಬ.ಅಂಗಡಿಯವರ ವೈಚಾರಿಕತೆಗೆ ಇಲ್ಲೊಂದು ನಿದರ್ಶನ. "ಲೋಕದ ಚೇಷ್ಟೆಗೆ ಬೀಜವಾದ ..................ಕೌಶಿಕನನ್ನು ಮುಸುಕಿತು;"[೨೯] ಇಲ್ಲಿ ಅವರು ಬಳಸುವ 'ಲೋಕದ ಚೇಷ್ಟೆಗೆ ಬೀಜವಾದ ರವಿಯು......... ಎನ್ನುವಲ್ಲಿ ಲೋಕದ ಪ್ರತಿಯೊಂದು ವಸ್ತುವಿನ ಮೇಲೆ ಸೂರ್ಯನ ಬೆಳಕು ಬೀಳುವುದು ಅವಶ್ಯಕ ಎನ್ನುತ್ತೇವೆ. ಆದರೆ ಇಲ್ಲಿ ಅಕ್ಕನ ಮೇಲೆ ಚೆಲ್ಲಿದ ಬೆಳಕಿನಿಂದಾಗಿ ಅವಳ ಬಾಳು ಕಾಮಾಂಧನ ಬಲಿಗೆ ಸಿಲುಕಿ ಹೋಯ್ತು. ಆದರೆನಂತೆ ಅದೇ ಬೆಳಕು ಕತ್ತಲಾವರಿಸಿದ್ದ ಕೌಶಿಕನ ಕಣ್ಣನ್ನು ತೆರೆಯಿಸಿತು. ಅಕ್ಕನ ವ್ಯಕ್ತಿತ್ವವನ್ನು ಓರೆಗೆ ಹಚ್ಚಿತು. ಅಕ್ಕ ಪಾರಮಾರ್ಥಿಕ ಶಕ್ತಿಯಾಗಿ ಉದಯಿಸಿದಳು ಎನ್ನುವ ವಿಚಾರವನ್ನು ಸಶಕ್ತವಾಗಿ ಮಂಡಿಸಿದ್ದಾರೆ.

'ವೈರಾಗ್ಯೋದಯ' ಎಂಬ ಅಧ್ಯಾಯದಲ್ಲಿ ನಾಟಕ ರೂಪದ ಸಂಭಾಷಣೆಗಳನ್ನು ಬರೆದು ಕೌಶಿಕ ಮಹಾರಾಜನ ಮತ್ತು ಅಕ್ಕಮಹಾದೇವಿಯರ ನಡುವಣ ನಡೆದ ದೃಶ್ಯಾವಳಿಗಳನ್ನು ನಿರೂಪಿಸಿದ್ದಾರೆ. ಇಲ್ಲಿ ಇಬ್ಬರೂ ಲೌಕಿಕರೇ ಆದರೆ ಅವರಿಬ್ಬರ ಮಾನಸ ವಲಯದಲ್ಲಿ ಸ್ಥಾಯಿಯಾಗಿರುವ ಭಾವನಗಳೇ ಭಿನ್ನ. ಒಬ್ಬರಲ್ಲಿ ಲೌಕಿಕತೆಯ ಹಿರಿಮೆಯನ್ನು ಮತ್ತು ಇನ್ನೊಬ್ಬರಲ್ಲಿ ಅಲೌಕಿಕತೆಯ ಪರಮತೆಯನ್ನು ಕಾಣುತ್ತೇವೆ. ಸಂದರ್ಭಕ್ಕೆ ಸೂಚ್ಯವಾಗುವಂತೆ ಎಲ್ಲೆಲ್ಲಿ ವಚನಗಳ ಸಹಾಯ ಬೇಕಾಗುವುದೋ ಅಲ್ಲಲ್ಲಿ ಅವುಗಳನ್ನು ಬಳಸಿಕೊಂಡಿದ್ದಾರೆ. ಹೀಗಾಗಿ ವಚನಗಳಲ್ಲಿಯ ತಾತ್ವಿಕ ಅಂಶಗಳು ಮತ್ತು ಸಾತ್ವಿಕ ಅಂಶಗಳು ಈ ಚರಿತ್ರೆಗೆ ಕಾರಣವಾದ ಪಾತ್ರಗಳಿಗೆ ಹೆಚ್ಚಿನ ಪುಷ್ಠಿಯನ್ನು ಒದಗಿಸುತ್ತವೆ.

ಅಕ್ಕನ ಮೂಲಕ ಇಂದಿನ ಸ್ತ್ರೀ ವರ್ಗಕ್ಕೂ ಕೆಲವು ವಿಚಾರಗಳನ್ನು ಮುಟ್ಟಿಸುವಲ್ಲಿ ಯಶಸ್ವಿಯಾಗಿದ್ದಾರೆ. ದಿಗಂಬರೆಯಾಗಿ ಬಂದ ಅಕ್ಕನನ್ನು ಕುರಿತು ಅವಳ ಗೆಳತಿಯರು 'ನೀನಿಂದು ವಿರಾಗಿಣಿಯಾಗಿ ಹೀಗೆ ನಮ್ಮನ್ನು ಕೈಬಿಟ್ಟು ತೆರಳುವದು ಉಚಿತವೇನಕ್ಕ! ನಮಗಾವ ಸನ್ಮಾರ್ಗವನ್ನು ತೋರುವಿಯಕ್ಕಾ!' ಎಂದು ಹಲವು ಬಗೆಯಾಗಿ ಅಕ್ಕನಿಗೆ ಅಕ್ಕರೆಯ ಅರಿಕೆಯನ್ನಿತ್ತರು. ಮಹದೇವಿ ಅಕ್ಕನು "ಅಕ್ಕಗಳೇ, ಯಾವಾಗ ಕೌಶಿಕನೆಂಬ ಕಾಮದ ಕತ್ತಲೆಯು ತನ್ನ ಅರಮನೆಗೆ ನನಗಾಗಿ ಕರೆಯನ್ನಿತ್ತಿತೋ, ಆಗ ಅಲ್ಲಿ ನಡೆದಾಗಿನ ಸನ್ನಿವೇಶವೇ ನನಗೆ ಲೌಕಿಕವು ಪಾರಮಾರ್ಥಿಕ ಅಡಿಗಲ್ಲೂ, ಕೈಗನ್ನಡಿಯೂ ಎಂದು ತಿಳಿಸಿತು. ಆ ಕಾರಣದಿಂದ ನಾನೀಗ ಪಾರಮಾರ್ಥದ ಮೆಟ್ಟಿಲುಗಳನ್ನೇರಹತ್ತಿರುವೆನು; ಅಂತೆಯೇ, ನೀವೂ ಲೌಕಿಕದ ದಂಪತಿಗಳೂ, ಒಂದಿಲ್ಲೊಂದು ತೆರನ ಲೌಕಿಕದ ಸನ್ನಿವೇಶದಲ್ಲಿ ಪಾತ್ರವಹಿಸಿದಾಗ, ನಿಮಗಾದರೂ ನನ್ನಂತೆಯೇ ಎನಿಸುವದು. ಆಗ ನೀವು ಲೌಕಿಕದ ಸತಿ–ಪತಿಗಳೆಸಿಸುವವರು ಆ ಲಿಂಗದೇವನೊಬ್ಬನಿಗೆ ಸತಿಯಾಗಿ ಪಾರಮಾರ್ಥಿಕದತ್ತಡಿಯಿಡುವಿರಿ; ಶಿವನ ಬೆಳಗಿನಲ್ಲಿ ವಿರಮಿಸುವಿರಿ; ನೀವೂ ಅಕ್ಕನ ಆದರ್ಶ ಅಕ್ಕಂದಿರಾಗುವಿರಿ; ಈಗೆಲೆನ್ನ ಹಿಂದಕ್ಕೆಳೆಯದಿರಿ."[೮೦] ಬಾಳಿನಲ್ಲಿ ಪ್ರತಿಯೊಬ್ಬರಿಗೂ ಅಕ್ಕನು ನಿಂತ ಬದುಕಿನ ಹಂತ ಕಾಣಸಿಗುತ್ತದೆ. ಆದರೆ ನಾವು ಅದೆಷ್ಟು ಜೀವನದ ಜಂಜಡದಲ್ಲಿ ಮುಳುಗಿದ್ದೇವೆ ಎಂದರೆ ನಮ್ಮೊಳಗಿನ 'ಅರಿವ'ನ್ನು ನಾವು ಅರಿಯಲು ಸಮರ್ಥರಾಗದಷ್ಟು. 'ಸತಿ–ಪತಿಗಳೊಂದಾದ ಭಕ್ತಿ ಹಿತವಾಗಿಪ್ಪುದು ಶಿವಂಗೆ' ಎಂದ ಶರಣರು 'ಶರಣ ಸತಿ, ಲಿಂಗ ಪತಿ' ಎಂಬ ತಾತ್ವಿಕ ಸ್ವರೂಪವನ್ನೂ ಎತ್ತಿಹಿಡಿದಿದ್ದಾರೆ. ಶರಣೆಯರಿಗೆ ವಿಧವೆಯಾದ ಮೇಲೂ ಅವರಿಂದ ಈ ಶರಣ ಸತಿ, ಲಿಂಗ ಪತಿ ಭಾವಕ್ಕೆ ದಕ್ಕೆಯಾಗುವುದಿಲ್ಲ. ಬದಲಾಗಿ ಗಂಡಾಗಲಿ ಹೆಣ್ಣಾಗಲಿ 'ಶರಣ ಸತಿ'ಯ ಸ್ಥಾನದಲ್ಲಿದ್ದು, ಲಿಂಗ ಪತಿಯನ್ನಾಗಿಸಿ, ತಮ್ಮ ಜೀವದ ಕೊನೆಯ ಉಸಿರವರೆಗೂ ಆ ಲಿಂಗದ ಸಂಗಿಯಾಗಿರುತ್ತಾರೆ. ಹೀಗಾಗಿ ಅಲ್ಲಿ

ಲೌಕಿಕದ ಸತಿ–ಪತಿಯರ ನಡುವಿನ ಅಗಲುವಿಕೆಯು ಪಾರಮಾರ್ಥಿಕ ಸತಿ–ಪತಿ ಭಾವಕ್ಕೆ ಯಾವುದೇ ವ್ಯತ್ಯಯವನ್ನು ಮಾಡಲಾರದು. ಈ ಭಾವ ನಿಮ್ಮಲ್ಲೂ ಬಂದಾಗ ನಾನು ನೋಡುವ ದೃಷ್ಟಿ ನಿಮಗೂ ದೊರೆಯುತ್ತದೆ ಎನ್ನುವ ಅಕ್ಕ ಪ್ರಸ್ತುತಕ್ಕೂ ಕನ್ನಡಿಯಾಗುತ್ತಾರೆ.

ಯಾವ ಒತ್ತಡವೂ ಅವಳನ್ನು ತನ್ನ ದೃಢ ನಿರ್ಧಾರದಿಂದ ಹಿಂದೆ ಸರಿಸಲು ಸಾಧ್ಯವಾಗುವುದಿಲ್ಲ. ಆ ಗಹನವಾದ ವಿಷಯವನ್ನು ಲೇಖಕ ಓದುಗರ ಮುಂದಿಡುವುದು ಹೀಗೆ "ಶಿವಜ್ಯೋತಿಯಿಂದ ಬೆಳಗುವ ಅಕ್ಕನಿಗೆ ಶಿವಮಾಯಾ ಪ್ರಪಂಚದ ಚೇಷ್ಟೆಗಳು ಹೇಮಕ್ಕೆ ಪುಟವಿಕ್ಕಿದಂತಾದವು. ಕರಕಠಿಣವಾದ ಪದಾರ್ಥಗಳನ್ನು ಕತ್ತರಿಸುವ ಮೂವತ್ತೆರಡು ಹಲ್ಲುಗಳ ನಡುವಿರುವ ಚಪಲ ನಾಲಗೆಯು ಹಲ್ಲುಗಳ ಇರಿತಕ್ಕೆ ಒಳಗಾದೀತೇ! ಕೆಸರಲ್ಲಿ ಜನಿಸಿದ ಕಮಲವು ಕೆಸರನ್ನು ಹೊದ್ದೀತೇ ಶಿವಮಾಯಾ ಜಾಲದಲ್ಲಿ ಸಂಚರಿಸುವ ಅಕ್ಕನು ಮಾಯೆಯ ಅರೆತಕ್ಕೆ ಸಿಕ್ಕಬಹುದೇ! ಅಕ್ಕನನ್ನು ಗೆಲ್ಲಲು ಶಿವನ ಮಾಯೆಯು ನಾನಾವಿಧವಾಗಿ ಅಕ್ಕನನ್ನು ಕಾಡಿರಬೇಕು; ಅಕ್ಕನೂ ಅದರ ಕಾಟಕ್ಕೆ ಬಳುಕದೆ ತನ್ನ ಗೆಲವನೇ ಸಾಧಿಸಿರಬೇಕು."[೮೧]

ಭಾರತೀಯ ಸ್ತ್ರೀಯೋರ್ವಳು ಪಾರಮಾರ್ಥಿಕ ವಿಷಯದಲ್ಲಿ ಎಷ್ಟೊಂದು ಸದೃಢಳೆಂಬುದನ್ನು ಅಕ್ಕಮಹಾದೇವಿ ತೋರಿಸಿಕೊಡುತ್ತಾಳೆ. ಅವಳಲ್ಲಿ ಇರುವ ಸಹನೆ, ತಾಳ್ಮೆಗಳನ್ನು ನಾವು ಉದಾಸೀನತೆಯಿಂದ ನೋಡುವಂತಿಲ್ಲ. ಅವಳ ಆ ಗುಣಗಳು ಅವಳ ಅಂತರ್‌ಸ್ಥೈರ್ಯವನ್ನು ಇಮ್ಮಡಿಸುತ್ತವೆ. ಅವಳಲ್ಲಿಯ ಶರಣಾಗತ ಭಾವ ಅವಳಲ್ಲಿಯ ಸಂಸ್ಕೃತಿಯನ್ನು ಸದಾ ಜಾಗೃತವಾಗಿಟ್ಟಿರುತ್ತದೆ. ಆ ಜಾಗೃತಿಯಿಂದಲೇ ಅವಳ ಬದುಕು ತೂಕತಪ್ಪದಂತೆ ಸಾಗುತ್ತದೆ. ಇದು ಪಾಶ್ಚಿಮಾತ್ಯ ಕೌಟುಂಬಿಕ ಶೈಲಿಗೂ ಮತ್ತು ಭಾರತೀಯ ಕುಟುಂಬ ಶೈಲಿಗೂ ಇರುವ ಬಹುದೊಡ್ಡ ಅಂತರ. ಈ ಸಂವೇದನೆಯನ್ನು ಅಕ್ಕನ ಚರಿತ್ರೆಯ ಮೂಲಕ ಇವರು ಇಲ್ಲಿ ಸಾದರಪಡಿಸುತ್ತಾರೆ. ಮಹಿಳೆಯರ ವಿಶೇಷ ಗುಣವಾದ ಸತಿತ್ವ ವಜ್ರಕ್ಕಿಂತಲೂ ಕಠೋರ. ಆದರೆ ಆಚರಣೆಯಲ್ಲಿ ಹೂವಿಗಿಂತಲೂ ಮಧುರ. ಈ ವಿಶಿಷ್ಟತೆಯನ್ನು ಪ್ರಪಂಚಕ್ಕೆ ತೋರ್ಪಡಿಸು ಮುನ್ನುಡಿಯಾಗಿ ಅಕ್ಕಮಹಾದೇವಿ ಕಂಡು ಬಂದರೆ, ಇನ್ನುಳಿದ ಶರಣೆಯರು ಅವಳ ಮಾರ್ಗದಲ್ಲಿ ಮುನ್ನಡೆದು ಬಂದವರಾಗಿದ್ದಾರೆ.

'ಅನುಭವದೂಟ'ದಲ್ಲಿ ಅಕ್ಕನ ಮೂಲಕ ತಮ್ಮ ಅನುಭವ ಸಾರವನ್ನು ಹಂಚಿದ್ದಾರೆ. "ಲಿಂಗವಂತಿಕೆಯ ಧರ್ಮವೈಶಿಷ್ಟ್ಯದಲ್ಲಿ ಷಟ್ಸ್ಥಲ ಮಾರ್ಗವೊಂದು ಆತ್ಮೋನ್ನತಿಗಾಗಿ, ಸಾಧಕನು ಭಕ್ತ, ಮಾಹೇಶ, ಪ್ರಸಾದಿ, ಪ್ರಾಣಲಿಂಗಿ, ಶರಣ ಮತ್ತು ಐಕ್ಯಗಳೆಂಬ ಷಟ್ಸ್ಥಲದ ಹಂತಗಳನ್ನೇರಿ, ಅಲ್ಲಿಯ ಕಟ್ಟುನಿಟ್ಟುಗಳಿಗೆ ಇಂಬುಗೊಟ್ಟು ಆಯಾ ಸ್ಥಳಗಳಲ್ಲಿಯ ಪ್ರಮಾಣ

ಪತ್ರಗಳನ್ನು ದೊರಕಿಸಬೇಕಾಗುವುದು. ಇವುಗಳ ಮೊದಲಿನವೆರಡು ಸ್ಥಳಗಳು ಮಹತ್ವದವೂ ಗಹನವೂ ಸಾಧಕರಿಗೆ ಬಾಧಕವೂ ಆಗಿವೆ; ಒರೆಗಲ್ಲಾಗಿವೆ, ಎಂದರೂ ಸಲ್ಲುವದು. ಇವುಗಳಲ್ಲಿದ್ದುಕೊಂಡು ಸಾಧಕನು ಗತಿ–ಪ್ರಗತಿಗಳನ್ನು ಪಡೆಯುವದೆಂದರೆ, ಈಜರಿಯದವನು ಆಳವಾದ, ಅಪಾರವಾದ, ಕ್ರೂರ ಜಲಚರಸಂಗತವಾದ ಸಮುದ್ರದಲ್ಲಿ ಬಿದ್ದು ಒದ್ದಾಡಿದಡಗಂಡಂತೆ; ಅಥವಾ ಕುರುಡನು ಭಯಾನಕವಾದ ಬೆಟ್ಟದ ಕಾಡಿನಲ್ಲಿ ಬೀಳು–ಏಳು, ಇರಿತ–ಒದೆತ–ಕಡತಗಳಲ್ಲಿ ಸಿಕ್ಕು, ಪಾರಾಗಿ ಸಮಪ್ರದೇಶವನ್ನು ಹೊಂದಿದಂತೆ; ಸ್ವೇಚ್ಛಾಚಾರಿ, ಏಕತಂತ್ರಾಧಿಕಾರಿಯೆನಿಸುವ ಮಯಾ–ಮೋಹಿನಿಯೆಂಬ ಅರಸನ ಸತ್ತಾಧೀಕಾರಕ್ಕೊಳಪಟ್ಟು ಕಷ್ಟನಷ್ಟಗಲಲ್ಲಿ, ಬಂಧನಗಳಲ್ಲಿ ಬಿದ್ದೆದ್ದು, ತನ್ನ ಉನ್ನತಿಯನ್ನು ಕಂಡುಕೊಂಡಂತೆಯೇ ಸರಿ."[೮೨] ಈ ನುಡಿಗಳು ಅಕ್ಕನ ಚರಿತ್ರೆಯನ್ನು ತಿಳಿಸಲು ಪೂರಕವಾದ ಅಂಶಗಳಾದರೂ, ಲೇಖಕರ ಸೃಜನಶೀಲತೆ ಮತ್ತು ವೀರಶೈವತ್ವದ ಆಳವಾದ ಅಧ್ಯಯನವವನ್ನು ಗುರುತಿಸಬಹುದಾಗಿದೆ.

ಅಕ್ಕನು ಆಧ್ಯಾತ್ಮಿಕ ಪ್ರಪಂಚದಲ್ಲಿ ಲೌಕಿಕರೂ ಕಾಣಲಾಗದ ಭೋಗೋಪಭೋಗಸುಖವನ್ನು ಲಿಂಗಾಂಗ ಸಾಮರಸ್ಯ ಸುಖಾನುಭವರೂಪದಿಂದ ಮನಸಾರೆ ಸವಿಯುತ್ತಿರುವಳು. ಆದುದರಿಂದಲೇ ಹಿಂದಿನ ಮಾಹೇಶ್ವರ ಸ್ಥಲವನ್ನು ಮೀರುತ್ತ ಮೀರುತ್ತ ನಡೆದಂತೆ, ಪ್ರಸಾದಿಯ ಸ್ಥಲವು ಸಮೀಪಿದಂತೆ, ಅಕ್ಕನಿಗೆ ಆನಂದವೂ ಉಲ್ಲಾಸವೂ ಮಿಡಿದು ಪಲ್ಲವಿಸಿ ಪಸರಿಸಹತ್ತಿತು. ಅಕ್ಕನ ಜೀವನದಲ್ಲಿ ಪಾರಮಾರ್ಥಿಕ ಸವಿಯು ಹೆಚ್ಚುತ್ತ ಸಾಗುವುದನ್ನು ಅತ್ಯುತ್ತಮವಾಗಿ ನೀಡಿದ್ದಾರೆ. ಲೇಖಕನಿಗೆ ತಾನು ಬರೆಯುವ ವಿಷಯದಲ್ಲಿ ಜ್ಞಾನವಿರಬೇಕು ಮತ್ತು ಆಸಕ್ತಿ ಇರಬೇಕು. ಅದಲ್ಲದೆ ಆ ದಾರಿಯಲ್ಲಿ ಲೇಖಕನು ಸಾಗಿಬಂದಿರಬೇಕು ಅಥವಾ ಸಾಗುತ್ತಿರಬೇಕು ಎಂಬುದು ಸಾಮಾನ್ಯವಾಗಿ ತಿಳಿದ ವಿಷಯವೇ. ಹೀಗಾಗಿ ಇವರಿಗಿರುವ ಪಾರಮಾರ್ಥಿಕ ಜ್ಞಾನ ಮತ್ತು ಆಸಕ್ತಿ ಕಂಡು ಬರುತ್ತದೆ. ಅವರ ಅನುಭವದ ಸಾರದಲ್ಲಿ ಅಕ್ಕನ ಅಮೂರ್ತ ರೂಪವನ್ನು ನೋಡಬಹುದು.

ಅಕ್ಕನ ವಚನಗಳು "ಎಂತಹ ಉದ್ಬೋಧಪರವಾಗಿವೆ ಇದರಂತೆ ಪತಿಪ್ರೇಮ, ಗುರುಭಕ್ತಿ, ಸಮಾಜದೊಡನಾಡುವ ರತಿ, ಸಜ್ಜನ ಸಂಗದ ಸತ್ಫಲಗಳ ಬಗ್ಗೆ ಅಕ್ಕನ ವಚನಗಳಲ್ಲಿಯ ಒಂದೊಂದು ತುಣುಕು ಮುತ್ತಿನ ಸರದೊಳಗಿನ ಒಂದೊಂದು ಮುತ್ತಿನಂತಿವೆ."[೮೩] ಅಕ್ಕನು ಲೌಕಿಕಕ್ಕಿಂತ ಪಾರಮಾರ್ಥಿಕ ನೆಲೆಯತ್ತ ಹೆಚ್ಚು

ಒಲವಿರುವವಳಾದರೂ ಅವಳ ವಚನಗಳಲ್ಲಿ ಲೌಕಿಕತೆ ಮತ್ತು ಪಾರಮಾರ್ಥಿಕತೆಯ ಎರಡೂ ಅಂಶಗಳನ್ನು ಕ.ಬ.ಅಂಗಡಿಯವರು ಗುರುತಿಸುತ್ತಾರೆ.

ಚೆನ್ನಮಲ್ಲಿಕಾರ್ಜುನ ಕೇಳಯ್ಯಾ! ಲೋಕದೊಳು ಹುಟ್ಟಿರ್ದಬಳಿಕ ಸ್ತುತಿ ನಿಂದೆಗಳು ಬಂದಡೆ, ಮನದಲ್ಲಿ ಕೋಪವ ತಾಳದೆ ಸಮಾಧಾನಿಯಾಗಿರಬೇಕು.

........ಈ ಸಾವ ಕೆಡುವ ಗಂಡರನೊಯ್ದು ಒಲೆಯೊಳಗಿಕ್ಕು !

....... ಎರದ ಮುಳ್ಳಿನಂತೆ ಪರಗಂಡರೆನಗವ್ವ ! ಚೆನ್ನಮಲ್ಲಿಕಾರ್ಜುನನಲ್ಲದ ಗಂಡನ ಉರದಲ್ಲಿ ಮುಳ್ಳುಂಟೆಂದು ನಾನಪ್ಪ ಲಮ್ಮೆನವ್ವಾ !

........ ನಿಮ್ಮ ಮಹಂತರ ಕೂಡಿಯಗಲುವ ಧಾವತಿಯಿಂದ ಸಾವುದೇ ಕರ ಲೇಸುಕಂಡಯ್ಯ

....... ನೀ ಕೊಟ್ಟ ಆಯುಷ್ಯವುಳ್ಳನ್ನಕರ, ಲಿಂಗಸುಖಿಗಳ ಸಂಗದಲ್ಲಿ ದಿನಂಗಳ ಕಳೇವೆನು.

......... ಚೆನ್ನಮಲ್ಲಿಕಾರ್ಜುನ ಕರ ಕೆಡೆ ನೋಡಿದೊಡೆ, ಒಡಲನು ಪ್ರಾಣವನು ನಿಮಗೊಪ್ಪಿಸಿ ಶುದ್ಧಳಹೆನು.

......... ನಾ ಹಿಂದೆ ಮಾಡಿದ ಹೀನಂಗಳೆಲ್ಲವ ತಂದು ಮುಂದಿಳುಹಲು ನಿಮಗೆ ಹಾನಿಯೇ ! ಎನ್ನ ತಂದೆ ಮಲ್ಲಿಕಾರ್ಜುನದೇವಯ್ಯ ಕೊಂದೊಡೆ ಶರಣೆಂಬುದ ಮಾಣೆ.

....... ಆನು ಬೇಡಿ ಭವಿಯಾದೆನು. ಅವು ನೀಡಿ ಭಕ್ತರಾದಿರಿ ಇನ್ನು ಬೇಡಿದೆನಾದರೆ ಚೆನ್ನಮಲ್ಲಿಕಾರ್ಜುನಯ್ಯ ನಿಮ್ಮಾಣೆ.

"ತೆರಣಿಯ ಹುಳು ತನ್ನ ಸ್ನೇಹದಲ್ಲಿ ಮನೆಯ ಮಾಡಿ, ತನ್ನ ನೂಲು ತನ್ನ ಸುತ್ತಿಸಾವತೆರನಂತೆ; ಊರ ಸೀರೆಗೆ ಅಗಸ ತಡಬಡಗೊಂಡಂತೆ; ಕೋಲತುದಿಯ ಕೋಡುಗನಂತೆ; ಬಲ್ಲಿದನ ಹಗೆಯ ತೆಗೆವನ್ನ ಬರ ಬಡವನ ಬಂಧನಕ್ಕೆ ಬಂದ ಗಿಳಿ ತನ್ನ ಬಂಧುವ ನೆನವಂತೆ ಕತ್ತಲೆಯ ಪಾಳಯವ ರವಿ ಹೊಕ್ಕಂತೆ; ಹೊಳ್ಳಬಿತ್ತಿ ಫಲವನರಸುವಂತೆ" ಇಂತಹ ಉಪಮೆಗಳು,

"ಬೆಟ್ಟದ ಮೇಲೊಂದು ಮನೆಯ ಂಆಡಿ, ಗಿರಿಯಲದಲದೆ ಹುಲ್ಲು ಮೊರಡಿಯಲ್ಲಾಡುವದೇ ನವಿಲು ? ಚಂದನವ ಕಡಿದು ತೇದೊಡೆ, ಹಾವಿನ ಹಲ್ಲು ಕಳೆದು ಮೆದ್ದ ಬಳಿಕ ಅಮರವನಾರುತರಿದರೇನು ?" ಇಂತಹ ದೃಷ್ಟಾಂತಗಳು,

"ಅಳಿ ಸಂಕುಳವೇ, ಮಾಮರವೇ ! ಚಿಲಿಮಿಲಿ ಎಂದೋದುವ ಗಿಳಿಗಳಿರಾ ನೀವು ಕಾಣಿರೇ!" ಎಂಬ ಭಾವಗೀತೆಗಳನ್ನು ಮೀರುವ ಕಾವ್ಯವಾಣಿ ಮೀರುವ ಅಕ್ಕನ ಕಾವ್ಯವಾಣಿಗಳು

"ನೆಲದ ಮರೆಯ ನಿಧಾನದಂತೆ; ಕಾಯಕ್ಕೆ ನೆಳಲಾಗಿ ಕಾಡಿತ್ತು ಮಾಯೆ; ಸಾವಿಲ್ಲದ, ಕೇಡಿಲ್ಲದ, ರೂಹಿಲ್ಲದ.........!ಈ ಮೊದಲಾದ ಛಂದೋಬದ್ಧವಾಗಿ, ಮನೋಜ್ಞತೆಯನ್ನೀಡುವ ಗೀತೆಗಳು ಅಕ್ಕನ ವಚನ ಸೃಷ್ಟಿಯನ್ನು ಕನ್ನಡ ಸಾಹಿತ್ಯ ಕ್ಷೇತ್ರದಲ್ಲಿ ಅಮೂಲ್ಯವಾದ ಅನುಪಮವಾದ ಹೃದಯಂಗಮವಾದ ಕಾವ್ಯಸೃಷ್ಟಿಯನ್ನಾಗಿ ಮಾಡಿವೆ. ಈ ಕಾವ್ಯಸೃಷ್ಟಿಯಲ್ಲಿ ರಸಾತ್ಮಕ ರಸಿಕರು ಪ್ರವೇಶಿಸಿ, ತಮತಮಗುಚಿತ ಸಾಹಿತ್ಯ ಸುಧಾರಸಪಾನಮತ್ತರಾಗಿ ಆದರ್ಶ ಅಕ್ಕನ ಅಡಿದಾವರೆಗಳಿಗೆ ತುಂಬಿಗಳಾಗಿ ಇಂಚರದಿಂದ ತಮ್ಮ ಭಕ್ತಿ-ಭಾವವನ್ನು ಅರ್ಪಿಸುತ್ತಿರುವರು."ಎಂದು ಅಕ್ಕನ ವಚನಗಳ ವಿಮರ್ಶೆಯನ್ನು ಮಾಡಿದ್ದಾರೆ.

## ೪.೫ ಪಠ್ಯಪುಸ್ತಕಗಳು :

ಕ.ಬ.ಅಂಗಡಿಯವರನ್ನು ಶರಣಕವಿ ಎಂದು ಗುರುತಿಸುವ ಮೊದಲು ನಾವು ಅವರ ವೃತ್ತಿಪರತೆಯನ್ನು ಗಮನಿಸಿದಾಗ ಅವರಲ್ಲಿಯ ಒಬ್ಬ ಪ್ರಭಾವಿ ಶಿಕ್ಷಕ ಮತ್ತು ಶಿಕ್ಷಣಾಧಿಕಾರಿ ಕಾಣಸಿಗುತ್ತಾರೆ. ಅವರ ಶಿಕ್ಷಣ ಸಾಧನೆಯಲ್ಲಿ ಅವರ ಶೈಕ್ಷಣಿಕ ಸಾಹಿತ್ಯ ಪ್ರಖರವಾಗಿ ಕಂಡು ಬರುತ್ತದೆ. ತಮ್ಮ ವೃತ್ತಿಪರ ಬದುಕಿನ ಮತ್ತು ತಮ್ಮ ಆಧ್ಯಾತ್ಮಿಕ ಬದುಕಿನ ಪರಿಶುದ್ಧತೆಯನ್ನು ಕಾಯ್ದುಕೊಳ್ಳಲು ಸಾಹಿತ್ಯವನ್ನು ಸಮರ್ಪಕವಾಗಿ ಬಳಸಿಕೊಂಡಿದ್ದಾರೆ. ಅವರ ಶೈಕ್ಷಣಿಕ ಸಾಹಿತ್ಯವನ್ನು ಕುರಿತು ಅಧ್ಯಯನ ನಡೆಸುವ ದೃಷ್ಟಿಯಿಂದ ಧಾರವಾಡದ ಶಿಕ್ಷಣ ಕೇಂದ್ರ (ಡಯಟ್)ಗೆ ಬೇಟಿ ನೀಡಿದಾಗ ಅಲ್ಲಿ ನನಗೆ 'ಜೀವನ ಶಿಕ್ಷಣ' ಪತ್ರಿಕೆಯಲ್ಲಿ ಇವರ ಶೈಕ್ಷಣಿಕ ಪುಸ್ತಕಗಳು ಮುಂಬಯಿ ವಿದ್ಯಾಖಾತೆಯಿಂದ ಮಂಜೂರಾದುದುದಕ್ಕೆ ಉಲ್ಲೇಖಗಳು ದೊರೆತಿವೆ. ಶೈಕ್ಷಣಿಕ ಸಾಹಿತ್ಯ ರಚನೆಯ ಉದ್ದೇಶವನ್ನು ಈ ಕೃತಿಗಳ ಅಧ್ಯಯನದಿಂದ ತಿಳಿದುಕೊಳ್ಳಬಹುದಾಗಿದೆ. ಈ ಕೃತಿಗಳು ಸರ್ವೋತ್ಕೃಷ್ಟ ಮತ್ತು ಸಮಯೋಜಿತವಾಗಿವೆ. ಅವರ ಶೈಕ್ಷಣಿಕ ಕೃತಿಗಳನ್ನು ಎರಡು ಮಜಲುಗಳಲ್ಲಿ ವರ್ಗಿಕರಿಸಬಹುದು

ಅ) ಭಾಷಾವಾರು ಪ್ರಾಂತ್ಯ ರಚನೆಗೂ ಪೂರ್ವಕಾಲದ ಶೈಕ್ಷಣಿಕ ಕೃತಿಗಳು

೧) ನಿಬಂಧ ಮಾಲೆ  ೨) ಗದ್ಯ ಪದ್ಯಾವಲಿ

ಇವು ಮುಂಬೈ ಕರ್ನಾಟಕದ ವಿದ್ಯಾ ಇಲಾಖೆಯಿಂದ ಅಂದಿನ ಮುಲ್ಕೀ ಪರೀಕ್ಷೆ (೭ನೆಯ ತರಗತಿ)ಗೆ ಪಠ್ಯಗಳಾಗಿ ಸರಕಾರದಿಂದ ಮನ್ನಣೆ ಪಡೆದಿದ್ದವು.

ಬ) ಭಾಷಾವಾರು ಪ್ರಾಂತ್ಯ ರಚನೆಯಾದ ಆನಂತರದ ಶೈಕ್ಷಣಿಕ ಕೃತಿಗಳು

೧)ಸಾಹಸಿ ಸುಭಾಸ ಬೋಸ    ೨)ಮೋತಿಲಾಲ ನೆಹರು

೩)ಜವಾಹರಲಾಲ ನೆಹರು    ೪)ಸುಬೋಧ ವ್ಯಾಕರಣ

## ೪.೫.೧ ನಿಬಂಧ ಮಾಲೆ :

ಉಪಲಬ್ಧವಿರುವ 'ಸಚಿತ್ರ ನಿಬಂಧಮಾಲೆ ಅರ್ಥಾತ್ ಪ್ರಬಂಧ ವಿಜಯ' ಇದು ಐದನೆಯ ಆವೃತ್ತಿಯ ಪುನರ್ಮುದ್ರಣ. ಕೃತಿ ರಚನೆಯಾದ ವರ್ಷ ೧೯೫೪. ಈ ಕೃತಿಯ ಹಿಂದಿರುವ ಉದ್ದೇಶ "ಭಾಷಾಭ್ಯಾಸಕ್ಕೆ ನಿಬಂಧ ವಿಷಯದ ಮಹತ್ವವು ಬಹಳ. ಅದಕ್ಕಾಗಿ ಆ ವಿಷಯವು ಬಾಲಕರ ವರ್ಗದಿಂದ ಕಲಿಸಲ್ಪಡಬೇಕೆಂದು ಶಿಕ್ಷಣ ತಜ್ಞರ ಮತ. ಇವರ ಮತಾನುಸಾರವಾಗಿ, ಬಾಲಕರಿಗೂ ಬಾಲಕ ವರ್ಗದಿಂದ ನಿಬಂಧವನ್ನು ಕಲಿಸಲು ಯತ್ನಿಸುವ ಶಿಕ್ಷಕರಿಗೂ ಬಲವಾದ ಸಾಧನವಾಗಲೆಂದು ನಿಬಂಧಮಾಲೆಯನ್ನು ರಚಿಸಿದ್ದಾಗಿದೆ. ಆರಂಭದ ಈಯತ್ತೆಯಿಂದ ಪ್ರಾ.ಸ್ಕೂ.ಲೀ ಸ. ಪರೀಕ್ಷೆಯ ವಿದ್ಯಾರ್ಥಿಗಳ ಮತ್ತು ಟ್ರೇನಿಂಗ್ ಸ್ಕೂಲಿನ ವಿದ್ಯಾರ್ಥಿಗಳ ವಿಚಾರಕ್ಕೆ ತಕ್ಕಂತಹ ಪಾಠಗಳಿಂದ ಇದು ಸಮಾವೇಶವಾಗಿದೆ."[೮೪] ಗ್ರಂಥಕರ್ತರ ಈ ಅಭಿಪ್ರಾಯಗಳು ಮುಂಬೈ ವಿದ್ಯಾ ಇಲಾಖೆಯ ಪ್ರಾಥಮಿಕ ಶಿಕ್ಷಣಕ್ಕೆ ನಿಯೋಜಿಸಿದ ಸಂಹಿತೆಗಳಂತಿವೆ.

ಶಿಕ್ಷಣ ಇಲಾಖೆ ಕೂಡ ಕ.ಬ.ಅಂಗಡಿಯವರ ಶೈಕ್ಷಣಿಕ ವಿಚಾರಗಳನ್ನು ಮನ್ನಣೆ ಮಾಡಿರುವುದು ಇಲ್ಲಿ ನೋಡಬಹುದು. "ಚಿಕ್ಕ ಮಕ್ಕಳಿಗೆ ತಮ್ಮ ವಿಚಾರ, ಭಾವನೆ ಹಾಗು ಕಲ್ಪನೆಗಳನ್ನು ಸ್ಪಷ್ಟವಾಗಿಯೂ ಸರಿಯಾಗಿಯೂ ಪರರ ಎದುರಿಗೆ ಹೇಳಲಿಕ್ಕೆ ಬರುವದು ಬಹಳ ಮಹತ್ವದ ಸಂಗತಿಯಾಗಿದೆ. ಹಾಗೆ ಹೇಳುವುದು, ಬಾಲಕರ ಒಂದು ಬಗೆಯ ಮಾನಸಿಕ ಶಕ್ತಿಯು. ಚಿಕ್ಕಂದಿನಿಂದ ಬಾಲಕರಲ್ಲಿರುವ ಈ ಶಕ್ತಿಯನ್ನು ಬೆಳಸಲಿಕ್ಕೆ ಪ್ರಯತ್ನಿಸದಿದ್ದರೆ, ಅವರು ತಮ್ಮ ವಿಚಾರ, ಭಾವನೆ ಮತ್ತು ಕಲ್ಪನೆಗಳನ್ನು ಸರಿಯಾಗಿಯೂ, ಸ್ವಲ್ಪದರಲ್ಲಿಯೂ ಹೇಳಲಾರರು. ಈ ಸ್ಥಿತಿಯು ಅವರಲ್ಲಿ ಉಳಿಯುವದು ಸರಿಯಲ್ಲ. ಇದರ ಸುಧಾರಣೆಗಾಗಿಯೇ ಬಾಲಕರಿಗೆ ಮಾತೃಭಾಷೆಯ ಆಭ್ಯಾಸವು ಸರಿಯಾಗಿ ಬೇಕಾಗುವದು. ಭಾಷೆಯ ಸರಿಯಾದ ಅಭ್ಯಾಸಕ್ಕೆ ನಿಬಂಧ ವಿಷಯವು ಬಾಲಕರ ವರ್ಗದಿಂದಲೇ

ಕಲಿಸಲ್ಪಟ್ಟರೆ, ಈ ಉದ್ದೇಶವು ಕೈಗೂಡುವದು. ನಿಬಂಧ ಶಿಕ್ಷಣಕ್ಕಾಗಿ ಒಳ್ಳೇ ಸಹಕಾರಿಯಾದ ಗ್ರಂಥಗಳ ಕೊರತೆಯು ಪ್ರಾಥಮಿಕ ಶಾಲೆಗಳಲ್ಲಿ ಇರುವದೇನೋ ನಿಜ. ಆದರೆ ಮಿ.ಅಂಗಡಿ ಇವರು ತಮ್ಮ 'ನಿಬಂಧಮಾಲೆ'ಯಿಂದ ಈ ಕೊರತೆಯನ್ನು ದೂರ ಮಾಡಿದರೆನ್ನಲಿಕ್ಕೆ ಅಡ್ಡಿಯಿಲ್ಲ. ನುರಿತ ಮೂರನೇ ವರ್ಷ ಟ್ರೇಡ್ ಶಿಕ್ಷಕರೂ, ಪ್ರಿವಿಯಸ್ಸದವರೆಗೆ ಇಂಗ್ಲೀಷ ಅಭ್ಯಾಸವನ್ನು ಮಾಡಿದವರೂ, ಹಿಂದೀ–ಮರಾಠಿ ಭಾಷೆಗಳನ್ನು ತಿಳಿದವರೂ ಆದ ಇವರ ಗ್ರಂಥದಲ್ಲಿ, ಶೈಕ್ಷಣಿಕ ದೃಷ್ಟಿಯಿಂದ ನಿಬಂಧ ವಿಷಯವು ಸರ್ವಾಂಗ ಸುಂದರವಾಗಿ ಪ್ರತಿಪಾದಿಸಲ್ಪಟ್ಟಿದೆ. ವಿದ್ಯಾಖಾತೆಯವರು ಹೊಸದಾಗಿ ಅಭ್ಯಾಸ ಪತ್ರಿಕೆಯಲ್ಲಿ ಸೇರಿಸಿದ ಚಿತ್ರವಾಹಕ, ವಾಚಾನಿಬಂಧ, ಕಥೆ, ಭಾಷಣ ಮತ್ತು ಪತ್ರಬರೆಹ ಮುಂತಾದ ವಿಷಯಗಳನ್ನು ಇವರ ನಿಬಂಧಮಾಲೆಯಲ್ಲಿ ಕಾಣಬಹುದು; ಅಲ್ಲದೆ ಬಾಲಕರ ವರ್ಗದಿಂದ ಹೇಗೆ ನಿಬಂಧವನ್ನು ಸಾಗಿಸತಕ್ಕದ್ದೆಂಬ ಮಾರ್ಗವನ್ನು ತಿಳಿಯಬಹುದು. ಅಲ್ಲದೆ, ಸಂಭಾಷಣೆ ಮತ್ತು ಆತ್ಮನಿವೇದನ ಪಾಠಗಳ ರಚನೆಯಲ್ಲಿಯ ನಾವಿನ್ಯವನ್ನೂ, ಹೇರಳವಾಗಿರಿಸಿದ ಪ್ರಬಂಧಗಳಲ್ಲಿ ಸುಲಭವಾದ ಭಾಷೆಯಿಂದಾಗುವ ವಿಷಯಜ್ಞಾನವನ್ನೂ ಕಂಡುಕೊಳ್ಳಬಹುದು.."[೮೫] ಎಂದು ಅಂದಿನ ಗದಗ–ಬೆಟಗೇರಿ ಸ್ಕೂಲ್ ಬೋರ್ಡ ಆಡಳಿತಾಧಿಕಾರಿಗಳಾದ ಪಿ.ಎಮ್.ಉಮದಿಯವರು ಹೇಳುತ್ತಾರೆ. ಜ್ಞಾನರಹಿತನಾದ ಮುಗ್ಧ ಮಗು ಶಾಲಾ ವ್ಯಾಸಂಗದಿಂದ ನಡೆಯಲ್ಲಿ ನುಡಿಯಲ್ಲಿ ಪ್ರಬುದ್ಧನೂ, ಪರಿಣಿತನೂ ಆಗುವುದಕ್ಕೆ ಭಾಷೆ ಅತೀ ಅನಿವಾರ್ಯವೆಂಬ ಸತ್ಯವನ್ನು ಈ ಕೃತಿಯ ಓದುವಿಕೆ ನೀಡದೆ ಇರದು.

ಈ ಕೃತಿಯು ಐದು ಆವೃತ್ತಿಗಳಲ್ಲಿ ಪುನರ್‌ಮುದ್ರಣಗೊಂಡಿದೆ. ೧೯೪೦ ರಿಂದ ೧೯೫೦ ನೆಯ ಇಸವಿಯವರೆಗೆ ಪ್ರತಿವರ್ಷ ಪುನರ್ಮುದ್ರಣವನ್ನು ಹೊಂದುತ್ತ ಕನ್ನಡನಾಡಿನ ಮೂಲೆ ಮೂಲೆಗಳಲ್ಲಿಯೂ ಪ್ರಸಿದ್ಧಿಯನ್ನು ಪಡೆದ ಐದನೆಯ ಆವೃತ್ತಿಯು ಪ್ರಾಥಮಿಕ ೧, ೨ ಮತ್ತು ೩ನೆಯ ಇಯತ್ತೆಗಳಿಗೆ ಮತ್ತು ಮಾಧ್ಯಮಿಕ ೫, ೬ ಮತ್ತು ೭ನೆಯ ಇಯತ್ತೆಗಳಿಗೆ 'ಪ್ರಬಂಧ' ವಿಷಯವಾಗಿ ಬಳಕೆಗೊಂಡಿದೆ. ಈ "ಸಚಿತ್ರ ನಿಬಂಧ ಮಾಲೆಯು ಅರ್ಥಾತ್ ಪ್ರಬಂಧ ವಿಜಯವು' ೯ ಭಾಗಗಳಿಂದ ಕೂಡಿದ್ದು, ಉದಾಹರಣೆಗಾಗಿ ವಿತರಣೆಗೊಂಡ ಸುಮಾರು ೩೦೦ ವಿಷಯಗಳು ವೈವಿಧ್ಯ ಹಾಗೂ ನಾವಿನ್ಯಗಳಿಂದ ಕೂಡಿವೆ."[೮೬]

ಭಾಷೆಯೊಂದನ್ನು ಹೇಗೆ ಬಳಸಬೇಕು. ಅದರ ಬೇರೆ ಬೇರೆ ಆಯಾಮಗಳು, ಭಾಷೆಯ ವಿವಿಧ ರೂಪಗಳನ್ನು ವಿಸ್ತಾರವಾಗಿ ಈ ಕೃತಿಯಲ್ಲಿ ನೀಡಿದ್ದಾರೆ. ನಿಬಂಧಗಳು

ಭಾಷೆಯ ಅಸ್ತಿತ್ವವನ್ನು ಹೇಗೆ ಬಲಪಡಿಸುತ್ತವೆ ಎಂಬುದನ್ನು ನೋಡಬಹುದು. ಈ ನಿಬಂಧಮಾಲೆ ಕೃತಿಯ ಮೊದಲ ಆವೃತ್ತಿಯು ೧೯೩೪ರಲ್ಲಿ ಮುದ್ರಣಗೊಂಡಿದೆ. ಅಲ್ಲಿಂದ ೧೯೫೪ರವರೆಗೂ ಇದು ಮರುಮುದ್ರಣಗೊಂಡಿದೆ. ಶಾಲೋಪಯೋಗಿ ಪುಸ್ತಕವೊಂದು ನೂರಾರು ವರ್ಷಗಳವರೆಗೂ ಯಾವ ತಿದ್ದುಪಡೆಗಳಿಲ್ಲದೆಯೇ ಮಕ್ಕಳ ಅಭ್ಯಾಸಕ್ಕೆ ಲಭ್ಯವಾಗುವುದು ಈ ಕೃತಿಯ ಹಿರಿಮೆಯನ್ನು ತೋರಿಸುತ್ತದೆ.

ವಾಚಾ ನಿಬಂಧದ ಅತ್ಯವಶ್ಯಕತೆಯನ್ನು ೧ನೆಯ ಮೆಟ್ಟಿನಲ್ಲಿ, ಚಿತ್ರವಾಚಕದಲ್ಲಿ ಮಕ್ಕಳ ಮನನಕ್ಕೆ ಬೇಕಿರುವ ದೃಶ್ಯದ ಹಿರಿಮೆಯನ್ನು ೨ನೆಯ ಮೆಟ್ಟಿನಲ್ಲಿ ನೀಡುವುದರ ಮೂಲಕ ಮಕ್ಕಳ ಮನಸ್ಸನ್ನು ಓದಿನತ್ತ ಕೇಂದ್ರೀಕೃತಗೊಳಿಸುವ ಕಾರ್ಯ ನಡೆಯುತ್ತದೆ.

೨ನೆಯ ಭಾಗದಲ್ಲಿ ಸಣ್ಣ ಸಣ್ಣ ಕಥೆಗಳನ್ನು ಬರೆದಿದ್ದಾರೆ. ಮನರಂಜನೆಯೊಡನೆ ಜೀವನದಾನಂದವನ್ನುಂಟು ಮಾಡುವದು ಕಥೆಗಳ ಮುಖ್ಯ ಕೆಲಸ. ಬಾಲಕರಿಗಂತೂ ಕಥೆಗಳೆಂದರೆ ಪಂಚಪ್ರಾಣ. ಕಥೆಯಿಂದ ಆವೃತವಾದ ವಿಷಯ ವಿವರಣೆಗಳಾಗಲಿ, ಜ್ಞಾನ ವಿಕಸನವಾಗಲಿ ಮಕ್ಕಳಿಗೆ ತೀರ್ವಗತಿಯಿಂದ ದೊರೆಯುವುದು. ಈ ಹಿರಿಯಾಶೆ ಇಲ್ಲಿ ಸಫಲವಾಗಿದೆ.

ಲೋಕದ ವ್ಯವಹಾರವನ್ನು ತಿಳಿದು ಆಚರಿಸಿದ ಅನುಭವಿಕರ ನುಡಿಗಳು ಗಾದೆಯ ಮಾತುಗಳು. ಇವುಗಳನ್ನು ತಿಳಿದು ಆಚರಿಸಿದರೆ ಲೋಕದ ವ್ಯವಹಾರವು ಸುಸೂತ್ರವಾಗಿ ಜರುಗಿ ಫಲಕಾರಿಯಾಗುವದು. ಅದರಿಂದ ಗಾದೆಯ ಮಾತಿನ ತಿರುಳನ್ನು ತಿಳಿಸುವ ಪ್ರಸಂಗಗಳನ್ನೂ, ಕಥೆಗಳನ್ನು ಓದುವದು, ಹೆಣೆಯುವದೂ ವಿದ್ಯಾರ್ಥಿಗಳಿಗೆ ಅತ್ಯವಶ್ಯ ಟಿಪ್ಪಣಿಗಳನ್ನು, ದಿನಚರಿಯನ್ನು ಬರೆಯುವ ಪರಿಣಾಮಕಾರಿ ವಿಧಾನಗಳನ್ನು ಇಲ್ಲಿ ನೀಡಿದ್ದಾರೆ. ಇಲ್ಲಿಯ ಬರಹದ ಮೌಲ್ಯ, ಶೈಲಿಯ ತೀಕ್ಷ್ಣತೆ ಇವುಗಳು ಕೃತಿ ಬಹುಕಾಲ ಉಳಿದುಕೊಂಡು ಬರುವುದಕ್ಕೆ ಕಾರಣವಾಗಿವೆ.

ವೈವಿಧ್ಯಮಯವಾದ ಜೀವನದ ಅನುಭವವನ್ನು ಪಡೆದುಕೊಳ್ಳಬೇಕಾದ ಮನುಷ್ಯನಿಗೆ ಕೋಶ ಓದುವುದಕ್ಕಿಂತಲೂ ದೇಶ ಸುತ್ತುವುದು ಹೆಚ್ಚು ಆಸೆ ಮತ್ತು ಪರಿಣಾಮಕಾರಿಯಾದುದರಿಂದ ಈ ಪರಿಣಾಮ ಲಭಿಸುವುದು ಅವನಲ್ಲಿರುವ ಸಂಘಟನಾಶೀಲತೆ ಮತ್ತು ಸಂಚಾರಿ ಪ್ರವೃತ್ತಿಗಳಿಂದ. ಹೀಗೆ ನಾಲ್ಕೂ ನಿಟ್ಟಿನಲ್ಲಿರುವ ಜನತೆಗೆ ಮನುಷ್ಯ ತನ್ನ ಅಭಿಲಾಷೆಗಳನ್ನು ತಿಳಿಸುವುದಕ್ಕೆ ಪತ್ರ ವ್ಯವಹಾರವೊಂದು ಸುಲಭವೂ, ಸಮರ್ಥವೂ ಆದ ಸಾಧನವಾಗಿದೆ. ಈ ದೃಷ್ಟಿಯಿಂದ ಪತ್ರ ಲೇಖನವನ್ನು

ಪಾಠದ ಪ್ರಮುಖ ವಿಷಯವಾಗಿ ಅಭ್ಯಾಸ ಮಾಡಲಾಗುತ್ತದೆ. ಈ ಎಲ್ಲ ವಿಷಯಗಳನ್ನು ಈ ಕೃತಿಯಲ್ಲಿ ನೋಡಬಹುದು. ಮದುವೆಯ ಔತಣದೋಲೆ, ವ್ಯಾವಹಾರಿಕ ಓಲೆಗಳು, ಪ್ರಕಟಣೆಗಳು ಹೀಗೆ ಭಾಷೆಯ ಬಹುಮುಖ ಪರಿಕರಗಳನ್ನು ನಾವು ಈ ಕೃತಿಯಲ್ಲಿ ನೋಡಬಹುದು. ೬ನೆಯ ಭಾಗದಲ್ಲಿ ಸಂಭಾಷಣೆಗಳನ್ನು ಅವುಗಳನ್ನು ಬಳಸುವ ಬಗೆಯನ್ನು, ಅವುಗಳನ್ನು ಭಾಷೆಯ ರಚನೆಯಲ್ಲಿ ಸಮರ್ಪಕವಾಗಿ ದುಡಿಸಿಕೊಳ್ಳುವ ಜ್ಞಾನವನ್ನು, ಭಾಷೆಗೆ ಸಂಬಂಧಪಟ್ಟ ಆಕರ-ಪರಿಕರಗಳನ್ನು ರಚಿಸುವ ಸಾಮರ್ಥ್ಯವನ್ನು ಈ ಕೃತಿ ಕಲಿಸಿಕೊಡುತ್ತದೆ. ೭ನೆಯ ಭಾಗದಲ್ಲಿ ಜೀವನ ಚರಿತ್ರೆಗಳನ್ನು ಐತಿಹಾಸಿಕ ಮತ್ತು ಆತ್ಮನಿವೇದನೆಯ ಪಾಠಗಳನ್ನು ನೋಡಬಹುದು. ಹಜರತ್ ಮಹಮ್ಮದ ಪೈಗಂಬರ, ಜವಾಹರಲಾಲ ನೆಹರು, ಬಸವೇಶ್ವರರು, ನಾನಾಫಡನವೀಸ, ಇವರಂತಹ ಹಲವಾರು ವ್ಯಕ್ತಿತ್ವಗಳ ಚಿರು ಚರಿತ್ರೆಯನ್ನು ಕೊಟ್ಟಿದ್ದಾರೆ. ಆ ಮೂಲಕ ಒಂದು ಅವರ ಬದುಕನ್ನು ಮಕ್ಕಳಲ್ಲಿ ಮನಸ್ಸಿನಲ್ಲಿ ಅನಾವರಣಗೊಳಿಸುವ ಉದ್ದೇಶವಾದರೆ ಇನ್ನೊಂದು ಅವರ ಮನಸ್ಸಿನಲ್ಲಿ ಭಾಷೆಯನ್ನು ಭಾವ-ಜೀವಾತ್ಮಕವಾಗಿ ಬಳಸುವ ಬಗೆಯನ್ನು ತಿಳಿಸಿಕೊಡುವುದೇ ಆಗಿದೆ. ಆತ್ಮನಿವೇದನೆಯ ಪಾಠಗಳಲ್ಲಿ ಸ್ವತಃ ಒಂದು ವ್ಯಕ್ತಿತ್ವ, ಒಂದು ವಸ್ತು ತನ್ನನ್ನು ತಾನು ಪರಿಚಯಿಸಿಕೊಳ್ಳುವ ಬಗೆಯನ್ನು ತಿಳಿಸುತ್ತದೆ. ಉದಾಹರಣೆಗೆ ಗಡಿಗೆ ಇದು ಒಂದು ಉಪಕರಣ. ಇದು ತನ್ನನ್ನು ತಾನು ಹೀಗೆ ಪರಿಚಯಿಸಿಕೊಳ್ಳುತ್ತದೆ. "ಬಂಧು-ಭಗಿನಿಯರೇ, ನಾನು ಎಲ್ಲರಿಗೂ ಪರಿಚಯದವಳು. ಎಲ್ಲರ ಮನೆಯಲ್ಲಿಯೂ ಇದ್ದವಳೇ. ಹೆಣ್ಣು ಮಕ್ಕಳು ನನಗೆ ಬಹಳ ಬಳಿಕೆಯವರು. ನಾನು ಪಾತ್ರೆಗಳ ವರ್ಗಕ್ಕೆ ಸೇರಿದವಳು. ನನ್ನ ಹೆಸರು ಗಡಿಗೆ. ಬಡವರಿಂದ ಬಲ್ಲಿದವರವರೆಗೂ ನಾನು ಬೇಕಾದವಳು. ಅಚರಲ್ಲಿಯೂ ನಾನೂ ಬಡವರ ಭಾಗ್ಯಳು......"[೮೭] ಇಂತಹ ವಿಶೇಷತೆಗಳು ಅವರ ಬರಹದ ಮುಖ್ಯ ಅಂಶಗಳಾಗಿವೆ.

೮ನೆಯ ಭಾಗದಲ್ಲಿ ವಾಕ್ಯ ವೃಂದಗಳನ್ನು, ನಿಬಂಧಗಳನ್ನು ಹೇಗೆ ಮತ್ತು ಏಕೆ ಬಳಸಬೇಕೆಂದು ಹೇಳುತ್ತಾರೆ. ಒಂದು ವಿಚಾರದ ವಿವರವನ್ನು ಪರಿಣಾಮಕಾರಿಯಾಗಿ ಮಾಡುವ ಮಾತುಗಳ ಮಾಲೆಯು ವಾಕ್ಯವೃಂದ ಅಥವಾ ಲೇಖಪರಿಚ್ಛೇದವೆಂದೂ ಇಂತಹ ವಾಕ್ಯವೃಂದಗಳ ಜೋಡಣೆಯುಳ್ಳುದುದೇ ನಿಬಂಧವೆಂದೂ ಹೇಳಬಹುದು. ಶಿಕ್ಷಣ ತಜ್ಞರಾದ ಶ್ರೀ ಕ.ಬ.ಅಂಗಡಿಯವರು ಭಾಷೆಯ ನಾಗರಿಕತೆಯು ದೇಶದ ನಾಗರಿಕತೆಯ ಕುರುಹು. ಆದುದರಿಂದಲೇ ದೇಶಾಭಿಮಾನಿಗಳು ಭಾಷೆಯ ಸುಲಭ, ಸರಳ, ಶುದ್ಧ ಹಾಗೂ ಸುಗಮ ಶೈಲಿಗಳಿಗೆ ಸಹಾಯವಾಗುತ್ತದೆಂದು ನಿಬಂಧಲೇಖನದ ಕಲೆಗೆ ಹೆಚ್ಚು ಗಮನ ನೀಡಿದ್ದಾರೆ.

೯ನೆಯ ಹಂತದಲ್ಲಿ ಪಡೆನುಡಿಗಳನ್ನು ಕೂಡುನುಡಿಗಳನ್ನು ಹೇಗೆ ಬಳಸಬಹುದು ಎಂಬ ಬಗೆಗೆ ವಿವರಣೆಯಿದೆ. ಪಡೆನುಡಿ ಎನ್ನುವ ಶಬ್ದದ ಅರ್ಥವನ್ನು ಸೊಗಸಾಗಿ ಹೇಳಿದ್ದಾರೆ. "ಹೈಡ್ರೋಜನ್, ಆಕ್ಸಿಜನ್ ಕೂಡಿದರೆ ನೀರು! ಎಂದು ವಿಜ್ಞಾನಶಾಸ್ತ್ರದಲ್ಲಿ ಹೇಳುವಂತೆ ಸಾಹಿತ್ಯದಲ್ಲಿ 'ಕೈಯನ್ನು ಪಿಡಿ' ಇವೆರಡು ಪದಗಳು ಕೂಡಿ ಉಂಟಾದ ಕೈವಿಡಿ ಎಂಬ ನುಡಿಯಲ್ಲಿ ಮದುವೆಯಾಗು, ನೆರವಾಗು, ತಡೆ ಎಂಬರ್ಥದಲ್ಲಿ ಸೊಬಗಿನ ಸೆಲೆಯು ಸೊಗಸಾದ ನೀರಿನ ಸೆಲೆಯ ಹಾಗೆ ಹೊರಬೀಳುತ್ತದೆಂದು ಹೇಳಬಹುದು."[೮೮] ಎಂದು ಒಂದು ಉದಾಹರಣೆ ಸಹಿತವಾಗಿ ವಿವರಣೆ ನೀಡಿದ್ದಾರೆ. ಈ ವಿವರಣೆ ಶಬ್ದದ ಅರ್ಥವನ್ನು ಸಹಜವಾಗಿ ಸರಳವಾಗಿ ಮನದಟ್ಟು ಮಾಡುತ್ತದೆ. ಎರಡು ಅಥವಾ ಹೆಚ್ಚು ನುಡಿ(ಪದ)ಗಳು ಕೂಡಿ ಒಂದರ್ಥವುಳ್ಳ ಒಂದು (ಪದ)ವಾದರೆ ಅದು ಕೂಡುನುಡಿಯೆನಿಸುತ್ತದೆ ಮುಂದಿನ ಹಂತದಲ್ಲಿ ಸಾರಾಂಶವನ್ನು ಬರೆಯುವದು, ವಿಸ್ತೃತವಾಗಿ ಬರೆಯುವುದನ್ನು ತಿಳಿಸಿದ್ದಾರೆ. ನಂತರದ ಹಂತದಲ್ಲಿ ಅರ್ಜಿಯನ್ನು ಮತ್ತು ರಿಪೋರ್ಟುಗಳನ್ನು ಹೇಗೆ ಬರೆಯಬಹುದು ಎಂಬುದನ್ನು ತೋರಿಸಿದ್ದಾರೆ.

ಈ ಕೃತಿಯಲ್ಲಿ ಉದಾಹರಣೆಗಳಾಗಿ ಬಳಸಿರುವ ವಿಷಯಗಳಲ್ಲಿ ಎಲ್ಲ ರೀತಿಯ ವಿಷಯಗಳು ಸಾಮಾನ್ಯಜ್ಞಾನದಂತೆ ಬಂದು ಹೋಗುತ್ತವೆ. ಇಲ್ಲಿಯ ವಿಷಯಗಳೂ ಕೂಡ ದೇಶ, ಭಾಷೆ, ಭಯ, ಭಕ್ತಿಗಳನ್ನು ಮಕ್ಕಳಲ್ಲಿ ಬಿತ್ತುತ್ತವೆ. ಒಟ್ಟಾರೆಯಾಗಿ ಭಾಷೆಯ ಸಮಗ್ರತೆಯನ್ನು ಇಲ್ಲಿ ಕಾಣಬಹುದು. ಈ ಕೃತಿಯು ಪ್ರಾಥಮಿಕ ಮಕ್ಕಳಿಗಷ್ಟೇ ಅಲ್ಲ ಎಲ್ಲ ರೀತಿಯ ವಿದ್ಯಾರ್ಜನೆ ಮಾಡುವವರಿಗೂ ಮತ್ತು ಕಲಿಯಲು ಆಸಕ್ತಿಯುಳ್ಳವರಿಗೂ ಇದು ಮಾರ್ಗದರ್ಶಿಕೆಯೇ ಸರಿ. ಈ ಕೃತಿಯಲ್ಲಿ ಬಳಸಿರುವ ಕೆಲವು ವಿಷಯಗಳನ್ನು ಇಲ್ಲಿ ಪ್ರಸ್ತುತಪಡಿಸುವುದು ಹೆಚ್ಚು ಸೂಕ್ತವೆನಿಸುತ್ತದೆ. ಸಾಮಾಜಿಕ ಶಿಕ್ಷಣ ವರ್ಗಗಳನ್ನು ನಡೆಯಿಸಬೇಕು. [ಪುಟ ೬೭] , ಪ್ರಯತ್ನದ ಕಡೆಯಲ್ಲಿ ಪರಮಾತ್ಮ [ಪುಟ ೧೩೩], ದೇಶದ ಉರುಟು ಬಟ್ಟೆಯೂ, ಪರದೇಶದ ಜಿನುಗು ಬಟ್ಟೆಯೂ [ಪುಟ ೧೪೨], ಕಲಿಯುವುದು ಸಮಾಜ ಸೇವೆಗೆ [ಪುಟ ೧೪೮], ಪ್ರಾಥಮಿಕ ಶಾಲೆಗಳು [ಪುಟ ೨೦೦], ಪ್ರಾಮಾಣಿಕಕ್ಕೆ ತಕ್ಕ ಬೆಲೆ [ಪುಟ ೨೦೬], ನಮ್ಮ ಶಾಲೆಯ ಪರಸ್ಪರ ಸಹಕಾರ ಸಂಘ [ಪುಟ ೨೨೩], ಗ್ರಾಮಪಂಚಾಯಿತಿ [ಪುಟ ೨೨೫], ಗ್ರಾಮೋದ್ಧಾರ [ಪುಟ ೨೩೭], ಸ್ತ್ರೀ ಶಿಕ್ಷಣ [ಪುಟ ೨೪೧], ಸ್ವದೇಶಾಭಿಮಾನ [ಪುಟ ೨೪೯], ಸ್ವಾವಲಂಬನ [ಪುಟ ೨೫೧], ಅಸ್ಪೃಶ್ಯತಾ ನಿವಾರಣೆ [ಪುಟ ೨೫೪], ತರುಣ ಸಂಘ [ಪುಟ ೨೫೮], ಒಕ್ಕಲುತನ [ಪುಟ ೨೬೦], ಮೂಲಶಿಕ್ಷಣ–ವೃತ್ತಿಶಿಕ್ಷಣ [ಪುಟ ೨೮೧], ಬೆಳಕಿಗೆ ಎಣ್ಣೆ–ಬತ್ತಿಗಳಂತೆ ಸ್ತ್ರೀ–ಪುರುಷರು [ಪುಟ ೨೮೫], ತಾಯಿ, ನೀನು ಕಲಿಯದಿದ್ದರೆ ? [ಪುಟ ೨೯೩]

ಅದೇ ರೀತಿಯಾಗಿ ಮಹಾತ್ಮರ ಜೀವನ ಚರಿತ್ರೆಗಳನ್ನು ವಿದ್ಯಾರ್ಥಿಗಳಿಗೆ ಕಲಿಸಿಕೊಟ್ಟರೆ ಅವರ ಮುಂದಿನ ಭವಿಷ್ಯ ಸಮೃದ್ಧವಾಗುವುದೆಂದು ಜಾತಿ ಮತ ಬೇಧಗಳನ್ನು ಲೆಕ್ಕಿಸಿದೇ ಹಲವಾರು ಮಹಿಮರ ಜೀವನ ಚರಿತ್ರೆಗಳನ್ನು ಈ ಕೃತಿಯಲ್ಲಿ ನೀಡಿದ್ದಾರೆ. ಚರಿತಹಜರತ್ ಮಹಮ್ಮದ್ ಪೈಗಂಬರ, ನಾನಾ ಫಡನವೀಸ, ವೀರಮಾತೆ ಬೆಳದಡಿ ಮಲ್ಲವ್ವ, ವಿದ್ಯಾರಣ್ಯರು, ಬಸವೇಶ್ವರ, ಸರೋಜಿನಿ ನಾಯಿಡು, ಜವಾಹರಲಾಲ ನೆಹರು, ಡಾ. ಸರ್ ಚಂದ್ರಶೇಖರ ರಾಮನ್ ಈ ಎಲ್ಲರ ಕುರಿತು ಬರೆದಿದ್ದಾರೆ. "ನಾನಾ ಫಡನವೀಸ ಅವರ ಜೀವನ ಚರಿತ್ರೆಯನ್ನು ಕುರಿತು ಬರೆದ ಅಂಗಡಿಯವರ ವಿಷಯವನ್ನು ಡಾ. ವಿರುಪಾಕ್ಷ ಬಡಿಗೇರ ಅವರು ತಮ್ಮ ಮಹಾಪ್ರಬಂಧ 'ಸಿರಸಂಗಿ ಒಂದು ಅಧ್ಯಯನ' ಎಂಬುವಲ್ಲಿ ಬಳಸಿಕೊಂಡಿದ್ದಾರೆ."[೮೯] ಇದು ಕ.ಬ.ಅಂಗಡಿಯವರ ಜನಪ್ರಿಯತೆ ಮತ್ತು ಅವರ ಖಚಿತ ಮಾಹಿತಿಯ ಮೇಲೆ ನಂಬಿಕೆ ಸಮಾಜದಲ್ಲಿ ಇತ್ತು ಎಂಬುದು ಇದರಿಂದ ತಿಳಿದು ಬರುತ್ತದೆ. ಹೀಗೆ ಇವರ ಬರವಣಿಗೆಯಲ್ಲಿ ಹೆಚ್ಚು ತಾತ್ವಿಕ ಮತ್ತು ಮೌಲ್ಯಯುಕ್ತವಾದ ಬದುಕು ಕಾಣಸಿಗುತ್ತದೆ.

ಸಾಮಾಜಿಕ ಬದುಕು ಮತ್ತು ಸಾರ್ವಜನಿಕ ಹಿತಾಸಕ್ತಿಗಳನ್ನು ಎಂದೆಂದಿಗೂ ಗಮನದಲ್ಲಿಟ್ಟುಕೊಂಡು ಸಾಹಿತ್ಯ ರಚಿಸಿದ ಇವರು ಶಿಕ್ಷಣವನ್ನು ಸಮರ್ಪಕವಾಗಿ ಜಾರಿಗೆ ತರುವ ನಿಟ್ಟಿನಲ್ಲಿ ಕಾರ್ಯಕೈಗೊಂಡರು. ಇದೂ ಕೂಡ ಮರೆಯಲಾರದ ಸಂಗತಿಯೇ. ಇಂತಹ ವಿಚಾರಪರತೆಯನ್ನು ಹೊಂದಿ ಪಾಠ ಮಾಡುತ್ತಿದ್ದ ಅವರ ಶೈಲಿಗೆ ನಾವು ಅಭಿನಂದಿಸಲೇಬೇಕು.

### ೪.೫.೨ ಕನ್ನಡ ಸುಬೋಧ ವ್ಯಾಕರಣ :

ಈ ಪುಸ್ತಕವನ್ನು ೧೯೬೫ರಲ್ಲಿ ಬರೆದಿದ್ದಾರೆ. ಈ ಪುಸ್ತಕವು ನವ ಮೈಸೂರು ಸರಕಾರದಿಂದ ೨೦ ಜಿಲ್ಲೆಗಳಿಗೆ ಪಠ್ಯ ಪುಸ್ತಕವೆಂದು ಮಂಜೂರ ಪಡೆದಿದೆ. "ನವ ಮೈಸೂರು ಸರಕಾರದವರು ನೂತನವಾಗಿ ಹೊರಡಿಸಿದ ಹೊಸ ಅಭ್ಯಾಸ ಪತ್ರಿಕೆಯಂತೆ ೯ನೆಯ ವರ್ಗಕ್ಕಾಗಿ 'ಕನ್ನಡ ಸುಬೋಧ ವ್ಯಾಕರಣ'ವನ್ನು ಬರೆಯಲಾಗಿದೆ."[೯೦] ಅಖಿಲ ಕರ್ನಾಟಕ ನಾಡಿನಲ್ಲಿದ್ದ ಬಳಕೆಯ ಕನ್ನಡ ಪದ ಪ್ರಯೋಗಗಳನ್ನು ವಿಚಾರಕ್ಕೆ ತಂದುಕೊಂಡು, ಏಕೀಕೃತ ಕರ್ನಾಟಕದ ಜನರ ಭಾಷೆಯ ದೃಷ್ಟಿಯಿಂದ ಒಂದುಗೂಡಿಸುವ ಶೈಲಿಯಲ್ಲಿ ಬರೆಯಲ್ಪಟ್ಟಿದೆ. ಇದರಲ್ಲಿ ಬಳಸಿದ ಭಾಷೆ ಸುಲಭವೂ ಸರಳವೂ ಶುದ್ಧವೂ ಆಗಿದೆ. ಶಿಕ್ಷಣ ಕ್ರಮಕ್ಕನುಸರಿಸಿ ಪಾಠಗಳನ್ನು ಕೊಡುತ್ತ ಹೋಗಲಾಗಿದೆ. ವ್ಯಾಕರಣ ಹಾಗೂ

ಪ್ರಬಂಧಗಳ ನಿಕಟ ಸಂಬಂಧವನ್ನು ತಿಳಿಸಲೋಸುಗ ಅಲ್ಲಲ್ಲಿ ವ್ಯಾಕರಣ ವಿಚಾರಕ್ಕೆ ಪ್ರಬಂಧ ವಿಚಾರಗಳ ಉದಾಹರಣೆಯನ್ನು ಕೊಡಲಾಗಿದೆ. ಈ ಕೃತಿಯ ಪರಿವಿಡಿಯನ್ನು ಗಮನಿಸಿದಾಗ ಈ ಕೃತಿಯ ವಿಷಯ-ವಿಚಾರ-ವಿಷೇಶತೆಗಳು ಕಾಣಸಿಗುತ್ತವೆ.

**ಒಂದನೆಯ ಭಾಗ**

೧)ವ್ಯಾಕರಣ ವಿಚಾರ ಪರಿಚಯ ೨)ಕ್ರಿಯಾಪದಗಳೂ ಅವುಗಳ ಧಾತುಗಳೂ ೩)ಆಖ್ಯಾತ ಪ್ರತ್ಯಯಗಳು ೪)ಕಾಲಸೂಚಕ ಪ್ರತ್ಯಯವಗಳು ೫) ವಿಧಿನಿಷೇಧ ರೂಪಗಳು ೬)ಸಂಭಾವನಾರ್ಥ ಕ್ರಿಯಾಪದಗಳು ೭)ಅಪೂರ್ಣ ಕ್ರಿಯಾಪದಗಳು ೮)ಸಮಾಸಗಳು ೯) ವಾಕ್ಯ ಭೇದಗಳು

**ಎರಡನೆಯ ಭಾಗ**

೧)ಪ್ರಬಂಧ ವಿಚಾರ ೨)ವಿಷಯ ವಿಸ್ತರಣ-ಸಂಕ್ಷೇಪಗಳು ೩)ವಿಷಯ ಸಂಕ್ಷೇಪ ೪)ವೃತ್ತಿ ಶಿಕ್ಷಣ ಧ್ಯೇಯ ೫)ವಿವಾಹ ೬)ತರುಣರೂ ವಸ್ತ್ರಗಳೂ ೭)ಇಂದು ನಾನು ಮನೆಯ ಒಡತಿ ! ೮) ಕೃಷಿಯು ಸುಖ-ಸಂಪತ್ತಿನ ಮೂಲವು ೯) ದೇಶಭಕ್ತನ ಲಕ್ಷಣ

'ಕನ್ನಡ ಸುಬೋಧ ವ್ಯಾಕರಣ' ಎನ್ನುವ ಈ ಕೃತಿಯೊಂದು ವ್ಯಾಕರಣ ಕೃತಿಯಾಗಿದೆ. ಇಲ್ಲಿ ವ್ಯಾಕರಣಾಂಶಗಳು ಅತ್ಯಂತ ಸಮರ್ಥವಾಗಿ ನಿರೂಪಿಸಲ್ಪಟ್ಟಿವೆ. ಕ.ಬ.ಅಂಗಡಿಯವರು ಭಾಷೆಯ ವಿಷಯದಲ್ಲಿ ಹೆಚ್ಚು ಅಧ್ಯಯನ ಮಾಡಿದ ಮತ್ತು ಭಾಷೆಯ ಬಗೆಗೆ ಅನನ್ಯ ಪ್ರೀತಿಯನ್ನು ಹೊಂದಿದ ಕಾರಣ ಅವರ ಕೃತಿಗಳಲ್ಲಿಯೂ ಸಹ ಈ ಭಾವ ಅಭಿವ್ಯಕ್ತವಾಗುತ್ತದೆ. ಈ ಕೃತಿಯಂತೂ ವ್ಯಾಕರಣದ ಸಮೀಕರಣವಾದ ಕಾರಣ ಇಲ್ಲಿ ಭಾಷೆಯ ಬಗೆಗೆ ವಿಶೇಷ ಅಭ್ಯಾಸ ಮಾಡಿ ಈ ಕೃತಿಯನ್ನು ರಚಿಸಿದ್ದಾರೆ. ಈ ವ್ಯಾಕರಣ ಕೃತಿ ಇಂದಿನ ವ್ಯಾಕರಣ ಪುಸ್ತಕಗಳಿಗಿಂತ ವಿಭಿನ್ನವಾಗಿದೆ. ಇಂದು ಶೈಕ್ಷಣಿಕ ಪುಸ್ತಕಗಳನ್ನು ವ್ಯವಹಾರ ದೃಷ್ಟಿಕೋನದಿಂದ ನೋಡಲಾಗುತ್ತಿದ್ದು, ಅಲ್ಲಿಯ ಮೌಲ್ಯ ಮತ್ತು ಮೂಲ ಧ್ಯೇಯದ ಕೊರತೆ ಎದ್ದು ಕಾಣುತ್ತಿರುತ್ತದೆ. ಆ ಬಗೆಯ ತಳಮಳವನ್ನು ಅಂಗಡಿಯವರ ಈ ಕೃತಿ ತೊಡೆದು ಹಾಕುತ್ತದೆ. 'ವ್ಯಾಕರಣ ವಿಚಾರ ಪರಿಚಯ' ದಲ್ಲಿ ಭಾಷೆ, ಶಬ್ದ, ಭಾಷೆಗೂ ಮಾನವನಿಗೂ ಸಂಬಂಧಗಳನ್ನು ಅತ್ಯಂತ ಸರಳವಾದ ರೀತಿಯಲ್ಲಿ ಅಭಿವ್ಯಕ್ತಿಸಿದ್ದಾರೆ.

ಈ ಕೃತಿಯ ಅವಶ್ಯಕತೆಯನ್ನು ಕುರಿತು ಇವರ ವಿಚಾರಪರತೆಗಳು ಹೀಗಿವೆ. ಮನುಷ್ಯನ ಜೀವನದಲ್ಲಿ ಶಬ್ದಗಳ ಒಡನಾಟ ಮಹತ್ವದ ಸ್ಥಾನ ಪಡೆದಿರುತ್ತದೆ. ಪ್ರತಿ ದಿನ,

ಪ್ರತಿ ಕ್ಷಣಗಳು ಶಬ್ದಮಯವಾಗಿಯೇ ಇರುತ್ತವೆ. ಬಿಸಿ ಬಿಸಿ ಸುದ್ದಿ! ದಿನಪತ್ರಿಕೆ, ವಾರಪತ್ರಿಕೆ, ಮಾಸಪತ್ರಿಕೆ, ಸಂಜೆ–ಮುಂಜಾವುಗಳ ಪತ್ರಿಕೆ ಇವುಗಳ ನಿರೀಕ್ಷಣೆ ಮಾಡುತ್ತಾನೆ. ಭಾಷೆಗೆ ಅದರದೇ ಆದ ತಂತ್ರಜ್ಞಾನ, ರೂಪು ರೇಷೆಗಳಿವೆ. ಕಾಲಕಾಲಕ್ಕೆ ಬೇರೆ ಬೇರೆ ರೀತಿಯಲ್ಲಿ ಭಾಷೆ ಪ್ರಭಾವಕ್ಕೊಳಗಾಗುತ್ತದೆ. ತನ್ನ ಪಾರಿಭಾಷಿಕ ಶಬ್ಧಗಳನ್ನು ರೂಪಾಂತರಿಸಿಕೊಳ್ಳುತ್ತಾ ಹೋಗುತ್ತದೆ. ಅಷ್ಟಾಗಿಯೂ ಕೂಡ ಅದರ ಒಟ್ಟು ಸಮಗ್ರತೆಯನ್ನು ಆ ಭಾಷೆಯನ್ನಾಡುವ ಭಾಷಿಕರು, ಅನ್ಯರು, ಕವಿಗಳು ಭಾಷೆಗೆ ಚ್ಯುತಿಬಾರದ ರೀತಿಯಲ್ಲಿ ಭಾವಗೀತೆಗಳು, ಹಾಡುಗಬ್ಬಗಳು, ಕಿರುಗತೆಗಳು, ಹಲಕೆಲವು ಗದ್ಯಕೃತಿಗಳು ಬಳಸುತ್ತಾ ಭಾಷೆಯನ್ನು ಜೀವಂತವಾಗಿಡುತ್ತಾರೆ. ಈ ರೀತಿಯ ಫಲವಾಗಿಯೇ ನಮಗೆ ಇಂದಿಗೂ ಹೇರಳವಾದ ಕನ್ನಡ ವಾಙ್ಮಯ ಸಂಪತ್ತು ಸಿಗುತ್ತದೆ. ಅಭ್ಯಾಸ ಬಲದಿಂದ ಈ ಸಂಪತ್ತನ್ನು ಸಾಧಿಸಿಕೊಂಡು ನಾವು ನಮ್ಮ ಕನ್ನಡ ನುಡಿಯ ಶುಚಿತ್ವವನ್ನು ರುಚಿತ್ವವನ್ನು ಕಾಯ್ದುಕೊಳ್ಳಬೇಕಾಗಿದೆ. "ಈ ಘನೋದ್ದೇಶವನ್ನು ಸಾಧಿಸಿಕೊಳ್ಳಲು ನಮಗೆ ವ್ಯಾಕರಣಾಭ್ಯಾಸವು ಅಗತ್ಯ. ಈ ಅಗತ್ಯವನ್ನು ಈ ಗ್ರಂಥವು ಪೂರೈಸಬಲ್ಲುದು. ಯಾಕೆಂದರೆ ಇದರೊಳಗಿನ ವ್ಯಾಕರಣ ವಿಚಾರವು ಭಾಷೆಗೆ ಶುದ್ದತೆಯನ್ನು ತಂದುಕೊಳ್ಳಲು ಮಾರ್ಗದರ್ಶಕವಾಗಿದೆ; ಮತ್ತು ವ್ಯಾಕರಣದ ಸೂತ್ರಗಳನ್ನನುಸರಿಸಿ ಬರೆದ ವರ್ಣನಪರ ನಿಬಂಧ, ವಿಷಯವಿಸ್ತರಣ ಹಾಗೂ ವಿಷಯ ಸಂಕ್ಷೇಪ ಲೇಖನ ವಿಚಾರಗಳು ಶುದ್ಧ ಭಾಷೆಯ ಸಂಪತ್ತನ್ನು ಹಚ್ಚಿಸಿಕೊಳ್ಳಲು ಆಧಾರಗಳಾಗಿವೆ."[೧] ಭಾಷಾ ಆಧ್ಯಯನದ ದೃಷ್ಟಿಯಿಂದ ಈ ಕೃತಿ ಉತ್ಕೃಷ್ಟವಾಗಿದೆ.

### ೪.೫.೩ ಮುತ್ತು( ಮೋತಿಲಾಲ ನೆಹರು) :

ಇದೂ ಕೂಡ ಕ.ಬ.ಅಂಗಡಿಯವರ ಶೈಕ್ಷಣಿಕ ಕೃತಿಗಳಲ್ಲೊಂದು. ಮೈಸೂರು ಸರಕಾರದ ಹೊಸ ಅಭ್ಯಾಸ ಪತ್ರಿಕೆಗನುಸಾರವಾಗಿ ೮ನೆಯ ತರಗತಿಗೆ ಈ ಪಠ್ಯ ಕೃತಿಯನ್ನು ಆಯ್ಕೆ ಮಾಡಿತ್ತು. ಈ ಕೃತಿಯನ್ನು ೧೯೬೪ರಲ್ಲಿ ರಚಿಸಲಾಗಿದೆ. ಇಲ್ಲಿ ಲೇಖಕರ ದೇಶಪ್ರೇಮ, ಐತಿಹಾಸಿಕ ಪ್ರಜ್ಞೆ, ಚಾರಿತ್ರಿಕ ಸಂಗತಿ, ಅವರ ಭಾಷೆಯ ನೈಪುಣ್ಯತೆ ಕೃತಿಯುದ್ದಕ್ಕೂ ಕಂಡುಬರುತ್ತದೆ. ಮೋತಿಲಾಲ ನೆಹರು ಅವರ ಚರಿತ್ರೆಯನ್ನು ವಿದ್ಯಾರ್ಥಿಗಳಿಗೆ ಪರಿಚಯಿಸುವುದು ಇಲ್ಲಿನ ಉದ್ದೇಶವಾಗಿದ್ದರೂ ಇವರಲ್ಲಿ ಸುಪ್ತವಾಗಿದ್ದ ರಾಷ್ಟ್ರೀಯತೆಯ ಅಂಶಗಳನ್ನು ಇಲ್ಲಿ ಗುರುತಿಸಬಹುದು.

ಒಂದುನೂರ ಐವತ್ತು ವರ್ಷಗಳ ಬ್ರಿಟಿಷರ ಆಳಿಕೆಯಲ್ಲಿ ಭಾರತೀಯರು ರಾಷ್ಟ್ರೀಯ ಮನೋವೃತ್ತಿಯಿಲ್ಲದೆ ಅಂಧರಂತೆ ಬಾಳುತ್ತಿದ್ದರು. ಮಹಾತ್ಮ ಗಾಂಧಿಯವರ

# ಮುತ್ತು



ಕೆ. ಬಿ. ಅಂಗಡಿ,
ಜಯ ಬಸವ ಪುಸ್ತಕಾಲಯ, ಗದಗ.

ವಿಜಯದಶಮಿ, 1964 ಬೆಲೆ: 1.00

ಮುತ್ತು (ಮೋತಿಲಾಲ ನೆಹರು)

ತಪಃಪ್ರಭಾವದಿಂದ ೧೯೪೭ರಂದು, ಭಾರತ ಸ್ವಾತಂತ್ರ್ಯ ಕಂಡಿತು. ಈ ಸ್ವಾತಂತ್ರ್ಯ ಪ್ರಕಾಶದಲ್ಲಿ ಬೆಳಗಿದ ಅನರ್ಘ್ಯ ರತ್ನಗಳಲ್ಲಿ ಪಂಡಿತ ಮೋತಿಲಾಲರೆಂಬೊಂದು ಮುತ್ತು. ಈ ಮುತ್ತೇ ಮಹಾತ್ಮಗಾಂಧಿಯವರ ಉತ್ತರಾಧಿಕಾರಿಯನ್ನು ಭಾರತರತ್ನ ದಿವಂಗತ ಜವಾಹರಲಾಲರನ್ನು ನೀಡಿದುದು. ರಾಷ್ಟ್ರೀಯ ಮನೋವೃತ್ತಿಯ ಸ್ಫೂರ್ತಿಯ ಸೆಲೆಯಾದ ಜವಾಹರರನ್ನು ಅದೆಂತಹ ತಪಸ್ಸನ್ನು ಮಾಡಿ, ಅವರ ಮಾತಾ–ಪಿತೃಗಳು ಹಡೆದರೆಂಬ ಉದ್ಗಾರ ಲೇಖಕರದು. ಅಂತಹ ಉದ್ಗಾರಗಳು ಅವರ ಚರಿತ್ರಾಭ್ಯಾಸಕ್ಕಾಗಿ ಪ್ರತಿಯೊಬ್ಬರ ಮನಸ್ಸನ್ನು ಸೆಳೆಯುತ್ತಿರುವವು. ಆದ್ದರಿಂದ "ಭಾರತರತ್ನ ಜವಾಹರರನ್ನು ಹಡೆದುಕೊಟ್ಟ ಮೋತಿಲಾಲರೆಂಬ ಮುತ್ತಿನ ತಪಸ್ಸು ಯಾವುದು ? ಆ ತಪಃ ಪ್ರಭಾವದಿಂದ ಭಾರತವೆಂತು ತನ್ನ ಅಂಧತನವನ್ನು ಕಳೆದುಕೊಂಡಿತು ? ಆ ತಪಸ್ಸಿನ ಇತಿಹಾಸವು ನಮ್ಮ ಬಾಲಕರ ಹೃದಯದಲ್ಲಿ ರಾಷ್ಟ್ರೀಯತೆಯನ್ನು ಹೇಗೆ ಭೀರಿ ಅವರನ್ನು ರಾಷ್ಟ್ರನಾಯಕರನ್ನಾಗಿ ಪರಿವರ್ತಿಸಲು ಕಾರಣವಾಗುವುದು, ಎಂಬುದನ್ನು ಈ ಚಿಕ್ಕ ಗ್ರಂಥವು ನಿಜವಾಗಿ ಒದಗಿಸಲು ಸಮರ್ಥವಾಗಲಿದೆ. ಹೀಗಾಗಿ ಅಭ್ಯಾಸ ಪತ್ರಿಕೆಗನುಸರಿಸಿ ಎಂಟನೆಯ ತರಗತಿಯ ವಿದ್ಯಾರ್ಥಿಗಳ ಅಭ್ಯಾಸಕ್ಕಾಗಿ ಇದನ್ನು ಅಣಿಗೊಳಿಸಲಾಗಿದೆ."[೨] ಈ ವಯಸ್ಸಿನ ವಿದ್ಯಾರ್ಥಿಗಳಲ್ಲಿ ಮೋತಿಲಾಲ ನೆಹರು ಅಂತವರ ಜೀವನ ಚರಿತ್ರೆಯನ್ನು ಬಿತ್ತಿದರೆ, ಅವರ ಭವಿಷ್ಯ ಉಜ್ವಲವಾಗುತ್ತದೆ. ಸುಸಂಸ್ಕೃತ, ಸದ್ಗುಣ ಸಂಪನ್ನರಾಗುತ್ತಾರೆ ಎನ್ನುವ ನಿಲುವು ಕ.ಬ.ಅಂಗಡಿಯವರದಾಗಿದೆ.

ಆಂಗ್ಲ ಸಾಹಿತ್ಯದ ಪ್ರಭಾವಕ್ಕೊಳಗಾಗಿ ಹೊಸದೊಂದು ಪ್ರಕಾರವಾಗಿ ಬೆಳೆದುಬಂದ 'ಜೀವನ ಚರಿತ್ರೆ'ಯ ಸಾಲಿನಲ್ಲಿ ನೋಡಬಹುದಾದ ಉತ್ಕೃಷ್ಟ ಕೃತಿಗಳಿವು. ಈ ಹಿಂದೆ 'ಜವಾಹರಲಾಲ ನೆಹರು', 'ಸುಭಾಷಚಂದ್ರ ಭೋಸ್', 'ಮೋತಿಲಾಲ ನೆಹರು' ಮುಂತಾದವರ ಚರಿತ್ರೆಗಳು ರಚಿತಗೊಂಡಿಲ್ಲವೆಂದಲ್ಲ. ಆದರೆ ಕ.ಬ.ಅಂಗಡಿಯವರ ಮೂಲ ಉದ್ದೇಶ ಈ ಚರಿತ್ರೆಗಳನ್ನು ಶೈಕ್ಷಣಿಕವಾಗಿ ಉಣಬಡಿಸುವುದು. ಮಕ್ಕಳ ಮನೋವಿಕಾಸಕ್ಕಾಗಿ ಆ ಚರಿತ್ರೆಯ ವ್ಯಕ್ತಿತ್ವಗಳ ಗುಣಾತ್ಮಕ ಮೌಲ್ಯವನ್ನು ಹೊರದೆಗೆದು ಆ ಮೂಲಕ ಮತ್ತೊಂದು ಚಿಗುರುವ ಮನಸ್ಸನ್ನು ಸಮಾಜದ ಸತ್ವಯುತ ಆಸ್ತಿಯನ್ನಾಗಿ ಪರಿರೂಪಿಸುವುದು. ಜೀವನ ಚರಿತ್ರೆಗಳ ಮೂಲಕ ನೈತಿಕ ಗುಣ ಮಟ್ಟವನ್ನು ಹೊಸ ಪೀಳಿಗೆಗಳಲ್ಲಿ ಉಳಿಸಿ ಬೆಳೆಸುವ ಅಧಮ್ಯ ಕಾರ್ಯವನ್ನು ಇವರು ಮಾಡುತ್ತಾರೆ. 'ಆತ್ಮಚರಿತ್ರೆ', 'ಜೀವನ ಚರಿತ್ರೆ' ಗಳಂತಹ ಸಾಹಿತ್ಯ ಪ್ರಕಾರಗಳಲ್ಲಿ ವಿಭಿನ್ನತೆಯನ್ನು ನೋಡಲು ಸಾಧ್ಯವಾಗುತ್ತದೆ. ಏಕೆಂದರೆ ವ್ಯಕ್ತಿಯಿಂದ ವ್ಯಕ್ತಿ ಭಿನ್ನ. ಅವನ ವಿಚಾರ ಲಹರಿಗಳು ಇನ್ನೂ ಭಿನ್ನ. ಹೀಗಾಗಿ ಈ 'ಆತ್ಮಚರಿತ್ರೆ' ಮತ್ತು 'ಜೀವನ ಚರಿತ್ರೆ'ಗಳು ಮನುಷ್ಯನ ಹುಟ್ಟು–ಸಾವಿನ ನಡುವೆ ನಡೆದ ಬದುಕಿನ

ಕಾವ್ಯಕುಸುರಿಯೇ ಆಗಿದೆ. ಈ ಕೃತಿಗಳನ್ನು ರಚಿಸುವಲ್ಲಿ ಲೇಖಕರ ಆಳವಾದ ಅಧ್ಯಯನ, ಅನುಭವ, ಸಾಮಾಜಿಕ ಮತ್ತು ರಾಷ್ಟ್ರೀಯ ಕಳಕಳಿ ವ್ಯಕ್ತವಾಗಿದೆ.

'ಮುತ್ತು' ಕೃತಿ ರಚನೆಯಾದ ವರ್ಷವನ್ನು (೧೯೬೪) ಮತ್ತು ಈ ಕೃತಿಯ ವ್ಯಕ್ತಿಯಾದ ಮೋತಿಲಾಲ ನೆಹರು ಅವರ ಜೀವನ ಸಾಧನೆಗಳ (೧೮೬೧-೧೯೬೪)ವರ್ಷವನ್ನು ಗಮನಿಸಬೇಕು. ಹಾಗೆಯೇ ಕ.ಬ.ಅಂಗಡಿಯವರ ಕಾಲಾವಧಿಯನ್ನು ಅವಲೋಕಿಸಿದಾಗ(೧೮೯೭-೧೯೮೬). ಕವಿಯೋರ್ವನು ತನ್ನ ಸಮಕಾಲೀನ ವಸ್ತುಸ್ಥಿತಿಯಿಂದ ಸಹಜವಾಗಿ ಪ್ರಭಾವಿತನಾಗಿದ್ದಾನೆ ಎಂಬುದು ತಿಳಿಯುತ್ತದೆ. ಮೋತಿಲಾಲ ನೆಹರು ಅವರು ಕ.ಬ.ಅಂಗಡಿಯವರ ಹಿರಿಯ ಸಮಕಾಲೀನರು. ಮೇಲಾಗಿ ಸ್ವಾತಂತ್ರ್ಯ ಸಂಗ್ರಾಮದ ಮಹತಿಯೊಂದು ಇಡೀ ಭಾರತಾದ್ಯಂತ ರೂಪುಗೊಳ್ಳುತ್ತಿದ್ದ ಸಮಯವದು. ಆ ಸಮಯದಲ್ಲಿ ತೀಕ್ಷ್ಣಮತಿಗಳಾದ ಅಂಗಡಿಯವರ ಮೇಲೆ ಈ ಸಾಮಾಜಿಕ ಮತ್ತು ರಾಜಕೀಯ ವಿಷಯಗಳು ಪ್ರಭಾವಗೊಂಡಿವೆ. ಎಲ್ಲರೂ ಒಗ್ಗಟ್ಟು, ಒಮ್ಮತವನ್ನು ತೋರಿಸುತ್ತಿದ್ದ ದಿನಗಳಲ್ಲಿ ಸಾಮಾಜಿಕ ಮತ್ತು ರಾಜಕೀಯ ವ್ಯತ್ಯಯ ಪ್ರತ್ಯಯಗಳು ಅವರ ಮೇಲೆ ಪ್ರಭಾವವನ್ನು ಬೀರಿವೆ. ಈ ಎಲ್ಲ ಅಂಶಗಳು ಈ ಕೃತಿಯಲ್ಲಿ ಅಭಿವ್ಯಕ್ತಗೊಂಡಿವೆ.

"೧೯೧೯ನೆಯ ಶತಮಾನದ ಕಡೆಕಡೆಗೆ ಭಾರತದಲ್ಲಿ ಧರ್ಮ, ಸಮಾಜ ಹಾಗೂ ರಾಷ್ಟ್ರೀಯ ಭಾವನೆಗಳ ಸುಧಾರಣೆಯ ಅವಶ್ಯಕತೆ ಹೆಚ್ಚಾಗಿದ್ದಿತು. ಒಳಪಂಗಡ, ಸ್ತ್ರೀ ಸ್ವಾತಂತ್ರತೆ, ಪರದಾ ಪದ್ಧತಿ, ಪರದೇಶ ಗಮನ, ಮಾಂಸ ಭಕ್ಷಣ, ಅಂತರ್ಜಾತಿಯ ಲಗ್ನಬಂಧನ ಹಾಗೂ ಸ್ಪೃಶ್ಯಾಸ್ಪೃತೆಗಳ ಕಾರಣದಿಂದ ಹಿಂದು ಜನತೆಯಲ್ಲಿ ಅನೈಕ್ಯತೆಯಿದ್ದಿತು. ಅದು ರಾಜಕೀಯ ರಂಗದಲ್ಲಿ ತನ್ನ ನಾಲಗೆಯನ್ನು ಚಾಚಹತ್ತಿದ್ದಿತು. ಆಗ ಪಾಶ್ಚಿಮಾತ್ಯ ಹಾಗೂ ಪೌರ್ವಾತ್ಯ ಸಂಸ್ಕೃತಿಗಳ ಸಮನ್ವಯದ ದೃಷ್ಟಿಯಿಂದ ಇವುಗಳಲ್ಲಿ ನವೀನತೆ ಬೇಕಾಗಿದ್ದಿತು. ಅದಕ್ಕಾಗಿ ರಾಜಾರಾಮ ಮೋಹನರಾಯ, ದಯಾನಂದ ಸರಸ್ವತಿ ಮೊದಲಾದ ನವಸುಧಾರಕರು ಹೆಣಗಾಡಹತ್ತಿದರು. ಇವರ ಪ್ರಯತ್ನದ ಫಲವಾಗಿ ಹಲಕೆಲವು ಚಟುವಟಿಕೆಗಳೂ ನಡೆಯಹತ್ತಿದವು."[೩] ಈ ಕೃತಿಯ ಮೂಲಕ ಅಂದಿನ ಸಾಮಾಜಿಕ, ರಾಜಕೀಯ ಸ್ಥಿತಿಗಳ ಅವಲೋಕನವನ್ನೂ ಮಾಡಿದ್ದಾರೆ. ಈ ಅವಲೋಕನ ಅವರ ಸಮಕಾಲೀನ ಸಮಸ್ಯೆಗಳನ್ನು ದಾಖಲಿಸುವಲ್ಲಿ ಮಹತ್ತರ ಪಾತ್ರ ವಹಿಸುತ್ತದೆ.

ಒಂದು ಪತ್ರಿಕೆಯ ಸಂಪಾದಕರಾಗಿ (ಕರ್ನಾಟಕ ಬಂಧು) ಕಾರ್ಯ ನಿರ್ವಹಿಸಿದ ಕ.ಬ.ಅಂಗಡಿಯವರಿಗೆ ಪತ್ರಿಕೋಧ್ಯಮದ ಬಗೆಗೆ ತಿಳುವಳಿಕೆಯೂ ಇತ್ತು ಮತ್ತು ಆಸ್ಥೆಯೂ ಇತ್ತು. ಪತ್ರಿಕೆಗಳ ಮೂಲಧ್ಯೇಯಗಳನ್ನೂ ಮತ್ತು ಅವುಗಳನ್ನು ಸಮಾಜದಲ್ಲಿ ಜಾರಿಗೆ ತರುವ

ಬಗೆಯನ್ನೂ ಮತ್ತು ಅದರಲ್ಲಿರುವ ಕಷ್ಟಗಳನ್ನೂ ಚನ್ನಾಗಿ ಅರಿತಿದ್ದ ಅವರು ಮೋತಿಲಾಲರ ಪತ್ರಿಕೆಯ ವಿಷಯವನ್ನು ತಿಳಿಸುವಲ್ಲಿ ತಮ್ಮ ಪೂರ್ಣ ಅನುಭವಗಳನ್ನು ಬಳಸಿದ್ದಾರೆ.

ಗಾಂಧಿ ತತ್ವಗಳ ಬಗೆಗೆ ಒಲವಿದ್ದ ಇವರಲ್ಲಿ ಗಾಂಧಿಪರ ವಿಚಾರವಾದಗಳು ಅವರ 'ಅಮರವಾಣಿ'ಯಲ್ಲಿ ಹೆಚ್ಚು ಪ್ರಖರವಾಗಿ ಗೋಚರಿಸುತ್ತವೆ. ಈ ಕೃತಿಯಲ್ಲಿ ಸ್ವಾತಂತ್ರ್ಯ, ಅಹಿಂಸೆ, ಸತ್ಯಾಗ್ರಹಗಳಂತಹ ದೇಶಿ ವಿಚಾರಗಳ ಬಗೆಗೆ ಅವರಿಗಿದ್ದ ಚಿಂತನೆಗಳನ್ನು ಅಭಿವ್ಯಕ್ತಿಸಿದ್ದಾರೆ. ಸತ್ಯಾಗ್ರಹವು, ಅಹಿಂಸೆ, ನ್ಯಾಯ, ಸ್ವದೇಶ ಪ್ರೇಮ, ಖಾದಿ ಭಕ್ತಿ ನಮ್ಮನ್ನು ಗೃಹೋದ್ಯಮಕ್ಕೆ ಹೆಚ್ಚು ಒತ್ತು ನೀಡಲು ಹಚ್ಚುವುದು. ಇದು ಸಮಾಜದ ಆರ್ಥಿಕೋನ್ನತಿಯನ್ನು ಮಾಡಿದರೆ ಆಳರಸರಾದ ಅಂಗ್ಲರ ಆರ್ಥಿಕ ಬಲವನ್ನು ಅಪ್ರತ್ಯಕ್ಷವಾಗಿ ನಾಶಗೊಳಿಸಬಲ್ಲುದು ಎನ್ನುವ ಸಾಮಾಜಿಕ ಹಿತಚಿಂತನೆಯನ್ನು ಬೆಂಬಲಿಸಿದ್ದಾರೆ.

ನಮಗೆ ವಿಚಾರ ಸ್ವಾತಂತ್ರತೆ, ವಾಕ್‌ಸ್ವಾತಂತ್ರತೆ ಹಾಗೂ ಕೃತಿ ಸ್ವಾತಂತ್ರತೆಗಳುಳ್ಳ ಸ್ವಾಯತ್ತ ರಾಜ್ಯಬೇಕು. ಆಗ ನಾವು ನಮ್ಮ ಭವಿತವ್ಯವನ್ನು ನಿರ್ಧರಿಸಿಕೊಂಡು ನಮಗೆ ಬೇಕಾಗಿದ್ದ ಆದರ್ಶ ಭಾರತವನ್ನು ಕಟ್ಟಿಕೊಳ್ಳೋಣ. ಇಂಥ ಭಾರತದಲ್ಲಿ ಅಸ್ಪೃಶ್ಯತೆಗೆ ಎಡೆಯಿಲ್ಲ. ಜಾತೀಯತೆಗೆ ಸುಳುವಿಲ್ಲ. ಆಲಸ್ಯ, ನಿರುದ್ಯೋಗಗಳಿಗೆ ಇಂಬಿಲ್ಲ. ಅಲ್ಲಿ ಸ್ತ್ರೀ ಸ್ವಾತಂತ್ರತೆಯುಂಟು. ಎಲ್ಲರಿಗೂ ಮಾನವತೆಯ ಸಮಾನಹಕ್ಕುಂಟು. ಇಂತಹ ಧ್ಯೇಯ ಸಾಧನೆಗಾಗಿ ನಾವು ಕಲ್ಲು-ಮುಳ್ಳು, ತಗ್ಗು-ದಿನ್ನೆ, ನದಿ-ಬೆಟ್ಟ, ಬೈಲು-ಅಡವಿ ಇವುಗಳ ಪರಿವೆಯಿಲ್ಲದೆ ದಾಟುತ್ತ, ಸಾಗುತ್ತ, ಮುನ್ನುಗ್ಗುತ್ತ, ಬಲಿದಾನ ಮಾಡುತ್ತ ಹೋಗಬೇಕಾದೀತು ಎನ್ನುವ ನಿಲುವು ಸುಭಾಸರಾಗಿತ್ತು.

ಸ್ವದೇಶ-ಸ್ವಾಭಿಮಾನಗಳ ಜ್ಯೋತಿಯನ್ನು ಹುಟ್ಟಿಸದ ಶಿಕ್ಷಣವನ್ನು ನಿರಾಕರಿಸುತ್ತಾರೆ. ಶಿಕ್ಷಣದ ರೂಪದಲ್ಲಿ ಸಾಕ್ಷರರಾದರೂ ನಮ್ಮ ಮೌಲ್ಯಗಳ ದೃಷ್ಟಿಯಿಂದ ಅಶಿಕ್ಷಿತರಾಗಿಯೇ ಉಳಿದ ಎಷ್ಟೋ ಜನರನ್ನು ನಾವು ಸಮಾಜದಲ್ಲಿ ಕಾಣುತ್ತೇವೆ. ಅವರ ವಿಚಾರ-ಮಂಥನದಲ್ಲಿ ದೇಶದ ಭವಿಷ್ಯವೂ ಅಡಗಿರುವ ಸತ್ಯ ಎಷ್ಟೋ ಜನರಿಗೆ ತಿಳಿಯುವುದೇ ಇಲ್ಲ. ದೇಶಪ್ರೇಮ, ನಿಸ್ವಾರ್ಥತೆ, ಭಾಷಾಭಿಮಾನ, ಮೌಲ್ಯಗಳ ಬಳಕೆ ಎಲ್ಲವೂ ಶಿಕ್ಷಣದ ಮೂಲಕ ಹೆಚ್ಚುತ್ತಾ ಸಾಗಬೇಕು ವಿನಃ ಅವುಗಳ ಬಗೆಗೆ ಅಸಡ್ಡೆಯಾದ ಭಾವನೆಗಳು ಸಲ್ಲದು ಎನ್ನುವ ಲೇಖಕರು ತಾವೋರ್ವ ಶಿಕ್ಷಣಾಧಿಕಾರಿಯಾಗಿ ಶಿಕ್ಷಣ ಮತ್ತು ದೇಶಾಭಿಮಾನವನ್ನು ಜೋಡಿಸುವ ಅವರ ಚಿಂತನೆಯಲ್ಲಿ ಹೊಸತನವನ್ನು ಕಾಣಬಹುದಾಗಿದೆ. ಈ ಎಲ್ಲ

ಸಾಹಸಿ

# ಸುಭಾಸ ಬೋಸ



ಸಾಹಸಿ ಸುಭಾಸ ಬೋಸ್

ವಿಷಯ ವಿಶೇಷತೆಗಳನ್ನು ಶೈಕ್ಷಣಿಕ ಕೃತಿಗಳ ಮೂಲಕ ಮಕ್ಕಳಿಗೆ ನೀಡುವಲ್ಲಿ ಈ ಕೃತಿ ಯಶಸ್ವಿಯಾಗಿದೆ.

**೪.೫.೪ ಸಾಹಸಿ ಸುಭಾಸ ಬೋಸ :**

ಈ ಕೃತಿಯು ೧೯೬೩ರಲ್ಲಿ ರಚಿತವಾದುದು. ಈ ಕೃತಿಯ ಮೂಲ ಉದ್ದೇಶ ಮಕ್ಕಳಲ್ಲಿ ಸಾಹಸ ಮನೋಭಾವವನ್ನು ಬಿತ್ತುವುದು. "ಜೇಡಹುಳು ತನ್ನ ಗೂಡು ಕಟ್ಟಲು ಸತತವಾಗಿ ಆರು ಸಾರೆ ಪ್ರಯತ್ನಿಸಿದರೂ ಫಲಿಸದಿರಲು ಮತ್ತೆ ಅದು ಮುಂದೆ ಸಾಗಿ ಏಳನೆಯ ಸಾರೆ ಗೂಡನ್ನು ಕಟ್ಟಿ ತನ್ನ ಉದ್ದೇಶವನ್ನು ಸಾಧಿಸಿಕೊಂಡಿತು. ಇದರಿಂದ ಜನರು 'ಪ್ರಯತ್ನಿಸು, ಧೈರ್ಯದಿಂದ ಮುನ್ನುಗ್ಗು' ಎಂಬುದನ್ನು ಕಲಿತುಕೊಳ್ಳುವಂತಾಯಿತು. ಇದಕ್ಕೆ ತಕ್ಕ ಉದಾಹರಣೆಯೆಂದರೆ ಅಮರಜೀವಿಗಳಾದ ನೇತಾಜಿ ಸುಭಾಸ ಚಂದ್ರ ಬೋಸರು ತಮ್ಮ ಸಾಹಸಪ್ರವೃತ್ತಿಯಿಂದ ಮಾತೃಭೂಮಿಯ ಸ್ವಾತಂತ್ರ್ಯಕ್ಕಾಗಿ ಹೆಣಗಿದುದು. ಅವರ ಚರಿತ್ರೆಯು ಸಾಹಸ ಜೀವಿಗಳಿಗೆ ಮಾರ್ಗದರ್ಶಕವಾಗಿದೆ."[೪] ಕ.ಬ.ಅಂಗಡಿಯವರು ಮಕ್ಕಳಲ್ಲಿ ದೇಶಪ್ರೇಮ, ಸಜ್ಜನಿಕೆ, ವಿನಯವಂತಿಕೆ, ಧೈರ್ಯ, ಸಾಹಸ ಇವುಗಳಂತಹ ಹತ್ತು ಹಲವು ಗುಣ-ಗೌರವಗಳನ್ನು ಬಿತ್ತುವ ಉದ್ದೇಶ ಅವರದ್ದಾಗಿದೆ. ಪ್ರತಿಯೊಂದು ಶೈಕ್ಷಣಿಕ ಕೃತಿಯಲ್ಲಿಯೂ ಒಂದೊಂದು ಗುಣ-ಗೌರವ-ವಿಶೇಷತೆಯನ್ನು ಮೂಲವಾಗಿಟ್ಟುಕೊಂಡು ಕೃತಿ ರಚನೆಯಲ್ಲಿ ತೊಡಗಿದ್ದುದು ಕಂಡುಬರುತ್ತದೆ.

ಇಪ್ಪತ್ತನೆಯ ಶತಮಾನದ ಉತ್ತರಾರ್ಧದ ಜಗತ್ತಿನ ಇತಿಹಾಸದ ಸಂಪುಟವನ್ನು ತಿರುವಿಹಾಕಿ ಕೂಲಂಕುಶವಾಗಿ ನೋಡಿದರೆ ಹೆಚ್ಚಾಗಿ ಕ್ರಾಂತಿಯಾದುದನ್ನು ಕಾಣಬಹುದಾಗಿದೆ. ಮಹಾಮಹಾಯುದ್ಧಗಳು ಜರುಗಿ ರಾಷ್ಟ್ರ ರಾಷ್ಟ್ರಗಳ ನಕಾಶಗಳ ಮೇರೆಗಳು ಬದಲಾಗಿವೆ. ಪ್ರಭುತ್ವ(ಇಜಂ)ಗಳು ರೂಪಾಂತರ ಹೊಂದಿವೆ. ಜನಾಂಗಗಳ ಜೀವನದ ಸ್ಥಿತಿ ರೀತಿಗಳು ವ್ಯತ್ಯಸ್ತವಾಗಿವೆ. ಬಾಳಿನ ಬಗೆಯೂ ಬೇರೆ ಬೇರೆಯಾಗಿ ನಡೆದಿದೆ. ರಾಜಕೀಯ ರಂಗದಲ್ಲಂತೂ ಹೇಳಕೂಡದಷ್ಟು ಬದಲಾವಣೆಯಾಗಿ ದಾಸ್ಯಮನೋವೃತ್ತಿಯು ಸಂಪೂರ್ಣವಾಗಿ ಅಳಿದಿದೆ. ಸ್ವಾತಂತ್ರ್ಯದ ವಾತಾವರಣದಲ್ಲಿ ಪ್ರತಿಯೊಂದು ಜನಾಂಗವು ತಮ್ಮದೇ ಆದುದೊಂದು ರೀತಿಯಲ್ಲಿ ತಮ್ಮ ಸಾಮಾಜಿಕ, ರಾಜಕೀಯ, ಸಾಂಸ್ಕೃತಿಕ, ಆರ್ಥಿಕ, ವ್ಯಾವಹಾರಿಕ ಚಟುವಟಿಕೆಗಳನ್ನು ರೂಪಿಸಿಕೊಳ್ಳಹತ್ತಿದೆ. ವಿಜ್ಞಾನದ ಶೋಧದಿಂದ ನೆಲ, ಜಲ, ಅವ ವಾಯುಗಳ ಸಂಚಾರವನ್ನು ಕೈಕೊಂಡು ತ್ರಿಲೋಕದ ಮೇಲೆ ಮನುಷ್ಯನು ಪ್ರಭುತ್ವವನ್ನು ಪಡೆಯುತ್ತಿದ್ದಾನೆ. ಸ್ತ್ರೀ ಪುರುಷರಿಬ್ಬರೂ ಸಹಜೀವಿಗಳಾಗಿ ಸುಖೀ

ಸಾಹಸ ವೀರ

# ಸುಭಾಶ್ಚಂದ ಬೋಸ

* * *

ಗ್ರಂಥಕರ್ತರು :

ಕೆ. ಬಿ. ಅಂಗಡಿ.

* * *

ಪರಿಷ್ಕರಿಸಿದವರು :

ಪ್ರೊ. ಉಮೇಶ ಅಂಗಡಿ. ಎಂ. ಎ.

ಡಿಶೆಂಬರ, ೧೯೮೩

ಸಾಹಸವೀರ ಸುಭಾಶ್ಚಂದ್ರ ಬೋಸ

ಜೀವನವನ್ನು ಪಡೆಯಲು ತ್ವರಿತಗತಿಯಿಂದ ಮುಂದೆ ಸಾಗಿದ್ದಾರೆ. ಸಹಕಾರಿಯಾಗುವಂಥ ಶಸ್ತ್ರಾಸ್ತ್ರಗಳನ್ನು ಶೋಧಿಸಿ ಅವುಗಳ ಸದುಪಯೋಗವಿಲ್ಲದೆ ಸರ್ವ ವಿನಾಶಕ್ಕಾಗಿ ಮಾರ್ಪಡಿಸಿಕೊಳ್ಳಹತ್ತಿದ್ದಾರೆ. ಅಲೌಕಿಕವೆಂದು ಗಣಿಸಲ್ಪಟ್ಟವುಗಳನ್ನು ಲೌಕಿಕಕ್ಕೆ ನಿಲ್ಲಿಸಿ, ಮನುಷ್ಯನು ದೇವತ್ವದ ಮಟ್ಟಕ್ಕೇರಹತ್ತಿದ್ದಾನೆ.

ಇಪ್ಪತ್ತನೆಯ ಶತಮಾನದ ಆದಿಯಲ್ಲಿ ನಡೆದ ಘಟನಾವಳಿಗಳನ್ನು, ತಲ್ಲಣಗಳನ್ನು ಮಕ್ಕಳ ಮನಸ್ಸಿನಲ್ಲಿ ನೆಲೆಯೂರುವಂತೆ ಮಾಡಿ, ಕೆಟ್ಟ ಮತ್ತು ಒಳ್ಳೆಯ, ಸತ್ಯ ಮತ್ತು ಮಿಥ್ಯ ಇಂತಹ ವೈರುಧ್ಯ ನಿಲುವುಗಳನ್ನು ಅವರ ಅಂತಃಪಟಲದಲ್ಲಿ ಬೇರೂರುವಂತೆ ಮಾಡಿ ಅವುಗಳ ಪರಿಣಾಮಗಳನ್ನು ತಿಳಿಸಿಕೊಡುವ ಮಹೋನ್ನತ ವಿಷಯವೂ ಅಲ್ಲಿ ಮುಖ್ಯವಾಗಿರುವುದೂ ಗುರುತಿಸಬಹುದು. ಮಣ್ಣಿನ ಮುದ್ದೆಯಂತಿರುವ ಮಕ್ಕಳ ಮನಸ್ಸನ್ನು ಶಿಲ್ಪದಂತೆ ರೂಪಿಸುವ ಕುಸುರಿಯೂ ಅವರ ಕೃತಿಗಳ ಮುಖ್ಯ ಉದ್ದೇಶವಾಗಿದೆ.

ಸಾಹಸ ಪ್ರವೃತ್ತಿ ಒಂದು ಜನಾಂಗವನ್ನೇ ಜೀವಂತವಾಗಿಡಬಲ್ಲದು ಎಂಬ ಸತ್ಯಾನ್ವೇಷಣೆಯನ್ನು ಲೇಕಕರು ಹೇಳುತ್ತಾರೆ. "ಸಾಹಸಮಯ ಜೀವನದ ಹೋರಾಟವೆ ಜೀವಂತ ಜನಾಂಗದ ಲಕ್ಷಣ. ಅದಿಲ್ಲದ ಜನಾಂಗವು ನಡೆದಾಡುವ ಹೆಣ. ಈ ಮಾತು ಎಚ್ಚೆತ್ತ ಜನಾಂಗದ ಉಸಿರೆಂಬಂತೆ ಪ್ರಾಚೀನ ಕಾಲದಿಂದಲೂ ಭಾರತೀಯರು ತಮ್ಮ ಬಾಳು ಸಾಗಿಸುತ್ತ ಬಂದಿದ್ದರೆಂದು ಇತಿಹಾಸದ ಪುಟಗಳನ್ನು ತಿರುವಿ ಹಾಕಿದರೆ ಕಂಡುಬರುವುದು."[೫]

ನಮ್ಮ ಜನಪದದ ಮೂಲಗಳಾದ ಕಥೆಗಳು, ಲಾವಣಿ ಪದಗಳು, ತ್ರಿಪದಿಗಳು ಮತ್ತು ಇನ್ನಿತರ ಸಾಹಿತ್ಯ ಮತ್ತು ಕಲೆಯ ಪ್ರಕಾರಗಳು ಸಾಹಸ ಪ್ರವೃತ್ತಿಯನ್ನು ಸಾಕ್ಷಿಕರಿಸಿವೆ. ರಾಮಾಯಣ ಮಹಾಭಾರತಗಳಲ್ಲಿ ರಾಮ-ರಾವಣರ ಮಧ್ಯದಲ್ಲಿ ಆಂಜನೇಯ, ಇಂದ್ರಜಿತುಗಳು, ಭೀಷ್ಮ, ದ್ರೋಣ, ಭೀಮಾರ್ಜುನ, ಕೃಷ್ಣ, ದುರ್ಯೋಧನರ ಮಧ್ಯದಲ್ಲಿ, ಶಂಕರಾಚಾರ್ಯ, ರಾಮಾನುಜಾಚಾರ್ಯ, ಮಧ್ವಾಚಾರ್ಯ, ಬಸವಣ್ಣನವರಂಥ ಪೂಜ್ಯರ ಸಾಹಸ,.ಛತ್ರಪತಿ ಶಿವಾಜಿ ಹಾಗೂ ರಾಮದಾಸ, ಹಕ್ಕ-ಬುಕ್ಕ ಹಾಗೂ ವಿದ್ಯಾರಣ್ಯ ಇವರುಗಳ ಜೀವನ ಪ್ರವಾಹದಲ್ಲಿ ಕಾಣುವ ಮಹಾ ಸಾಹಸವೃತ್ತಿ, .ಹನ್ನೆರಡನೆಯ ಶತಮಾನದ ಬಸವಣ್ಣನವರ ಸಾಹಸ ಜೀವನ ಇವು ಮಕ್ಕಳಿಗೆ ಆದರ್ಶವಾಗಿರಬೇಕು. ಅದೇ ರೀತಿಯಲ್ಲಿ ಹತ್ತೊಂಬತ್ತನೆಯ ಶತಮಾನದಲ್ಲಿ ಬ್ರಿಟಿಷರ ವಿರುದ್ಧ ಸ್ವಾತಂತ್ರ್ಯ ಹೋರಾಟದ ಹಲವಾರು ಮಹಿಮರ ಸಾಹಸ, ಇಪ್ಪತ್ತನೆಯ ಶತಮಾನದಲ್ಲಿ ಮತ್ತೆ ಪುಟಿದೆದ್ದು, ಭಾರತೀಯ ಸ್ವಾತಂತ್ರ್ಯ ಆಂದೋಲನದಲ್ಲಿ ಅನೇಕ ವ್ಯಕ್ತಿಗಳನ್ನು ಸಾಹಸ ಜೀವನ

ಸಾಗರದಲ್ಲಿ ಧುಮುಕಲು ಹಚ್ಚಿತು. ಅಂತವರಲ್ಲಿ ಸುಭಾಸ ಬೋಸ ಕೂಡ ಒಬ್ಬರು. ಸಾಹಸಿ ಬೋಸರ ಜೀವನವು ಅದ್ಭುತ ಹಾಗೂ ರೋಮಾಂಚಕಾರಿಯಾದುದು. "ಸಾಹಸವೇ ಜೀವನದ ಸಹಜ ಪ್ರವೃತ್ತಿಯಾಗಿದ್ದ ಮಾನವರಿಗೆ ಚಿರನೂತನವಾಗಿದ್ದ ಬೋಸರ ಸಾಹಸದ ಅಭ್ಯಾಸವು ಅತ್ಯಗತ್ಯವಾದುದು."[೬] ಎನ್ನುವುದರ ಮೂಲಕ ನೂರಾರು ವರ್ಷಗಳ, ಮಹಾಕಾವ್ಯಗಳ ಮತ್ತು ಪ್ರಸ್ತುತವಾದ ಸಾಹಸದ ಘಟನಾವಳಿಗಳನ್ನು ಮಕ್ಕಳ ಮುಂದೆ ಇಟ್ಟು ಎಂದೆಂದಿಗೂ ಸಾಹಸ ಪ್ರಧಾನವಾದ ಬದುಕು ಗೆಲ್ಲುತ್ತದೆ ಎನ್ನುವ ಮನವರಿಕೆಯನ್ನು ಮಾಡಿಸುತ್ತಾರೆ. ಈ ಸಾಲಿಗೆ ಇಂದಿನ ಸಿನಿಮಾ, ದೂರದರ್ಶದ ಮಾಧ್ಯಮದಲ್ಲಿ ಪ್ರಸಾರವಾಗುವ ಕಥೆ, ಕಾದಂಬರಿಗಳನ್ನೂ ಉಲ್ಲೇಖಿಸಬಹುದಾಗಿದೆ. ಒಟ್ಟಾರೆಯಾಗಿ ಸಾಹಸದ ಅಂಶವನ್ನು ಮಕ್ಕಳ ಮನೋವಿಕಾಸಕ್ಕಾಗಿ ನೀಡಲು ಸುಭಾಸ ಬೋಸರನ್ನು ಆಯ್ಕೆ ಮಾಡಿಕೊಂಡಿದ್ದಾರೆ.

ಸಹಜವಾಗಿ ಕಾಲ ಮತ್ತು ಸ್ಥಳಗಳು ವ್ಯಕ್ತಿಯೋರ್ವನ ವ್ಯಕ್ತಿತ್ವದಲ್ಲಿ ಮಹತ್ತರ ಪಾತ್ರವನ್ನು ವಹಿಸುತ್ತವೆ. ಸುಬಾಸ ಬೋಸರ ಕಾಲಾವಧಿ (ಜನೆವರ ೨೩ ೧೮೯೭ ರಿಂದ ಅಗಷ್ಟ ೧೮ ೧೯೪೫)[ಅವರ ಕೊನೆಯ ಬಗೆಗೆ ವಿವಾದಗಳಿದ್ದರೂ] ಎಂದು ಕೊಂಡರೂ ಶ್ರೀ ಕ.ಬ.ಅಂಗಡಿಯವರ ಹುಟ್ಟಿದ ದಿನಾಂಕ ೭ ಜುಲೈ ೧೮೯೭. ಹೀಗಾಗಿ ಇಲ್ಲಿ ಇವರ ವಯೋಮಾನ ಒಂದೇ ಆಗಿದ್ದು, ತಮ್ಮ ಕಾಲಾವಧಿಯಲ್ಲಿ ತಮ್ಮ ಸಮವಯಸ್ಕರ ಸಾಹಸ, ಸಾಧನೆಗಳ ಮೇಲೆ ಸಹಜವಾಗಿ ಪ್ರಭಾವಕ್ಕೊಳಗಾದ ಶ್ರೀ ಕ.ಬ.ಅಂಗಡಿಯವರು ಸುಬಾಸ ಬೋಸರನ್ನು ಅವರ ವ್ಯಕ್ತಿತ್ವವನ್ನು ಅವರ ಸಾಹಸ ಪ್ರವೃತ್ತಿಯನ್ನು ಮೆಚ್ಚಿಕೊಂಡಿದ್ದಾರೆ.

ಶ್ರೀ ಕ.ಬ.ಅಂಗಡಿಯವರು ಮಕ್ಕಳ ಮನಸ್ಸಲ್ಲಿ ಬಿತ್ತುಲು ಬಯಸುವ ಅಂಶಗಳೆಂದರೆ ಸ್ವಾತಂತ್ರ್ಯಕ್ಕಾಗಿ ಹೋರಾಟ ನಡೆಸಿದ ಮಹನಿಯರ ಮನಸ್ಥಿತಿಗಳು ಬೇರೆ ಬೇರೆಯಾದರೂ ಅವರಲ್ಲಿ ಒಬ್ಬರ ಪರವಾಗಿ ಒಬ್ಬರಿಗೆ ಇರುವ ಅಧಮ್ಯ ಗೌರವ. ಗಾಂಧೀಜಿಯವರ ದಾರಿ-ದೃಷ್ಟಿಗಳು ಬೇರೆಯಾಗಿಯೂ, ಸುಬಾಸ ಬೋಸರ ದಾರಿ-ದೃಷ್ಟಿಗಳು ಬೇರೆಯಾಗಿ ಕಂಡರೂ ಅವರಿಬ್ಬರ ಗುರಿ ಸ್ವಾತಂತ್ರ್ಯ ಭಾರತವೇ ಆಗಿತ್ತು. ಮಾತಿನಲ್ಲಿಯೂ ನಡವಳಿಕೆಯಲ್ಲಿಯೂ ಇಬ್ಬರಲ್ಲಿ ಒಬ್ಬರ ಬಗೆಗೆ ಇನ್ನೊಬ್ಬರಿಗೆ ಗೌರವ ಸ್ಥಾನವೇ ಇತ್ತು. ಈ ವಿಷಯದಲ್ಲಿ ಸುಬಾಸರು ಗಾಂಧಿಜಿಗಿಂತ ಕಿರಿಯರಾದರೂ ಅವರ ತಿಳುವಳಿಕೆ ಮತ್ತು ನಡಾವಳಿಕೆಗಳು ಗಾಂಧೀಜಿಯವರನ್ನೂ ಕೆಲವೊಮ್ಮೆ ಮೀರಿಸುವಂತಹದ್ದಾಗಿದ್ದವು. ಅಷ್ಟಾಗಿಯೂ ಸುಬಾಸರು ಎಂದಿಗೂ ಗಾಂದೀಜಿಯವರನ್ನು ತಮ್ಮ ವಿರೋಧಿಗಳೆಂದು ಭಾವಿಸಲಿಲ್ಲ. ಬದಲಾಗಿ ತಮ್ಮ ಪ್ರತಿಯೊಂದು ಕಾರ್ಯದಲ್ಲಿ ಮಹಾತ್ಮನ ಆಶೀರ್ವಾದವನ್ನು ಬಯಸುತ್ತಿದ್ದರು. ಈ

ಸಂಯಮ, ತಾಳ್ಮೆ, ಹಿರಿಯರಲ್ಲಿ ವಿಧೇಯತೆ, ವಿನಯತೆಗಳನ್ನು ಮಕ್ಕಳು ಹೊಂದಬೇಕೆನ್ನುವ ಮಹತ್ತರ ಸಂದೇಶವನ್ನು ಶ್ರೀ ಕ.ಬ.ಅಂಗಡಿಯವರು ಈ ಮೂಲಕ ರವಾನಿಸುತ್ತಾರೆ.

ಈ ಕೃತಿಯಲ್ಲಿ ದೇವರನ್ನು ಅರಸುತ್ತಾ, ಗುರುಗಳನ್ನು ಹುಡುಕುತ್ತಾ ಹೊರಟ ಸುಬಾಸ ಬೋಸರು ದಣಿದರೆ ಹೊರತು ಅವರಿಗೆ ದೇವರನ್ನು ಕಾಣಲು ಸರಿಯಾದ ಮಾರ್ಗದರ್ಶನ ಸಿಗಲೇ ಇಲ್ಲ. ಅಂಥಹ ಸಂದರ್ಭದಲ್ಲಿ ಶ್ರೀ ಕ.ಬ.ಅಂಗಡಿಯವರು ಬಳಸಿದ ಗಾದೆಯ ರೂಪದ ವಾಕ್ಯ 'ಕಾಶಿಯವರೆಗೆ ಹೋದರೂ ಹೇಸಿಗಳೆ ಕಂಡರಲ್ಲದೆ' ಎನ್ನುವ ವಾಕ್ಯ ಅವರ ಬರವಣಿಗೆಯ ವಿಶೇಷತೆಯನ್ನು ಹೇಳುತ್ತದೆ.

ಕೆಲವು ಐತಿಹಾಸಿಕ ಸತ್ಯಗಳನ್ನು ಮುಚ್ಚುಮರೆಯಿಲ್ಲದೆ ಹೇಳುವಲ್ಲಿ ಕೊಂಚವೂ ಅಂಜಲಾರರು. ಇದಕ್ಕೆ ಉದಾಹರಣೆಯೆಂದರೆ "ಈ ಪ್ರತಿಭಟನೆಯ ಕಾಲಕ್ಕೆ ಜವಾಹರಲಾಲ ನೆಹರುರವರೂ ಬೋಸರಿಗೆ ಬೆಂಬಲವಿತ್ತದ್ದರಿಂದ ಕಾಂಗ್ರೆಸ್ ವೃದ್ಧರಿಗೆ ಕಳವಳವಾಯಿತು."[೭] "ಸುಬಾಸರ ಪ್ರಾಬಲ್ಯವನ್ನು ತಗ್ಗಿಸುವದು ಇದೇ ಸಂದರ್ಭವೆಂದು ತಿಳಿದು ಮಹಾತ್ಮ ಗಾಂಧೀಜಿಯವರು ಈ ತರುಣನಿಗೆ ಬೆಂಬಲಿಸುತ್ತಿದ್ದ ಜನಾನುರಾಗಿ ಮುಂದಾಳು ಜವಾಹರಲಾಲರನ್ನು ಪೀಠವನ್ನಲಂಕರಿಸುವಂತೆ ಒತ್ತಾಯ ತಂದರು."[೮] ಸುಬಾಸ ಬೋಸರು 'ಆಜಾದ್ ಹಿಂದ್' ಸೈನ್ಯವನ್ನು ಕಟ್ಟಿ ಭಾರತವನ್ನು ಸ್ವಾತಂತ್ರ ದೇಶವೆಂದು ಹೇಳಿ ಘೋಷಿಸಿ ಹಾಡಿದ ರಾಷ್ಟ್ರಗೀತೆಯನ್ನೂ ಕೂಡ ಈ ಕೃತಿಯಲ್ಲಿ ಕಾಣಬಹುದು.

"ಶುಭ ಸುಖ ಚೈನಕಿ ಬರ್ಖಾ ಬರಸೆ ಭಾರತ ಭಾಗ ಹೈ ಜಾಗಾ

ಪಂಜಾಬ ಸಿಂಧ ಗುಜರಾತ ಮರಾಠಾ ಉತ್ಕಲ ವಂಗಾ

........................................................................."

'ಆಜಾದ ಹಿಂದ' ಸರಕಾರದ ಮಂತ್ರಿಮಂಡಲವನ್ನೂ , ಸೈನಿಕ ಪ್ರತಿನಿಧಿಗಳನ್ನು, ಶಾಖೆಯ ವಿವರಗಳನ್ನು, ಸುಬಾಸ ಬೋಸರ ಧನ ಸಂಗ್ರಹದ ರೀತಿಯನ್ನೂ, ಸೊಗಸಾಗಿ ಈ ಕೃತಿಯಲ್ಲಿ ಚಿತ್ರಿಸಿದ್ದಾರೆ. ಒಟ್ಟಾರೆಯಾಗಿ ಸುಬಾಸ ಬೋಸರ ಜೀವನ ಚರಿತ್ರೆಯ ಮೂಲಕ ಮಕ್ಕಳಲ್ಲಿ ಸಾಹಸಿ ಮನೋಭಾವ ಮತ್ತು ಸಂಸ್ಕಾರಗಳ ಬಿತ್ತನೆಯನ್ನು ಮಾಡುವುದೇ ಅವರ ಉದ್ದೇಶವಾಗಿದೆ ಮತ್ತು ಅದರಲ್ಲಿ ಯಶಸ್ವಿಯೂ ಆಗಿದ್ದಾರೆ.

## ೪.೬ ಪುರಾಣಗಳು

ಕ.ಬ.ಅಂಗಡಿಯವರ ಸಾಹಿತ್ಯ ಕೃಷಿಯಲ್ಲಿ ಪುರಾಣ ಗ್ರಂಥಗಳ ರಚನೆಯನ್ನು ಒಂದು ಮೈಲಿಗಲ್ಲು ಎಂದೇ ಹೇಳಬಹುದು. ಪುರಾಣ ರಚನೆಯ ಪ್ರಕ್ರಿಯೆಯು ಅವರಲ್ಲಿಯ ಅನುಭಾವ ಪರಿಪಕ್ವತೆಯ ಬೆಳವಣಿಗೆಯನ್ನು ಗುರುತಿಸುತ್ತದೆ. ಶಿಕ್ಷಕರಾಗಿದ್ದುಕೊಂಡು ಶಿಕ್ಷಣ ಕ್ಷೇತ್ರದಲ್ಲಿ ತಮ್ಮ ಬದುಕು-ಬರಹದ ಮೂಲಕ ಸಾತ್ವಿಕ ಶಿಕ್ಷಣವನ್ನು ಕೊಡಲು ಪ್ರಯತ್ನಿಸಿ ಯಶಸ್ವಿಯಾದ ಅವರು ತಮ್ಮ ಅಂತರಂಗದ ಶುದ್ಧಿಯಿಂದ ಸಾಧಿಸಿಕೊಂಡ ಆಧ್ಯಾತ್ಮಿಕ ತಳಹದಿಯನ್ನು ಸಮಾಜದ ವಿಕಾಸಕ್ಕಾಗಿ ಬಳಸಿಕೊಂಡರು. ಅನುಗಾಲವೂ ಶಿವಯೋಗಿಗಳ ನಡುವೆ, ಅವರ ಸಂಪರ್ಕದಲ್ಲಿ ಮತ್ತು ಸದಾವಕಾಲವೂ ಬಸವಾದಿ ಶರಣರ ನಡೆ-ನುಡಿಗಳ ಆಚಾರ-ವಿಚಾರಗಳ ವಿನಿಯೋಗದಿಂದ ತಮ್ಮ ಬದುಕನ್ನು ಸಾಗಿಸಿದವರು. ಫಲಪ್ರದವೇ ಅವರ ಪ್ರಬುದ್ಧ ಸಾಹಿತ್ಯ ರಚನೆ ಎನ್ನಬಹುದು. ಯಾರು ಆತ್ಮಜ್ಞಾನಿಗಳ, ಶಿವಯೋಗಿಗಳ ಒಡನಾಟದಲ್ಲಿ ಬದುಕು ಸವಿಸುತ್ತ, ಅವರ ನಿಲುವನ್ನು ಪಡೆದುಕೊಳ್ಳತ್ತಾರೋ ಅವರಿಗೆ ಮಾತ್ರ ಅಂಥ ಮಹಾತ್ಮರ ಚರಿತ್ರೆಗಳನ್ನು ಬರೆಯಲು ಸಾಧ್ಯವಾಗುತ್ತದೆ. ಪುರಾಣಗಳ ಮುಖಾಂತರ ಸಂಸ್ಕೃತಿಯೊಂದನ್ನು, ಪರಂಪರೆಯೊಂದನ್ನು, ಜನಪದವೊಂದನ್ನು, ಸಾಹಿತ್ಯದ ಉತ್ಕಟತೆಯನ್ನು, ಭಕ್ತಿಯ ಪಾರಮ್ಯವನ್ನು ಪರಿಚಯ ಮಾಡಿಕೊಡುವ ಸದುದ್ದೇಶ ಇವರದ್ದಾಗಿದೆ. ಹೀಗಾಗಿ ಅವರ ಪುರಾಣಗಳನ್ನು ಅಧ್ಯಯನಕ್ಕೊಳಪಡಿಸುವ ಮುನ್ನ ಒಟ್ಟಾರೆಯಾಗಿ ಪುರಾಣಗಳ ಕುರಿತು, ಅದರಲ್ಲಿಯೂ ವಿಶೇಷವಾಗಿ ವೀರಶೈವ ಪುರಾಣಗಳು, ಅವುಗಳು ನಡೆದು ಬಂದ ದಾರಿ, ಪುರಾಣಗಳಿಗೆ ಬಳಸಿಕೊಂಡ ಕಾವ್ಯದ ಶೈಲಿ, ಇವುಗಳ ಕೆಲವು ಸಂಗತಿಗಳನ್ನು ಅಧ್ಯಯನಕ್ಕೆ ಒಳಪಡಿಸಲಾಗಿದೆ.

ಪುರಾಣಗಳ ತಿಳುವಳಿಕೆ ನಮ್ಮ ಭಾರತಿಯರಿಗೆನೂ ಹೊಸತಲ್ಲ. ಆದರೆ ಪುರಾಣ ಪ್ರಕಾರವನ್ನು ಕಾಲಕಾಲದಲ್ಲಿ ಬದಲಾವಣೆ ಮಾಡಿಕೊಂಡ ಬಗೆ ಮಾತ್ರ ವಿಶೇಷವಾದುದು. ಈ ಪ್ರಕಾರ ನಮ್ಮ ಸಾಹಿತ್ಯದ ಪ್ರಮುಖ ಕೃಷಿಗಳಲ್ಲೊಂದು. ಇದರ ಇತಿಹಾಸ ಮತ್ತು ಪರಂಪರೆಯನ್ನು ಗಮನಿಸಿದಾಗ ನಮಗೆ ವೈವಿಧ್ಯತೆ ಕಂಡು ಬರುತ್ತದೆ.

"ಹಿಂದು ಧಾರ್ಮಿಕ ಸಾಹಿತ್ಯದ ಒಂದು ದೊಡ್ಡ ಭಾಗ ವೈದಿಕ ಪುರಾಣಗಳಾಗಿವೆ. ಬೃಹತ್ತಿನಲ್ಲಿ ಹೇಗೋ ಹಾಗೆಯೇ ಮಹತ್ತಿನಲ್ಲೂ ಇವಕ್ಕೆ ಸಾಹಿತ್ಯ ಪ್ರಪಂಚದಲ್ಲಿ ಒಂದು ಗಣನೀಯ ಸ್ಥಾನವಿದೆ. ವಿಶಿಷ್ಟ ಲಕ್ಷಣ ಯುಕ್ತವಾಗಿ ಸಂಸ್ಕೃತದಲ್ಲಿ ಬರೆಯಲ್ಪಟ್ಟ ಇವು ಅನೇಕ ಶತಮಾನಗಳಿಂದ ಈ ದೇಶದ ಜನರ ಮೇಲೆ ತಮ್ಮ ಅದ್ಭುತ ಪ್ರಭಾವವನ್ನು ಬೀರುತ್ತ

ಬಂದಿವೆ. ಇವು ಜನರು ಸನ್ಮಾರ್ಗದಲ್ಲಿ ಪ್ರವರ್ತಿಸುವಂತೆ ಮಾಡಲೂ, ಜನಸಾಮಾನ್ಯರ ಮನಸ್ಸಿನಲ್ಲಿ ವೇದೋಪನಿಷತ್ತುಗಳ ಬೋಧೆಯನ್ನೂ ದೇವರ ಸಾಮರ್ಥ್ಯ, ದಯೆ, ಪ್ರೀತಿಗಳನ್ನೂ, ಶಾಪ-ವಿಶಾಪಗಳ ಪ್ರಭಾವಗಳನ್ನೂ ಪ್ರತ್ಯಕ್ಷ ನಿದರ್ಶನಗಳಿಂದ ಶ್ರುತಪಡಿಸಲೂ ಬಹುಮಟ್ಟಿಗೆ ಸಹಾಯ ಮಾಡಿವೆ."[೯೯] "ಜನಸಾಮಾನ್ಯರಲ್ಲಿ ಧರ್ಮಶ್ರದ್ಧೆ, ನೀತಿನಿಷ್ಠೆ, ಸದಾಚಾರಗಳು ಬೇರೂರಿ ಬೆಳೆಯುವಂತೆ ಮಾಡಲು ಪುರಾಣಗಳು ಸುಲಭ ಸಾಧನವೆಂಬುದನ್ನು ವೈದಿಕ ಪುರಾಣಗಳ ಪ್ರಚಾರದಿಂದ ಮನಗಂಡ ಜೈನ ಮುನಿಗಳು, ತಾವೂ ತಮ್ಮ ಧರ್ಮಗಳ ಪ್ರಚಾರಕ್ಕಾಗಿ ಪುರಾಣ ರಚನೆ ಮಾಡಲು ತೊಡಗಿದರು. ಪಂಚಲಕ್ಷಣಗಳ ಚೌಕಟ್ಟಿನೊಳಗೆ ಜೈನ ಪುರಾಣ ರಚನೆ ಮಾಡಿದ್ದಾರೆ."[೧೦೦]

ಈ ಎಲ್ಲ ಹಂತಗಳಲ್ಲೂ ಭಾಷೆಯೊಂದಿಗೆ ಭಾವ ಬೆರೆತು ಅಲ್ಲಿ 'ಅರಿವಿನ' ಬೆಳಕು ಮೂಡಿಸುವುದು ಸಾಹಿತ್ಯದ ಪರಮ ಉದ್ದೇಶವಾಗಿದೆ. ಅಂತಹ ಸಾಹಿತ್ಯ, ವಾಙ್ಮಯದ ವಿಶಾಲತೆ ಕಾಲಾನುಕ್ರಮದಲ್ಲಿ ಬದಲಾವಣೆಯನ್ನು ಹೊಂದುತ್ತಾ ಹೋಗಿರುವುದು. ಪ್ರಾಚೀನ ಇತಿಹಾಸದ ಪುಟಗಳಲ್ಲಿ ಗುರುತಿಸಬಹುದಾದ 'ಪುರಾಣ'ವೆಂಬ ಸಾಹಿತ್ಯದ ಪ್ರಕಾರ ಹಲ-ಕೆಲವು ದೃಷ್ಟಿಕೋನ, ವಸ್ತು, ವಿನ್ಯಾಸದಿಂದ ಹೊಸ ರೂಪವನ್ನು ಪಡೆದುಕೊಳ್ಳುತ್ತಾ ಇಂದಿಗೂ ತನ್ನ ಅಸ್ತಿತ್ವವನ್ನು ಉಳಿಸಿಕೊಂಡ ಸಾಹಿತ್ಯ ಪ್ರಕಾರ. ಸಂಶೋಧಕರು 'ಪುರಾಣ'ವನ್ನು ಪ್ರಾಚೀನತೆಯ ಶಿಖರಕ್ಕೆ ಒಯ್ದು ನಿಲ್ಲಿಸುತ್ತಾರೆ. ಅಲ್ಲಿಂದಲೇ ಮತ್ತೇ ಪುರಾಣಗಳ ಹೊಸ ರೂಪವನ್ನು ಹುಡುಕಲು ಪ್ರಯತ್ನಿಸಿದ್ದಾರೆ.

ಯಾವುದೇ ಸಾಹಿತ್ಯದ ಹಿನ್ನೆಲೆಯನ್ನು ಹುಡುಕುವಾಗ ನಮಗೆ ಅದರ ಮೇಲ್ಪದರ ಮತ್ತು ಒಳಹೂರಣಗಳು ಸಹಜವಾಗಿ ಗೋಚರಿಸುತ್ತವೆ. ಮೇಲ್ಪದರಿನಲ್ಲಿ ಸಾಹಿತ್ಯ ರಚನೆಯಾಗುವ ಸಂದರ್ಭದ ಧ್ವನಿ ಕಂಡು ಬಂದರೆ, ಅದರ ಒಳಪದರಿನಲ್ಲಿ ಸಾಹಿತ್ಯವನ್ನು ಹೆಣೆಯಲು ಬಳಸಿದ ತಾಂತ್ರಿಕತೆಯನ್ನು ಗುರುತಿಸಬಹುದು. ಕವಿಯಲ್ಲಿ ಅಡಗಿರುವ ಪ್ರತಿಭೆಗೆ ಈ ಎರಡು ಅಂಶಗಳು ಪೂರಕ-ಪೋಷಕವಾಗುತ್ತವೆ. ಅದೇ ರೀತಿಯಲ್ಲಿ ಪುರಾಣಗಳ ಮೇಲ್ಪದರಿನಲ್ಲಿ ಭಕ್ತಿಯೆಂಬ ಉತ್ಕಟತೆ ಮತ್ತು ಸಮಾಜವನ್ನು ತಿದ್ದುವ ಪರಿಭಾಷೆಯನ್ನು ಕಾಣಬಹುದು. ಅದರ ಒಳಹೂರಣದಲ್ಲಿ ಸಾಹಿತ್ಯದ ಹೊಸ ತಾಂತ್ರಿಕತೆಯನ್ನು ಗುರುತಿಸಬಹುದು.

'ಪುರಾಣ'ವೆನ್ನುವ ಪದವು ಕಾಲಾನುಕ್ರಮದಿಂದ ತನ್ನ ಅರ್ಥವನ್ನು ಹಿಗ್ಗಿಸಿ ಅಥವಾ ಕುಗ್ಗಿಸಿಕೊಳ್ಳುತ್ತಾ ನಡೆದು ಬಂದಿದೆ. ಪುರಾಣ ಶಬ್ದ 'ಸಂಸ್ಕೃತಿಯನ್ನು', 'ಧರ್ಮದ ಪಾರಮ್ಯತೆಯನ್ನು', 'ಪ್ರಾಚೀನತೆಯನ್ನು', 'ಪುರಾತನತೆಯನ್ನು' ಸಾರುವಲ್ಲಿ ತನ್ನ ಅರ್ಥವನ್ನು

ಹಿಗ್ಗಿಸಿಕೊಂಡರೆ 'ಯಾರು ಕಂಡರಿಯದ್ದು', 'ಕಟ್ಟುಕಥೆ', 'ಅತಿಲಂಬಿತವಾದದ್ದು', 'ಸುಳ್ಳಿನ ಕಂಥೆ', 'ಬೇಸರ ತರಿಸುವಂತಹುದು' ಎನ್ನುವಲ್ಲಿ ತನ್ನ ಅರ್ಥವನ್ನು ಕುಗ್ಗಿಸಿಕೊಳ್ಳುತ್ತದೆ.

ಪುರಾಣಗಳ ರಚನೆಯಿಂದ ಮುಖ್ಯವಾಗಿ ಆಗುವ ಲಾಭಗಳೆಂದರೆ ಧರ್ಮಪ್ರಚಾರ. ಅದರೊಟ್ಟಿಗೆ ಸಮಕಾಲೀನ ವಸ್ತುಸ್ಥಿತಿ ಮತ್ತು ಸಂಸ್ಕೃತಿಯ ರಕ್ಷಣೆಯು ಕೂಡ. ಪುರಾಣ ರಚನೆಗಳ ಮೂಲಕ ಜಗತ್ತಿನ ಹಲವಾರು ಜನಾಂಗಗಳು, ಮತಗಳು, ಅವುಗಳ ಉತ್ಪತ್ತಿ, ಶ್ರದ್ಧೆ, ನಂಬಿಕೆ, ಜೀವನ ಕ್ರಿಯೆ–ಪ್ರಕ್ರಿಯೆಗಳು ಸಾಂಕೇತಿಕವಾಗಿ ಕಂಡುಬರುತ್ತವೆ.

ಕಲ್ಯಾಣ ಕ್ರಾಂತಿಯ ನಂತರದ ಕಾಲಾವಧಿಯಲ್ಲಿ ವೀರಶೈವ ಸಾಹಿತ್ಯ ರಚನೆಯಲ್ಲಿ ಮೂರು ಪ್ರಮುಖ ಬಗೆಗಳನ್ನು ಗುರುತಿಸಬಹುದು. ಮೊದಲನೆಯದು ಬಸವಾದಿ ಶಿವಶರಣರು ನಡೆಸಿದ ಸಮಾಜೋಧಾರ್ಮಿಕ ಚಳುವಳಿಯಿಂದ ಸ್ಪೂರ್ತಿ ಪಡೆದು ವಸ್ತುವಿನ ಆಯ್ಕೆ, ನಿರೂಪಣಾ ವಿಧಾನ, ಭಾಷೆ, ಛಂದಸ್ಸು ಇವುಗಳೆಲ್ಲ ಜನಸಮ್ಮುಖವಾದುದು. ಎರಡನೆಯದು ಆಂಧ್ರದ ಪಾಲ್ಕುರಿಕೆ ಸೋಮನಾಥನು ದ್ವಿಪದದಲ್ಲಿ ಬರೆದ ತೆಲುಗು 'ಬಸವ ಪುರಾಣ'ವನ್ನು ಕನ್ನಡದ ಭೀಮಕವಿ ಭಾಮಿನಿ ಷಟ್ಪದಿಯಲ್ಲಿ ಕನ್ನಡಕ್ಕೆ ರೂಪಾಂತರಿಸಿದುದು. ಮೂರನೆಯದು ಲಕ್ಕಣ್ಣ ದಂಡೇಶ, ಜಕ್ಕಣಾಚಾರ್ಯ ಮೊದಲಾದವರ ನೇತೃತ್ವದಲ್ಲಿ ವೀರಶೈವ ಪುನರುಜ್ಜೀವನ ಕಾರ್ಯ ಬೃಹತ್ ಪ್ರಮಾಣದಲ್ಲಿ ನಡೆದುದು. ಆ ಹಿನ್ನೆಲೆಯಲ್ಲಿ ಸಾಹಿತ್ಯ ಸೃಷ್ಟಿಯಾದುದು.

ವೀರಶೈವ ಕವಿಗಳು ವೈದಿಕ–ಜೈನ ಕವಿಗಳಂತೆ ಪೂರ್ವಯೋಜಿತವಾದ ಲಾಕ್ಷಣಿಕ ಚೌಕಟ್ಟನ್ನು ಹಾಕಿಕೊಂಡಿಲ್ಲ. ಇದಕ್ಕೆ ಮುಖ್ಯ ಕಾರಣವೆಂದರೆ ಶರಣರು ರಚಿಸಿದ 'ವಚನ'ಗಳು ಸಾಹಿತ್ಯ ರಚನೆಯ ಉದ್ದೇಶವಿಟ್ಟು ರಚನೆಯಾದವುಗಳಲ್ಲ. ಅವುಗಳ ರಚನೆಯ ಹಿಂದೆ ಇರುವುದು ಸಾಮಾಜಿಕ ಮತ್ತು ಧಾರ್ಮಿಕ ಸಂವೇದನೆಗಳನ್ನು ಜನಸಾಮಾನ್ಯರತ್ತ ಕೊಂಡೊಯ್ಯುವುದು. ಆ ಮೂಲಕ ಸಾಮಾಜಿಕ ಮತ್ತು ಧಾರ್ಮಿಕ ಕ್ಲಿಷ್ಟತೆಗಳನ್ನು ಸರಳಿಕರಿಸಿ ಬದುಕನ್ನು ಹೊಸ ದೃಷ್ಟಿಕೋನದಿಂದ ತೋರುವುದೆ ಆಗಿತ್ತು. ಹೀಗಾಗಿ ಇತ್ತ ಗದ್ಯವೂ ಅಲ್ಲದ ಪದ್ಯವೂ ಅಲ್ಲದ 'ವಚನ' ರಚನೆಗೆ ಚಾಲನೆ ದೊರೆತು ಸಾಹಿತ್ಯದ ಕಟ್ಟಳೆಗಳನ್ನು ತಳ್ಳಿಹಾಕಿದುದರ ಪರಿಣಾಮ ವೀರಶೈವ ಕವಿಗಳು ಪುರಾಣ ರಚನೆಯಲ್ಲೂ ಲಾಕ್ಷಣಿಕ ಚೌಕಟ್ಟನ್ನು ನಿರ್ಲಕ್ಷಿಸಿದಂತೆ ತೋರುತ್ತದೆ.

ವೀರಶೈವ ಸಾಮಾಜಿಕ ನೆಲೆಯಲ್ಲಿ ಕೆಳವರ್ಗದ ಜನರಿಗೆ ಹೆಚ್ಚು ಪ್ರಾಶಸ್ತ್ಯ ದೊರೆತು ಅವರ ಭಾವ–ಸಂವೇದನೆಗಳ ಅಭಿವ್ಯಕ್ತಿಗೆ ಅವಕಾಶ ದೊರೆತು ಮೇಲು–ಕೀಳಿನ

ಅಹಂಭಾವನೆಗಳನ್ನು ಮೆಟ್ಟಿ ನಿಲ್ಲಲು ವೇದಿಕೆ ಕಲ್ಪಿಸಿತು. ಹೀಗಾಗಿ ಅಶಿಕ್ಷಿತರು, ಹೆಚ್ಚು ಕಲಿಯದ ಜನರು ತಮ್ಮ ಅನುಭವಗಳನ್ನೇ ವಚನ ಸಾಹಿತ್ಯದ ಮೂಲಕ ಹೊರಹಾಕಿ ಅಭಿವ್ಯಕ್ತಿ ಮಾಧ್ಯಮಕ್ಕೊಂದು ಹೊಸತನವನ್ನು ತಂದು ಕೊಟ್ಟರು. ಈ ದೃಷ್ಟಿಯಲ್ಲಿ ಸಾಗಿದ ಅವರ ಮೂಲ ಉದ್ದೇಶ ಸಾಹಿತ್ಯದ ಚೌಕಟ್ಟನ್ನು ನಿರ್ಲಕ್ಷಿಸಿತು. ಕಾರಣಗಳು ಎನೇ ಇದ್ದರೂ ವೀರಶೈವ ಕವಿಗಳು ತಮ್ಮ ಪುರಾಣ ರಚನೆಗೆ ನಿರ್ದಿಷ್ಟವಾದ ಚೌಕಟ್ಟನ್ನು ಹಾಕಿಕೊಳ್ಳಲಿಲ್ಲ.

ವೀರಶೈವ ಧರ್ಮ ಅವ್ಯಾಹತವಾಗಿ ಬೆಳೆಯಲು ಮಠಗಳು ವಿಶೇಷವಾಗಿ ಕಾರ್ಯ ನಿರ್ವಹಿಸಿದುದನ್ನು ಕಾಣಬಹುದಾಗಿದೆ. ಸಮಾಜದ ಮುಖ್ಯವಾಹಿನಿಗಳಾಗಿ ಕಾರ್ಯ ನಿರ್ವಹಿಸುವ ಈ ಮಠಗಳು ತನ್ನದೆ ಆದ ವಿಶಿಷ್ಟತೆಯನ್ನು ಮೈಗೂಡಿಸಿಕೊಂಡಿವೆ. ಈ ಎಲ್ಲ ಮಠ–ಮಾನ್ಯಗಳ ಗುರಿಯು ಒಂದೇ ಆಗಿದ್ದರೂ ಅವುಗಳನ್ನು ಅನುಷ್ಠಾನಗೊಳಿಸುವ ಮತ್ತು ಕಾಲಕ್ಕೆ ತಕ್ಕ ಬದಲಾವಣೆಗಳನ್ನು ಮಾಡಿಕೊಂಡು ಸಮಾಜದ ಹಿತಾಸಕ್ತಿಯನ್ನು ಗಣನೆಗೆ ತೆಗೆದುಕೊಂಡು ಸಾಗುವ ಪ್ರಕ್ರಿಯೆ ಅನುಕರಣೀಯ. ಮಠಗಳು ಸಮಾಜ ಪರಿವರ್ತನೆಯ ಮುಖ್ಯವಾಹಿನಿಗಳಾಗಿ ತೋರಿಬರುತ್ತವೆ. ಮಠಗಳ ಇಂತಹ ನಿಲುವುಗಳಿಂದ ಹಲವಾರು ವೀರಶೈವ ಗ್ರಂಥಗಳು ಪುರಾಣ, ಚರಿತೆ, ಲೀಲೆ, ವಿಜಯ, ವಿಲಾಸಗಳ ಹೆಸರಿನಲ್ಲಿ ಹೊರಬಂದವು. ಈ ಪುರಾಣಗಳಲ್ಲಿ ನಾಯಕ ನಡೆಸಿದ ಸನ್ನಡೆಯನ್ನು, ಬೋಧಿಸಿದ ಸುವಿಚಾರಗಳನ್ನು ಸಮಾಜದ ಏಳ್ಗೆಗೂ, ಸಾಂಸ್ಕೃತಿಕ ವಿಕಸನಕ್ಕೂ ಬಳಸಿಕೊಳ್ಳುವುದು ಇವುಗಳ ಉದ್ದೇಶವಾಗಿತ್ತು.

### ೪.೬.೧ ವೀರಶೈವ ಪುರಾಣಗಳ ಬೆಳವಣಿಗೆ :

ವೀರಶೈವ ಪುರಾಣ ಸಾಹಿತ್ಯ ರಚನೆಗೊಳ್ಳಲು ವೈದಿಕ ಮತ್ತು ಜೈನ ಧರ್ಮದ ಪುರಾಣ ರಚನಾ ಅನುಕರಣೆ ಕಾರಣವಾದರೂ ವೈದಿಕ ಮತ್ತು ಜೈನ ಧರ್ಮದ ತತ್ವ ವಿವೇಚನೆಗಳಿಗಿಂತ ಭಿನ್ನವಾಗಿರುವ ವೀರಶೈವದ ತತ್ತ್ವ ವೈಚಾರಿಕತೆಗಳು ಈ ಎರಡೂ ಧರ್ಮಗಳಿಗಿಂತ ಭಿನ್ನವಾದ ಪುರಾಣ ರಚನೆಯ ಕಾರ್ಯಕ್ಕೆ ಚಾಲನೆ ನೀಡಿತ್ತು. ವೈದಿಕ ಮತ್ತು ಜೈನ ಧರ್ಮಗಳ ಅನುಕರಣೆಗೆ ಅವು ನಿಲ್ಲಲಿಲ್ಲ. ಬದಲಾಗಿ ಕನ್ನಡ ಸಾಹಿತ್ಯ ಪ್ರಪಂಚಕ್ಕೆ ಹೊಸ ವಸ್ತು, ಹೊಸ ಲಯ, ಹೊಸ ಗೇಯವನ್ನು ನೀಡುವಲ್ಲಿ ಕಾರಣವಾದವು. ಈ ಪರಂಪರೆ ಮುಂದುವರೆಯಲು, ಬದುಕಲು, ಬೆಳೆಯಲು ಹಲವಾರು ದಾರ್ಶನಿಕರು ಮತ್ತು ಅವರ ಕುರಿತು ಕವಿ–ಕಾವ್ಯ ಪರಿಚಯವೂ ಇರಬೇಕಾಗುತ್ತದೆ.

"ವೀರಶೈವ ಪುರಾಣಗಳ ವಿಶೇಷವಾದ ಬೆಳವಣಿಗೆಯು ೧೫ನೆಯ ಹಾಗೂ ೧೬ನೆಯ ಶತಮಾನದಲ್ಲಿ ಆಗಿರುವುದೆಂದು ಹೇಳಬಹುದು."[೧೦೧] ಹದಿನಾರನೆಯ ಶತಮಾನದ ಪೂವಾರ್ಧದವರೆಗೂ ವಾರ್ಧಕ ಇಲ್ಲವೇ ಭಾಮಿನಿ ಷಟ್ಪದಿಯಲ್ಲಿ ವಿಶೇಷವಾಗಿ ಪುರಾಣ ರಚನೆಗೊಂಡಿರುವುದು ಗುರುತಿಸಬಹುದು. ಅಲ್ಲಿಂದ ಮುಂದೆ ತನ್ನ ನಿಯಮಗಳನ್ನು ಸಡಿಲಗೊಳಿಸಿದಂತೆ ಕಂಡು ಬರುತ್ತದೆ. ಪುರಾಣ ವಸ್ತುವನ್ನು ಜನಸಾಮಾನ್ಯರಿಗೆ ಇನ್ನೂ ಸರಳ ರೂಪದಲ್ಲಿ ನೀಡಲು ಸಾಂಗತ್ಯ ಛಂದೋರೂಪವನ್ನು ಬಳಸತೊಡಗಿದರು. ಆದರೂ ಸಹಿತ ತಮ್ಮ ಹಿಂದಿನ ಛಂದೋರೂಪಗಳಾದ ಭಾಮಿನಿ ಮತ್ತು ವಾರ್ಧಕ ಷಟ್ಪದಿಗಳ ಜನಪ್ರಿಯತೆ ಮರೆಯಾಗಲಿಲ್ಲ.

ವೀರಶೈವ ಪುರಾಣಗಳ ರಚನೆಯಲ್ಲಿ ಬಹುಪಾಲು ಉತ್ತರ ಕರ್ನಾಟಕದ ಕವಿಗಳ ಕೃಷಿಯೇ ಮುಖ್ಯವಾಗಿ ಕಂಡು ಬರುತ್ತದೆ. ಈ ಕೃಷಿಯ ಮೂಲ ಪ್ರೇರಣೆ ಮತ್ತೊಮ್ಮೆ ವೀರಶೈವ ಮಠಗಳೇ ಎಂದರೂ ತಪ್ಪಲ್ಲ. "ಉದಾಹರಣೆಗೆ ಮಲ್ಲಿಕಾರ್ಜುನ ಕವಿಯ (೧೮೩೦) ಕೀರಿಟೇಶ್ವರ ಪುರಾಣ; ಚೆನ್ನಕವಿಗಳ (೧೯೨೫) ಫಕೀರೇಶ್ವರ ಪುರಾಣ; ನಾಗೇಶಶಾಸ್ತ್ರಿಗಳ (೧೯೪೦)ತೋಂಟದ ಶ್ರೀಮದರ್ಧನಾರೀಶ್ವರ ಪುರಾಣ, ಫಲಹಾರ ಶಿವಯೋಗಿಶ್ವರ ಪುರಾಣ ಇತ್ಯಾದಿ"[೧೦೨]

ವೀರಶೈವ ಪುರಾಣಗಳ ಕೃಷಿ ಕನ್ನಡ ಸಾಹಿತ್ಯದಲ್ಲಿ ಹುಲುಸಾದ ಬೆಳೆಯೆಂದೆ ಹೇಳಬೇಕು. ಸಂಸ್ಕೃತ-ತಮಿಳು-ತೆಲುಗಿನಲ್ಲಿ ವೀರಶೈವ ಪುರಾಣಗಳು ರಚಿಸಲ್ಪಟ್ಟಿದ್ದರೂ ಇವುಗಳ ಅಗ್ರಶ್ರೇಯಾಂಕ ಕನ್ನಡಕ್ಕೆ ಸಲ್ಲುತ್ತದೆ. "ಪುರಾಣಗಳನ್ನು ಏಕವ್ಯಕ್ತಿ ಪ್ರಧಾನ ಪುರಾಣಗಳು, ಬಹುವ್ಯಕ್ತಿ ಪ್ರಧಾನ ಪುರಾಣಗಳು ಮತ್ತು ತತ್ತ್ವ ಪ್ರಧಾನ ಪುರಾಣಗಳು ಎಂದು ಮೂರು ಗುಂಪು ಮಾಡಬಹುದು"[೧೦೩] ಏಕವ್ಯಕ್ತಿ ಪ್ರಧಾನ ಪುರಾಣಗಳನ್ನು ಮತ್ತೆ ಬಸವ ಪೂರ್ವಯುಗದ ಪುರಾಣಗಳು, ಬಸವ ಯುಗದ ಮಹಾಶರಣರ ಪುರಾಣಗಳು ಮತ್ತು ಬಸವೋತ್ತರ ಪುರಾಣಗಳು ಎಂದೂ ವಿಭಾಗಿಸಲೂಬಹುದು. "ವೀರಶೈವ ಪುರಾಣಗಳಲ್ಲಿ 'ಶಿವಲೀಲೆಯ ಪುರಾಣ'ಗಳು ಹಾಗೂ 'ಶಿವಶರಣ ಪುರಾಣ'ಗಳು ಎಂಬ ಎರಡು ಮುಖ್ಯವಾದ ಭೇದಗಳಿರುವವೆಂದು ಹೇಳಬಹುದು."[೧೦೪]

### ೪.೬.೨ ಆಧುನಿಕ ಪುರಾಣಗಳು :

ಪುರಾಣಗಳು ಕಾಲ ಕಳೆದಂತೆ ತಮ್ಮ ಹೊರ ಮತ್ತು ಒಳ ನೋಟವನ್ನು ಬದಲಿಸಿಕೊಳ್ಳುತ್ತಿವೆ. ಸಾಹಿತ್ಯದ ಸಾವಿರಾರು ಪ್ರಾಕಾರಗಳು ಪ್ರಯೋಗಕ್ಕೆ ಒಳಪಟ್ಟು ಯಶಸ್ವಿಯಾಗುತ್ತಿದ್ದರೂ ಪುರಾಣಗಳ ಜನಪ್ರಿಯತೆ ಕಡಿಮೆಯಾಗುತ್ತಿಲ್ಲ. ಇಂದಿನ ಸಾಮಾಜಿಕ, ರಾಜಕೀಯ, ಧಾರ್ಮಿಕ ಮತ್ತು ಸಾಂಸ್ಕೃತಿಕ ತಿಳುವಳಿಕೆಗಳು ಬದಲಾಗುತ್ತಿದ್ದರೂ ಅದಕ್ಕೆ ತಕ್ಕಂತೆ ಸಾಹಿತಿಗಳ ಬರವಣಿಗೆಯ ಸ್ಥರವೂ ಬದಲಾಗುತ್ತಿದೆ. ಇದು ಜೀವಂತ ಮತ್ತು ಆರೋಗ್ಯಕರವಾದ ಸಾಹಿತ್ಯ ಮತ್ತು ಭಾಷೆಯ ಗುಣ–ಲಕ್ಷಣಗಳೂ ಕೂಡ. ಈ ಬದಲಾವಣೆಗೆ ಕನ್ನಡದ ಪುರಾಣ ಸಾಹಿತ್ಯ ಕೂಡ ಸ್ಪಂದಿಸುತ್ತಲೇ ಬಂದಿದೆ.

ಬಸವಣ್ಣನವರ ನಂತರದ ಕೆಲವು ಶತಮಾನಗಳಲ್ಲಿ ಬಸವಾದಿ ಪ್ರಮಥರ ನಡೆ–ನುಡಿಗಳನ್ನೇ ಪುರಾಣದ ವಸ್ತುವಾಗಿಸಿಕೊಂಡರು. ನಂತರ ಸಮಾಜದ ಮುಖಪುಟ ಬದಲಾದಂತೆ ಪುರಾಣಗಳ ವಸ್ತುಗಳ ಆಯ್ಕೆಯ ಪ್ರಕ್ರಿಯೆಯಲ್ಲಿ ಸಾಹಿತಿಗಳೂ ಬದಲಾದದ್ದು ಕಂಡುಬರುತ್ತದೆ. ೧೬ನೆಯ ಶತಮಾನದಲ್ಲಿ ವಿಜಯನಗರದ ಕಾಲಾವಧಿಯಲ್ಲಿ ಲಕ್ಕಣ್ಣ, ದಂಡೇಶ ಮುಂತಾದವರು ಮತ್ತೊಮ್ಮೆ ಮುಳುಗುತ್ತಿದ್ದ ವೀರಶೈವ ವಾಙ್ಮಯವನ್ನು ಸಂಪಾದನೆಯ ಮೂಲಕ ರಕ್ಷಿಸಿದರು. ಮುಂದೆ ಭಾರತದ ರಾಜಕೀಯ, ಸಾಮಾಜಿಕ, ಶೈಕ್ಷಣಿಕ, ಧಾರ್ಮಿಕ, ವ್ಯಾವಹಾರಿಕ ಜೀವನದ ಮೇಲೆ ಆಂಗ್ಲರ ನೆರಳು ಬೀಳಲು ಪ್ರಾರಂಭಿಸಿತು. ಕೋಟಿ ಕೋಟಿ ಭಾರತೀಯರು ಒಂದಾಗಿ ಈ ಸಂಗ್ರಾಮದಲ್ಲಿ ಭಾಗಿಯಾದರು. ಈ ಪ್ರಕ್ರಿಯೆ ಭಾರತೀಯ ಮನಸ್ಸುಗಳಲ್ಲಿ ಹೊಸ ಸಂಚಲನ ಮೂಡಿಸಿತು. ಅವರ ಭಾವ–ಚಿಂತನೆಗಳು ವಿಸ್ತಾರವಾದವು. ಸಂಕುಚಿತ ದೃಷ್ಟಿಯಿಂದ ಸವಿಸ್ತಾರವಾದ ದಾರಿಯತ್ತ ಭಾರತದ ಸಾಹಿತ್ಯ ಕೂಡ ದಾಪುಗಾಲಿಟ್ಟಿತು.

ಕವಿವರ್ಯ ರವೀಂದ್ರನಾಥ ಠಾಗೋರ್, ಸ್ವಾಮಿ ವಿವೇಕಾನಂದ, ಸುಬಾಸ ಬೋಸ, ಕುವೆಂಪು ಮುಂತಾದ ನವೋದಯ ಕವಿಗಳು, ಚಿಂತನ ಜೀವಿಗಳು ಆಧ್ಯಾತ್ಮದ ತಳಹದಿಯ ಮೇಲೆ ಸಾಹಿತ್ಯ, ಸಮಾಜವನ್ನು ನಿರ್ಮಿಸುವ ಆಸೆಯೊಂದಿಗೆ ಹೊಸ ಕನಸನ್ನು ಹೆಣೆಯುತ್ತಾರೆ. ಸಾಹಿತ್ಯದ ಆ ಆಶಯ ಮತ್ತು ಪ್ರಭೇದವನ್ನು 'ಆಧುನಿಕ ಪುರಾಣ'ಗಳು ಕಾರ್ಯರೂಪಕ್ಕೆ ತಂದವು ಎನ್ನಬಹುದು. ಒಟ್ಟಾರೆಯಾಗಿ ೧೯೦೦ರಿಂದ ಈವರೆಗಿನ ಪುರಾಣ ರಚನೆಗಳನ್ನು ನಾವು 'ಆಧುನಿಕ ಪುರಾಣ'ಗಳ ಸಾಲಿಗೆ ಸೇರಿಸಬಹುದು.

ಕ.ಬ.ಅಂಗಡಿಯವರ ಪುರಾಣ ಕೃತಿಗಳನ್ನು ಆಧುನಿಕ ಪುರಾಣಗಳ ಸಾಲಿಗೆ ಸೇರಿಸಬಹುದಾಗಿದೆ. ಈ ಪ್ರಭೇದದ ಸಮಕಾಲೀನ ಪ್ರಮುಖ ಪುರಾಣ ರಚನೆಕಾರರು

೧) ದ್ಯಾಂಪುರ ಚೆನ್ನಕವಿಗಳು ೨) ಪಂಡಿತ ವೈ. ನಾಗೇಶ ಶಾಸ್ತ್ರಿಗಳು ೩) ಪಂಡಿತ ಹುಕ್ಕೇರಿ ಸದಾಶಿವ ಶಾಸ್ತ್ರಿಗಳು ೪) ಶ್ರೀಮತಿ ಜಯದೇವಿತಾಯಿ ಲಿಗಾಡೆ ೫) ಡಾ. ಪಂಡಿತ ಪುಟ್ಟರಾಜ ಗವಾಯಿಗಳು

ಇದೇ ಸ್ತರದಲ್ಲಿ ಹೆಸರಿಸಬೇಕಾದವರು ಕ.ಬ.ಅಂಗಡಿಯವರು. 'ಆಧುನಿಕ ಪುರಾಣ'ಗಳ ಮೂಲ ಆಶಯ ಸಾಮಾಜಿಕ ಸಂವೇದನೆಯೊಂದಿಗೆ ಧಾರ್ಮಿಕ, ತಾತ್ವಿಕ ವಿವೇಚನೆ. ಈ ಕಾಲಾವಧಿಯಲ್ಲಿ ಆಧ್ಯಾತ್ಮಿಕ, ಸಾಮಾಜಿಕ ಹಿನ್ನೆಲೆಯಲ್ಲಿ ಸಾಧನೆಗೈದ ಮತ್ತು ಸೇವೆ ಸಲ್ಲಿಸಿದ ಮಹಾಮಹಿಮರನ್ನು ಕುರಿತಾದ ಅವರ ಜೀವನ ಚರಿತ್ರೆಯನ್ನೆ ಬರೆಯಲ್ಪಟ್ಟ ಈ ಕೃತಿಗಳು ತಮ್ಮ ಹಿಂದಿನ ಪುರಾಣಗಳ ಕೆಲವು ಲಕ್ಷಣಗಳನ್ನು ಉಳಿಸಿಕೊಂಡರೂ ಬಹುಮಟ್ಟಿಗೆ ಹೊಸತನವನ್ನು ತಂದುಕೊಳ್ಳುವ ಪ್ರಯತ್ನ ಮಾಡಿವೆ. ಆಧುನಿಕ ಪುರಾಣಗಳು ದಿನಕಳೆದಂತೆ ತಮ್ಮ ಹರವನ್ನು ವಿಸ್ತರಿಸಿಕೊಂಡಿವೆ. ಅಂಗಡಿಯವರ ಆಧುನಿಕ ಪುರಾಣದ ಸ್ತರದಲ್ಲಿ ದಲಿತಪರ, ಸ್ತ್ರೀಪರ, ಶೋಷಿತಪರ, ಶ್ರಮಿಕರ, ರೈತರ ಬದುಕನ್ನೂ ತನ್ನ ವಸ್ತುವನ್ನಾಗಿ ಸ್ವೀಕರಿಸಿದೆ. ಇವರ ಪುರಾಣಗಳಲ್ಲಿ ಅಲ್ಲಲ್ಲಿ ಸಮಯೋಚಿತವಾಗಿ ಈ ಧ್ವನಿಗಳು ವ್ಯಕ್ತವಾಗಿರುವುದು ಕಂಡು ಬರುತ್ತದೆ. ಸಾಮಾಜಿಕತೆಯ ಮುಖಪುಟ ಬದಲಾದಂತೆ ಪುರಾಣಗಳ ವಸ್ತು ಬದಲಾಗುತ್ತಿದೆ. ಆದರೆ ಅದರ ಹಿಂದಿರುವ ಸದುದ್ದೇಶ ಅಬೇಧ್ಯವಾಗಿದೆ. ಇದು ಸಾಹಿತ್ಯ ಸಮಾಜಕ್ಕೆ ನೀಡುವ ಮಹತ್ತರ ಕೊಡುಗೆ. ಈ ಮಹತ್ತರ ಕಾರ್ಯವನ್ನು ಸದ್ದಿಲ್ಲದೇ ಇವರ ಕೃತಿಗಳು ಮಾಡಿವೆ. ಈ ಎಲ್ಲ ಪುರಾಣಗಳ ರಚನೆಯಲ್ಲಿ ಭಾಮಿನಿ ಷಟ್ಪದಿಯನ್ನು ಬಳಸಿಕೊಂಡಿದ್ದಾರೆ.

ಪುರಾಣಗಳ ಅಭಿವ್ಯಕ್ತಿ ಮಾಧ್ಯಮವಾಗಿ ಷಟ್ಪದಿ ಸಾಹಿತ್ಯ ಬಳಕೆಗೊಂಡಿದೆ. ಶ್ರೀಮಂತಿಕೆಯಿಂದ ಕೂಡಿದ ಕನ್ನಡ ಸಾಹಿತ್ಯದಲ್ಲಿ ಷಟ್ಪದಿಗಳು ಕಾವ್ಯ ರಚನೆಗೈಯುವ ಕವಿಗಳಿಗೂ ಅದರ ರಸಸ್ವಾದವನ್ನು ಸ್ವೀಕರಿಸುವ ಸಹೃದಯದನಿಗೂ ಪ್ರಿಯವಾದ ಸಾಹಿತ್ಯ ಪ್ರಕಾರಗಳು. ವೀರಶೈವ ಸಾಹಿತ್ಯವನ್ನು ದೇಸಿ ಸಾಹಿತ್ಯವೆಂದೂ, ದೇಸಿ ಸಾಹಿತ್ಯವನ್ನು ವೀರಶೈವ ಸಾಹಿತ್ಯವೆಂದೂ ಪರಿಗಣಿಸುವಷ್ಟು ಹಾಸುಹೊಕ್ಕಾಗಿ ಬೆಳೆದುಬಂದಿವೆ. ಇದಕ್ಕೆ ಕಾರಣ ಸಮಾಜೋ-ಧಾರ್ಮಿಕ ಆಂದೋಲನವಾಗಿ ರೂಪುಗೊಂಡ ವಚನ ಪ್ರಕಾರವೇ ಎನ್ನಬಹುದು. "ರಾಘವಾಂಕನಿಂದ ಹಿಡಿದು ಚಾಮರಸನವರೆಗೂ ಸುಮಾರು ಎರಡು ಶತಮಾನಗಳ ಕಾಲದಲ್ಲಿ ರಾಘವಾಂಕ, ಭೀಮಕವಿ ಮತ್ತು ಚಾಮರಸ ಈ ಮೂವರೇ

ಹೇಳಿಕೊಳ್ಳಬಹುದಾದ ವೀರಶೈವ ಷಟ್ಪದೀ ಕವಿಗಳು. ಸಿದ್ಧರಾಮಚರಿತ್ರೆ, ಹರಿಶ್ಚಂದ್ರಕಾವ್ಯ ಮತ್ತು ಪ್ರಭುಲಿಂಗಲೀಲೆ ಇವು ಉತ್ಕಷ್ಟ ವೀರಶೈವ ಕಾವ್ಯಗಳು."[೧೦೫] ಷಟ್ಪದಿ ಸಾಹಿತ್ಯಕ್ಕೆ ಭದ್ರವಾದ ಬುನಾದಿಯನ್ನೂ, ದಾರಿಯನ್ನೂ ಹಾಕಿಕೊಟ್ಟ, ಈ ಕಾಲದ ವೀರಶೈವ ಕವಿಗಳ ಸಾಧನೆ ಮುಂದಿನ ವೀರಶೈವ ಕವಿಕೃತಿಗಳ ಮೇಲೆ ವಿಶೇಷವಾದ ಪ್ರಭಾವವನ್ನು ಬೀರಿದೆ.

ಷಟ್ಪದಿಗಳನ್ನು ಹೆಚ್ಚು ಬಳಕೆಯಲ್ಲಿ ತಂದವರು ವೀರಶೈವ ಕವಿಗಳೇ. ವೀರಶೈವ ಕವಿಗಳ ಮೂಲ ಉದ್ದೇಶ ಜನಸಾಮಾನ್ಯರಿಗೆ ಸಾಹಿತ್ಯ ತಲುಪಬೇಕು ಎನ್ನುವುದು. ಹೀಗಾಗಿ ಅತಿ ಸರಳ ಆಡುಮಾತುಗಳನ್ನು ಬಳಸಿ ಅವರು ಸಾಹಿತ್ಯ ರಚಿಸಿದರು. ಷಟ್ಪದಿಯ ಪ್ರಸಂಗದಲ್ಲೂ ಇದು ಕಾರ್ಯರೂಪಕ್ಕೆ ಬಂದಿದೆ. ಆದ ಕಾರಣ ಜನಮನದಲ್ಲಿ ಷಟ್ಪದಿಯ ಛಾಯೆ ಅಚ್ಚಳಿಯದೆ ಉಳಿದುದು. ಈ ವೀರಶೈವ ಷಟ್ಪದೀಕಾವ್ಯಗಳ ಪರಂಪರೆ ರಾಘವಾಂಕನಿಂದ ಮೊದಲಗೊಂಡು ಕ.ಬ.ಅಂಗಡಿಯರವರೆಗೂ ಮತ್ತು ಅವರ ನಂತರ ಇಂದಿನವರೆಗೂ ಅವ್ಯಾಹತವಾಗಿ ಹರಿದುಬಂದಿವೆ. ತನ್ನ ಗೇಯತೆ ಮತ್ತು ಸಾಹಿತ್ಯಕ್ಕೆ ಅನುಕೂಲಕರವಾದ ಪದಬಂಧ ಮತ್ತು ಮುರಿದುಕಟ್ಟುವ ಪ್ರಕ್ರಿಯೆಯಿಂದ ಭಾಮಿನಿ ಷಟ್ಪದಿ ಇನ್ನುಳಿದ ಷಟ್ಪದಿಗಳಿಗಿಂತ ಭಿನ್ನವಾಗಿ ನಿಲ್ಲುತ್ತದೆ. ಎಂ.ಎಂ. ಕಲಬುರ್ಗಿಯವರು ೧೫೫೦ರಲ್ಲಿ ಒಂದು ಕನ್ನಡ ಶಾಸನದಲ್ಲಿ ಮಾತ್ರಾಗಣಬದ್ಧವಾದ ಭಾಮಿನೀ ಷಟ್ಪದಿಯೊಂದಿರುವುದನ್ನು ತೋರಿಸಿಕೊಟ್ಟರು. ಅದೇ ಈಗಿನ ಮಟ್ಟಿಗೆ ಶಾಸನ ಪ್ರಪಂಚದಲ್ಲಿ ತೋರಿಬಂದ ಮಾತ್ರಾಗಣ ಘಟಿತ ಪ್ರಥಮ ಭಾಮಿನಿ ಷಟ್ಪದಿಯೆಂದು ತಿಳಿಯಬಹುದು.

ಹೊಸಗನ್ನಡ ಕವಿತೆಗಳಿಗೂ ಭಾಮಿನಿ ಷಟ್ಪದಿಯ ಲಯಗಳೇ ಮುಖ್ಯ ಪ್ರೇರಕ ಶಕ್ತಿಗಳಾಗಿವೆಯೆಂಬುದನ್ನು ನೋಡಿದರೆ ಕಾಲಕ್ರಮೇಣ ಭಾಮಿನಿಯ ಜನಪ್ರಿಯತೆ ಹೆಚ್ಚಾಗುತ್ತಲೇ ಹೋಗಿದೆ. ಅದರ ಪ್ರಭಾವ ಕಡಿಮೆಯಾದುದು ಕಂಡು ಬರುವುದಿಲ್ಲ. ಆಧುನಿಕ ಪುರಾಣಕಾರರಂತೂ ಭಾಮಿನಿ ಷಟ್ಪದಿಯನ್ನೇ ಹೆಚ್ಚು ಹೆಚ್ಚಾಗಿ ಬಳಸಿಕೊಂಡಿದ್ದಾರೆ.

**೪.೬.೩ ಕ.ಬ.ಅಂಗಡಿಯವರ ಪುರಾಣ ಕೃತಿಗಳು :**

೧) ಮುರಗೋಡ ಮಹಾಂತ ಶಿವಯೋಗಿಶ್ವರ ಚರಿತಾಮೃತಂ

೨) ಕಾಯಕಯೋಗಿ ಶ್ರೀ ರುದ್ರಮುನಿ ಸ್ವಾಮಿ ಚರಿತ್ರೆ

೩) ಮೃಡಗಿರಿ ಅನ್ನಾನೀಶ್ವರ ಲೀಲಾಮೃತಂ

೪) ಉರಗಾದ್ರಿ ಕರಿಸಬವ ಶಿವಯೋಗಿ ಲೀಲೆ



ಮುರಗೋಡ
ಮಹಾಂತ ಶಿವಯೋಗೀಶ
ಚರಿತಾಮೃತಂ

೧೯೭೩ ಅಂಗಡಿ ಕರವೀರಪ್ಪ

ಮುರಗೋಡ ಮಹಾಂತ ಶಿವಯೋಗೀಶ ಚರಿತಾಮೃತಂ

೫) ಕಲಬುರಗಿ ಶ್ರೀ ಶರಣಬಸವೇಶ್ವರ ಚರಿತ್ರೆ

೬) ಅವರಾದಿ ಫಲಹಾರೇಶ್ವರ ಚರಿತ್ರೆ

೭) ಜೇವರಗಿ ಷಣ್ಮುಖ ಶಿವಯೋಗಿಗಳ ಅಪೂರ್ಣವಾದ ಪುರಾಣ ಸಮಾಪ್ತಿ

೮) ಹೊಸಳ್ಳಿ ಬೂದಿಮಹಾಂತ ಚರಿತೆ

೯) ಮೆಣಸಗಿಯ ಲಿಂಗಬಸವೇಶ್ವರ ಲೀಲಾಮೃತಂ

### ೪.೬.೩.೧ ಮುರಗೋಡ ಮಹಾಂತ ಶಿವಯೋಗೀಶ ಚರಿತಾಮೃತಂ :

'ಮುರಗೋಡ ಮಹಾಂತ ಶಿವಯೋಗಿ ಚರಿತಾಮೃತಂ' ಇದು ಭಾಮಿನಿ ಷಟ್ಪದಿಯಲ್ಲಿ ರಚಿಸಲ್ಪಟ್ಟ ಪುರಾಣ ಗ್ರಂಥ. ಇದರಲ್ಲಿ ೩೧ ಸಂಧಿಗಳಿವೆ. ೮೭೧ ಪದ್ಯಗಳಿವೆ. ೧೯೭೩ರಲ್ಲಿ ರಚಿತವಾದ ಈ ಕೃತಿ ಯೋಗಿ ಪುಂಗವರಲ್ಲಿ ಶೇಷ್ಠರೂ, ಶತಮಾನದ ದಿವ್ಯ ಜ್ಯೋತಿಯೂ, ಮಹಾನ್ ತಪಸ್ವಿಗಳಾದ ಮುರಗೋಡದ ಮಹಾಂತ ಶಿವಯೋಗಿಗಳ ಜೀವನ–ಸಾಧನೆಗಳನ್ನು ಒಳಗೊಂಡಿದೆ. ಈ ಕೃತಿಯು ಮುರುಘಾಮಠ, ಧಾರವಾಡದಿಂದ ಪ್ರಕಾಶಿಸಲ್ಪಟಿದೆ.

'ಆರ್ಯಾವರ್ತಃ ಪುಣ್ಯಭೂಮಿ' ಎಂಬಂತೆ ಪುಣ್ಯಭೂಮಿಯಾದ ಈ ಭಾರತ ದೇಶದಲ್ಲಿ ಶಿವಯೋಗಿಗಳು, ಶರಣರು, ಸಂತರು, ದಾಸರು ಮೊದಲಾದವರು ಮೇಲಿಂದ ಮೇಲೆ ಅವತರಿಸಿ ತಮ್ಮ ದಿವ್ಯವಾದ ಆಧ್ಯಾತ್ಮಿಕ ಶಕ್ತಿಯಿಂದ ಮಾನವರನ್ನು ಉದ್ಧಾರ ಮಾಡಿ ಧರ್ಮವನ್ನು ಬೆಳಗಿಸುತ್ತ ಬಂದಿರುವರು. ಅದರಲ್ಲಿಯೂ ಪ್ರಸಿದ್ಧವಾದ ಈ ಕರ್ನಾಟಕವು ಶಿವಯೋಗಿಗಳ, ಸಂತರ, ದಾರ್ಶನಿಕರ ಪವಿತ್ರವಾದ ಪಾದ ಧೂಳಿಯಿಂದ ಪಾವನವಾಗುತ್ತ ಬಂದಿದೆ. ಬಿದರಿ, ಹಾನಗಲ್ಲ, ಹಾವೇರಿ, ಅಥಣಿ, ಹಾಲ್ಕೇರಿ, ಮುಳಗುಂದ, ಧಾರವಾಡ, ಅನಂತಪುರ, ಹಾರನಹಳ್ಳಿ, ಇಳಕಲ್ಲ, ಲಿಂಗನಾಯಕನಹಳ್ಳಿ ಮೊದಲಾದ ಶಿವಯೋಗಿ ಪುಂಗವರ ರತ್ನ ಮಾಲಿಕೆಯಲ್ಲಿ 'ಮುರಗೋಡದ' ಪೂಜ್ಯ ಮಹಾಂತ ಶಿವಯೋಗಿಗಳು ಸೇರುತ್ತಾರೆ. ಇಪ್ಪತ್ತನೆಯ ಶತಕದ ಕಡೆಯ ಭಾಗದಲ್ಲಿ ಕನ್ನಡ ನಾಡಿನೊಳಗೆ ಶಿವಯೋಗ ಪ್ರಭೆಯೇ ಪ್ರಜ್ವಲಿಸಿ ಬಂದಂತೆ ಉದಯವಾದರು ಮಹಾಂತಜ್ಜನವರು. ಶಕೆ ೧೭೭೧ ಶುಕ್ಲ ಸಂವತ್ಸರ ಜೇಷ್ಠ ವದ್ಯ ಸಪ್ತಮಿ ಉತ್ತರಾಭಾದ್ರಪದ ಶುಭಯೋಗದಂದು, ಅವರ ಉದಯದ ಶುಭದಿನವು.

ಮಹಾಂತನ ತಾಯಿಯು ಮಹಾಂತನನ್ನು ತನ್ನ ಗರ್ಭದಲ್ಲಿ ಹೊತ್ತಾಗ ಅವಳ ಗುಣ-ಸ್ವರೂಪಗಳನ್ನು ಬಿಚ್ಚಿಡುತ್ತ, ಲೌಕಿಕ ಜೀವನಕ್ಕೆ ಅವಳಿಂದ ಜೀವ ಪಡೆದ ಮಕ್ಕಳಿಗೂ, ದಾರ್ಶನಿಕ ಬದುಕನ್ನು ಸವಿಯ ಬರಲಿರುವ, ಉಣಬಡಿಸಲು ಬರಲಿರುವ ಮಹಾಂತೇಶನ ಜನನ ಸಂದರ್ಭಗಳನ್ನು ಅವು ತೋರುತ್ತಿರುವ ಭಿನ್ನ ಚಿತ್ರಣಗಳನ್ನು ಕೊಡುವ ಕವಿಯ ಕಾವ್ಯ ಪ್ರತಿಭೆಯನ್ನು ಗುರುತಿಸಬಹುದು. ರಾಚಮಾಂಬೆಯು ಮಲಗಿದಾಗ ಕನಸಿನೊಳಯ ಶಿವಯೋಗಿಯಾದ ಮಲವಿದೂರನಾದ ಕೂಸೊಂದು ಲೀಲೆಯಿಂದಾಡುವದನ್ನು ಕಂಡಳು. ಮರುದಿವಸವೆ ಹೆರಿಗೆಯ ವೇದನೆಯಿಲ್ಲದೆ ಶಿಸುವನ್ನು ಹೆತ್ತಳು. ಅವನೇ ಮಹಾಂತೇಶನು! ಇದು ಶಿವಯೊಗಿಗಳು ಅವತರಿಸುವ ಸುಲಕ್ಷಣ ಎಂದು ಸಂಧಿ ೩ರಲ್ಲಿ ವಿವರಿಸಿದ್ದಾರೆ.

ತಮ್ಮ ಹಿಂದಿನ ವೀರಶೈವ ಪುರಾಣಿಕರಂತೆ ಕಾರಣಿಕ ಪುರುಷರ ಅವತಾರದ ಕಲ್ಪನೆಯನ್ನು ಇಲ್ಲಿ ಕವಿ ಬಳಸಿಕೊಂಡಿದ್ದರೂ ಅವರ ಶೈಲಿಯಲ್ಲಿ ವಿನೂತನತೆಯನ್ನು ಕಾಣುತ್ತೇವೆ. ಈ ಸಾಲುಗಳ ಮೂಲಕ ಅವರ ಶೈಲಿಯ ಸುಲಭತೆ ಮತ್ತು ಸುಭಗತೆಯನ್ನು ಮನಗಾಣಬಹುದು.

"ಹಿಂದೆ ಮಗುಗಳ ಹೆತ್ತ ಕಾಲಕೆ
ಅಂದು ತೋರಿದ ಬಯಕೆಗಳು ತಾ
ವಿಂದು ಭಿನ್ನತೆಗೊಂಡು ತೋರುವುದನ್ನು ಗಮನಿಸಲು॥
ಅಂದು ಲೌಕಿಕವಾಗಿ ಬಂದವು
ಇಂದು ತೋರ್ಪವು ಪಾರಮಾರ್ಥಿಕ
ದಂದವನುತಾವ್ಗಳೆದು ಕಾಣ್ಬುದು ಚಿತ್ರಮಾಗಿಹುದು॥ **[ಸಂಧಿ ೩, ಪದ್ಯ ೧೧]**

ತಾಯಿ ರಾಚಮ್ಮನು ಬಸುರಿಯಾದ ಸಂದರ್ಭದಲ್ಲಿ ಅವಳ ಗುಣ-ಲಕ್ಷಣಗಳನ್ನು ವಿವರಿಸುವ ನೆಪದಲ್ಲಿ ವೀರಶೈವ ತತ್ತ್ವಗಳು, ಸಂಸ್ಕೃತಿ ಮತ್ತು ಬದುಕನ್ನು ಸಾದರಪಡಿಸುತ್ತಾರೆ. ಕನ್ನಡ ನಾಡಿನ ಸಾತ್ವಿಕ ಮಹಿಳೆಯ ಸುಮಧುರ ಚಿತ್ರಣವನ್ನು ಇಲ್ಲಿ ಸಹೃದಯರು ಆನಂದಿಸಲು ಸಾಧ್ಯ. ಅದರೊಟ್ಟಿಗೆ ಅನುಕರಣೀಯ ಕೂಡ. ಸುವಿಚಾರವು ಸದಾಚಾರವಾಗಿ ನಿರ್ಮಾಣಗೊಂಡಾಗ ದೊರಕುವ ಮೌಲ್ಯದ ಮಹೋನ್ನತೆಯನ್ನು ಇಲ್ಲಿ ಕವಿ ಕಟ್ಟಿ ಕೊಟ್ಟಿದ್ದಾರೆ.

"ಫಲವು ಮಾವಿನ ಹಣ್ಣಿನಂತೆಯೆ......

.....ಲೀಲೆಯನಾಡುತಿರ್ಪುದನ"॥ [ಸಂಧಿ ೩, ಪದ್ಯ ೨೨]

ಬಾಲಲೀಲಾಸಕ್ತನಾದ ಮಹಾಂತನು ಸಾಲಹಳ್ಳಿಯಲ್ಲಿ ಕಾಲವ ಕಳೆಯುವ ಕಾಲಕ್ಕೆ ತನ್ನ ಕೂಡ ಆಡತಕ್ಕ ಬಾಲಕರಿಗೆ ಬೇವಿನ ತಪ್ಪಲವನ್ನು ತಿನ್ನಲಿಕ್ಕೆ ಕೊಡಲು 'ಬೇವು-ಬೆಲ್ಲ'ವಾಯಿತು. ಇದು ಬಾಲಲೀಲೆಯಲ್ಲಿ ತೋರಿದ ಮಹಿಮೆಯನ್ನು ಸಂಧಿ ೪ರಲ್ಲಿ ಹೇಳಿದ್ದಾರೆ.

"ಬಸವ ಬಸವಾ ಬಸವ ಬಸವಾ

........................ ಬಸವ ಸರ್ವತ್ರ ॥" [ಸಂಧಿ ೫, ಪದ್ಯ ೯]

ಹೀಗೆಂದು ಬಸವನ ನಾಮವನ್ನು ಸದಾ ನೆನೆಯುತ್ತಿದ್ದುದರಿಂದ ಬಸವಣ್ಣನ ಭಕ್ತಿಯು ಮಹಾಂತನಲ್ಲಿ ಅವಿರ್ಭವಿಸಿತು. ಬಸವನೆ ಆಗಿದ್ದನು. ಆ ಬಸವ ಭಕ್ತಿ ಪ್ರಭಾವದಿಂದ ಅವನ ಮುಂದೆ ಬಂದು ನಿಂತಿರುವ ಹುಲಿಯು ಕೂಡ ಭಕ್ತಿಯಿಂದ ನಮ್ರವಾಯಿತು ಎಂದು ಸಂಧಿ ೫ ರಲ್ಲಿ ದುಷ್ಟರು ಶಿಷ್ಟರಾಗುವ ಪರಿಯನ್ನು ವಿವರಿಸುತ್ತಾರೆ.

ಮುರಿದು ಮೂಲೆಗೆ ಬೀಳುತ್ತಿರುವ ಮುರಗೋಡವು ಶಿವಯೋಗಿಯ ಚರಣ ಸ್ಪರ್ಶದಿಂದ ಕಲ್ಯಾಣವಾಯಿತು. [ಸಂಧಿ ೧೦, ೧೧, ೧೨, ೧೩] ಮುಂದೆ ಬಹು ಕಾಲದವರೆಗೆ ಮುರಗೋಡ ಮಠದಲ್ಲಿ ವಾಸ್ತವ ಮಾಡಿದ ಮಹಾಂತೇಶನ ಕಲ್ಯಾಣಕರ ಅನೇಕ ಲೀಲೆಗಳನ್ನು ಮನೋಹರವಾಗಿ ಚಿತ್ರಿಸಿದ್ದಾರೆ.

"ಹತ್ತು ಒಂಬತುನೂರು ಮೇಣೆ

ಪ್ಪತ್ತು ಮೇಲೊಂದಿಸ್ವಿ ಶುಭವಂ

ಪೆತ್ತ ಫಾಲ್ಗುಣ ಶುಕ್ಲ ಏಕಾದಶಿಯ ದಿನದಂದು ॥

ಹೊತ್ತು ಮುಳುಗಿರಲೆಂಟು ಗಂಟೆಗೆ

ಮತ್ತೆ ಮೇಲ್ಪದುನೈದು ನಿಮಿಷಕೆ

ಮುತ್ತಿನಂತಹ ಗುರು ಮಹಾಂತರು ಲಿಂಗದೊಳಗಾಗೆ॥"[ಸಂಧಿ ೩೧,ನುಡಿ ೪೭]

ಎಂಬ ಪದ್ಯದಿಂದ ೧೯೭೧ ಇಸ್ವೀ ಫಾಲ್ಗುಣ ಶುದ್ಧ ಏಕಾದಶಿಯ ದಿವಸ ರಾತ್ರಿ ಎಂಟು ಗಂಟೆ ಹದಿನೈದು ನಿಮಿಷದಲ್ಲಿ ಗುರು ಮಹಾಂತೇಶನ ಆತ್ಮ ಜ್ಯೋತಿಯು ಲಿಂಗದಲ್ಲಿ ಲೀನವಾಗಿ ಲಿಂಗೈಕ್ಯರಾದರು ಎಂದು ಹೇಳುತ್ತ ಸಂಧಿ ೩೧ರಲ್ಲಿ ಲಿಂಗೈಕ್ಯ ಸಮಯದ ದೃಶ್ಯವನ್ನು ಮನೋಜ್ಞವಾಗಿ ಚಿತ್ರಿಸಿದ್ದಾರೆ.

"ವಿಶ್ವಾಸದಿಂದ ಭಕ್ತನಾಗಿ, ಆ ವಿಶ್ವಾಸದೊಳಗಣ ನಿಷ್ಠೆಯಿಂ ಮಹೇಶ್ವರನಾಗಿ,

..........................................................................ಐಕ್ಯಸ್ಥಲಕಾಣಾ ಗುಹೇಶ್ವರಾ"

ಹೀಗೆ ಭಕ್ತಸ್ಥಲದಿಂದ ಸಾಧನೆಯ ಮೂಲಕ ಐಕ್ಯಸ್ಥಲವನ್ನು ಸಾಧಿಸಿದ ಮುರಗೋಡ ಮಹಾಂತ ಶಿವಯೋಗಿಗಳ ನಿಲವನ್ನು ಅಲ್ಲಮಪ್ರಭುಗಳೊಪಾದಿಯಲ್ಲಿ ಕಂಡ ಅನುಭವವನ್ನು ಶರಣಕವಿ ಕ.ಬ.ಅಂಗಡಿಯವರು ಈ ಚರಿತಾಮೃತದ ಕಡೆಯ ೩೧ನೆಯ ಸಂಧಿಯಲ್ಲಿ ಸುಂದರವಾಗಿ ವರ್ಣಿಸಿದ್ದಾರೆ.

ಇಲ್ಲಿ ಕ.ಬ.ಅಂಗಡಿಯವರ ಭಾಷೆಯ ಬೆಡಗು, ಅನುಭಾವ ಜೀವಿಯ ಅನನ್ಯ ಬೆಡಗು ಎರಡೂ ಸಮರಸಗೊಂಡು ಅವರದು ಪ್ರಾಸಾದಿಕ ಶೈಲಿ ಎಂಬುದನ್ನು ಪ್ರತಿಪಾದಿಸುತ್ತದೆ.

### ೪.೬.೩.೨ ಮೃಡಗಿರಿ ಶ್ರೀ ಅನ್ನದಾನೀಶ್ವರ ಲೀಲಾಮೃತ :

'ಮೃಡಗಿರಿ ಶ್ರೀ ಅನ್ನದಾನೀಶ್ವರ ಲೀಲಾಮೃತ' ಇದು ಭಾಮಿನಿ ಷಟ್ಪದಿಯಲ್ಲಿ ರಚಿಸಲ್ಪಟ್ಟ ಪುರಾಣ ಗ್ರಂಥ. ಇದರಲ್ಲಿ ೨೫ ಸಂಧಿಗಳಿವೆ. ೧೨೭೫ ಪದ್ಯಗಳಿವೆ. ಈ ೨೫ ಸಂಧಿಗಳು ಶಿವನ ಪಂಚವಿಶಂತಿ ಲೀಲೆಗಳನ್ನು ಪ್ರತಿನಿಧಿಸುತ್ತವೆ. ೧೯೭೮ರಲ್ಲಿ ರಚಿತವಾದ ಈ ಕೃತಿ ಅರಿಷಡ್ವರ್ಗಗಳಾದ ಕಾಮ ಕ್ರೋಧಾದಿಗಳನ್ನು ದೂರಿಕರಿಸಿ, ಭಕ್ತ ಜನ ಕೋಟಿಯನ್ನು ಉದ್ಧರಿಸಿದ ಮೃಡಗಿರಿಯ ಒಂಬತ್ತನೆಯ ಪೀಠಾಧಿಪತಿಗಳಾದ ಅನ್ನದಾನೀಶ್ವರ ಮಹಾಸ್ವಾಮಿಗಳ ಕುರಿತು ರಚಿಸಲಾಗಿದೆ.

ಮೊದಲಿಗೆ ಒಂಭತ್ತನೆಯ ಪೀಠಾಧಿಪತಿಗಳ ಮತ್ತು ತಮ್ಮ ನಡುವಿನ ಸಂಬಂಧವನ್ನು ನೆನದು ಅವರ ಚರಿತೆಯನ್ನು ಬರೆಯುವ ಅವಕಾಶವನ್ನು ಸ್ವತಃ ಅವರೇ ನೀಡಿದ್ದಾರೆ ಎಂದು ಭಕ್ತಿಯಿಂದ ಹೇಳಿಕೊಂಡಿದ್ದಾರೆ.

"ಎನ್ನೊಳು ನಿರಂಜನ ಜಗದ್ಗುರು



ಮೃಡಗಿರಿ

# ಶ್ರೀ ಜಗದ್ಗುರು ಅನ್ನದಾನೀಶ್ವರ ಲೀಲಾಮೃತ

ಪ್ರಕಾಶಕರು :

ಶರಣಕವಿ ಕರವೀರಪ್ಪ ಬಸಪ್ಪ ಅಂಗಡಿ. ಗದಗ

---

ಶ್ರೀ ಜಗದ್ಗುರು ಅನ್ನದಾನೀಶ್ವರ ಸಂಸ್ಥಾನಮಠ, ಮುಂಡರಗಿ

---

೧೯೭೮

ಶ್ರೀ ಜಗದ್ಗುರು ಅನ್ನದಾನೀಶ್ವರ ಲೀಲಾಮೃತಂ ಪುರಾಣ ಕಾವ್ಯ

ಅನ್ನದಾನಿಯು ಕುಳಿತು ಕರುಣಿಸಿ

ತನ್ನ ಚರಿತವ ತಾನೆ ತಿಳುಹಿಸಿ ಬರೆಯ ಹಚ್ಚಿಹನು

ನನ್ನಿಯಿಂ ನಾನದನ ಗ್ರಹಿಸುತ

ಲನ್ನದಾನಿಯ ದಿವ್ಯ ಚರಿತೆಯ

ರನ್ನ ಮಾಲೆಯ ಹೆಣೆದು ಸಲಿಸಿಹೆನಿದನು ಗುರುಪದಕೆ" [ಹೃದ್ಗತದಿಂದ]

ಇದು ಸಾಂಪ್ರದಾಯ ಸೂಚಕ ನುಡಿಯಲ್ಲ ಮೂಲ ಕರ್ತೃ ಅನ್ನದಾನಿಯು ಚರಿತ್ರ ನಾಯಕನಿಂದ ನುಡಿಸಿದ ಅವನ ಪ್ರಾಸಾದಿಕ ಭವಿಷ್ಯವಾಣಿಯೆಂದು ಹೇಳಬಯಸುವೆ ಎನ್ನುತ್ತ "ಕವಿ ಶ್ರೀ ವೀರನಾರಾಯಣ, ಲಿಪಿಕಾರ ಕುವರವ್ಯಾಸ' ಎಂಬಂತೆ ತಾವು ಕವಿಗಳಲ್ಲ ಈ ಚರಿತ್ರೆಯ ನಾಯಕರೂ ಒಂಬತ್ತನೆಯ ಪೀಠಾಧಿಪತಿಗಳಾದ ಅನ್ನದಾನೀಶ್ವರರೇ ನನ್ನ ಹೃದಯದಲ್ಲಿ ನೆಲೆ ನಿಂತು ನಿವೇದಿಸಿದ ನುಡಿಗಳನ್ನೇ ಇಲ್ಲಿ ಭಕ್ತ ಸಮೂಹಕ್ಕೆ ಪ್ರಸಾದ ರೂಪದಲ್ಲಿ ಉಣಬಡಿಸಿದ್ದೇನೆ" ಎಂದು ತಮ್ಮ ವಿನಮ್ರತೆಯನ್ನು, ಕವಿಗಿರಬೇಕಾದ ಸಹೃದಯತೆಯನ್ನು ಮೆರೆದಿದ್ದಾರೆ.

ಇಸವಿ ಹತ್ತೊಂಬತ್ತನೂರಾ ಐವತ್ತೆರಡರಂದು ಮೃಡಗಿರಿ ವಿಭಾಗದಲ್ಲಿ ಉಪಶಿಕ್ಷಣಾಧಿಕಾರಿಯಾಗಿದ್ದಾಗ, ಸೇವಾ ನಿವೃತ್ತಿಯಾಗುವ ಸಮಯ. ಆಗಿನ ಆ ಭಾಗದ ಶಿಕ್ಷಕ ಶಿಕ್ಷಕಿಯರು ಸತ್ಕರಿಸಿ ಸನ್ಮಾನಿಸಬೇಕೆಂದು, ಈ ಚರಿತ್ರನಾಯಕರ ಸನ್ನಿಧಿಯಲ್ಲಿದ್ದ ಚರಿತ್ರಕರ್ತರನ್ನು ಕಂಡು, ತಮ್ಮ ನಿಲವನ್ನು ಮುಂದಿಟ್ಟರು. ಆಗ ಜಗದ್ಗುರುಗಳು "ಇವರದು ಬಂಗಾರ ಲೇಖನಿ; ಬರಹವೂ ಅಂಥಾದ್ದೆ ! ಸತ್ಕರಿಸುವದೊಳ್ಳೇದು; ಮಾತ್ರ ಬಂಗಾರದ ಲೆಕ್ಕಣಿಕೆ ಕೊಟ್ಟು ಸತ್ಕರಿಸಿ; ಸಾಹೇಬರೇ, ನೀವೂ ಒಪ್ಪಿರಿ"[೧೦೬] ಎಂದು ಆಶೀರ್ವದಿಸಿದರು.

ಜಂಗಮ ಅನ್ನದಾನಿಯನ್ನು ಅಭಿವ್ಯಕ್ತಿಸುತ್ತ, ಅವನ ಸಂಚಾರದ ಹಿಂದೆ ಇರುವ ಸಮಾಜ ಬೆಳವಣಿಗೆಯ ಧೋರಣೆಯನ್ನು ಈ ಸಾಲುಗಳು ಕಟ್ಟಿಕೊಡುತ್ತವೆ.

"ಹಳ್ಳಿ ಹಳ್ಳಿಗೆ ಚರಿಸಿ ಧರ್ಮದ

ಬಳ್ಳಿಯನು ಹಬ್ಬಿಸುತ ಮುತ್ತಿದ

ಹಳ್ಳಿಗಾಡತನವನು ದೂಡುತ ನಿಲ್ಲುತಲ್ಲಲ್ಲಿ॥



ಮೃಡಗಿರಿ ಅನ್ನದಾನೀಶ್ವರ ಲೀಲಾಮೃತ ಪುರಾಣ ರಚಿಸಿದ ಕ.ಬ.ಅಮಗಡಿಯವರಿಗೆ ಅನ್ನದಾನೀಶ್ವರ ಮಹಾಸ್ವಾಮಿಗಳಿಂದ ಸನ್ಮಾನ

ಬೆಳ್ಳಿ ಬೆಟ್ಟದ ಲಿಂಗತತ್ವದ

ತಳ್ಳಿ ಹಾಕುವ ಚಾರುವಾಕರ

ಬಳ್ಳಿಯನು ಕಿತ್ತೊಗೆಯೆ ಬಲ್ಲಿದನನ್ನದಾನೀಶ"॥ [ಸಂಧಿ ೭, ಪದ್ಯ ೪೫]

ಕವಿಯ ನಿಜವಾದ ಪಾಂಡಿತ್ಯ-ಪ್ರತಿಭೆಗಳು ಪುರಾಣಾದಿ ಕಾವ್ಯಗಳಿಂದ ವ್ಯಕ್ತವಾಗುತ್ತವೆ. ಇಲ್ಲಿ ಕವಿಯ ಶೈಲಿ ಸರಳವೂ, ಸುಭಗವೂ ಆಗಿದೆ. ವೀರಶೈವ ತತ್ವ ಬೋಧನೆಯನ್ನು ಮನೋಹರವಾಗಿ ರಚಿಸುತ್ತ ಹೋಗಿದ್ದಾರೆ. ಪದ್ಯಗಳ ರಚನೆ, ಅಲಂಕಾರ, ಧ್ವನಿ ಅಡಿಪ್ರಾಸ್ ಮೊದಲಾದವುಗಳಿಂದ ಈ ಪುರಾಣವು ಕಮನೀಯವಾಗಿದೆ. ಪ್ರಾರ್ಥನಾ ಸಂಧಿಯಲ್ಲಿ ವೀರಶೈವ ಮಹಾಪುರುಷರ ಇತಿಹಾಸವೇ ವ್ಯಕ್ತವಾಗಿದೆ.

ವೀರಶೈವ ಸಂಸ್ಕೃತಿಯಂತೆ ಈ ಚರಿತ್ರ ನಾಯಕನ ಮಾತಾಪಿತರು ಮೃಡಗಿರಿ ಜಗದ್ಗುರು ಅನ್ನದಾನೀಶ್ವರ ಮಹಾಶಿವಯೋಗಿಯ ದರ್ಶನಾಶೀರ್ವಾದ ಪಡೆದು ನಾಗಭೂಷಣನಿಗೆ ಜನ್ಮವಿತ್ತಿರುವದು ಮಹಾಸ್ವಾಮಿಗಳ ಉಜ್ವಲ ಭವಿಷ್ಯತ್ತಿಗೆ ನಾಂದಿಯಾಗಿದೆ. ನಿರಂಜನ ಜಂಗಮನು ಸ್ವಯ-ಚರ-ಪರವೆಂದು ಮೂದೆರನಾದ ಆ ಲಕ್ಷಣಗಳನ್ನು ಪ್ರಮಾಣಬದ್ಧವಾಗಿ ತಿಳಿಸಿಕೊಟ್ಟಿರುವರು. ಶೂನ್ಯ ಸಿಂಹಾಸನಾರೋಹಣದ ವಿಷಯದಲ್ಲಿ ಷಟ್ಸ್ಥಲಗಳನ್ನು ಸಂಬಂಧ ಮಾಡಿ ಐಕ್ಯ ಸ್ಥಿತಿಯು ಜಂಗಮಕ್ಕೆ ಘಟಿಸಿದಾಗ ಶೂನ್ಯಸಿಂಹಾಸನಾಧಿಕಾರಿಯಾಗುವನು. ಅಲ್ಲದೆ ಶೂನ್ಯ ಸಂಪಾದನೆಯನ್ನು ಸಾಧಿಸಿದಂತಾಗುವದೆಂದು ತತ್ವಬದ್ಧವಾಗಿ ಪ್ರತಿಪಾದಿಸಿರುವರು. ಎಂಟನೆಯ ಸಂಧಿಯಲ್ಲಿ ಅಷ್ಟಾವರಣಗಳ ಲಕ್ಷಣಗಳನ್ನು ವಿವರಿಸುತ್ತ ಫಲರೂಪವಾದ ಪಾದೋದಕದ ಮಹತ್ವವು ಬಿತ್ತರಿಸಲ್ಪಟ್ಟಿವೆ. ಪೂಜ್ಯರ ವಾಣಿಯಲ್ಲಿ ಅದ್ಭುತ ಶಕ್ತಿಯಿತ್ತು. ಅದು ಪ್ರಸಾದ ವಾಣಿಯಾಗಿತ್ತು.

"ಬಲ್ಲರವರ್ಯೆ ಧರ್ಮಶಾಸ್ತ್ರವ...

....ಬಹುಬಲ್ಲಿದರು ನಿಜದು"

ಎನ್ನುವಲ್ಲಿ ಅವರು ಆಚಾರದಲ್ಲಿ ವೀರರೂ ಕಾಯಕದಲ್ಲಿ ಧೀರರೂ ಭಕ್ತೋದ್ಧಾರ ಪಥದೊಳು ಶೂರರೂ, ಘನವೈರಾಗ್ಯ ತತ್ವಗಳಿಗೆ ದರ್ಶಕರೂ, ಶುಭಕಾರಿಗಳೂ, ಸಂಯಮಶೀಲರೂ, ಸ್ವಯ-ಚರ-ಪರ ಜಂಗಮರೂಪರೂ, ಭವಭಯಹಾರಿಗಳೂ ಆಗಿದ್ದರೆಂದು ವರ್ಣಿಸುವ ಈ ಮಾತುಗಳು ಪೂಜ್ಯರ ದಿವ್ಯತೆಯನ್ನು ಸಾಧಕರಿಗೆ ತೋರಿಸುತ್ತವೆ.

ಇಪ್ಪತ್ನಾಲ್ಕನೆಯ ಸಂಧಿಯಲ್ಲಿ ಶ್ರೀಗಳವರ ಮುಖಾಂತರ ಹಿಂದಿನ ಇತಿಹಾಸವನ್ನು ಹೇಳಿ ಮಠದ ಪರಂಪರೆಯ ಪರಿಚಯ ಮಾಡಿಸಿರುವದು ಸಮಂಜಸವಾಗಿದೆ. 'ಹೇಳಿ ಕೇಳಿ ವಸ್ತು ಬೀಡಬೇಕಲೇ ತಮ್ಮಾ' ಎಂದು ಶ್ರೀಗಳವರು ತಾವೇ ನುಡಿಯುತ್ತಿದ್ದರು. ನುಡಿದಂತೆ ತಮ್ಮ ಲಿಂಗೈಕ್ಯದ ಸ್ಥಿತಿಯನ್ನು ತಿಳಿಸಿ ಲಿಂಗದೊಳಗಾಗಿ ನಡೆದು ತೋರಿಸಿದ್ದಾರೆ. ಅವರ ಸತ್ಯಸಂಕಲ್ಪವು ಅವರ ಶಿವಯೋಗ ಪ್ರಭೆಯಿಂದಲೇ. ಈ ಲೀಲಾಮೃತದ ಸಮಾಪ್ತಿ ಸಮಯಕ್ಕೆ

" ಸತ್ಯತತ್ವವ ತಿಳಿಸಿ ಜನರಿಗೆ

ನಿತ್ಯ ವಸ್ತುವಿನರಿವ ನೀಡುವ

ತತ್ವಪೂರ್ಣನ ಅನ್ನದಾನಿಯ ದಿವ್ಯ ಚರಿತವಿದು"

ಎಂದು ಚರಿತ್ರನಾಯಕನ ದಿವ್ಯ ಚರಿತ್ರೆಯ ಮಹತ್ವವನ್ನು ಸಾರುತ್ತಾರೆ.

ಈ ಪುರಾಣ ಪ್ರವಚನವು ಪ್ರಥಮತಃ ಕೊಪ್ಪಳ ಸದ್ಭಕ್ತರ ಸದಿಚ್ಛೆಯಂತೆ ೧೯೭೪ರಲ್ಲಿ ಶ್ರಾವಣ ಮಾಸದಲ್ಲಿ ಚೆನ್ನಬಸವ ಮಹಾಸ್ವಾಮಿಗಳು ಹಿರೇಮಲ್ಲನಕೇರಿಮಠ ಹೂವಿನ ಹಡಗಲಿ ಹಾಗೂ ಮಂಠಾಳ ಚೌಕೀಮಠ ಜಿಲ್ಲಾ ಬೀದರ ಅವರ ಉಪಸ್ಥಿತಿಯಲ್ಲಿ 'ನ ಭೂತೋ ನ ಭವಿಶ್ಯತಿ' ಎಂಬಂತೆ ನಡೆಯಿತು. ಹಾಗೆಯೇ ೧೯೭೭ರಲ್ಲಿ ಶ್ರಾವಣ ಮಾಸದ ನಿಮಿತ್ತವಾಗಿ ಕೊಪ್ಪಳದ ಮಹೇಶ್ವರ ಗುಡಿಯಲ್ಲಿ ಈ ಕೃತಿಯ ಪ್ರವಚನವೂ ಅವರಿಂದಲೇ ನಡೆದುದು ವಿಶೇಷವಾಗಿದೆ.

ಅಷ್ಟು ಸರಳ, ಸುಂದರ, ಪ್ರಾಸಬದ್ಧವಾದ ರಚನೆಯು ಈ ಲೀಲಾಮೃತದ ಪದ್ಯಗಳಲ್ಲಿ ತುಂಬಿದೆ. ಅತಿಶಯೋಕ್ತಿಗೆ ಆಸ್ಪದವಿಲ್ಲದಂತೆ ಚರಿತ್ರನಾಯಕರ ಲೀಲೆಗಳನ್ನು ಇದ್ದಕ್ಕಿದ್ದ ಹಾಗೆ ರಚಿಸಿದ್ದು ಶರಣ ಕವಿಗಳ ವೈಶಿಷ್ಟ್ಯವಾಗಿದೆ.

### ೪.೬.೩.೩ ಶ್ರೀ ರುದ್ರಮುನಿ ಶಿವಯೋಗೀಶ ಚರಿತಾಮೃತಂ :

'ಶ್ರೀ ರುದ್ರಮುನಿ ಶಿವಯೋಗೀಶ ಚರಿತಾಮೃತಂ' ಇದು ಭಾಮಿನಿ ಷಟ್ಪದಿಯಲ್ಲಿ ರಚಿಸಲ್ಪಟ್ಟ ಪುರಾಣ ಗ್ರಂಥ. ಇದರಲ್ಲಿ ೧೯ ಸಂಧಿಗಳಿವೆ. ೪೨೬ ಪದ್ಯಗಳಿವೆ. ೧೯೭೩ರಲ್ಲಿ ರಚಿತವಾದ ಈ ಕೃತಿ ನೂರೊಂದು ವರ್ಷ ಬಾಳಿ ಬದುಕಿದವರೂ, ಪರಮ ಪೂಜ್ಯರೂ ಶ್ರೀ



ಕಾಯಕಯೋಗಿ ಶ್ರೀ ರುದ್ರಮುನಿ ಶಿವಯೋಗೀಶ ಚರಿತಾಮೃತಂ

ಪುರಾಣ ಕಾವ್ಯ

ಗುರುವರ್ಯ ಕಾಯಕಯೋಗಿ ರುದ್ರಮುನಿ ಮಹಾಸ್ವಾಮಿಗಳು, ಕಪನಳ್ಳಿ ಶಿವಯೋಗಮಂದಿರ ತಾ. ಶಿಕಾರಿಪುರ, ಜಿ. ಶಿವಮೊಗ್ಗ ಇವರ ಜೀವನ-ಸಾಧನೆಗಳನ್ನು ಒಳಗೊಂಡಿದೆ. ಈ ಕೃತಿಯು ಶ್ರೀ ರುದ್ರಮುನಿ ಸ್ವಾಮಿಗಳ ಸಲಹಾಮಂಡಳಿಯಿಂದ ಪ್ರಕಾಶಿಸಲ್ಪಟಿದೆ.

ದೇವರ ಸೃಷ್ಟಿಯಲ್ಲಿ ಮಾನವಸೃಷ್ಟಿಯೇ ಶ್ರೇಷ್ಠ. ಆದಕಾರಣ ಮಾನವರಾಗುವದನ್ನು ಸಾಧಿಸಿರಿಯೆಂದು ಮಹಿಮರು ನುಡಿದಿದ್ದಾರೆ. ಇದನ್ನು ರುದ್ರಮುನಿಸ್ವಾಮಿಗಳ ಚರಿತ್ರೆ ಸಾದರಪಡಿಸುತ್ತದೆ. ಮಾನವ ತನ್ನತನವನ್ನು ಕಂಡು ಕೊಳ್ಳಲು ಕಾಯಕಧೀರನಾಗಬೇಕು. ಎನ್ನುವುದೇ ಈ ಚರಿತ್ರೆಯ ಸಂದೇಶ. ಈ ಪುರಾಣ ಕರ್ತೃಗಳಾದ ರುದ್ರಮುನಿ ಸ್ವಾಮಿಗಳವರು ಪರಮ ತಪಸ್ವಿಗಳು, ಪಾವನ ಓಜಸ್ವಿಗಳು, ಪತಿತರನ್ನು ಪಾವನ ಗೈಯ್ಯುವವರು, ಸಾತ್ವಿಕರು, ಸರಳ ಜೀವಿಗಳು, ಪೂಜಾನಿರತರು ಆಗಿರುವರಲ್ಲದೆ ಕಾಯಕಯೋಗಿಗಳೂ ಆಗಿದ್ದಾರೆ.

ಹಾನಗಲ್ಲ ಶ್ರೀಗಳು ಕಪನಳ್ಳಿ ಕಾಳೇನಹಳ್ಳಿ ಶಿವಯೋಗಾಶ್ರಮ ನಿರ್ಮಿಸಿದರು. ಅದರ ಪುರೋವೃದ್ಧಿಗೆ ಒಬ್ಬ ಸಮರ್ಥ ಸ್ವಾಮಿಗಳು ಬೇಕೆಂದು ಆಲೋಚನೆ ಉಂಟಾಯಿತು. ಶಿವಯೋಗ ಮಂದಿರದಲ್ಲಿರುವ ರುದ್ರಮುನಿದೇವರೆ ಆಶ್ರಮದ ಯೋಗ್ಯ ಮೂರ್ತಿಗಳಾಗುವರೆಂದು ಅಂತರಿಕ ದೃಷ್ಟಿಯಿಂದ ನಿಶ್ಚಯಿಸಿ, ಆ ಶಿವಯೋಗಾಶ್ರಮಕ್ಕೆ ಅಧಿಪತಿಗಳನ್ನಾಗಿ ಮಾಡಿದರು. ಅದರಂತೆ ರುದ್ರಮುನಿ ಸ್ವಾಮಿಗಳಿಗೆ "ನೀವು ನಿತ್ಯ ಸುಖೀಗಳಾಗುತ್ತೀರಲ್ಲದೆ ಸಮಾಜೋದ್ಧಾರ ಕೂಡ ಆಗುವದು ಮತ್ತು ಆಶ್ರಮದಲ್ಲಿ ಗೋವುಗಳನ್ನು ಸಂಗ್ರಹಿಸಿ, ಗೋ ಸೇವೆಯನ್ನು ಮಾಡುತ್ತಿರಬೇಕು."[೧೦೭] ಎಂದು ಅವರಿಗೆ ಅಪ್ಪಣೆಯನ್ನಿತ್ತು ಹರಸಿ ಆಶ್ರಮಕ್ಕೆ ಕಳಿಸಿಕೊಟ್ಟರು. ಶ್ರೀಗಳ ಆ ಅಪ್ಪಣೆಯನ್ನು ಶಿರಸಾವಹಸಿ ರುದ್ರಮುನಿ ಸ್ವಾಮಿಗಳು ಶಿವಯೋಗಾಶ್ರಮಕ್ಕೆ ತೆರಳಿದರು. ಅವರ ಆಗಮನದಿಂದ ಮಲೆನಾಡಿನ ಭಕ್ತ ಸಮೂಹದ ಸಂತೋಷಕ್ಕೆ ಎಣೆಯಿಲ್ಲದಾಯಿತು. ಅವರ ಆನಂದ ಸಾಗರ ಉಕ್ಕೇರಿ ಬಂದಿತು. ಮುಂದೆ ರುದ್ರಮುನಿ ಸ್ವಾಮಿಗಳು ಮನೋನಿಗ್ರಹದಿಂದ ತ್ರಿಕಾಲ ಲಿಂಗಪೂಜಾ ಅನುಷ್ಠಾನವನ್ನು ಆಶ್ರಮದಲ್ಲಿ ಸತತ ಮಾಡುತ್ತಿರಲಾಗಿ, ದಿವ್ಯವಾದ ಆಧ್ಯಾತ್ಮಿಕ ಶಕ್ತಿಯ ಸ್ಫುರಣದಿಂದ ಅವರಲ್ಲಿದ್ದ ಜ್ಞಾನ ಪ್ರಕಾಶೋದಯವಾಯಿತು.

ವೀರಶೈವ ಸಮಾಜವು ಧರ್ಮ, ನೀತಿ, ಸಂಸ್ಕೃತಿಗಳನ್ನು ಮರೆತು ಅಶಾಂತಿ ಸಾಗರದಲ್ಲಿ ಬಿದ್ದು ದುಃಖ ದುಮ್ಮಾನ ಪಡುತ್ತಿರುವ ಸಮಯದಲ್ಲಿ ಪ್ರಭು ಬಸವಾದಿ ಪ್ರಮಥರು ಅವತರಿಸಿ ಸಮಾಜೋದ್ಧಾರ ಮಾಡಿದ ವಿಷಯವನ್ನು ಮೊದಲಿನ ಮೂರು

ಹಾನಗಲ್ಲ ಶ್ರೀ ಕುಮಾರ ಶಿವಯೋಗಿಗಳ ಕರ್ತೃಗದ್ದುಗೆಗೆ

**ಶ್ರೀ ರುದ್ರಮುನಿ ಸ್ವಾಮಿಗಳ**

ಚರಿತ್ರ ಗ್ರಂಥವನ್ನು ಅರ್ಪಿಸಿದ ಮಂಗಲ ದೃಶ್ಯ



ಎಡದಿಂದ ಕುಳಿತವರು : ೧. ಶ್ರೀ ಎಚ್. ಮಹಾದೇವಪ್ಪಶೆಟ್ಟರು, ೨. ಪೂಜ್ಯ ಶ್ರೀ ಸದಾಶಿವ ಹಾನಗಲ್ಲ ಸ್ವಾಮಿಗಳು, ೩. ಪೂಜ್ಯ ಶ್ರೀ ರುದ್ರಮುನಿ ಸ್ವಾಮಿಗಳು, ೪. ಗ್ರಂಥಕರ್ತರು.

ನಿಂತವರು : ೧. ಶಿವಯೋಗ ಮಂದಿರ ಶಾಸ್ತ್ರಿ, ೨. ಶ್ರೀ ದೂದಿಹಳ್ಳಿ ಕರಿಬಸವಪ್ಪ, ೩. ಶ್ರೀ ಉಡುಚಾಣದ ಶಂಕರಪ್ಪ, ೪. ಶ್ರೀ ಜಿ. ಎಸ್. ರಾಜೇಂದ್ರ ಪ್ರಸಾದ.

ಕಾಯಕಯೋಗಿ ಶ್ರೀ ರುದ್ರಮುನಿ ಶಿವಯೋಗಿ
ಚರಿತಾಮೃತಂ ಸಮರ್ಪಣೆಯ ಸಮಯದಲ್ಲಿ ರುದ್ರಮುನಿ
ಶಿವಯೋಗಿಗಳೊಂದಿಗೆ ಕ.ಬ.ಅಂಗಡಿಯವರು

ಅಧ್ಯಾಯಗಳಲ್ಲಿ ಶ್ರೀ ಕ.ಬ.ಅಂಗಡಿಯವರು ಹೇಳಿಕೊಂಡಿರುವದು ಸಂದರ್ಭಕ್ಕೆ ಯೊಗ್ಯವಾಗಿದೆ.

ಅವರ ದರುಶನ ಮಾತ್ರದಿಂದಲೆ ಭೂತ ಪ್ರೇತಗಳು ಪರಾಭವವಾಗುತ್ತಲಿವೆ. ಶ್ರೀಗಳ ಅನುಗ್ರಹ ಮಾತ್ರದಿಂದ ಸಹಜವಾಗಿ ಉಂಟಾಗುತ್ತಿರುವ ಮಹಿಮೆಗಳನ್ನೂ, ಅವರಿಂದಾಗುವ ಲೋಕೋದ್ಧಾರ ಕೃತಿಗಳನ್ನೂ ಕವಿಗಳು ಬಹು ವಿಸ್ತಾರವಾಗಿಯೂ, ಮನೋಹರವಾಗಿಯೂ ಚಿತ್ರಿಸಿರುವರಲ್ಲದೆ, ಶ್ರೀಗಳವರ ಚರಿತ್ರೆಯನ್ನು ಮೊದಲನೆಯ ಸಂಪುಟದಲ್ಲಿ ರಸವತ್ತಾಗಿ ಹರಿಯಿಸಿದ್ದಾರೆ. ಎರಡನೆಯ ಸಂಪುಟದಲ್ಲಿ ಪುರಾಣದ ಸರಳಾನುವಾದವನ್ನು ಗದ್ಯರೂಪದಲ್ಲಿ ಬರೆದಿದ್ದಾರೆ.

ಸಮಕಾಲೀನ ಓರ್ವ ಮಹಾಸ್ವಾಮಿಗಳವರ ಚರಿತೆಯು ಜೀವಿತ ಕಾಲದಲ್ಲೇ ರೂಪು ತಾಳಿದ್ದು ಸಮಕಾಲೀನ ಶರಣರ ಬದುಕಿಗೆ ಭರವಸೆಯನ್ನು ಕೊಟ್ಟಂತಾಗಿದೆ. ಇದು ಶ್ರೀ ಕ.ಬ.ಅಂಗಡಿಯವರಲ್ಲಿ ಹುಟ್ಟಿ ಬೆಳೆಯುತ್ತಿದ್ದ ಆಧುನಿಕ ಶರಣರ ಬಗೆಗಿನ ಒಲವನ್ನು, ಅವರು ಸಮಾಜಕ್ಕೆ ನೀಡುತ್ತಿರುವ ಸೇವೆಯನ್ನು ಜನಸಾಮಾನ್ಯರಿಗೆ ತಿಳಿಸಿಕೊಡುವ ಉದ್ದೇಶವನ್ನು, ಆ ಮೂಲಕ ವೀರಶೈವ ತತ್ವಗಳು ಇಂದಿನ ಆಧುನಿಕ ಕಾಲದಲ್ಲೂ ಹೇಗೆ ಜೀವಂತವಾಗಿ ಉಳಿದು ಸಮಾಜದ ಐಕ್ಯತೆಯನ್ನು ಸಾಧಿಸುವಲ್ಲಿ ಕಾರ್ಯಗತವಾಗಿವೆ ಎಂಬುದನ್ನು ತಿಳಿಸಿಕೊಡುವ ಅವರ ಉತ್ಸುಕತೆಯನ್ನು ತೋರ್ಪಡಿಸುತ್ತವೆ.

ನಿರಾಡಂಬರವಾದ ಪಾಂಡಿತ್ಯ, ಅಚ್ಚಗನ್ನಡದ ಸೌಗಂಧ ಸೂಸುವ ಲಲಿತ ಪದ ಬಂಧಗಳಿಂದ ಅವರ 'ಭಾಮಿನಿ'ಯು ಹಳೆಯ ಉಡುಗೆಗೆ ಹೊಸ ತೊಡುಗೆಯಿಟ್ಟಂತಾಗಿದೆ. ಚಾರಿತ್ರಿಕ ಮಾಹಿತಿಗಳನ್ನು ಸಂಗ್ರಹಿಸಿ ಕಲಾತ್ಮಕವಾಗಿ ಅಳವಡಿಸಿಕೊಳ್ಳುವ ಜಾಣ್ಮೆ ಕನ್ನಡ ಸಾಹಿತ್ಯ, ಸಂಸ್ಕೃತಿ, ಇತಿಹಾಸ, ಧರ್ಮ, ಕಲೆಗಳ ಬಹುಶ್ರುತಜ್ಞಾನ ಅದನ್ನು ಬಳಸಿಕೊಳ್ಳುವಲ್ಲಿ ತೋರಿರುವ ಔಚಿತ್ಯದಿಂದಾಗಿ ಈ ಬಗೆಯ ಪುರಾಣ ರಚನೆ ಇಂದಿನ ಅಭಿರುಚಿಗೆ ಒಪ್ಪವಾಗಿದೆ.

ರುದ್ರಮುನಿ ಸ್ವಾಮಿಗಳವರದು ಒಂದು ಕ್ರಿಯಾಶೀಲ ವ್ಯಕ್ತಿತ್ವ, ಕವಿ ಸಾಂಪ್ರದಾಯಿಕ ನಿರೂಪಣೆಯಲ್ಲಿ ತೊಡಗಿದ್ದರೂ ಎಲ್ಲಿಯೂ ಚರಿತ್ರ ನಾಯಕನ ವ್ಯಕ್ತಿತ್ವವನ್ನು ಮರೆತಿಲ್ಲ. ಶ್ರೀಗಳವರ ಲೋಕ ಸಂಗ್ರಹ ಕಾರ್ಯಗಳನ್ನು ವರ್ಣಿಸಿದ್ದರೂ, ಶರಣರ ದಾನ, ಧರ್ಮ, ತ್ಯಾಗ, ಶೀಲಗಳನ್ನು ಹೆಮ್ಮೆಯಿಂದ ಹೊಗಳಿದ್ದರೂ ಅವರ ಪಾತ್ರ ಪರಿಪೋಷಣೆಯಿಂದ ಲೌಕಿಕ ಆಮಿಷಕ್ಕೊಳಗಾಗದೆ ಕೀರ್ತಿ ಪ್ರತಿಷ್ಠೆಗಳನ್ನು ಬಯಸದೆ ಚರಿತ್ರ ನಾಯಕ ಪಾತ್ರದ

ಶ್ರೀಗುರು ಬಸವಲಿಂಗಾಯ ನಮಃ

ಉರಗಾದ್ರಿ ಗವಿಮಠ

ಶ್ರೀಗುರು

# ಕರಿಬಸವಯೋಗಿ ಲೀಲೆ

ಗ್ರಂಥಕರ್ತೃ :

ಕರವೀರಪ್ಪ ಬಸಪ್ಪ ಅಂಗಡಿ, ಗದಗ

ಪ್ರಕಾಶಕರು :

ಅಣ್ಣಿಗೇರಿ ಚಿಂದೋಡಿ ಬಂಧುಗಳು,

ಸಿ. ವ್ಹಿ. ಬಂಗಾರೇಶ ಮತ್ತು ಸಿ. ಎಲ್. ಚಂದ್ರಧರ,

ಹಳೆಪೇಟೆ, ದಾವಣಗೆರೆ.

೧೯೭೨

ಬೆಲೆ : ೬ ರೂ.

ಉರಗಾದ್ರಿ ಗವಿಮಠ ಶ್ರೀಗುರು ಕರಿಬಸವ ಯೋಗಿಲೀಲೆ.

ಘನತೆಯನ್ನು ಹೆಚ್ಚಿಸಿದ್ದಾರೆ. ಇದು ವೀರಶೈವ ಕವಿಗಳ ಉದಾತ್ತ ಜೀವನ ದೃಷ್ಟಿಯನ್ನು, ಕಾವ್ಯದ ಸಾರ್ಥಕತೆಯನ್ನೂ ಪ್ರತಿನಿಧಿಸುತ್ತದೆ.

ಯಾವ ಉತ್ಪ್ರೇಕ್ಷೆಗಳಿಲ್ಲದ, ತೀರ ಸರಳವಾದ ವೃತ್ತಿಗಳನ್ನು ಸತ್ಯ ಶುದ್ಧವಾಗಿ ಆಚರಿಸುತ್ತಲೇ ತೀರ ವಿರಳವಾದ ಆಧ್ಯಾತ್ಮ ಸಾಕ್ಷಾತ್ಕಾರಕ್ಕೆ ಮಾರ್ಗ ಕಲ್ಪಿಸಿಕೊಂಡ ಹಸನಾದ ಬದುಕಿನ ಸಜೀವ ಚಿತ್ರಣಗಳನ್ನು ಇಲ್ಲಿ ಕಾಣಬಹುದಾಗಿದೆ.

### ೪.೬.೩.೪ ಉರಗಾದ್ರಿ ಗವಿಮಠ ಶ್ರೀಗುರು ಕರಿಬಸವಯೋಗಿ ಲೀಲೆ :

'ಉರಗಾದ್ರಿ ಗವಿಮಠ ಶ್ರೀಗುರು ಕರಿಬಸವಯೋಗಿ ಲೀಲೆ' ಇದು ಭಾಮಿನಿ ಷಟ್ಪದಿಯಲ್ಲಿ ರಚಿಸಲ್ಪಟ್ಟ ಪುರಾಣ ಗ್ರಂಥ. ಇದರಲ್ಲಿ ೨೫ ಸಂಧಿಗಳಿವೆ. ೭೭೦ ಪದ್ಯಗಳಿವೆ. ೧೯೭೨ರಲ್ಲಿ ರಚಿತವಾದ ಈ ಕೃತಿಯಲ್ಲಿ ವಿಶೇಷತೆಯಿದೆ. ಈ ಪುರಾಣದಲ್ಲಿ ಶ್ರೀ ಉರಗಾದ್ರಿ ಗವಿಮಠ ಶ್ರೀ ಕರಿಬಸವ ಯತೀಶ್ವರರು ತಮ್ಮ ಲೀಲೆಯಿಂದ ೭೭೦ ಮಠಗಳನ್ನು ಅಲ್ಲಲ್ಲಿ ನಿರ್ಮಿಸಿ, ಭಕ್ತೋದ್ಧಾರ ಗೈದುದನ್ನು ಸ್ಮರಿಸಿದ್ದಾರೆ. ಪುರಾಣದ ಒಳಹೂರಣವನ್ನು ಡಾವನಗೆರೆ ಶರಣೆ ಶಾಂತಮ್ಮನವರ ಪಾತ್ರವನ್ನು ಮುಖ್ಯವನ್ನಾಗಿಟ್ಟುಕೊಂಡು ರಚಿಸಲಾಗಿದೆ. ಶರಣೆ ಶಾಂತಮ್ಮನವರ ಜೀವನ-ಸಾಧನೆಗಳನ್ನು ಒಳಗೊಂಡಿದೆ. ಶರಣೆ ಶಾಂತಮ್ಮನವರ ಮೊಮ್ಮಕ್ಕಳಾದ ಸಿ.ವಿ.ಬಂಗಾರೇಶ ಮತ್ತು ಸಿ.ಎಲ್. ಚಂದ್ರಧರ, ಅಣ್ಣಿಗೇರಿ ಚಿಂದೋಡಿ ಬಂಧುಗಳು, ಹಳೆಪೇಟ, ಡಾವಣಗೆರೆ ಇವರಿಂದ ಪ್ರಕಾಶಿಸಲ್ಪಟಿದೆ. ಈ ಕೃತಿ ರಚನೆಯ ಕಾಲಕ್ಕೆ ಶ್ರೀ ಅಂಗಡಿಯವರು ಪುರಾಣ ಕರ್ತೃಗಳಾಗಿ ಪ್ರಸಿದ್ಧಿಯನ್ನು ಪಡೆದಿದ್ದರು. ಆ ಕಾರಣದಿಂದ ಅವರಿಂದಲೇ ಈ ಪುರಾಣವನ್ನು ರಚಿಸಬೇಕೆಂಬ ಅಬಿಲಾಸೆ ಇದುದ್ದಾಗಿ ತಿಳಿದು ಬರುತ್ತದೆ.

ಸುಮಾರು ನಾಲ್ಕುನೂರು ವರ್ಷಗಳಿಂದ ಉರಗಾದ್ರಿ ಗವಿಮಠದ ಶಿಷ್ಯತ್ವವನ್ನು ಹೊಂದಿ ಗುರುವಿನ ಆಜ್ಞೆಯನ್ನು ತಪ್ಪದೆ ಅನುಸರಿಸುತ್ತ ಬಂದಿರುವ ಗಣ್ಯ ಮನೆತನಗಳಲ್ಲಿ ದಾವಣಗೆರೆಯ ಚಿಂದೋಡಿಯವರ ಮನೆತನವೊಂದು. ಅಂದಿನಿಂದ ಇಂದಿಗೂ ಧರ್ಮಪರಾಯಣರಗಿದ್ದು ಕಾಯಕವೃತ್ತಿಯಿಂದ ಬಾಳನ್ನು ಸಾಗಿಸಿ, ಗುರುಲಿಂಗ ಜಂಗಮರ ಸೇವೆಯಲ್ಲಿ ಸಂತೋಷ ಪಡುತ್ತಿರುವ ಶರಣ ಶ್ರೇಷ್ಠರು ಈ ಮನೆತನದಲ್ಲಿ ಸಿಕ್ಕುತ್ತಾರೆ.

ಹೈದರ ಅಲಿಯ ತಾಯಿಯ ರೋಗವನ್ನು ಕಳೆದು ಜಗತ್ಪ್ರಸಿದ್ಧಿಯನ್ನು ಪಡೆದ ಆಗಿನ ಶ್ರೀ ಉರಗಾದ್ರಿ ಗವಿಮಠ ಕರಿಬಸವ ಮಹಾಯತೀಶ್ವರರ ಕೃಪಾಶೀರ್ವಾದ ಬಲದಿಂದ ಈ

ಮನೆತನದ ಪೀಳಿಗೆಯು ಆ ಯೋಗಿಯ ಕಾರುಣ್ಯ ಶಿಶುವಾಗಿ ಬಾಳಿ ಬದುಕಿ ಭಕ್ತಿಪಥದಲ್ಲಿ ಮುನ್ನುಗ್ಗಿ ಲೌಕಿಕ ಪಾರಮಾರ್ಥಿಕ ಸೊತ್ತನ್ನು ಪಡೆದು ಇಂದಿಗೂ ಹೆಸರುವಾಸಿಯಾಗಿದೆ.

ಭಕ್ತಶ್ರೇಷ್ಠ ಶ್ರೀ ಚಿಂದೋಡಿ ವೀರಣ್ಣನವರು ಗಾನವಿಶಾರದರೂ, ಸಾಹಿತಿಯೂ, ನಾಟ್ಯಕಲಾಚತುರರೂ ಎಂದೆನಿಸಿ, ಮೈಸೂರು ಶ್ರೀ ಕೃಷ್ಣರಾಜ ಒಡೆಯರಿಂದ ಮೆಚ್ಚುಗೆ ಪಡೆದು, ನಾಟ್ಯದೇವಿಯ ಸೇವೆಯನ್ನು ಮಾಡಿ ಲೋಕವಂದ್ಯರಾಗಿದ್ದರು. ಭಕ್ತಿಗಾಮಿನಿಯಾದ ಶರಣ ವೀರಣ್ಣನವರು ಹಿರಿಯರು ಹಾಕಿಕೊಟ್ಟ ಮಾರ್ಗದಲ್ಲಿಯೇ ಮನೆತನದ ಕೀರ್ತಿಯನ್ನು ಹೆಚ್ಚಿಸಿದರು. ಇವರ ಪತ್ನಿಯಾಗಿ ಕೈಹಿಡಿದ ಶಿವಶರಣೆ ಶಾಂತಮ್ಮನವರು ಪತಿಯ ಒಂದಕ್ಕರವನ್ನು ಮೀರದೆ ಗೃಹಿಣಿಯಾಗಿದ್ದು ಶ್ರೀ ಕರಿಬಸವಯೋಗಿ ಲೀಲಾಚರಿತೆಗೆ ಮುಖ್ಯ ಪಾತ್ರಳಾಗಿ ಲೋಕವಂದ್ಯಳಾಗಿದ್ದಳು. ಆಗಿನ ವರದಾನಿ ಗುಡ್ಡಮ್ಮ, ಹೇಮರಡ್ಡಿ ಮಲ್ಲಮ್ಮ ಮೊದಲಾದ ಶಿವಶರಣೆಯರ ಹೆಸರನ್ನು ನೆನಪಿಗೆ ತಂದುಕೊಡುತ್ತ ಭಕ್ತಿರಸದಿಂದ ಬಾಯಾರಿದ್ದ ಜನತೆಯ ತೃಷೆಯನ್ನು ನೀಗುತ್ತಿದ್ದು. ಅಣ್ಣ ಬಸವಣ್ಣನವರ ಪತ್ನಿ ನೀಲಮ್ಮನವರಂತೆ ಲಿಂಗಪೂಜಾನಿಷ್ಠರೂ ಗುರು–ಲಿಂಗ–ಜಂಗಮ ಭಕ್ತಿಪ್ರಿಯರೂ ಆಗಿದ್ದರು.

ಈ ಮಹಾಮಹಿಮಳ ಮಹಾ ಚಾರಿತ್ರ್ಯವನ್ನು ಲೋಕದ ಮುಂದೆ ತಂದಿಡಲು ಶ್ರೀ ಕರಿಬಸವಯೋಗೀಶ್ವರರು ಇವರ ದಾವಣಗೆರೆ ಹಳಪೇಟದಲ್ಲಿ ಇರುವ ಇವರ ಮನೆಯನ್ನು ಮಂಗಲಧಾಮವಾಗುವಂತೆ ಮಾಡಿ ಅಲ್ಲಿಯೇ ಭೂಗತರಾದರು. ಈ ಸ್ಥಳದಲ್ಲಿ ವಿಭೂತಿ ಘಟ್ಟಿಗಳನ್ನಿಟ್ಟು ಶ್ರೀ ಶಿವಯೋಗಿಗಳವರ ಗದ್ದುಗೆಯನ್ನು ನಿರ್ಮಿಸಲಾಗಿದೆ. ಇಂದಿಗೂ ಈ ಗದ್ದುಗೆಯು ಪವಿತ್ರ ಕ್ಷೇತ್ರಸ್ಥಾನವಾಗಿದೆ. ಈ ಮಹಿಮರ ಚಾರು ಚರಿತ್ರ್ಯವನ್ನೊಳಗೊಂಡ ಶ್ರೀ ಕರಿಬಸವಯೋಗಿ ಲೀಲಾ ಕಾವ್ಯದಲ್ಲಿ ಶ್ರೀ ಶರಣೆ ಶಾಂತಮ್ಮನ ಪಾತ್ರವೇ ಪ್ರಮುಖವಾದುದು. ಅಂಗಡಿಯವರು ರಚಿಸಿದ ಈ ಕಾವ್ಯವು ಯಥೋಚಿತ ಕ್ರಮದಿಂದ ಕೂಡಿ, ಸಾಮಾನ್ಯರಿಗೆ ತಿಳಿಯುವಂತೆಯೂ ಸುಲಭವೂ ಸುಶ್ರಾವ್ಯವೂ ಆಗಿದೆ.

ಉರಗಾದ್ರಿ ಅಥವ ಉರವಕೊಂಡದ ಗವಿಮಠ. ವೀರಶೈವ ಪುರಾತನ ಮಠಗಳಲ್ಲಿ ಒಂದು. ತೋಂಟದಾರ್ಯ ಪರಂಪರೆಯ ಈ ಪೀಠ. ಅಖಿಲ ಕರ್ನಾಟಕದ ಹಿತಚಿಂತಕರೂ, ಸುಪ್ರಸಿದ್ಧ ವಾಗ್ಮಿಗಳೂ ಆದ ಮುಮ್ಮಡಿ ಕರಿಬಸವಸ್ವಾಮಿಗಳ ಪುಣ್ಯ ಪೀಠವೂ ಹೌದು. ಸರ್ಪಾಕಾರದ ಒಂದು ಮರಡಿ ಆ ಗ್ರಾಮದ ಸುತ್ತಲೂ ಹಬ್ಬಿ ನಿಂತುದರಿಂದ ಇದಕ್ಕೆ 'ಉರಗಾದ್ರಿ' ಎಂಬ ಹೆಸರು ಬಂದಿತೆಂದು ಅಲ್ಲಿನವರ ಹೇಳಿಕೆ ಇದ್ದರೂ

"ಉರಗರೂಪದಿ ಬಂದು ತೋರುವೆ

ಪರಮ ಪಾವನ ಚರಿತೆ ಈಗಡ

ಮರಳು ಉರಗಾದ್ರೀಶ ನಮಿಪೆವು ನಿನ್ನ ಭಕ್ತಿಯೊಳು [ಸಂಧಿ ೧೩, ಪದ್ಯ ೨೨]

ಎಂಬುದಾಗಿ ಕವಿಗಳು ಶ್ರೀ ಕರಿಬಸವಯೋಗಿಯು ಸರ್ಪಭೂಷಣನು ತಾನಾಗಿ ಮೆರೆದ ಒಂದು ಲೀಲೆಯನ್ನು ಉಲ್ಲೇಖಿಸಿ ಅದಕ್ಕೆ ಶಿವಯೋಗಿಗಳಿಂದಲೇ 'ಉರಗಾದ್ರಿ' ಎಂಬ ಹೆಸರು ಬಂದಿತೆಂದು ಹೇಳಿದ್ದಾರೆ.

"ವೀರಶೈವ ಸಾಹಿತ್ಯ ಸಿದ್ಧಾಂತ, ಅನುಭಾವಗಳ ಬೆಳವಣಿಗೆಯ ಇತಿಹಾಸದಲ್ಲಿ ಬಸವ-ರೇಣುಕರ ಕಾಲವನ್ನು ವೀರಶೈವ ಪ್ರತಿಷ್ಠಾಪನ ಯುಗವೆಂದೂ, ನೂರೊಂದು ವಿರಕ್ತರ ಕಾಲವನ್ನು ವೀರಶೈವ ಪುನರ್ವಿರಚನ ಯುಗವೆಂದೂ, ೭೭೦ ವಿರಕ್ತರೊಡಗೂಡಿ ನಾಡಿನ ನಾನಾ ಕಡೆಗಳಲ್ಲಿ ಸಂಚರಿಸಿದ ತೋಂಟದಾರ್ಯರ ಕಾಲವನ್ನು ವೀರಶೈವ ಪುನರುತ್ಥಾನ ಯುಗವೆಂದೂ ತೋಂಟದಾರ್ಯರ ತರುವಾಯದಲ್ಲಿ ಅವರ ಪರಂಪರೆಗೆ ಸೇರಿದ ರಾಘವಾಂಕ ಸ್ವಾಮಿಗಳಿಂದ ಕೆಲವು ಶಾಖಾಮಠಗಳು ಅಲ್ಲಲ್ಲಿ ಸ್ಥಾಪಿತವಾದವು. ಅವುಗಳಲ್ಲಿ ಉರಗಾದ್ರಿ ಪೀಠವೂ ಒಂದು. ಇಲ್ಲಿ ಅವುಗಳ ನಾಮನಿರ್ದೇಶನವಿದೆ."[೧೦೪]

| | ಹೆಸರು | ಕಾಲ | ಸ್ಥಳ |
|---|---|---|---|
| ೧ | ಶ್ರೀ ರಾಘವಾಂಕ ಸ್ವಾಮಿಗಳು | ಕ್ರಿ.ಶ. ೧೫೦೦ | ಬಳ್ಳಾರಿ |
| ೨ | ಶ್ರೀ ರಾಚೋಟಿಸ್ವಾಮಿಗಳು | ಕ್ರಿ.ಶ. ೧೫೨೫ | ಅದವಾನಿ |
| ೩ | ಶ್ರೀ ಚಿಕ್ಕ ರಾಚೋಟಿಸ್ವಾಮಿಗಳು | ಕ್ರಿ.ಶ. ೧೫೫೦ | ಅದವಾನಿ |
| ೪ | ಶ್ರೀ ವೈರಾಗ್ಯದ ಚೆನ್ನಬಸವರು | ಕ್ರಿ.ಶ.೧೫೭೫ | ನಾರದಗಡ್ಡೆ |
| ೫ | ಶ್ರೀ ಕರ್ತವ್ಯದ ಕರಿಬಸವಯೋಗಿ | ಕ್ರಿ.ಶ.೧೬೦೦ | ಉರವಕೊಂಡ |

ಪ್ರಸ್ತುತ ಪುರಾಣವು ೧೬೦೦ರಲ್ಲಿದ್ದ ಕರ್ತವ್ಯದ ಕರಿಬಸವಯೋಗಿಗಳ ಲೀಲೆಯನ್ನು ವರ್ಣಿಸುವ ಸತ್ಕೃತಿ. 'ಕೈವಲ್ಯ ಕಲ್ಪವಲ್ಲರಿ'ಯನ್ನು ಕನ್ನಡಕ್ಕಿತ್ತು ಅನುಭಾವ ಲೋಕದಲ್ಲಿ ಹೆಸರಾಂತ ಸರ್ಪಭೂಷಣ ಶಿವಯೋಗಿಗಳು ಕರಿಬಸವನಿದ್ದ ಉರವಕೊಂಡಕ್ಕೆ ಹೋಗಿ ಅಲ್ಲಿಯೇ ಕೆಲ ಕಾಲ ಶಿವಯೋಗದಲ್ಲಿ ನಿರತರಾಗಿದ್ದರೆಂದು ತಿಳಿದು ಬರುವುದರಿಂದ 'ಉರಗಾದ್ರಿ ಕರಿಬಸವರ ಕಾಲ ೧೬೦೦ರ ಕ್ಕಿಂತ ಇನ್ನೂ ಈಚೆಗಿನ ಗಡುವನ್ನು ಸೇರುತ್ತದೆ.

ದೇವನಗರಿ ಅರ್ಥಾತ್ ದಾವಣಗೆರೆಯ ಈಗಿನ ಸುಪ್ರಸಿದ್ಧ ಕಲಾವಿದರಾದ ಚಿಂದೋಡಿ ಶ್ರೀ ವೀರಪ್ಪನವರ ತಾಯಿ ಶಾಂತಮ್ಮನಿಗೂ ತಂದೆ ಶ್ರೀ ವೀರಣ್ಣನವರಿಗೂ ಒಲಿದು ಬಂದು ಅನಂತ ಮಹಾತ್ಮೆಗಳನ್ನು ತೋರಿ ಅಲ್ಲಿಯೇ ಭೂಗತರಾಗಿ ಇಂದಿಗೂ ಅವರ ಹೃನ್ಮಂದಿರಗಳಲ್ಲಿ ಬೆಳಗಿ ರಾರಾಜಿಸುವ ಕರಿಬಸವ ಯೋಗಿಗಳ ಜೀವನ ಚಿತ್ರವನ್ನು ರೂಪಿಸುವುದು ಮುಖ್ಯವಾಗಿ ಇಲ್ಲಿ ಕವಿಗಳ ಉದ್ದೇಶವಾಗಿದೆ. ಅದರಲ್ಲೂ ಶರಣೆ ಶಾಂತಮ್ಮಳ ಭಕ್ತ್ಯಾತಿಶಯವನ್ನು ಕೊಂಡಾಡುವದರಲ್ಲಿ ಅವರ ದೃಷ್ಟಿ ಕೇಂದ್ರೀಕೃತವಾಗಿದೆ.

'ಕರಿಬಸವ ಗುರು ಕೃಪೆಯ ಕೂಸಿದು !

ಶರಣೆ ಶಾಂತಮ್ಮಾಂಬೆ ಚರಿತವು' [ಪೀಠಿಕಾ ಸಂಧಿ, ಪದ್ಯ ೨೩]

ಎಂಬಲ್ಲಿ ಇದು ಸ್ಪಷ್ಟವಾಗುತ್ತದೆ. ನಾಟ್ಯಕೋವಿದ, ಇಳೆಯ ಗಂಧರ್ವ, ಕರ್ನಾಟಕ ಕೋಕಿಲೆ, ಮೈಸೂರು ಕೃಷ್ಣರಾಜ್ ಒಡೆಯರ್ ಅವರು ಅವರರಮನೆಗೆ ಆಮಂತ್ರಿಸಿ ಅಲ್ಲಿ ತೋಡಿಯ ರಾಗವನ್ನು ಚೆನ್ನಾಗಿ ಹಾಡಿದ್ದಕ್ಕೆ 'ಚಿಂದೋಡಿ' ಎಂಬ ಅಭಿದಾನವಿತ್ತು ಪದಕ ಪ್ರಶಸ್ತಿಗಳನ್ನಿತ್ತು ಬೀಳ್ಕೊಂಡ ಚಿಂದೋಡಿ ವೀರಣ್ಣನವರಿಗೆ ಶಾಂತಮ್ಮಳೇ ಮುಂದೆ ಧರ್ಮಪತ್ನಿಯಾಗಿ ಬಂದು ಇವರ ಮನೆಯನ್ನು ಬೆಳಗಿದರು.

ಉಕ್ಕಡಗಾತ್ರಿ, ಕಂಪ್ಲಿ, ಗೋಕರ್ಣ ಅನೇಕ ಕಡೆಗಳಲ್ಲಿ ಉರಗಾದ್ರಿಯ ಕರಿಬಸವೇಶನ ದಯೆಯಿಂದ ಅನೇಕ ಮಹಾತ್ಮೆಗಳನ್ನು ತೋರಿ ಗುಡ್ಡಾಪುರದ ದಾನಮ್ಮ, ಹೇಮರಡ್ಡಿ ಮಲ್ಲಮ್ಮರಂಥ ಶಿವಶರಣೆಯರ ಪಂಕ್ತಿಯಲ್ಲಿ ಶರಣೆ ಶಾಂತಮ್ಮಳು ಸೇರಿರುವದನ್ನು ಕವಿಗಳಾದ ಶ್ರೀ ಕ.ಬ.ಅಂಗಡಿ ಅವರು ಬಹುಸರಳವಾಗಿ, ಸುಂದರವಾಗಿಯೂ ಚಿತ್ರಿಸಿದ್ದಾರೆ. ಕರಿಬಸವ ಲೀಲೆಗಳನ್ನು ಬಣ್ಣಿಸುವದರ ಜೊತೆಗೆ ಅವರಿಂದ ಪಾವನಳಾದ ಶರಣೆ ಶಾಂತಮ್ಮಳ ಪುಣ್ಯ ಜೀವನ ಚರಿತ್ರೆಯನ್ನೂ ಜೊತೆ ಜೊತೆಯಾಗಿ ಹೆಣೆದಿರುವಲ್ಲಿ ಅವರು ತೋರಿದ ತೂಕಬದ್ಧ ನಿರೂಪಣೆಗೆ ಎಂತವರೂ ತಲೆದೂಗಲೇಬೇಕು. ಕವಿಗಳು ಅಷ್ಟಾದಶ ವರ್ಣನೆಯ ಹಂಗಿಲ್ಲದೆ ಪವಾಡಗಳ ಲೋಕದಲ್ಲಿ ಸುತ್ತದೆ, ವಾಸ್ತವಿಕ ಘಟನೆಗಳನ್ನಾಧರಿಸಿ ಕಾವ್ಯರಚನೆ ಮಾಡಿರುವದು ಅದರ ಆಧುನಿಕ ಪ್ರಜ್ಞೆಯ ದ್ಯೋತಕವಾಗಿದೆ.

ಶರಣರ ವಚನಗಳನ್ನು ಇಲ್ಲಿ ಭಾಮಿನಿಯ ಲಯಕ್ಕೆ ತಿರುಗಿಸುವಲ್ಲಿ [ಸಂಧಿ ೩, ೧೭-೨೯] ಕವಿಗಳ ಸಾಮರ್ಥ್ಯ ಕಾಣುತ್ತದೆ. ಬಸವ ಪುರಾಣಾದಿಗಳಲ್ಲಿ ಭೂಲೋಕದಲ್ಲಿ ಧರ್ಮ ಹಾಳಾದ ಸಂಗತಿಯನ್ನು ಕೈಲಾಸಾಧಿಪತಿಗೆ ನಾರದನು ಬಂದು ಬಿತ್ತರಿಸುವದು ಕಂಡು ಬಂದರೆ ಇಲ್ಲಿ ಇವರು ಶಿವಸಭೆ ನಡೆದ ಕಾಲದಲ್ಲಿ 'ಮುಗಿಲ ದನಿಯಂಗೂಡಿ

ಬಿದ್ದುದುದೊಂದು ಕಾಗದವು' [ಸಂಧಿ ೨. ಪದ್ಯ ೨] ಅದನ್ನು ಷಣ್ಮುಖ ಓದಿ ಹೇಳಿದನೆಂಬ ಹೊಸನೀತಿಯನ್ನು ಅನುಸರಿಸಿದ್ದಾರೆ.

"ತೋರಲೊಮ್ಮನ ನುಡಿವನಾತನು

ತೋರಲಿಮ್ಮನ ನುಡಿಯನಾತನು

ಮೀರಿ ಕಾಣಿಯ ಸೋಲ ಕಾಣಿಯ ಗೆಲ್ಲನೀ ತೆರದಿ ॥

ವೀರನಿಷ್ಠೆಯ ಶಾಂತವೀರನು

ತೋರಿ ತನ್ನಯ ಹರದ ನೀತಿಯ

ಧಾರುಣೀತಲ ಮೆಚ್ಚುವಂದದಿ ಬಾಳ ತಕ್ಕಡಿಯ॥ [ಸಂಧಿ ೩, ಪದ್ಯ ೮]

ಎಂಬಲ್ಲಿ ನವೋಪಮೆಯಿದೆ. ಪ್ರಾಸದ ಅನುರೂಪ್ಯವಿದೆ.

### ೪.೬.೩.೫ ಕಲಬುರಗಿ ಶ್ರೀ ಶರಣ ಬಸವೇಶ್ವರ ಚರಿತ್ರೆ :

'ಕಲಬುರ್ಗಿ ಶ್ರೀ ಶರಣ ಬಸವೇಶ್ವರ ಚರಿತ್ರೆ' ಪುರಾಣ ಗ್ರಂಥವಾಗಿದ್ದು, ಹಸ್ತಪ್ರತಿಯ ರೂಪದಲ್ಲಿ ಉಪಲಬ್ಧವಿದೆ. ಇಲ್ಲಿ ೨೫ ಸಂಧಿಗಳಿದ್ದು, ಈ ಕೃತಿಯ ಕುರಿತು ಹೆಚ್ಚಿನ ವಿವರಗಳು ಲಭ್ಯವಾಗಿಲ್ಲ. ಕ.ಬ.ಅಂಗಡಿಯವರ ಕೈಬರಹದಲ್ಲಿ ಪಟ್ಟಿಮಾಡಿದ ಪುರಾಣಗಳ ಪಟ್ಟಿಯಲ್ಲಿ ಉಲ್ಲೇಖವಿದೆ. ಅದೇ ರೀತಿ 'ಶರಣ'-ಕ.ಬ.ಅಂಗಡಿಯವರ ೮೦ನೆಯ ವರ್ಷದ ಆಚರಣೆಯ ಸವಿನೆನಪಿನ ಸಂಚಿಕೆ'ಯ ೩೨ರಲ್ಲಿಯೂ ಉಲ್ಲೇಖವಿದೆ. ಕರ್ನಾಟಕದಲ್ಲಿ ೧೮ನೆಯ ಶತಮಾನದಲ್ಲಿ ಜೀವಿಸಿ, ಶರಣ ತತ್ವಗಳನ್ನು ಬದುಕಿದ ಇವರ ಉದಾತ್ತ ಜೀವನವನ್ನು ಈ ಕೃತಿ ಒಳಗೊಂಡಿದೆ.

### ೪.೬.೩.೬ ಶ್ರೀ ಫಲಹಾರೇಶ್ವರ ಚರಿತಾಮೃತಂ :

'ಶ್ರೀ ಫಲಹಾರೇಶ್ವರ ಚರಿತಾಮೃತಂ' ಪುರಾಣ ಕೃತಿಯಾಗಿದ್ದು, ಹಸ್ತಪ್ರತಿಯಲ್ಲಿ ಉಪಲಬ್ಧವಿದ್ದು, ೮ ಸಂಧಿಗಳು ಮತ್ತು ೧೮೯ ಪದ್ಯಗಳನ್ನು ರಚಿಸಿದ್ದಾರೆ. ಈ ಕೃತಿಯು ಅವರ ಇನ್ನುಳಿದ ಕೃತಿಗಳಂತೆ ಸರಳವಾದ ಭಾಷೆಯಲ್ಲಿ ಕಂಡು ಬರುವುದಿಲ್ಲ. ಹೀಗಾಗಿ ಇದನ್ನು ಅವರ ಪ್ರಾರಂಭದ ಕೃತಿಯೆಂದುಕೊಳ್ಳಬಹುದು. ಈ ಕೃತಿಯನ್ನು ಅವರು ಪ್ರಕಟ

ಮಾಡಿರುವ ಬಗೆಗೆ ಯಾವುದೇ ವಿಷಯ ತಿಳಿದು ಬರುವುದಿಲ್ಲ. ಬೆಳಗಾವಿ ಜಿಲ್ಲೆ ರಾಮದುರ್ಗ ತಾಲ್ಲೂಕಿನ ಅವರಾದಿ ಎಂಬ ಗ್ರಾಮ. ಅಲ್ಲಿ ನೂರಾರು ವರ್ಷಗಳಿಂದ ವಿರಕ್ತಮಠವೊಂದು ಅಸ್ತಿತ್ವದಲ್ಲಿದೆ.ಈ ಮಠದ ಕರ್ತೃ ಫಲಹಾರೇಶ್ವರರ(ಶಿವಸ್ವಾಮಿ)ಗಳು. ಇವರ ಮೂಲ ಇಂದಿನ ಗದಗ ಜಿಲ್ಲೆಯ ರೋಣ ತಾಲ್ಲೂಕಿನ ಅಸೂಟಿ. ಭಕ್ತೋದ್ಧಾರಕ್ಕಾಗಿ ದೇಶ ಸಂಚರಿಸುವ ಸಮಯದಲ್ಲಿ ಇಲ್ಲಿಗೆ ಬಂದು ಮಠದ ಸ್ಥಾಪನೆ ಮಾಡುತ್ತಾರೆ. ಅಂಗಡಿಯವರ ಹುಟ್ಟುರಾದ ಮೆಣಸಗಿಯೂ ಕೂಡ ರಾಮದುರ್ಗ ಸಂಸ್ಥಾನದ ಆಡಳಿತಕ್ಕೆ ಒಳಪಟ್ಟಿತ್ತು. ಸಹಜವಾಗಿ ಅದರ ಸುತ್ತ ಮತ್ತಲಿನ ಶರಣಕ್ಷೇತ್ರಗಳು ಅವರನ್ನು ಪ್ರಭಾವಿತರನ್ನಾಗಿ ಮಾಡಿವೆ. ಅವರಾದಿ ಫಲಹಾರೇಶ್ವರ ಮಠದ ಜೊತೆಗೆ ಸಂಪರ್ಕವಿದ್ದದ್ದು ತಿಳಿದುಬರುತ್ತದೆ. ಇಲ್ಲಿ ವಿಷಯ ಸಂಕ್ಷೀಪ್ತವಾಗಿದ್ದು, ಕೆಲವು ನುಡಿಗಳನ್ನು ನೋಡಬಹುದಾಗಿದೆ.

"ಸ್ವಾಮಿ ಚರಿತೆಯದನು ಪ್ರೇಮದಿಂದಲಿ ನಿತ್ಯ
ನೇಮದೊಳು ಕೇಳೆಭಕ್ತಿಲತೆಸತ ಪಸರಿಸಲು
ಕಾಮಿತಫಲವನೀವ ಕಾಮಧೇನುನುನಯನಡುವೆ ಜಗದಿತಾಗೊಲಿಯುತೆ॥
ಸ್ವಾಮಿಯಾಜ್ಞೆಯೊಳುಲೈದುಭೋಗವೀಯಲ್ಕೆ
ಸೋಮಧರಭಕಿಫಲಹಾರಯತಿಯ ಕಥೆಯನು
ಪ್ರೇಮದಿಂಪೇಳುವರ್ನಿಗೆಲದುವವು ಕಲ್ಪಿತು ಫಲಂಗಳನ್ನು॥" [ಸಂ. ೧, ನುಡಿ ೧೪]

"ಶಿವನಿಂದಧಿಕರೀಶ್ವರರು ಶಿವೇತರತತ್ವ
ಶಿವಮಂತ್ರದಿಂಗುರುತ್ವವಹಮಂತ್ರ ಶುಭಕರ
ಶಿವನಾಮಗಿಂತೆಗ್ಗಳ ಪೆಸರ್ಸತಿ ಶಿವಾಗಮಗಳಂದಧಿಕಲೇಖವೂ
ಶಿವಭಜನೆಗಿಂಮಿಗಿಲು ಭಜನೆ ಕೀರ್ತನ ವಿಮುಖ
ಶಿವಸೇವೆಗಿಂಮಿಗಿಲು ಸೇವೆ ಸೂಚನವುಗಳು
ಶಿವಸುಪ್ರಸಾದದಿಂ ಮಿಗಿಲರ್ದನವಸ್ತುವಿಲ್ಲೆನುತೆ ಧರೆಗೊಸೆದು ಕಲಿಸು. ॥"

### ೪.೬.೩.೭ ಜೇವರಗಿ ಷಣ್ಮುಖ ಶಿವಯೋಗಿ ಪುರಾಣ :

ಈ ಕೃತಿ ಜೇವರಗಿಯ ಷಣ್ಮುಖ ಶಿವಯೋಗಿಗಳ ಕುರಿತು ರಚಿಸಲಾಗಿದೆ. ಕಾರಣಾಂತರಗಳಿಂದ ಅಪೂರ್ಣಗೊಂಡ ಈ ಕೃತಿಯನ್ನು ಅಂದು ಗದುಗಿನ ತೋಂಟದಾರ್ಯ ಮಹಾವಿದ್ಯಾಲಯದಲ್ಲಿ ಕನ್ನಡ ಪ್ರಾಧ್ಯಾಪಕರಾಗಿದ್ದ ಖ್ಯಾತ ಸಂಶೋಧಕರು, ಭಾಷಾ ಬಲ್ಲಿರೂ ಆದ ಡಾ. ವಿ. ಶಿವಾನಂದರ ಅಪೇಕ್ಷೆಯ ಮೇರೆಗೆ ಈ ಕೃತಿಯ ನೂರಾರು ನುಡಿಗಳನ್ನು ಮೂಲಕೃತಿಯ ಭಾಷೆ, ಛಂಧಸ್ಸು ಮತ್ತು ಅಲಂಕಾರಗಳಿಗೆ ಭಾಧೆ ಬರದಂತೆ ಸುಂದರವಾಗಿ ಸಂಪೂರ್ಣಗೊಳಿಸಿದ್ದಾರೆ. ಈ ಕುತಿತು ಪ್ರೊ. ಹರಿದಾಸ ಅವರ ಸಂಪಾದಿತ ಕೃತಿ 'ನಮ್ಮ ಗದಗ–ಬೆಟಗೇರಿ'ಯಲ್ಲಿ ಉಲ್ಲೇಖಗೊಂಡಿದೆ. ಪ್ರಕಟಿತ ಕೃತಿ ಉಪಲಬ್ಧವಿಲ್ಲದ್ದರಿಂದ ಈ ಕೃತಿಯನ್ನು ಕುರಿತಾದ ಸಾದ್ಯಂತ ವಿವೇಚನೆ ಮತ್ತು ವಿಮರ್ಶೆ ಸಾಧ್ಯವಾಗದೇ ಹೋಗಿದೆ. ಮುಂಬರುವ ದಿನಗಳಲ್ಲಿ ಉಪಲಬ್ಧವಾದಲ್ಲಿ ಸಹೃದಯರಿಗೆ ಇವರ ಮತ್ತೊಂದು ಮೌಲ್ಯಯುಕ್ತ ಪುರಾಣಕಾವ್ಯದ ಪರಿಚಯವಾಗಬಹುದು.

### ೪.೬.೩.೮ ಹೊಸಳ್ಳಿ ಬೂದಿ ಮಹಾಂತ ಚರಿತೆ :

ಈ ಕೃತಿಯು ಭಾಮಿನಿ ಷಟ್ಪದಿಯಲ್ಲಿ ಬರೆದ ಇನ್ನೊಂದು ಕೃತಿಯಾಗಿದೆ. ಗದಗ ಜಿಲ್ಲೆ ಮತ್ತು ತಾಲ್ಲೂಕಿನ ಹೊಸಳ್ಳಿ ಗ್ರಾಮದಲ್ಲಿ ೭೫೦ ವರ್ಷಗಳು ಬದುಕಿ ಬಾಳಿ ಲೀಲೆಗಳನ್ನು ತೋರಿದ ಶ್ರೀ ಬೂದಿ ಮಹಾಂತ ಶಿವಯೋಗಿಗಳ ಜೀವನ ಚರಿತ್ರೆಯನ್ನು ಈ ಕೃತಿಯಲ್ಲಿ ಸಾದರಪಡಿಸಲಾಗಿದೆ. ಈ ಕುರಿತು ಅಂಗಡಿಯವರ ಕೈಬರಹದ ಕೃತಿ ಪಟ್ಟಿಯಲ್ಲಿ ಉಲ್ಲೇಖವಿದೆ. ಆದರೆ ಈ ಕೃತಿಯು ಅನುಪಲಬ್ಧವಾಗಿದೆ. ಹೊಸಳ್ಳಿಯ ಬೂದಿ ಮಠದಲ್ಲಿಯೂ ಕೂಡ ಈ ಕೃತಿ ಲಭ್ಯವಿಲ್ಲ. ಆದರೆ ಈ ಕುರಿತು ಸುಶೀಲಮ್ಮ ಪವಾಡಶೆಟ್ಟರ ಅವರು ಸಂದರ್ಶನದಲ್ಲಿ ಹೇಳಿಕೊಂಡಿದ್ದಾರೆ. ಕ.ಬ.ಅಂಗಡಿಯವರ ಮಾತುಗಳಿಂದ ಶಿವಾನುಭವದಲ್ಲಿ ಈ ವಿಷಯಗಳನ್ನು ತಿಳಿದುಕೊಂಡುದುದಾಗಿ ಅವರು ತಿಳಿಸುತ್ತಾರೆ. ಬೂದಿ ಮಹಾಂತ ಮಠದೊಂದಿಗೂ ಕವಿಗಳಿಗೂ ಸಂಪರ್ಕಗಳಿದ್ದವು. ಇದನ್ನು ಅವರ ಹೊಸಳ್ಳಿಯ ಸ್ನೇಹಿತರಾದ ಕೆ.ಜಿ.ಗೋಲಪ್ಪನವರ ಅವರು ಶರಣ ಕೃತಿಯಲ್ಲಿ ಬರೆದ ಲೇಖನವೂ ಆಧಾರವಾಗಿದೆ. ಈ ಕೃತಿಯು ಉಪಲಬ್ಧವಾದಲ್ಲಿ ಸಮಾಜಕ್ಕೆ, ಸಾಹಿತ್ಯ ಲೋಕಕ್ಕೆ ಕೊಡುಗೆಯಾಗುವುದರಲ್ಲಿ ಸಂಶಯವಿಲ್ಲ.

### ೪.೬.೩.೯ ಮೆಣಸಗಿ ಲಿಂಗಬಸವೇಶ್ವರ ಲೀಲಾಮೃತಂ :

ಇವರ ಹುಟ್ಟೂರಾದ ಗದಗ ಜಿಲ್ಲೆಯ ರೋಣ ತಾಲ್ಲೂಕಿನ ಮೆಣಸಗಿಯಲ್ಲಿಯ ಜಾಗ್ರತಸ್ಥಳ ಲಿಂಗಬಸವೇಶ್ವರ ಮಠ. ಲಿಂಗಬಸವೇಶ್ವರರು ಅಲ್ಲಿಯ ಮಹಿಮಾಪುರುಷರು. ಅವರ ಲೀಲೆಗಳನ್ನು, ಚರಿತ್ರೆಯನ್ನು ಕುರಿತು ವಿಷಯ ಸಂಗ್ರಹಕ್ಕೆ ಮೆಣಸಗಿಗೆ ಅಂಗಡಿಯವರು ಭೇಟಿ ನೀಡಿದ್ದನ್ನು ಅವರ ತಮ್ಮನ ಮಗನಾದ ಪ್ರಭು ಅಂಗಡಿಯವರು ತಿಳಿಸುತ್ತಾರೆ. ಆ ಕುರಿತು ಸಂಪೂರ್ಣ ಮಾಹಿತಿಗಳನ್ನೂ ಅವರು ಸಂಗ್ರಹಿಸಿದ ಬಗೆಗೆ ಪ್ರಭು ಅಂಗಡಿಯವರು ಸಂದರ್ಶನದ ಸಮಯದಲ್ಲಿ ತಿಳಿಸಿದರು. ಇವರ ಮೇಲೆ ಲಿಂಗಬಸವೇಶ್ವರರ ಪ್ರಭಾವವನ್ನು ಗುರುತಿಸಲಾಗಿದೆ. ಹೀಗಾಗಿ ಅವರ ಬದುಕಿನ ಕೊನೆಯ ಘಟ್ಟದಲ್ಲಿ ಈ ಕುರಿತು ಕಾರ್ಯಗಳನ್ನು ಮಾಡಿದಂತೆ ತೋರುತ್ತದೆ. ಕೆಲವು ಸಂಧಿಗಳನ್ನೂ ಬರೆದಿರಬಹುದು. ಈ ಕೃತಿ ಅಪೂರ್ಣವಾಗಿರಬಹುದೆಂದು ಅಭಿಮತ. ಅದರ ಹಸ್ತಪ್ರತಿಗಳು ದೊರಕಿದಲ್ಲಿ ಮೆಣಸಗಿಯ ಲಿಂಗಬಸಬೇಶ್ವರರ ಪುರಾಣವೂ ಸಹೃದಯರನ್ನು ಮುಟ್ಟಬಹುದು.

### ೪.೬.೪ ಕನ್ನಡ ಸಾಹಿತ್ಯಕ್ಕೆ ಕ.ಬ.ಅಂಗಡಿಯವರ ಪುರಾಣಗಳ ಕೊಡುಗೆ:

ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ವೀರಶೈವ ಪುರಾಣಗಳ ಬೆಳವಣಿಗೆಯು ಪ್ರೌಢದೇವರಾಯನ ಕಾಲದಿಂದ ವಿಫುಲವಾಗಿ ಬೆಳೆದುಬಂದಿದೆ. ವೀರಶೈವ ತತ್ವ ಸಿದ್ಧಾಂತಗಳನ್ನು ಬಳಸಿಕೊಂಡು ಪುರಾಣ ರಚಿಸುವುದು ಒಂದು ಮಾದರಿಯಾದರೆ, ವೀರಶೈವ ತತ್ವ ಬೋಧನೆಗಳನ್ನೇ ಪುರಾಣದ ವಸ್ತುವನ್ನಾಗಿಸುವುದು ಇನ್ನೊಂದು ಬಗೆ. ಆದರೆ ಇಲ್ಲಿ ಅಂಗಡಿಯವರು ತಮ್ಮದೇ ಆದ ವಿಭಿನ್ನ ಶೈಲಿಯೊಂದನ್ನು ರೂಢಿಸಿದ್ದಾರೆ. ಸಮಾಜದ ಆಧುನಿಕರಿಗೆ ಬಸವಾದಿ ಶರಣ ತತ್ವಗಳ ಅಡಿಪಾಯವನ್ನು ತೋರ್ಪಡಿಸುವ ಕಾರ್ಯ ಅವರ ಪುರಾಣ ಕೃತಿಗಳಿಂದ ನಡೆದು ಬಂದಿದೆ.

ಹಳೆಯ ಸಾಹಿತ್ಯವನ್ನು ಮಾಧ್ಯಮವಾಗಿಸಿಕೊಂಡು ಆಧುನಿಕತೆಯನ್ನು ಕೂಡಿಕೊಂಡು ಸಮಾಜದಿಂದ ಕಣ್ಮರೆಯಾದುದನ್ನು ಮತ್ತೆ ಕಾಣಿಸುವದಕ್ಕೂ ಸಾಮರ್ಥ್ಯ ಬೇಕು. ಹೊಸ ದೇವಾಲಯವನ್ನು ಕಟ್ಟುವುದು ಹೇಗೆ ಸಾಹಸವೋ, ಹಳೆಯ ದೇಗುಲವನ್ನು ಅದರ ಶಿಲ್ಪ ವಿನ್ಯಾಸವನ್ನರಿತು ಪುನಃ ಕಟ್ಟಿ ಜೀರ್ಣೋದ್ಧಾರ ಮಾಡುವದೂ ಸಹ ಅಷ್ಟೇ ವಿನೂತನವಾದ ಸಾಹಸ, ಶ್ರೇಯಸ್ಸಿನ ಕಾರ್ಯ. ಈ ದೃಷ್ಟಿಯಿಂದ ಇವರು ಪರಂಪರೆಯ

ಪೋಷಕರೂ, ಪ್ರೇರಕರೂ ಆಗಿದ್ದಾರೆ. ಈ ಭೂಮಿಯ ಮೇಲೆ ಹರಿದು ಬರುವ ಜಲವಾಹಿನಿ ಎಲ್ಲರಿಗೂ ಕಾಣುತ್ತದೆ. ಆದರೆ ಅಂತರ್ಜಲ ವಾಹಿನಿಯು ಶೊಧನೆ ಮಾತ್ರದಿಂದ ಕಾಣಬಲ್ಲದು. ಅದೇ ತೆರನಾಗಿ ನಮ್ಮಲ್ಲಿ ಬೇರೂರಿದ ಸತ್ತ್ವವನ್ನು ಕಣ್ಣೆತ್ತಿ ನೋಡುವದೇ ಪರಂಪರೆಯ ದೃಷ್ಟಿ. ಅದು ನಮ್ಮ ನಡೆ-ನುಡಿಗಳ, ನಮ್ಮ ಸಂಸ್ಕೃತಿಯ ಪ್ರತಿಬಿಂಬ. ನಮ್ಮ ಹಿಂದಿನವರು ಸೃಷ್ಟಿಸಿದ ಭಾಷೆ, ಸಾಹಿತ್ಯ, ಸಂಗೀತ, ಶಿಲ್ಪ ನಾಟ್ಯ, ಚಿತ್ರ ಇದೆಲ್ಲವೂ ನಮ್ಮ ಪರಂಪರೆ. ಇದುವೇ ಜೀವನ ಕಲೆ. ಈ ಜೀವನ ಕಲೆಯನ್ನು ಕ.ಬ.ಅಂಗಡಿಯವರ ಕೃತಿಗಳಲ್ಲಿ ಸೆಲೆ ಸೆಲೆಯಾಗಿ ಕಾಣಬಹುದು.

ಇವರ ಕೃತಿಗಳಲ್ಲಿ ಗ್ರಾಮೀಣ ಪರಿಸರದ ನೆಲದ ಸೊಗಡು, ನಗರ ಜೀವನದ ನಾಗರಿಕ ಆಯಾಮಗಳನ್ನು ಜೊತೆಗೆ ದಾರ್ಶನಿಕ ಜೀವನದ ಆಧ್ಯಾತ್ಮಿಕ ಅನುಸಂಧಾನ ಈ ಮೂರನ್ನು ಹೊಸೆದು ಬೆಸೆದಂತೆ ಕಂಡುಬರುತ್ತದೆ.

ಇವರ ಸೃಜನಶೀಲತೆಯ ಮೂಲ ಉದ್ದೇಶ ಬಸವಾದಿ ಶರಣರ ಬದುಕು-ಸಾಧನೆಯನ್ನು ಜನಸಾಮಾನ್ಯನಿಗೆ ಮುಟ್ಟಿಸುವುದೇ ಆಗಿದ್ದು, ಶೈಕ್ಷಣಿಕ ಮಟ್ಟದಲ್ಲಿ ಅಧಿಕಾರಿಯಾದ ಪ್ರಭಾವ ಪ್ರೇರಣೆಯೂ ಅವರ ಕೃತಿಗಳ ಮೇಲೆ ಆಗಿರುವುದು ಸ್ಪಷ್ಟ. ಆ ದೃಷ್ಟಿಯಿಂದ ಅವರ ಕೃತಿಗಳು ಸಾಮಾಜಿಕ ಅಂಶಗಳನ್ನು ಬಳಸಿಕೊಂಡ ರೀತಿ ಅತ್ಯುತ್ತಮವಾಗಿದೆ. ಭಾಷೆಯಲ್ಲಿ ಅವರ ಸರಳತೆ ಎಂಥವರನ್ನೂ ಮುಗ್ಧರನ್ನಾಗಿಸುತ್ತದೆ. ಲಾವಣಿ, ನಾಟಕ, ದೊಡ್ಡಾಟಗಳನ್ನು ಅಷ್ಟಕ-ಷಟ್ಕಗಳನ್ನು ಕಿರುಗ್ರಂಥಗಳನ್ನು, ಪಠ್ಯಪುಸ್ತಕಗಳನ್ನು ಬರೆದು ಸಮಾಜದ ಹಲವು ಕ್ಷೇತ್ರಗಳಲ್ಲಿಯ ಚಿತ್ರಣಗಳನ್ನು, ವಿಷಯ ವಸ್ತುಗಳನ್ನು ತಮ್ಮ ಅನುಭವ ಸವಿಸ್ತಾರದಿಂದ ಪಡೆದುಕೊಂಡಿದ್ದ ಇವರ ಪುರಾಣಗಳ ಅಭಿವ್ಯಕ್ತಿಯಲ್ಲೂ ವೈವಿಧ್ಯತೆ ಇರುವುದು ಸ್ಪಷ್ಟ.

ವಚನಗಳನ್ನು ಭಾಮಿನಿಯ ಲಯಕ್ಕೆ ಹೊಂದಿಸಿಕೊಂಡು ಸರಳ ಮತ್ತು ಸುಭಗವಾಗಿ ಸಹೃದಯರನ್ನು ತಲುಪುತ್ತಾರೆ. ಪ್ರಸ್ತುತ ಸಾಹಿತ್ಯಿಕ ಚಟುವಟಿಕೆಗಳಲ್ಲೂ ಈ ರೀತಿಯ ಪ್ರಯೋಗಗಳು ಕಂಡು ಬರುವುದು ಅಪರೂಪ. ಆದರೆ ಈ ಕಾರ್ಯವನ್ನು ೩೦-೩೫ ವರ್ಷಗಳ ಹಿಂದೆಯೇ ಮಾಡಿ ಗಮನ ಸೆಳೆದಿದ್ದಾರೆ. ವಚನಗಳ ತಾತ್ವಿಕ ರಚನೆಗೆ ಎಲ್ಲಿಯೂ ಭಂಗ ಬರುವುದಿಲ್ಲ. ವಚನಗಳನ್ನು ಭಾಮಿನಿಯ ಲಯಕ್ಕೆ ಹೊಂದಿಸಿಕೊಂಡು ಪ್ರಯೋಗ ಮಾಡಿದ ಉದಾಹರಣೆಗಳು

ಚಿಂತೆ ಭ್ರಮರಕೆ ಬಂಡನುಂಬುದು..

.. ಮಂಟಪಯೊಗದೊಳು ಬೆರೆತು [ಸಂಧಿ ೩, ನುಡಿ ೧೭]

ಶಿಕ್ಷಣದ ಬಲವನ್ನು ಸಮಾಜಕ್ಕೆ ತೋರ್ಪಡಿಸುತ್ತ ಸ್ತ್ರೀ ಶಿಕ್ಷಣವನ್ನು ಪುರಸ್ಕರಿಸುತ್ತಾರೆ.

"ಜೋಕೆಯಿಂದೆ ಸಮಾಜ ಬಲಿಯಲು

ಬೇಕು ನಾಡಿನ ತುಂಬ ಶಿಕ್ಷಣ

ಬೇಕು ಜಾತಿ-ವಿಜಾತಿಯೆನ್ನದ ಭಾವವಿರಬೇಕು

.........................................ಬೇಕೆನುತ" [ಶ್ರೀ ರು.ಮು.ಶಿ.ಗೀ ಸಂಧಿ ೩, ಪದ್ಯ ೧೮]

ಒಟ್ಟಿನಲ್ಲಿ ಕ.ಬ.ಅಂಗಡಿಯವರ ಪುರಾಣ ಸಾಹಿತ್ಯವನ್ನು

೧) ಪರಂಪರೆಯ ಸಾಹಿತ್ಯ ದೃಷ್ಟಿ.

೨) ಸಮಾಜ ಹಿತದೃಷ್ಟಿ

೩) ಧರ್ಮದೃಷ್ಟಿಗಳ ಮೂಲಕ ವಿವೇಚಿಸಬಹುದು. ಈ ಮೂರು ಮೌಲ್ಯಗಳಾಗಿ ಅಲ್ಲಿ ಅಭಿವ್ಯಕ್ತಗೊಂಡಿವೆ.

**೪.೬.೫ ಕ.ಬ.ಅಂಗಡಿಯವರ ಕೃತಿಗಳಲ್ಲಿ ಪರಂಪರೆಯ ಸಾಹಿತ್ಯ ದೃಷ್ಟಿ :**

ಪರಂಪರಾಗತ ಸಾಹಿತ್ಯದ ದೃಷ್ಟಿಕೋನ ಅವರಲ್ಲಿ ಸಂಸ್ಕಾರಗತವಾಗಿ ಮೂಡಿದೆ. ಹರಿಹರ ರಾಘವಾಂಕ ಕವಿಗಳ ತರುವಾಯದಲ್ಲಿ ಆ ಕವಿಗಳ ಕಾವ್ಯದೃಷ್ಟಿ, ದರ್ಶನದೃಷ್ಟಿಗಳನ್ನು ಮೇಳವಿಸಿಕೊಂಡ ವೀರಶೈವ ಕವಿಗಳ ಪರಂಪರೆ ಮೂಡಿಬಂದಿದ್ದು ಹೆಮ್ಮೆ, ಗೌರವಗಳಿಗೆ ಪಾತ್ರವಾಗಿದೆ. ಭೀಮಕವಿ, ಕೆರೆಯ ಪದ್ಮರಸ, ಚಾಮರಸ, ಲಕ್ಕಣ್ಣ ದಂಡೇಶ, ಸಿಂಗಿರಾಜ, ವಿರುಪಾಕ್ಷ ಪಂಡಿತ ಮೊದಲಾದ ಕವಿಗಳು ನಡುಗನ್ನಡದ ಕಾಲದಲ್ಲಿ ಷಟ್ಪದಿ ಸಾಹಿತ್ಯವನ್ನೆ ಅವಿಚ್ಛಿನ ಪರಂಪರೆಯಾಗಿಸಿದರು. "ಇದು ಹತ್ತೊಂಬತ್ತನೆಯ ಶತಮಾನದಲ್ಲಿ ಮಾವನೂರ ಚೆನ್ನಬಸವ ಕವಿ [ಕ್ರಿ.ಶ ೧೮೪೦], ಮಹಾದೇವ [ಕ್ರಿ.ಶ ೧೮೭೦], ಬಸವ ಕವಿ[ಕ್ರಿ.ಶ. ೧೮೮೭], ಬಸವಪ್ಪ ಶಾಸ್ತ್ರಿ [ಕ್ರಿ.ಶ. ೧೯೦೦] ಮೊದಲಾದವರಿಂದ ರಕ್ಷಿಸಲ್ಪಟ್ಟಿತು. ಇಂದಿನ ಇಪ್ಪತ್ತನೆಯ ಶತಮಾನದಲ್ಲಿ ವೀರಶೈವ ಷಟ್ಪದಿ ಕವಿಗಳ ಸಂಖ್ಯೆ ಗಮನಾರ್ಹವಾಗಿಯೇ ಇದೆ. ಮಸ್ಕಿ ಕರಿಬಸವಶಾಸ್ತ್ರಿ, ಗುಂಜೀಹಳ್ಳಿ ಷಡಕ್ಷರ ಕವಿ, ಮಂಗಾಪುರ ಚಂದ್ರಶೇಖರಶಾಸ್ತ್ರಿ, ಕಲಬುರ್ಗಿ ಜಿಲ್ಲೆಯ ಪಳೇದ ರೇವಣಸಿದ್ಧ ಕವಿ, ದ್ಯಾಂಪುರ ಚೆನ್ನ ಕವಿ, ತ್ರಿಭಾಷಾಕವಿ ಡಾ. ಪಂಡಿತ ಪುಟ್ಟರಾಜ ಗವಾಯಿಗಳು

ಮೊದಲಾದವರಿಂದ ಇದು ಅಚ್ಚಳಿಯದುಳಿದಿದೆ. ಈ ಶ್ರೇಣಿಯಲ್ಲಿ ಸಲ್ಲುವ, ನಿಲ್ಲುವ ಕವಿಗಳಲ್ಲಿ ಕ.ಬ.ಅಂಗಡಿಯವರು ಖಂಡಿತ ಒಬ್ಬರಾಗಿದ್ದಾರೆ."[೧೯೯] ಎಂಬ ಡಾ.ವಿ.ಶಿವಾನಂದ ಅವರ ಈ ಮಾತುಗಳು ಕನ್ನಡ ಸಾಹಿತ್ಯದಲ್ಲಿ ಕ.ಬ.ಅಂಗಡಿಯವ ನೆಲೆ-ಬೆಲೆಗಳನ್ನು ಸಮೀಕರಿಸುತ್ತಾರೆ.

ಕ.ಬ.ಅಂಗಡಿಯವರ ಕೃತಿಗಳು ಹೆಚ್ಚಾಗಿ ಭಾಮಿನಿಯಲ್ಲಿರುವದು. ಒಂದು ವಿಶೇಷ, ವಾರ್ಧಿಕದ ಲಯ ಲಲಿತ. ಅದು ೫ ೫ ಮಾತ್ರೆಗಳ ಸಮಾನಗತಿಯಿಂದ ನಡೆಯುತ್ತದೆ. ಭಾಮಿನಿಯಲ್ಲಿ ಲಯ ಮಿಶ್ರ ರೂಪದ್ದು. ೩ ೪ ಮಾತ್ರೆಗಳ ಗಣ ವಿಪರ್ಯಾಸದಿಂದ ಇದರ ನಡಿಗೆಯಲ್ಲಿ ಬೆಡಗು ತುಂಬುತ್ತದೆ. 'ಭಾಮಿನಿ' ಎಂಬ ಹೆಸರಿಗೆ ತಕ್ಕಂತೆ ನುಡಿಯಲ್ಲಿ ಉಲ್ಲಾಸದ ವಿನ್ಯಾಸ ಹೆಚ್ಚುತ್ತದೆ. ಇದರಿಂದಲೇ ಚಾಮರಸ, ಕುಮಾರವ್ಯಾಸ ಕವಿಗಳ ಕಾವ್ಯಗಳು ರಾಗ ಸಂಯೋಜನೆಗೂ, ಭಾವಾಭಿವ್ಯಕ್ತಿಗೂ, ಹೆಚ್ಚು ಪ್ರಸಿದ್ಧಿಯನ್ನು ಪಡೆದವು. ಇವರ ಭಾಮಿನಿ ಷಟ್ಪದಿಯ ಸೊಬಗಿಗೆ ಒಂದು ಉದಾಹರಣೆ ಇಲ್ಲಿದೆ. ಅವರ ಕೃತಿ ಕಾಯಕಯೋಗಿ ಶ್ರೀ ರುದ್ರಮುನಿ ಸ್ವಾಮಿಗಳವರ ವ್ಯಕ್ತಿತ್ವದ ನೈಜ ಚಿತ್ರಣ ಇಲ್ಲಿದೆ.

"ಮಾಟಗಾರನು ಅಲ್ಲ ಡಾಂಭಿಕ

ದಾಟಗಾರನು ಅಲ್ಲ ವಿಧ ವಿಧ

ಪಾಟಗಾರಿಕೆಯಿಂದ ಮೋಸವ ಮಾಡುವವನಲ್ಲ ॥

ಮೋಟಿಯಾಗಿಹನೀತ ವಿರತರ

ಕೂಟದೊಳು ತಾಸಕಲ ವಿಧ ಶಿವ

ನಾಟವಾಡುಲಿಹನು ಜನತೆಯ ಹಿತವ ಕೋರುತ್ತ॥ [ರು. ಶ.ಚ.ಗೀ-೧೨, ೫]

ಈ ಪದ್ಯದಲ್ಲಿ ಆದಿಪ್ರಾಸದ ಸಹಜ ಲೋಲುಪತೆಯಿದೆ, ಗಣವಿನ್ಯಾಸ, ಪದವಿನ್ಯಾಸಗಳು ಒಂದರೊಡನೊಂದು ಬೆರೆತು ಸಾಗುವ ಅಭೀಪ್ಸೆಯಿದೆ. ಚಿಕ್ಕ ಚಿಕ್ಕ ವಾಕ್ಯಗಳಲ್ಲಿ ಸ್ವಾಭಾವಿಕವೂ ಸತ್ಯಪೂರ್ಣವೂ ಆದ ವ್ಯಕ್ತಿತ್ವವೊಂದನ್ನು ಚಿತ್ರಿಸುವ ಖಂಡಿತ ಮತಿಯಿದೆ.

ಮಾಟ: ಗಾರನು: ಅಲ್ಲ: ಡಾಂಭಿಕ — ೩. ೪. ೩. ೪.

ದಾಟ: ಗಾರನು: ಅಲ್ಲ: ವಿಧ ವಿಧ — ೩. ೪. ೩. ೪.

ಪಾಟ: ಗಾರಿಕೆ: ಯಿಂದ: ಮೋಸವ: ಮಾಡು: ವವನ: ಲ್ಲ ೩. ೪. ೩. ೪. ೩. ೪. ಗು.

ಮೋಟಿ: ಯಾಗಿಹ: ನೀತ: ವಿರತರ ೩. ೪. ೩. ೪.

ಕೂಟ: ದೊಳು ತಾ: ಸಕಲ: ವಿಧ ಶಿವ ೩. ೪. ೩. ೪.

ನಾಟ: ವಾಡುತ: ಲಿಹನು: ಜನತೆಯ: ಹಿತವ: ಕೋರು: ತ್ತ ೩. ೪. ೩. ೪. ೩. ೪. ಗು.

[ ರು. ಶ. ಚ. ೧೬-೧೨-೫]

ಹೀಗೆ ಇಲ್ಲಿನ ನುಡಿಗುಣವನ್ನು ವಿಂಗಡಿಸಿ ಓದಿದಾಗ ಲಯದ ನಡೆಯನ್ನು ಅತ್ಯಂತ ಸೂಕ್ಷ್ಮವಾಗಿ, ನಯವಾದ ಚರಣಗಳು ಸ್ಪಂದಿಸುತ್ತ ಹೋಗುತ್ತವೆ. ಇಂಥ ಪದ್ಯಗಳು ಸಾರ್ಥಕವಾದವುಗಳೆಂದು ಬೇರೆ ಹೇಳಬೇಕಿಲ್ಲ. ಇವರು ಈ ಹಂತಗಳಲ್ಲಿ ಹಿಂದಿನ ಕವಿಗಳ ಕಾವ್ಯ ಪದ್ಧತಿಯ ಜಾಯಮಾನವನ್ನು ಸಾಧಿಸಿಕೊಂಡಿದ್ದಾರೆ. ಇವರಿಂದ ಪರಂಪರೆಯ ಗೌರವ ಹೆಚ್ಚಿದೆ.

## ೪.೬.೬ ಕ.ಬ.ಅಂಗಡಿಯವರ ಕೃತಿಗಳಲ್ಲಿ ಸಾಮಾಜಿಕ ಚಿಂತನೆಗಳು :

ಸಮಾಜ ಹಿತದೃಷ್ಟಿ ಈ ಕವಿಗಳ ಇನ್ನೊಂದು ಹಿರಿಯ ಮೌಲ್ಯ. ಯಾರು ಕ್ರಿಯಾ-ಜ್ಞಾನಗಳಲ್ಲಿ ಒಂದಾಗಿ, ನಡೆ-ನುಡಿಗಳ ಕೂಡಲ ಸಂಗಮವಾಗಿ, ಆತ್ಮ ಕಲ್ಯಾಣ-ಲೋಕ ಕಲ್ಯಾಣವನ್ನು ಒತ್ತಟ್ಟಿಗೇ ಸಾಧಿಸಿ, ಯಾರು ಸಮಾಜವನ್ನು ಮೇಲೆತ್ತಿದರೋ ಅಂಥವರ ಆತ್ಮ ಚರಿತ್ರೆಗಳಿಗೆ ತಮ್ಮ ಕಾವ್ಯ ಪರಿಮಳದ ದಿವ್ಯ ಸುಗಂಧವನ್ನು ಹರಡಿ, ಆತ್ಮಸಂಸ್ಕಾರವನ್ನುಂಟು ಮಾಡಿದ್ದಾರೆ. ಕ.ಬ.ಅಂಗಡಿಯವರ ಸಮಾಜದ ಹಿತದೃಷ್ಟಿಗೆ ಇವು ನಿದರ್ಶನಗಳು.

"ಜೋತಿ ಹಿನತೆಯಿಂ ಸಮಾಜವು

ಸೋತು ನಿಂತಿರಲದನ ನೆತ್ತಲು

ಓತುಕಾಲೋಚಿತ್ಯ ಕಾಯಕಧರ್ಮ ಮಾರ್ಗದೊಳು" [ಶ್ರೀ ರು. ಶಿ. ೧೬. ಪೀಠಿಕೆ, ೧]

ತಮ್ಮ 'ಮುರಗೋಡ ಮಹಾಂತ ಶಿವಯೋಗೀಶ ಚರಿತಾಮೃತಂ' ಕಾವ್ಯದಲ್ಲಿ ವೀರಶೈವ ಸಮಾಜದ ಸಮಷ್ಟೀ ರೂಪದ ಬೆಳವಣಿಗಗೆ ಸರ್ವತ್ಯಾಗ ಮಾಡಿದ ಮಹನೀಯರನ್ನು ಒಂದು ಪದ್ಯದಲ್ಲಿ ಸ್ಮರಿಸಿದ್ದಾರೆ. ಇವರಲ್ಲಿ ಒಬ್ಬೊಬ್ಬರ ಚರಿತ್ರೆಗಳೇ ಒಂದೊಂದು ಶತಮಾನವನ್ನು ಬೆಳಗುವಷ್ಟು ಉಜ್ವಲವಾಗಿವೆ. ಒಂದೊಂದು ಗ್ರಂಥಗಳಾಗಿ ಮೆರೆಯುವ

ಸತ್ತ್ವ ಪಡೆದಿವೆ. ಕವಿಸ್ಮರಣೆಯಲ್ಲಿ ಮೂಡಿಬಂದ ಈ ಸಮಾಜ ಪುರುಷರ ಹೆಸರು ಕರ್ಣಪಟಲದಲ್ಲಿ ಸುಳಿದರೆ ದಿವ್ಯ ರೋಮಾಂಚನವಾಗುತ್ತದೆ.

"ದಾನಿ ಶಿರಸಂಗೀಯ ದೇಸಾ

ಯ್ಯಾಣತನದಿಂ ವಚನ ವಾಙ್ಮಯ

ಜೇನನಿತ್ತಹ ಬಸವನಾಳ್ಹಕಟ್ಟಿ ಹರಡೇಕರ

ತಾನು ಡೆಪ್ಯುಟಿ ಚೆನ್ನಬಸವರು

ಕ್ಷೀಣವಾದ ಸಮಾಜ ಶಿಕ್ಷಣ

ಹೀನತೆಯ ಕಳೆಯುತ್ತೆ ಸೇವೆಯ ಗೈದ ಪದ ಸ್ಮರಿಸಿ **[ಮು.ಮ.ಶಿ.ಚ ಪೀಠಿಕೆ, ೧೭]**

ನಮ್ಮ ಹಿಂದಿನ ಸಂಪ್ರಾದಾಯಿಕ ಕವಿಗಳಲ್ಲಿ ಸುಕವಿ ಪ್ರಶಂಸೆ, ಕುಕವಿ ನಿಂದೆ ಹಾಗೂ ತಮ್ಮ ಇಷ್ಟ ದೈವದ ಸ್ಮರಣೆಯನ್ನು ಕಾಣಬಹುದು. ಇವರು ಸಮಕಾಲೀನ ವ್ಯಕ್ತಿಗಳ ಬಗೆಗೆ ತೋರಿದ ಪರಿಚಯ, ಪ್ರತಿಕ್ರಿಯೆಗಳನ್ನು ಅವಲೋಕಿಸಿದಾಗ, ಸಮಾಜ ಪುರುಷರನ್ನು ಹೀಗೆ ಸ್ಮರಿಸುವ ಸತ್ಸಂಪ್ರದಾಯವನ್ನು ಮುಂದಿನ ಕವಿಗಳಲ್ಲೂ ಕಾಣುತ್ತಿರುವದು ಒಂದು ವೈಶಿಷ್ಟ್ಯವಾಗಿದೆ.

## ೪.೬.೭ ಕ.ಬ.ಅಂಗಡಿಯವರ ಕೃತಿಗಳಲ್ಲಿ ಧರ್ಮ ಚಿಂತನೆಗಳು :

ಕ.ಬ.ಅಂಗಡಿಯವರು ತಮ್ಮ ಜೀವನಾವಧಿಯಲ್ಲಿ ಗಳಿಸಿಕೊಂಡ ಆಸ್ತಿ ಬುದ್ಧಿ, ಸದ್ಭಕ್ತಿ, ಹಾಗೂ ಗುರು-ಲಿಂಗ-ಜಂಗಮರಲ್ಲಿ ಬೆಳೆಸಿಕೊಂಡು ಬಂದ ಪ್ರೇಮ ವಿಶ್ವಾಸಗಳ ಅಡಿಗಳಲ್ಲಿ ಧಾರ್ಮಿಕ ಚಿಂತನೆಗಳು ಮೂಡಿಬಂದಿವೆ. ಅವರು ಈವರೆಗೆ ರಚಿಸಿದ ಸಾಹಿತ್ಯವೆಲ್ಲ ಧಾರ್ಮಿಕ ಮಹಾಪುರುಷರ ಸತ್ಯದರ್ಶನವಾಗಿವೆ. 'ಉರಗಾದ್ರಿ ಕರಿಬಸವಲೀಲೆ', 'ಮುರಗೋಡದ ಮಹಾಂತ ಶಿವಯೋಗೀಶ್ವರ ಚರಿತಾಮೃತಂ', 'ಕಾಯಕಯೋಗಿ ರುದ್ರಮುನಿ ಶಿವಯೋಗಿಗಳ ಗೀತಮಾಲೆ', 'ಮೃಡಗಿರಿ ಅನ್ನದಾನೀಶ್ವರ ಲೀಲಾಮೃತಂ' ಇವು ಹಿರಿಯ ಹಾಗೂ ಸಮಕಾಲೀನ ಮಹಾವ್ಯಕ್ತಿಗಳ ನೂತನ ಕಥೆಗಳಾಗಿವೆ. ವೀರಶೈವ ಪುರಾಣಗಳು ವೀರಶೈವ ಧರ್ಮದ ವಸ್ತುಕೋಶಗಳೂ ಆಗಿರುವಂತೆ, ಪುರಾತನ-ನೂತನ ಶರಣರ ಚರಿತ್ರೆಗಳೂ ಆಗಿವೆ. ಆಯಾ ಕಾಲದ ಗಣಗಳ ಚರಿತ್ರೆಯನ್ನು ತಮ್ಮ ಪುರಾಣಗಳಲ್ಲಿ ಸೇರಿಸಿಕೊಳ್ಳುವ, ಇಲ್ಲವೆ ಸ್ವತಂತ್ರವಾಗಿ ರಚಿಸುವ ಸನ್ಮಾರ್ಗವನ್ನು ಸೃಷ್ಟಿಸಿದವರಲ್ಲಿ ಲಕ್ಕಣ್ಣ

ದಂಡೇಶ ಮೊದಲಿಗ. ಅವನ ಆದರ್ಶವನ್ನು ನಂತರದಲ್ಲಿ ಗುಬ್ಬಿಯ ಮಲ್ಲಣ್ಣ, ಅದೃಶ್ಯಕವಿ, ಸಿದ್ಧನಂಜೇಶ, ವಿರುಪಾಕ್ಷ ಪಂಡಿತಾದಿ ಕವಿಗಳು ಮುಂದುವರೆಸುತ್ತ ಬಂದರು. ಅವರಿಂದ ಆಧುನಿಕ ಮಹಾವ್ಯಕ್ತಿಗಳ, ಮಹಾಸ್ವಾಮಿಗಳವರ ಇತಿಹಾಸ ಪುರಾಣ ರೂಪದಲ್ಲಿ ಹೊರಬಂದಿದೆ. ನಾಳೆ ಇವರ ಪುರಾಣಗಳೇ ಮಹಾತ್ಮರ ಚರಿತ್ರ ಶೋಧನೆಗೆ ಮಾತೃಕೆಗಳಾಗಬಲ್ಲವು. ಈ ಪರಂಪರೆಯ ಹಿನ್ನೆಲೆಯಲ್ಲಿ ಅಂಗಡಿಯವರು ಇತರರ ಮುಂದುವರಿಕೆಯಾಗಿ ಬಂದು ನಿಲ್ಲುತ್ತಾರೆ. ಅನಿತ್ಯವಾದ ಬಾಳಿನಲ್ಲಿ ಕ.ಬ.ಅಂಗಡಿಯವರು ಸಾಧಿಸಿದ ನಿತ್ಯತ್ವಕ್ಕೆ ಅವರ ಕೃತಿಗಳೇ ನಿದರ್ಶನವಾಗಿವೆ.

'ಕೆರೆ ತುಂಬದೆ ಕೋಡಿ ಹರಿಯುವದಿಲ್ಲ' ಮಹಾತ್ಮರ ಅನುಸಂಧಾನದ ಒಡನಾಟವಿಲ್ಲದೆ ಇಲ್ಲಿನ ಅಂತಃಕರಣ ಕಾವ್ಯವಾಗುವುದಿಲ್ಲ. ಎಲ್ಲಿಯವರೆಗೆ ವೀರಶೈವ ಜನಾಂಗದ ಇತಿಹಾಸ ಉಳಿದು ಬರುತ್ತದೆಯೋ ಆವರೆಗೂ ನಿಲ್ಲಬಲ್ಲ ಪುರಾಣ ಕೃತಿಗಳನ್ನು ಇವರು ರಚಿಸಿದ್ದಾರೆ. ಅವರ ಭಕ್ತಿ, ವಾಕ್ಯೋಕ್ತಿಗಳೆರಡೂ ಕನ್ನಡದ ಕಾವೇರಿಯಾಗಿ ಅನಂತಕಾಲ ಹರಿದು ಬಂದಿವೆ.

### ೪.೭ ಬಿಡಿ ಲೇಖನಗಳು :

ಪ್ರಾರಂಭದಿಂದಲೂ ಸಂಶೋಧನೆಯ ಪ್ರವೃತ್ತಿಯನ್ನು ಬೆಳೆಸಿಕೊಂಡಿದ್ದ ಕ.ಬ.ಅಂಗಡಿಯವರು ಸಾಕಷ್ಟು ಬಿಡಿ ಲೇಖನಗಳನ್ನು ಬರೆದಿದ್ದಾರೆ. ಆದರೆ ಮೂರು ಮಾತ್ರ ಉಪಲಬ್ಧವಾಗಿವೆ. ಅದರಂತೆ ಹಲವಾರು ಕೃತಿಗಳಿಗೆ ಮುನ್ನುಡಿಯನ್ನು ಬರೆದಿದ್ದಾರೆ. ಅವು ಮುನ್ನುಡಿ ರೂಪದಲ್ಲಿಯ ಅವುಗಳು ವಿಮರ್ಶಾತ್ಮಕ ಬರಹಗಳೇ ಆಗಿವೆ.

೧) ಗದುಗು ಗದ್ದಿಗೆಯೇ ?

೨) ಗದುಗಿನ ಶ್ರೀ ಹೊನ್ನಗುಡೇಶ್ವರ ಚವಕಿ

೩) ನಾಮಾವಳಿಗಳ ಪಠಣ ಗುರುತ್ವ

### ೪.೭.೧. ಗದುಗು ಗದ್ದಿಗೆಯೇ ?

ಶರಣರ ಕಾಲಜ್ಞಾನ ವಚನಗಳನ್ನು ವಿಮರ್ಶಿಸುವ ಅವರ ವೈಚಾರಿಕತೆಯನ್ನು ಅವರ ಬರಹಗಳಲ್ಲಿ ಕಾಣಬಹುದಾಗಿದೆ. "..........ಧಾರವಾಡ ದಾರಿಯಾಗಿ, ಹುಬ್ಬಳ್ಳಿಯಲ್ಲಿ ಹುಡುದಿಯಾಗಿ, ಗದುಗು ಗದ್ದುಗೆಯಾಗಿ ಲಕ್ಕುಂಡಿಯಲ್ಲಿ ಲೆಕ್ಕವಾಗಬೇಕೆಂದು" ಒಂದು



ಗದುಗಿನ ಶ್ರೀ ಹೊನ್ನಗುಡೇಶ್ವರ ಚವಕಿ



ಮಾನ್ವಿ ಚವಕಿ

ವಚನವು ಶರಣ ಸಾಹಿತ್ಯ ಪ್ರಪಂಚದಲ್ಲಿ ಕಂಡು ಬರುತ್ತದೆ. ಇದನ್ನು ಇಟ್ಟುಕೊಂಡು ಅವರು ಗದುಗಿ ಹೆಸರು ಅವರ ಪ್ರಾಚೀನತೆಗಳನ್ನು ಸರಳಿಕರಿಸುತ್ತಾರೆ.

"ಜೋಳದಾ ಬೋನಕ್ಕೆ...

... ಸರ್ವಜ್ಞ !"

"ಕಡಲೆಯನು ...

... ಸರ್ವಜ್ಞ!"

ಎನ್ನುವ ವಚನಗಳ ವಿವೇಚನೆಯಲ್ಲಿ ಅವರು ಈ ನಾಡಿನ ಬೌಗೋಳಿಕ, ಸಾಂಸ್ಕೃತಿಕ ಸಂಪತ್ತನ್ನು ವರ್ಣಿಸುವುದು ಕಣ್ಣಿಗೆ ಕಟ್ಟುತ್ತದೆ.

ಲಕ್ಕುಂಡಿ, ಕಪ್ಪತ್ತಗುಡ್ಡ, ಮುಳಗುಂದ, ಅಣ್ಣಿಗೇರಿ, ಹೊಸಳ್ಳಿ, ಕುರ್ತಕೋಟಿ ಮುಂತಾದ ಸ್ಥಳಗಳಲ್ಲಿ ಶರಣರ ಸಹಚಾರ ಯಾವ ರೀತಿಯಾಗಿ ಸಾಗಿ ಬಂದಿದ್ನೆ ಇಾಎನ್ನುವುದನ್ನು ಅಭ್ಯಸಿಸಿದ್ದಾರೆ. ಈ ಲೇಖನದಲ್ಲಿ ಗದುಗಿನ ಸಾರ್ವತ್ರಿಕ ನೋಟವನ್ನು ಸಾದರಪಡಿಸಿದ್ದಾರೆ.

## ೪.೭.೨.ಗದುಗಿನ ಹೊನ್ನಗುಡೇಶ್ವರ ಚವಕಿ

ಗದುಗಿನಲ್ಲಿರುವ ಪಾರಂಪರಿಕ ಕಟ್ಟಡಗಳನ್ನು, ಅವುಗಳ ವಿರಣೆಯನ್ನು ಸಾಧ್ಯಾಂತವಾಗಿ ದಾಖಲಿಸಿರುವ ಕ.ಬ.ಅಂಗಡಿಯವರು ಇಲ್ಲಿಯ ಚೌಕಿಗಳ ವಿಶೇಷತೆಯನ್ನು ಈ ಲೇಖನದಲ್ಲಿ ಸಾದರಪಡಿಸಿದ್ದಾರೆ. ಎಡೆಯೂರು ಸಿದ್ಧಲಿಂಗರ ಪರಂಪರೆಯ ಕೆಲವು ಮಠ, ಮಾನ್ಯಗಳು ಗದುಗಿನ ಭಾಗದಲ್ಲಿ ಕಂಡು ಬರುತ್ತವೆ. ಅವುಗಳ ದ್ಯೇಯ್ಯೋದ್ದೇಶಗಳೇನು ? ಅವುಗಳಿಂದ ವೀರಶೈವ ಪರಂಪರೆಯ ವಿಕಾಸಕ್ಕೆ ಪರೋಕ್ಷವಾಗಿ ಯಾವ ರೀತಿಯ ಸೇವೆ ಲಭ್ಯವಾಗಿದೆ ಎನ್ನುವ ವೈಚಾರಿಕ ಲೇಖವಿದು. ಗದುಗಿನಲ್ಲಿ ಕಂಡು ಬರುವ ಹೊನ್ನಗುಡಿ ಚೌಕಿ, ಮಾನ್ವಿ ಚೌಕಿ, ನಾಲವಾಡ ಚೌಕಿಗಳ ಕುರಿತು ಹೆಚ್ಚು ಸಂಶೋಧನಾತ್ಮಕ ವಿವರಣೆಗಳನ್ನು ಇಲ್ಲಿ ನೀಡಿದ್ದಾರೆ. ಈ ಕುರಿತು ಇನ್ನೂ ಹೆಚ್ಚಿನ ಅಧ್ಯಯನ ನಡೆದಲ್ಲಿ ಗದುಗಿನ ಸಾಂಸ್ಕೃತಿಕ ಪರಿಸರ ಇನ್ನೂ ಹೆಚ್ಚು ಶ್ರೀಮಂತವಾಗುತ್ತದೆ.

### ೪.೭.೩ ನಾಮಾವಳಿಗಳ ಪಠಣ ಗುರುತ್ವ :

ಈ ಲೇಖನದಲ್ಲಿ ನಾಮಾವಳಿಗಳನ್ನು ಬರೆಯುವ ಅಥವಾ ಪಠಣ ಮಾಡುವುದರಿಂದ ಆಗುವ ಲಾಭಗಳನ್ನು ಮತ್ತು ಆಧ್ಯಾತ್ಮಿಕ ಬದುಕಿನಲ್ಲಿ ಮತ್ತು ಸಹಜ ಜೀವನದಲ್ಲಿ ಅವುಗಳ ಮಹತ್ವವೇನು ಎಂದು ಹೇಳುತ್ತಾರೆ.

*****

## ಅಡಿಟಿಪ್ಪಣಿ:

೧. ‘ಶರಣ’ ಸಂಚಿಕೆ, ಪುಟ ೧೮.

೨. ಅದೇ, ಪುಟ ೧೮.

೩. ‘ಡಾ. ಪುಟ್ಟರಾಜ ಗವಾಯಿಗಳವರ ಐದು ಅಪ್ರಕಟಿತ ನಾಟಕಗಳು’, ಉಮೇಶ ಅಂಗಡಿ, ‘ಜ್ಞಾನ ದೇಗುಲ’, ಪುಟ ೨೬೯]

೪. ಕೆ.ವಿ.ಸುಬ್ಬಣ್ಣ.

೫. ‘ಶರಣ’ ಸಂಚಿಕೆ, ಪುಟ ೧೯.

೬. ಅದೇ, ಪುಟ ೨೧

೭. ಅದೇ, ಪುಟ ೨೧

೮. ಅದೇ, ಪುಟ ೨೧

೯. ‘ಶ್ರೀ ಶಿವಾನುಭವವೂ ಮತ್ತು ಅಂಗಡಿ ಕರವೀರಪ್ಪನವರೂ’,ಶ್ರೀ ತುಪ್ಪದ ಬಸವರಾಜ, ‘ಶರಣ’ ಸಂಚಿಕೆ, ಪುಟ ೩೮,೩೯

೧೦. ‘ಘನಮಹಿಮರು, ಕ.ಬ.ಅಂಗಡಿಯವರ ನುಡಿಗಳು, ಪುಟ ೧೦

೧೧. ಅದೇ, ಪುಟ ೧೧

೧೨. ಅದೇ, ಪುಟ ೧೪

೧೩. ಅದೇ, ಪುಟ ೧೮

೧೪. ಅದೇ

೧೫. ‘ಶರಣ’ ಸಂಚಿಕೆ, ಪುಟ ೪೧, ೮೬ ಮತ್ತು ಕ.ಬ.ಅಂಗಡಿಯವರ ಕೈಬರಹದ ಕೃತಿಗಳ ಪಟ್ಟಿ

೧೬. ‘ವೀರಶೈವ ಸ್ತೋತ್ರ ಸಾಹಿತ್ಯ’, ಸಿದ್ಧಲಿಂಗಶ್ರೀ, ಎಸ್. ಶಿವಣ್ಣ, ಪುಟ ೯೧೬

೧೭. ‘ಶರಣ’ ಸಂಚಿಕೆ, ಡಾ. ಸುಂಕಾಪುರ ಅವರ ಲೇಖನದಿಂದ.

೧೮. ‘ಅಷ್ಟಕ ಸಾಹಿತ್ಯ’, ‘ಗೌರವ’, ಪುಟ ೪೫೨.

೧೯. ಅದೇ, ಪುಟ ೪೫೨

೨೦. ಅದೇ, ಪುಟ ೪೫೨

೨೧. ಅದೇ, ಪುಟ ೪೫೨

೨೨. ಅದೇ, ಪುಟ ೪೫೨

೨೩. 'ಅರಭಾವಿ ಚಿದಾರಣ್ಯ ಪುಣ್ಯಕ್ಷೇತ್ರ ದುರದುಂಡಿ ನವಮಹಾಂತಶಿವಯೋಗಿ ಸ್ತೋತ್ರಷ್ಟಕಂ',ದ ಅರ್ಪಣ ವಿಭಾಗದಲ್ಲಿ.

೨೪. 'ಮುರಗೋಡ ಮಹಾಂತ ಶಿವಯೋಗಿಗಳ ನಡೆ-ನುಡಿ-ಬೆಡಗಿನ ಮಾಲೆ' ಕ.ಬ.ಅಂಗಡಿಯವರ ನುಡಿಗಳು. ಪುಟ ೨೫

೨೫. 'ಗಣಸಹಸ್ರ-ಜಯಬಸವ-ಸಿದ್ಧಲಿಂಗಶ್ರೀಗುರು ನಾಮಾವಲಿತ್ರಯ', ಪೀಠಿಕೆಯಲ್ಲಿ, ಕ.ಬ.ಅಂಗಡಿ .ಅವರ ನುಡಿಗಳು

೨೬. 'ಮುರಗೋಡ ಮಹಾಂತ ಶಿವಯೋಗಿಗಳ ನಡೆ-ನುಡಿ-ಬೆಡಗಿನ ಮಾಲೆ'

೨೭. ಅದೇ

೨೮. ಅದೇ

೨೯. 'ಶ್ರೀ ಬಸವ ಭಜನಾ ಮಾಲೆ', ಮುನ್ನುಡಿ, ಕ.ಬ.ಅಂಗಡಿ.

೩೦. ಅದೇ

೩೧. ಅದೇ

೩೨. ಹಾಡುಗಬ್ಬಗಳು ಪ್ರಾಚೀನ ದೇಶಿ ಕಾವ್ಯ ಮಟ್ಟುಗಳು. ಯಾವುದೇ ಕಾವ್ಯದ ಕಟ್ಟ ಕಡೆಯ ಉದ್ದೇಶ ಶ್ರಮ ಪರಿಹಾರವಾಗಿದೆ. ಉದ್ಯೋಗ ನಿರತನಾದ ಮನುಷ್ಯ ತನ್ನ ಬಳಲಿಕೆಯನ್ನು ಆಯಾಸಕರ ಅನಿಸಿಕೆಗಳನ್ನು ಇಂಥಹ ದೇಶಿ ಪದ್ಯಗಳನ್ನು ಕೆಲಸದೊಂದಿಗೆ ಹಾಡುತ್ತ ಶ್ರಮ ಪರಿಹಾರವನ್ನು ಮಾಡಿಕೊಳ್ಳುತ್ತಾರೆ. ಚೆತ್ತಾಣ, ಬೆದಂಡೆ, ಬಾಜನಗಬ್ಬ, ಓವಿ ಇವು ಹಾಡುಗಬ್ಬದ ಕೆಲವು ಉದಾಹರಣೆಗಳು.

೩೩. 'ಅನುಭವದೂಟ', ಕ.ಬ.ಅಂಗಡಿಯವರು ನುಡಿಗಳು, ಪುಟ ೧

೩೪. ಅದೇ, ಪುಟ ೪

೩೫. ಅದೇ, ಪುಟ ೨೨

೩೬. 'ಅಮರವಾಣಿ', ಕ.ಬ.ಅಂಗಡಿಯವರ ನುಡಿಗಳು, ಮುನ್ನುಡಿ

೩೭. ಅದೇ

೩೮. ಅದೇ

೩೯. 'ಅಮರವಾಣಿ', ಸಿ. ಎಮ್. ಹಿರೇಮಠ ಅವರ ನುಡಿಗಳು, ಮುನ್ನುಡಿ.

೪೦. 'ಮುರಗೋಡ ಮಹಾಂತಜ್ಜನವರ ಮಹಿಮೆ', ಕ.ಬ.ಅಂಗಡಿಯವರ ನುಡಿಗಳು, ಪುಟ ೨

೪೧. 'ಮುತ್ತೈದೆಯರೈವರು', ಅನ್ನದಾನೀಶ್ವರ ಮಹಾಸ್ವಾಮಿಗಳು, ಮುಂಡರಗಿ, ಆಶೀರ್ವಚನಗಳು.

೪೨. ಅದೇ

೪೩. 'ಮುತ್ತೈದೆಯರೈವರು', ಕ.ಬ.ಅಂಗಡಿಯವರ ನುಡಿಗಳು, ಪುಟ ೨

೪೪. ಅದೇ, ಪುಟ ೪

೪೫. 'ವಚನ ಮಾಂಗಲ್ಯ',ವಿಜಯಶ್ರೀ ಹಿರೇಮಠ.

೪೬. 'ಮುತ್ತೈದೆಯರೈವರು', ಕ.ಬ.ಅಂಗಡಿಯವರ ನುಡಿಗಳು, ಪುಟ ೧೨

೪೭. 'ಮಡಿವಾಳ ಮಾಚಿದೇವರ ವಚನಗಳು' ಕನ್ನಡ ಜನಪದದ ಹಂತಿ ಹಾಡು, ಚೆನ್ನಕ್ಕ ಎಲಿಗಾರ

೪೮. ಅದೇ

೪೯. ಅದೇ

೫೦. 'ಮುತ್ತೈದೆಯರೈವರು', ಕ.ಬ.ಅಂಗಡಿಯವರ ನುಡಿಗಳು, ಪುಟ ೧೨

೫೧. ಅದೇ, ಪುಟ ೧೨

೫೨. ಅದೇ, ಪುಟ ೩೪

೫೩. ಅದೇ, ಪುಟ ೪೧

೫೪. 'ಅಣ್ಣನ ದಾರಿ ತೋರಿದ ಕಾರಣಿಕ ಶಿವಯೋಗಿ ಹಾನಗಲ್ಲ ಕುಮಾರಸ್ವಾಮಿ', ಕ.ಬ.ಅಂಗಡಿಯವರ ಮಾತುಗಳು, ಮುನ್ನುಡಿಯಿಂದ

೫೫. ಅದೇ

೫೬. ಅದೇ, ಪುಟ ೯.

೫೭. ಅದೇ, ೧೦.

೫೮. ಅದೇ, ಪುಟ ೧೫,೧೬

೫೯. ಅದೇ, ಪುಟ ೨೦

೬೦. 'ಶರಣಕ್ಷೇತ್ರ ಗೊಡಚಿ ವಸ್ತು ಮಡಿವಾಳ ಮಾಚಿತಂದೆ', ಕ.ಬ.ಅಂಗಡಿಯವರ ನುಡಿಗಳು, ನಿವೇದನೆ'

೬೧. 'ಶ್ರೀ ಶರಣ ಕ್ಷೇತ್ರ ಗೊಡಚಿವಸ್ತು ಮಡಿವಾಳ ಮಾಚಿತಂದೆ', ಹಾನಗಲ್ಲ ಸದಾಶಿವ ಮಹಾಸ್ವಾಮಿಗಳು, ಶಿವಯೋಗ ಮಂದಿರ, ಆಶೀರ್ವಚನಗಳು.

೬೨. 'ಶ್ರೀಶರಣ ಕ್ಷೇತ್ರ ಗೊಡಚಿವಸ್ತು ಮಡಿವಾಳ ಮಾಚಿತಂದೆ', ನೀಲಕಂಠ ಮಹಾಸ್ವಾಮಿಗಳು, ದುರದುಂಡೀಶ್ವರ ಮಠ, ಮುರಗೋಡ, ಆಶೀರ್ವಚನ.

೬೩. ಅದೇ, ಪುಟ ೩ ಮತ್ತು ೪

೬೪. ಅದೇ, ಪುಟ ೩೫, ೩೬

೬೫. ಅದೇ, ಪುಟ ೩೭

೬೬. ಅದೇ, ಪುಟ ೩೭

೬೭. ಅದೇ, ಪುಟ ೩೮

೬೮. ಅದೇ, ಪುಟ ೩೮

೬೯. ಅದೇ, ಪುಟ ೩೯

೭೦. ಅದೇ, ಪುಟ ೩೯

೭೧. ಅದೇ, ಪುಟ ೪೦

೭೨. ಅದೇ, ಪುಟ ೭೮

೭೩. 'ಕರ್ಮಯೋಗಿ ಸಿದ್ಧರಾಮಪ್ಪ ಅಂದಾನಪ್ಪ ಮಾನವಿ', ಕ.ಬ.ಅಂಗಡಿಯವರ ನುಡಿಗಳು, ಪುಟ ೨

೭೪. ಅದೇ, ಪುಟ ೪

೭೫. ಅದೇ, ಪುಟ ೫

೭೬. ಅದೇ, ಪುಟ ೫೬

೭೭. 'ಸುಮನ ಸಂಹಿತೆ', ನೀಲಕಂಠ ಮಹಾಸ್ವಾಮಿಗಳು, ದುರದುಂಡೀಶ್ವರ ಮಠ, ಮುರಗೋಡ ಅವರ ಆಶೀರ್ವಚನವದಲ್ಲಿ

೭೮. ಅದೇ

೭೯. 'ಅಕ್ಕನ ಚರಿತ್ರೆ', ಕ.ಬ.ಅಂಗಡಿಯವರ ನುಡಿಗಳು

೮೦. ಅದೇ

೮೧. ಅದೇ, ಪುಟ ೨೩

೮೨. ಅದೇ, ಪುಟ ೨೬

೮೩. ಅದೇ, ಪುಟ ೩೮

೮೪. 'ಸಚಿತ್ರ ನಿಬಂಧಮಾಲೆ, ಕ.ಬ.ಅಂಗಡಿಯವರ ನುಡಿಗಳು, ಹಧ್ಗತ

೮೫. 'ಸಚಿತ್ರ ನಿಬಂಧಮಾಲೆ, ಪಿ.ಎಮ್.ಉಮದಿ, ಆಡಳಿತಾಧಿಕಾರಿಗಳು, ಸ್ಕೂಲ ಬೋರ್ಡ, ಗದಗ

೮೬. 'ಸಚಿತ್ರ ನಿಬಂಧಮಾಲೆ', ಎಸ್.ಕೆ.ಅಂಗಡಿ, ಬಿ.ವಿ.ಬಿ.ಇಂಜನಿಯರಿಂಗ್ ಕಾಲೇಜು, ಹುಬ್ಬಳ್ಳಿ

೮೭. ಅದೇ, ಪುಟ ೧೭೬

೮೮. ಅದೇ, ಪುಟ ೩೧೦

೮೯. ಡಾ. ವಿರುಪಾಕ್ಷ ಬಡಿಗೇರ ಅವರ ಮಹಾಪ್ರಬಂಧ 'ಸಿರಸಂಗಿ ಸಂಸ್ಥಾನ : ಒಂದು ಅಧ್ಯಯನ" ದಲ್ಲಿ ನಾನಾ ಫಡನವೀಸ ಅವರ ಕಾಲನಿರ್ಣಯವನ್ನು ಮಾಡಲು ಕ.ಬ.ಅಂಗಡಿಯವರ ಕೃತಿಯಿಂದ ಮಾಹಿತಿಯನ್ನು ಪಡೆದಿರುತ್ತಾರೆ.

೯೦. 'ಸುಬೋಧ ವ್ಯಾಕರಣ', ಕ.ಬ.ಅಂಗಡಿಯವರ ನುಡಿಗಳು, ಮೊದಲ ಮಾತು

೯೧. ಅದೇ, ಪುಟ ೧, ೨, ೩

೯೨. 'ಮುತ್ತು', ಕ.ಬ.ಅಂಗಡಿಯವರ ನುಡಿಗಳು, ಮೊದಲನುಡಿ

೯೩. ಅದೇ, ಪುಟ ೧೭

೯೪. 'ಸುಭಾಸ ಬೋಸ', ಕ.ಬ.ಅಂಗಡಿಯವರ ನುಡಿಗಳು, ಮೊದಲಮಾತು

೯೫. ಅದೇ, ಪುಟ ೨

೯೬. ಅದೇ, ಪುಟ ೪

೯೭. ಅದೇ, ಪುಟ ೧೭

೯೮. ಅದೇ, ಪುಟ ೧೮

೯೯. 'ವೀರಶೈವ ಪುರಾಣಗಳು:ಒಂದು ಅಧ್ಯಯನ', ಡಾ. ಎಸ್. ವಿದ್ಯಾಶಂಕರ, ಪುಟ ೧

೧೦೦. ಅದೇ, ಪುಟ ೪೮.

೧೦೧. 'ಕನ್ನಡ ಸಾಹಿತ್ಯದೊಳಗಿನ ವೀರಶೈವ ಪುರಾಣಗಳು', ಸದಾನಂದ ನಾಯಕ,

ಬಸವನಾಳ ಸ್ಮಾರಕ ಸಮಿತಿ, ಪುಟ ೬೦೩.

೧೦೨. 'ವೀರಶೈವ ಪುರಾಣಗಳು:ಒಂದು ಅಧ್ಯಯನ', ಡಾ. ಎಸ್. ವಿದ್ಯಾಶಂಕರ.

೧೦೩. ಅದೇ ಪುಟ ೧೬೪.

೧೦೪. 'ಕನ್ನಡ ಸಾಹಿತ್ಯದೊಳಗಿನ ವೀರಶೈವ ಪುರಾಣಗಳು', ಸದಾನಂದ ನಾಯಕ,

ಬಸವನಾಳ ಸ್ಮಾರಕ ಸಮಿತಿ, ಪುಟ ೬೦೦.

೧೦೫. 'ವೀರಶೈವ ಷಟ್ಪದಿ ಸಾಹಿತ್ಯ', ಡಾ. ಜಿ.ಎಸ್.ಶಿವರುದ್ರಪ್ಪ, 'ಸಿದ್ಧಗಂಗಾಶ್ರೀ',

ಪುಟ ೯೩೩.

೧೦೬. 'ಮೃಡಗಿರಿಯ ಜಗದ್ಗುರು ಶ್ರಿ ಅನ್ನದಾನೀಶ್ವರ ಲೀಲಾಮೃತಂ', ಹೃದ್ಗತ, ೧೯೭೮.

೧೦೭. 'ಕಾಯಕಯೋಗಿ ಶ್ರೀ ರುದ್ರಮುನಿ ಚರಿತಾಮೃತಂ', ಹಾನಗಲ್ಲ ಸದಾಶಿವ

ಸ್ವಾಮಿಗಳು, ಮುನ್ನುಡಿ, ಪುಟ ೬.

೧೦೮. 'ಉರಗಾದ್ರಿ ಗವಿಮಠ ಶ್ರೀಗುರು ಕರಿಬಸವಯೋಗಿಲೀಲೆ', ಡಾ.ವಿ.ಶಿವಾನಂದ,

ಚೆನ್ನುಡಿ, ಪುಟ ೮.

೧೦೯. 'ಶರಣ' ಸಂಚಿಕೆ, ಡಾ.ವಿ.ಶಿವಾನಂದ, ಪುಟ ೯೦.

*****

ಅಧ್ಯಾಯ : ಐದು

# ಸಾಧನೆಗಳು

- ಸಾಮಾಜಿಕ ಸಾಧನೆಗಳು
- ಶೈಕ್ಷಣಿಕ ಸಾಧನೆಗಳು
- ಸಾಹಿತ್ಯಿಕ ಸಾಧನೆಗಳು
- ಧಾರ್ಮಿಕ ಸಾಧನೆಗಳು
- ಆರ್ಥಿಕ ಸಾಧನೆಗಳು

# ಸಾಧನೆಗಳು

ಕ.ಬ.ಅಂಗಡಿಯವರದು ಬಹುಮುಖ ವ್ಯಕ್ತಿತ್ವ ಜನಸಾಮಾನ್ಯರಾಗಿ, ವೃತ್ತಿಪರ ಶಿಕ್ಷಕರಾಗಿ, ಶಿಕ್ಷಣಾಧಿಕಾರಿಯಾಗಿ, ಸಂಘಟಕರಾಗಿ, ಸಮಾಜ ಸೇವಕರಾಗಿ, ಲೇಖಕರಾಗಿ, ವ್ಯವಹಾರಿಕರಾಗಿ, ಪಾರಮಾರ್ಥಿಕ ಸಾಧಕರಾಗಿ, ಶರಣರಾಗಿ ಅವರು ಸಾಧಿಸಿದ ಸಾಧನೆಗಳನ್ನು ಒಟ್ಟಾರೆಯಾಗಿ ಈ ರೀತಿಯಾಗಿ ವಿಂಗಡಿಸಿಕೊಳ್ಳಬಹುದು. ಅವರ ಸಾಧನೆಗಳು ಪರಿಪೂರ್ಣ ಶೈಕ್ಷಣಿಕ ನೆಲೆಯನ್ನೇ ಆಧರಿಸಿದಂತವುಗಳು. ಜೀವನದ ಯಾವುದೇ ಕ್ಷೇತ್ರವಿರಲಿ ಅಲ್ಲಿ ಅವರ ಸಾಧನೆಗಳು ಸಾಹಿತ್ಯ, ಶಿಕ್ಷಣಗಳ ಮೂಲಕವೇ ರೂಪುಗೊಂಡಿವೆ. ಲೌಕಿಕ-ಪಾರಮಾರ್ಥಿಕ ಬದುಕಿನ ಬೆಸುಗೆಯಲ್ಲಿ ಭೌತಿಕವಾಗಿಯೂ ಹಾಗೂ ಅನುಭಾವಿಕ ನೆಲೆಯಲ್ಲಿ ಅವರ ಸಾಧನೆಗಳು ಗುರುತಿಸಲು ಸಾಧ್ಯವಾಗಿವೆ.

೧) ಸಾಮಾಜಿಕ ಸಾಧನೆಗಳು ೨)ಶೈಕ್ಷಣಿಕ ಸಾಧನೆಗಳು ೩)ಸಾಹಿತ್ಯಿಕ ಸಾಧನೆಗಳು

೪) ಧಾರ್ಮಿಕ ಸಾಧನೆಗಳು ೫)ಆರ್ಥಿಕ ಸಾಧನೆಗಳು

## ೫.೧ ಸಾಮಾಜಿಕ ಸಾಧನೆಗಳು :

ಇವರ ಮೇಲೆ ಬಸವಾದಿ ಶಿವಶರಣರ ಪ್ರಭಾವ ಅನನ್ಯ. ಹೀಗಾಗಿ ೧೨ನೆಯ ಶತಮಾನದ ಶರಣರ ಚಿಂತನೆಗಳು ಸಾಮಾಜಿಕ ಬದಲಾವಣೆಗಳಿಗೆ ಬಳಸಿಕೊಳ್ಳುವ ಇವರ ಪ್ರಯತ್ನ ಅವರ ಬದುಕು-ಬರಹಗಳಲ್ಲಿ ಕಂಡು ಬರುತ್ತವೆ. ಸಾಮಾಜಿಕ ಹಿನ್ನೆಲೆಯಲ್ಲಿ ಅವರ ಸಾಧನೆಗಳನ್ನು ಗಮನಿಸಿದಾಗ ಪ್ರಸ್ತುತ ಸಾಮಾಜಿಕ ಆಯಾಮಗಳಿಗೂ ಅವು ಸಲ್ಲುವಂತವುಗಳು.

- ತಮ್ಮ ವೃತ್ತಿ ವಿದ್ಯಾದಾನದೊಡನೆ ಸಮಾಜಕ್ಕೆ ಜ್ಞಾನ ದಾನ ಮಾಡುವ ಸೇವಾ ಧರ್ಮವನ್ನು ಅವರು ಮೈಗೂಡಿಸಿಕೊಂಡು ಬಂದುದು ಶ್ಲಾಘನೀಯ.[೧]

- ಅನುಭವ ಸಾಹಿತ್ಯವನ್ನೇ ಭಟ್ಟಿ ಇಳಿಸಿದಂತೆ ವಿವಿಧ ವಿಷಯಗಳ ಮೇಲೆ ಕಾವ್ಯಮಯವಾಗಿ ಹೆಣೆಯಲಾದ 'ಅನುಭವದೂಟ' ಎಂಬ ಗ್ರಂಥ ವಿಶೇಷವಾಗಿ ವೀರಶೈವ ಗೃಹಿಣಿಯರಿಗಾಗಿ ಬರೆಯಲ್ಪಟಿತು. ಅನಂತರ ಜ್ಞಾನ ಬುಭುತ್ಸಗಳಿಗಾಗಿ 'ಅಕ್ಕನ ಚರಿತ್ರೆ'

ಮತ್ತು ‘ಅಮರವಾಣಿ’ ಎಂಬ ಗ್ರಂಥಗಳು ಜ್ಞಾನ ಸುಧೆಯೇ ಮೈದಾಳಿ ಬಂದಂತೆ ಹೊರಬಂದು ಜನಮೆಚ್ಚುಗೆ ಪಡೆದವು. [೨]

◆ ಜನತೆಯಲ್ಲಿ ರಾಷ್ಟ್ರೀಯ ಪ್ರಜ್ಞೆ ಜಾಗೃತವಾಗುವಂತೆ ರಚಿಸಲಾದ ‘ಸಾಹಸಿ ಸುಭಾಸ ಭೋಸ’, ‘ಮೋತಿಲಾಲ ನೆಹರು’, ‘ಜವಾಹರಲಾಲ ನೆಹರು’, ಮೊದಲಾದ ಕೃತಿಗಳು ಆಧುನಿಕ ಯುವಜನಾಂಗಕ್ಕೆ ದಿವ್ಯ ಕೊಡುಗೆಗಳು ಎಂದು ಹೇಳಬಹುದು. [೩]

◆ ಕ.ಬ.ಅಂಗಡಿಯವರದು ಮೃದುವಾದ ವ್ಯಕ್ತಿತ್ವವಾಗಿದ್ದು ಮಾತಿನಲ್ಲಿ ಸೌಜನ್ಯ ತುಂಬಿ ತುಳುಕುತ್ತಿತ್ತು. ಆದರೂ ಸಾಹಸಮಯ ಜೀವನ, ‘ತರುಣ ಸಂಘ, ಗದಗ’ ಅದರ ಕಾರ್ಯಕರ್ತರಾಗಿ, ‘ಅಖಿಲ ಭಾರತ ವೀರಶೈವ ವಿದ್ಯಾಪೀಠದ ಕಾರ್ಯದರ್ಶಿಗಳಾಗಿ ಗೈದ ಕಾರ್ಯ ಅನುಪಮ. ಇಂದು ನಮ್ಮ ಮುಂದಿರುವ ಹಲವಾರು ಸಮಸ್ಯೆಗಳಿಗೆ ಸಂಘಟಿತ ರೂಪದಲ್ಲಿ ಉತ್ತರಗಳು ಸಿಗಬೇಕಾಗಿವೆ. ಆದರೆ ಸಾಂಘಿಕ ಬದುಕಿಗೆ ಬೇಕಾಗುವ ಗೊತ್ತು ಗುರಿಗಳನ್ನು ಗುರುತಿಸುವಲ್ಲಿ ನಾವು ವಿಫಲರಾಗಿದ್ದೇವೆ. ಮ್ಯಾನೇಜಮೆಂಟ್ ಸ್ಟಡಿಗಳಲ್ಲಿ ಈ ವಿಫಲತೆಗೆ ಉತ್ತರಗಳನ್ನು ಹುಡುಕುವ ಹೊಸ ಪ್ರಕಾರಗಳು ತಲೆ ಎತ್ತುತ್ತಿವೆ. ಆದರೆ ಕ.ಬ.ಅಂಗಡಿಯವರು ತಮ್ಮ ಕಾಲಾವಧಿಯಲ್ಲಿಯೇ ಈ ಎಲ್ಲ ವಿಷಯ ಸೂಕ್ಷ್ಮಗಳನ್ನು ಅವಲೋಕಿಸಿ ಅದಕ್ಕೆ ತಕ್ಕಂತೆ ಬದಲಾವಣೆಗಳನ್ನು ಮಾಡಿಕೊಂಡರು ಮತ್ತು ಯಶಸ್ವಿಯೂ ಆದರು.

◆ ಸಾಹಿತ್ಯವನ್ನು ಸಮರ್ಪಕವಾಗಿ ಬಳಸಿಕೊಂಡವರು ವಿರಳ. ತಮ್ಮ ಮತ್ತು ತಮ್ಮ ಸುತ್ತಲಿನ ಬದುಕಿಗೆ ಅನ್ವರ್ಥಕವಾಗಿ ಸಾಹಿತ್ಯವನ್ನು ಬಳಸಿಕೊಂಡವರು. ಗದುಗಿನಲ್ಲಿ ಹತ್ತಿ ವ್ಯಾಪಾರಸ್ಥರು ಹಾನಿಗೊಳಗಾದ ಸಂದರ್ಭದಲ್ಲಿ ಅವರ ಬವಣೆಗಳ ಕುರಿತು ಲಾವಣಿ ಪದ್ಯಗಳನ್ನು ರಚಿಸಿದರು. ಈ ಲಾವಣಿಪದಗಳು ಅನೇಕರನ್ನು ಆಕರ್ಷಿಸಿದವು. ಆ ಮೂಲಕ ವ್ಯಾಪಾರಸ್ಥರ ಸ್ಥಿತಿ-ಗತಿಗಳನ್ನು ಸಮಾಜದ ಮುಖ್ಯವಾಹಿನಿಗೆ ತಂದರು. ಈ ಪ್ರಕ್ರಿಯೆ ೧೯೨೦ರ ಸುಮಾರಿಗೆ ಬಹು ದೊಡ್ಡ ಸಂಚಲನವನ್ನು ಸೃಷ್ಟಿಸಿತ್ತು. ಇಂದು ವಿದ್ಯುನ್ಮಾನ ವಾಹಿನಿಗಳು ಮಾಡುವ ಕಾರ್ಯವನ್ನು ಅಂದು ಅವರ ಸಾಹಿತ್ಯ ಮಾಡಿತ್ತು ಎಂದರೆ ಅತಿಶಯೋಕ್ತಿಯೆನಲ್ಲ.

◆ ಬಸವಾದಿ ಶಿವಶರಣರ ನಿಜವಾದ ಆಶಯಗಳನ್ನು ಅರ್ಥೈಸಿಕೊಂಡು, ಮೌಢ್ಯಗಳ ಸುಳಿಯಿಂದ ಸಮಾಜವನ್ನು ಪಾರುಮಾಡುವ ಅವರ ಅಭಿಲಾಶೆಯನ್ನು ಪುರಸ್ಕರಿಸಿದ ಅವರು ಸಾಮಾಜಿಕ ಕಾಳಜಿಯುಳ್ಳವರಾಗಿ ಮೈಲಿಗೆಗಳನ್ನು ತಿರಸ್ಕರಿಸಲು ಕರೆ ನೀಡಿದರು.

ಅವರ ಕೃತಿಗಳಾದ 'ಬೊಮ್ಮದ ಬಡಬಡಿಕೆ', 'ಹನುಮಂತನಿಗೆ ಲಿಂಗಧಾರಣ' ಎಂಬ ದೊಡ್ಡಾಟಗಳನ್ನು ಬರೆದರು. ಅವು ಬಹಳ ಪ್ರಚಾರವನ್ನು ಪಡೆದವು.

◆ ನಾಟಕ ಪ್ರಿಯರಾದ ಇವರು ಉತ್ತರಕರ್ನಾಟಕದ ರಂಗಮಂದಿರಗಳಲ್ಲಿ ವೀರಶೈವ ಮಹಿಳಾರತ್ನಗಳಾದ 'ಕೆಳದಿ ಚೆನ್ನಮ್ಮಾಜಿ', 'ಕಿತ್ತೂರ ಕೇಸರಿ', 'ಬೆಳವಡಿ ಮಲ್ಲಮ್ಮ' ನಾಟಕಗಳನ್ನು ಬರೆದು, ಪ್ರಯೋಗಿಸಿ, ಆ ಮೂಲಕ ಮಹಿಳೆಯರಲ್ಲಿ ಜಾಗ್ರತಿಯನ್ನುಂಟು ಮಾಡುವುದಲ್ಲದೆ ವೀರಶೈವರಲ್ಲಿ ಆತ್ಮಾಭಿಮಾನ ಜಾಗೃತಿಯಾಗುವಂತೆ ಸಾಹಿತ್ಯ ರಚಿಸಿದರು.

◆ ಸಮಾಜಕ್ಕೆ ಆಧ್ಯಾತ್ಮದ ಸವಿರುಚಿಯನ್ನು ಉಣಬಡಿಸಲು ತಾವು ಕಂಡುಂಡ ಅನುಭಾವವನ್ನು ಅನ್ಯರಿಗೂ ಹಂಚಲು ಗದುಗಿನ ಹಡಗಲಿ ಮಠದಲ್ಲಿ ಪಂ. ನಾಗಭೂಷಣ ಶಾಸ್ತ್ರಿಗಳನ್ನು ಕೂಡಿಕೊಂಡು "'ಶಿವಾನುಭವ' ಕಾರ್ಯಕ್ರಮಗಳನ್ನು ಆರಂಭಿಸಿದರು.

◆ ತಾಂತ್ರಿಕ ಕಾರಣಗಳಿಂದ ಸ್ಥಗಿತಗೊಂಡ 'ಶಿವಾನುಭವ' ಕಾರ್ಯಕ್ರಮವನ್ನು ಮತ್ತೊಮ್ಮೆ ಪ್ರತಿ ಸೋಮವಾರ ತೋಂಟದಾರ್ಯ ಮಠದಲ್ಲಿ ಪ್ರಾರಂಭಿಸುವ ಕನಸನ್ನು ಕಂಡರು. ತೋಂಟದಾರ್ಯ ಮಠದ ವೀರಶೈವ ಪ್ರಗತಿಶೀಲ ಯವಕ ಸಂಘದ ಸಹಯೋಗದಲ್ಲಿ ಅದನ್ನು ಕಾರ್ಯರೂಪಕ್ಕೆ ತರುವಲ್ಲಿ ಯಶಸ್ವಿಯಾದರು.

◆ ವೀರಶೈವ ವಿದ್ಯಾಪೀಠದ ಪರೀಕ್ಷೆಗಳಲ್ಲಿ 'ಕನ್ನಡ ಪ್ರವೇಶ', 'ಕನ್ನಡ ಮಧುಕರ', 'ಕನ್ನಡ ರತ್ನ' ಎಂಬ ಪರೀಕ್ಷೆಗಳಿದ್ದು ಪ್ರತಿ ವರ್ಷ ಸಾವಿರಾರು ವಿದ್ಯಾರ್ಥಿಗಳು ಪರೀಕ್ಷೆಗೆ ಕುಳಿತುಕೊಳ್ಳುವ ವ್ಯವಸ್ಥೆ ಮಾಡಿದರು. ವೀರಶೈವ ಪರೀಕ್ಷೆಗಳ ಮೂಲಕ ಕನ್ನಡ ಸಾಹಿತ್ಯದ ಪ್ರಚಾರವನ್ನೂ ಸಾಕಷ್ಟು ಮಾಡಿದರು. ಕೆಲವೊಮ್ಮೆ ಅವರ 'ಮನೆಯಲ್ಲೂ ಈ ಪರೀಕ್ಷೆಗಳು ನಡೆಯುತ್ತಿದ್ದವು. '"ವೀರಶೈವ ವಿದ್ಯಾಪೀಠದ ಈ ಪರೀಕ್ಷೆಗಳಿಗೆ ಕುಳಿತ ಡಾ. ಮಲ್ಲಿಕಾರ್ಜುನ ಶಿ. ಲಠ್ಠೆಯವರು, ಕೌತಾಳ ವೀರಪ್ಪನವರು, ಗಣಾಧೀಶ್ವರ ಪಂಚಾಂಗ ಕರ್ತರಾದ ಬಿ.ಸಿ ಹಿರೇಮಠ, ದಿ. ಪದ್ಮಾವತಿ ಉಮರ್ಜಿ, ಶ್ರೀ ಹರಿದಾಸ ಹುಚ್ಚಾಚಾರ್ಯ ಮುಂತಾದವರು ಈ ಪರೀಕ್ಷೆಗಳಿಗೆ ವಿದ್ಯಾರ್ಥಿಗಳಾಗಿದ್ದರು."

◆ ಸಾಮಾಜಿಕ ನೆಲೆ ಎನ್ನುವುದು ನಮ್ಮ ಸಂಸ್ಕೃತಿ-ಸಂಸ್ಕಾರಗಳ ಗತಿಬಿಂಬವೇ ಆಗಿರುತ್ತದೆ. ಆ ಸಂಸ್ಕೃತಿ ಸಂಸ್ಕಾರಗಳಿಂದ ಸಮಾಜವೊಂದು ತನ್ನನ್ನು ಭಿನ್ನವಾಗಿ ಗುರುತಿಸಿಕೊಳ್ಳುತ್ತದೆ. ವೀರಶೈವ-ಲಿಂಗಾಯತ ಸಮಾಜ ಬಹುಶಃ ಎಲ್ಲ ಸಾಮಾಜಗಳಿಗಿಂತ ಭಿನ್ನ ಸಂವೇದನೆಗಳನ್ನು ಹೊಂದಲು ಕಾರಣ ಅದರ ಮೂಲ ಪರಿಕಲ್ಪನೆಯೇ ಆಗಿದೆ. ಅಷ್ಟಾವರಣ, ಪಂಚಾಚಾರ, ಷಟ್ಸ್ಥಲಗಳ ಬದ್ಧತೆಯಲ್ಲಿ ತನ್ನನ್ನು ತಾನು ಅಳವಡಿಸಿಕೊಂಡೂ

ಸಹ ಹೊಸ ಬದುಕು, ಹೊಸ ಚಿಂತನೆ, ಹೊಸ ಉತ್ಸಾಹಗಳಿಗೆ ತನ್ನನ್ನು ತಾನು ಹೊಂದಿಸಿಕೊಂಡು ಕಾಲಾನುಕ್ರಮೇಣ ಹೊಸತಾಗಿ ನಿಲ್ಲುವ 'ವೀರಶೈವ' ಸಮಾಜದ ಪರಿಪಲ್ಲನೆಗಳನ್ನು ವಿವೇಚಿಸುವುದು ಸುಲಭಸಾಧ್ಯವಲ್ಲ. ಅಂತಹ ಕೆಲಸವನ್ನು ಇವರ ಕೃತಿಗಳು ಮತ್ತು ಬದುಕು ಮಾಡುತ್ತವೆ.

◆ ಅವರ ಕೃತಿಗಳು ಭಕ್ತಿಯ ಉತ್ಕಟತೆ, ಜೀವನ ಸ್ವಾರಸ್ಯ, ಅನುಭವ ಪಕ್ವತೆಗಳ ಜೊತೆಜೊತೆಗೆ ಸಾಮಾಜಿಕ ವಿಷಯವೊಂದು ವಿಶ್ಲೇಷಿಸುತ್ತ ಸಮಾಜದ ಒಳಗಿರುವ ಹುಳುಕುಗಳನ್ನು ಹೊರ ಹಾಕುವ, ಸಾಮಾಜಿಕ ಬದ್ಧತೆಯನ್ನು ಗಟ್ಟಿಗೊಳಿಸುವ ಕಾರ್ಯವನ್ನು ಮಾಡಿವೆ. 'ತಾಳಿ ಮಹತ್ವ', 'ವಿಷಾಪಹರಣಲೀಲೆ', 'ಬಡಿವಾರದ ಬಂಟ', 'ಸುಮನ ಸಂಹಿತೆ', 'ಹನುಮಂತನಿಗೆ ಲಿಂಗಧಾರಣ', 'ಮುತ್ತೈದೆಯರೈವರು' ಕೃತಿಗಳು ಈ ಅಂಶವನ್ನು ಸಾದರಪಡಿಸುತ್ತವೆ.

◆ ಇವರ ಪ್ರಮುಖ ಸಾಮಾಜಿಕ ಸಾಧನೆಗಳಲ್ಲಿ ಅವರು ಜನಸಾಮಾನ್ಯರಲ್ಲಿ ಪ್ರಜ್ಞೆ'ಯನ್ನು ಮೂಡಿಸಿದುದು. ಅವರ ಕೃತಿಗಳನ್ನು ಓದಿದವರಲ್ಲಿ ಮತ್ತು ಅವರ ಸಂಪರ್ಕಕ್ಕೆ ಬಂದ ವ್ಯಕ್ತಿಗಳಲ್ಲಿ 'ಅರಿವು' ಅಥವಾ 'ಪ್ರಜ್ಞೆ' ಯನ್ನು ಹುಟ್ಟು ಹಾಕಿದರು. ಭೌತಿಕ ಪ್ರಜ್ಞೆ ಮತ್ತು ಪಾರಮಾರ್ಥಿಕ ಪ್ರಜ್ಞೆಗಳನ್ನು ಬೆರೆಸಿ ಬದುಕುವ ಕಲೆಯನ್ನು ಅವರ ಬದುಕು ಮತ್ತು ಕೃತಿಗಳು ಕಲಿಸಿಕೊಟ್ಟವು.

◆ ಗೊಡಚಿ, ಮುರಗೋಡ, ಗದುಗು, ಮೆಣಸಗಿ, ಜಕ್ಕಲಿ, ನರೇಗಲ್ಲ, ಮುಂಡರಗಿ ಭಾಗಗಳಲ್ಲಿ ಹಲವಾರು ಸಂಘಟನೆಗಳನ್ನು ಹುಟ್ಟು ಹಾಕಿ ಆ ಮೂಲಕ ಅವಿಭಕ್ತ ಕೌಟುಂಬಿಕ ನೆಲೆಗಳನ್ನು ಬಿಗಿಗೊಳಿಸುವ ಕಾರ್ಯದಲ್ಲಿ ತಲ್ಲೀನರಾದರು. ಅದರ ಮುಖೇನ ತನ್ನ ಹುಟ್ಟಿಗೂ, ಪೋಷಣೆಗೂ ಕಾರಣವಾದ ಸಮಾಜವನ್ನು ಸಂಘಟನೆಗಳ ಮೂಲಕ ಅಭಿವೃದ್ಧಿ ಪಡಿಸಿದರು.

◆ ಹಲವಾರು ಸಂಘಟನೆಗಳ ಮೂಲಕ ರಚನಾತ್ಮಕ, ವಿಕಸನಶೀಲವಾದ ಕಾರ್ಯ ಚಟುವಟಿಕೆಗಳನ್ನು ಕೈಗೊಂಡರು. ಇದರ ಫಲವಾಗಿ ಅವರ ಬದುಕಿನ ಮುಖ ವ್ಯಷ್ಠಿಯಾಗಿ ಸಮಷ್ಠಿಯಾಗುತ್ತ ಬಂದುದು, ಅವರ ಆಶೆಗಳು ಆಶೆಗಳಾಗದೆ ಸರ್ವರ ಆಶಯಗಳಾಗುತ್ತ ಬಂದವು.

◆ ತಮ್ಮ ಊರು ಮೆಣಸಗಿಯಲ್ಲಿ ಕಾಲೋಚಿತವಾಗಿ ಬಂದೊದಗುವ ಸಾಮಾಜಿಕ ಮತ್ತು ಸಾಂಸ್ಕೃತಿಕ ವಲಯಗಳಲ್ಲಿ ತೋರಿ ಬರುವ ವೈಷಮ್ಯಗಳನ್ನು ತಮ್ಮ ಮಾನಸಿಕ ನೆಮ್ಮದಿ,

ಸಮಾನತೆಯ ದೃಷ್ಟಿಕೋನ, ಸಮನ್ವಯ ಚಿಂತನೆಗಳ ಆಧಾರದಿಂದ ಪರಿಹರಿಸಿದ, ತುಳಿತಕ್ಕೆ ಒಳಗಾದ ವರ್ಗಗಳ ಕಾಳಜಿಯನ್ನು ಎಷ್ಟೋ ನಿದರ್ಶನಗಳು ಅವರ ಜೀವನ ಸಾಧನೆಯಲ್ಲಿ ಮತ್ತು ಅವರ ರಚನಾತ್ಮಕ ಬರವಣಿಗೆಯಲ್ಲಿ ಕಂಡು ಬರುತ್ತವೆ.

## ೫.೨ ಶೈಕ್ಷಣಿಕ ಸಾಧನೆಗಳು :

ಕ.ಬ.ಅಂಗಡಿಯವರು ಮೂಲತಃ ಒಬ್ಬ ಶಿಕ್ಷಕರು ಮತ್ತು ಶಿಕ್ಷಣಾಧಿಕಾರಿಗಳು. ಈ ಅಂಶ ಅವರ ಇನ್ನುಳಿದ ಸಾಧನೆಗಳನ್ನು ಸಾಧಿಸಲು ಬಹಳ ಅನುಕೂಲವಾಯಿತೆಂದರೆ ತಪ್ಪಲ್ಲ.

◆ ಅವರಿಂದ ಶಾಲಾ ಮಕ್ಕಳಿಗಾಗಿ ಸುಪ್ರಸಿದ್ಧವಾದ ‘‘ನಿಬಂಧಮಾಲೆ ಅಥವಾ ಪ್ರಬಂಧ ವಿಜಯ’ ಎಂಬ ಗ್ರಂಥ ರಚಿಸಲ್ಪಟ್ಟಿತು

◆ ‘ಅಕ್ಕನ ಚರಿತ್ರೆ’, ‘ಅಮರವಾಣಿ’ ಮತ್ತು ‘ಅನುಭವದೂಟ’ ಕೃತಿಗಳ ರಚನೆಯನ್ನು ಮತ್ತು ಅವುಗಳು ಪಡೆದ ಜನಪ್ರಿಯತೆಯನ್ನು ಪರಿಗಣಿಸಿ ಅಂದು ಸಮರ್ಥ ರೀತಿಯಲ್ಲಿ ವೀರಶೈವ ಧರ್ಮದ ಆಚಾರ-ವಿಚಾರದ ಪ್ರಚಾರ ಗೈಯುತ್ತಿದ್ದ ಅಖಿಲ ಭಾರತ ವೀರಶೈವ ವಿದ್ಯಾಪೀಠ ಪಠ್ಯಪುಸ್ತಕಗಳೂ ಆದವು ಎಂಬುದು ಅಭಿಮಾನದ ಸಂಗತಿ.

◆ ಗದುಗಿನಲ್ಲಿ ಸುಮಾರು ನಲವತ್ತು ವರ್ಷಗಳಷ್ಟು ಹಿಂದೆ ‘ಲಿಂ. ಹಾನಗಲ್ ಕುಮಾರ ಶಿವಯೋಗಿಗಳವರ ಸ್ಮಾರಕಕ್ಕಾಗಿ [೧೦]‘ಶ್ರೀ ಹಾನಗಲ್ಲ ಕುಮಾರಸ್ವಾಮಿ ಸೇವಾ ಶಿಕ್ಷಕ ಸಂಘ’ವನ್ನು ಕಟ್ಟಿ ಲಿಂಗವಂತ ಧರ್ಮ, ಸಾಹಿತ್ಯ, ಸಮಾಜ ಜಾಗೃತಿ ಗೈದುದನ್ನು ಪ್ರಜ್ಞಾವಂತ ವೀರಶೈವರು ಬಲ್ಲರು.

◆ ಶಿಕ್ಷಣ ರಂಗದಲ್ಲಿ ಸಲ್ಲಿಸಿದ ಸೇವೆ- ಸಾಧನೆಗಳನ್ನು ಪುಟ್ಟರಾಜ ಗವಾಯಿಗಳು ಹೀಗೆ ಗುರುತಿಸಿದ್ದಾರೆ. ಕ.ಬ.ಅಂಗಡಿಯವರು ಕೆಲಸ ಮಾಡುತ್ತಿರುವ ಶಾಲೆಯೇ ನಿಜಸ್ಥಾನವಾಗಿ, ಇವರಿಂದ ಪಾಠ ಪಡೆಯುತ್ತಿರುವ ಮಕ್ಕಳೆ ಜಂಗಮ ಲಿಂಗ ಮೂರ್ತಿಗಳಾಗಿ, ಇವರು ಕೊಡುತ್ತಿರುವ ಶಿಕ್ಷಣ ಪದ್ಧತಿಯೆ ಪೂಜೆಯಾಗಿ ಇವರು ಶಿವಾರ್ಪಣ ಪೂರ್ವಕವಾಗಿ ಮಕ್ಕಳಿಗೆ ಕೊಟ್ಟ ವಿದ್ಯೆಯೆ ನೈವೇದ್ಯವಾಗಿ ಪರಿಣಮಿಸಿ, ಇವರು ಇಷ್ಟಲಿಂಗ ಸಾಕ್ಷಿಯಾಗಿ ಮಾಡುವ ಉದ್ಯೋಗವೆ ಕಾಯಕವಾಗಿ, ಇವರಿಗೆ ಶರಣ ಜೀವಿಗಳೆಂಬ ನಾಮವು ಸಾರ್ಥಕವಾಗಿದೆ’. [೧೧]

◆ ಸಂಘ ಜೀವಿಗಳೂ, ಸಾಹಿತಿಗಳೂ ಆದ ಕರವೀರಪ್ಪನವರು ಸಾಹಿತಿ ಶಿಕ್ಷಕರನ್ನು ಒಂದೆಡೆ ಕೂಡಿಸಿಕೊಂಡು ಸಾಹಿತ್ಯಿಕ ಚಟುವಟಿಕೆಗಳನ್ನು ನಡೆಸುತ್ತಿದ್ದರು. ವೀರಶೈವ ಶಿಕ್ಷಕರನ್ನು ಒಂದೆಡೆ ಕೂಡಿಸಿ ವೀರಶೈವ ಸಿದ್ಧಾಂತಗಳ ಪ್ರಚಾರ, ಶರಣರ ವಚನಗಳ ಪ್ರಚಾರ ಜೊತೆಗೆ ಸಾಹಿತ್ಯದ ಅಭ್ಯಾಸ ಮುಂದುವರಿಸಲು "ಹಾನಗಲ್ಲ ಕುಮಾರೇಶ್ವರ ಸೇವಾ ಶಿಕ್ಷಕ ಸಂಘ"ವೆಂಬ ಸಂಸ್ಥೆ ಕಟ್ಟಿಕೊಂಡು ತನ್ಮೂಲಕ ಶಿವಾನುಭವ ಚರ್ಚೆ, ಸಾಹಿತ್ಯ ಪ್ರಕಾಶನ ಮೊದಲಾದ ಕಾರ್ಯಕ್ರಮಗಳನ್ನು ನಡೆಯಿಸಿ ನಗರದಲ್ಲಿ ಚಿರಪರಿಚಿತರಾದರು.

◆ ಸಾಹಿತಿಗಳೂ ಶಿಕ್ಷಕರೂ ಆದ ಇವರಿಗೆ ಶಾಲಾ ಮಕ್ಕಳಿಗೆ ಅವಶ್ಯವಿರುವ ಸಾಹಿತ್ಯವನ್ನು ನಿರ್ಮಿಸುವ ಭಾವ ಮೂಡಲು 'ನಿಬಂಧ ಮಾಲೆ ಎಂಬ ಗ್ರಂಥಗಳನ್ನು ಬರೆದು ಪ್ರಕಟಿಸಿದರು. ಆಗಿನ ಕಾಲದಲ್ಲಿ ಕನ್ನಡದಲ್ಲಿ ನಿಬಂಧಗಳ ಪುಸ್ತಕಗಳೇ ಇದ್ದಿಲ್ಲವೆನ್ನಬಹುದು. ಪ್ರಪ್ರಥಮವಾಗಿ ನಿಬಂಧದ ಅಂಗಗಳಾದ ಕಥೆ, ಪತ್ರ, ಅರ್ಜಿ, ರಿಪೋರ್ಟ, ಸಾರಾಂಶ ಬರಹ, ವಿಸ್ತರಿಸಿ ಬರೆಯುವುದು, ಚೆಕ್ಕು, ಹುಂಡಿ, ನಿಬಂಧ ಹಾಗೂ ಪ್ರಬಂಧ ಮೊದಲಾದ ವಿಷಯಗಳನ್ನು ವಿವರವಾಗಿ ವಿವೇಚಿಸಿ ಮಾದರಿಯ ಬರೆಹಗಳೊಂದಿಗೆ ಅಭ್ಯಾಸಕ್ಕೆ ಅವಶ್ಯವಾದ ಸೂಕ್ತ ಸೂಚನೆಗಳೊಂದಿಗೆ ಬರೆದ ನಿಬಂಧಮಾಲೆಯು ಕನ್ನಡ ನಾಡಿನ ಸರ್ವ ಶಿಕ್ಷಕರ ಬಳಗಕ್ಕೆ ಹಾಗೂ ಶಿಕ್ಷಣ ಖಾತೆಯ ಅಧಿಕಾರಿಗಳಿಗೆ ಮೆಚ್ಚುಗೆಯಾಗಿತು. ಅದು ೧೯೩೦ರಲ್ಲಿ ಪ್ರಪ್ರಥಮವಾಗಿ ಬೆಳಗಾವಿ ಜಿಲ್ಹೆಯ ಸ್ಕೂಲ ಬೋರ್ಡಿನಲ್ಲಿ ಪಠ್ಯ ಪುಸ್ತಕವಾಗಿ ಮನ್ನಣೆ ಪಡೆಯಿತು.

◆ ಮುಂದೆ ಈ ಎಲ್ಲ ಪುಸ್ತಕಗಳು ಕರ್ನಾಟಕದ ನಾಲ್ಕು ಜಿಲ್ಹೆಗಳಲ್ಲಿ ಪಠ್ಯವಾದವು.

◆ ಗದ್ಯ ಪದ್ಯಾವಲಿ' ಎಂಬ ಲೇಖನಗಳ ಹಾಗೂ ಕವನಗಳ ಸಂಗ್ರಹವು ೧೯೩೬ರಲ್ಲಿ ಆಗಿನ ಕಾಲದ ಇಂಗ್ಲೀಷ ೪ನೆಯ ಇಯತ್ತೆಗೆ ಪಠ್ಯ ಪುಸ್ತಕವಾಯಿತು.

◆ ನಂತರ ಗದ್ಯಪದ್ಯಾವಲಿ ಪ್ರಾಥಮಿಕ ಶಾಲೆಗಳಿಗೂ ಪಠ್ಯ ಪುಸ್ತಕವೆಂದು ಮಂಜೂರಿ ಪಡೆಯಿತು.

◆ ತಮ್ಮ ಶಿಕ್ಷಣ ಸೇವೆಯೊಂದಿಗೆ ನಗರದ ಶಿಕ್ಷಣ ತಜ್ಞರ, ನಗರಸಭೆ ಸದಸ್ಯರ, ಸ್ಕೂಲ ಬೋರ್ಡಿನ ಅಧಿಕಾರಿಗಳ ಹಾಗೂ ಶಿಕ್ಷಣ ಮಂಡಳದ ಮೆಚ್ಚುಗೆಗೆ ಪಾತ್ರರಾಗಿ ೧೯೩೪ರಲ್ಲಿ ಗದಗ ಕನ್ನಡ ಸೆಂಟ್ರಲ್ ಸ್ಕೂಲಿಗೆ ಮುಖ್ಯಾಧ್ಯಾಪಕರಾಗಿ ಬಡ್ತಿ ಪಡೆದರು.

◆ ದಕ್ಷ ಆಡಳಿತಕ್ಕೆ ಮೆಚ್ಚಿಕೊಂಡು ಅಧಿಕಾರಿಗಳೂ ಸಹ ಅವರ [೧೨]ಸೂಕ್ತ ಸಲಹೆ-ಸೂಚನೆಗಳನ್ನು ಕೇಳಲು ಶಾಲೆಗೆ ಬರುತ್ತಿದ್ದರು.

◆ ಶಿಕ್ಷಕರ ಆರ್ಥಿಕ ಸುಧಾರಣೆಗಾಗಿ ಶಿಕ್ಷಣ ಖಾತೆಯ ಆಡಳಿತಗಾರರಿಗೆ ಶಿಕ್ಷಕರ ಸಂಕಷ್ಟಗಳನ್ನು ವಿವರಿಸಿ ಅವರ ಆರ್ಥಿಕ ತೊಂದರೆಗಳನ್ನು ನಿವಾರಿಸಲೋಸುಗ [೧೩]'ಶಿಕ್ಷಕರ ಸಹಕಾರಿ ಸೊಸಾಯಿಟಿ' ಸ್ಥಾಪಿಸಲು ಪ್ರಯತ್ನಿಸಿ ಶಿಕ್ಷಕರ ಮೆಚ್ಚುಗೆಗೆ ಪಾತ್ರರಾದರು.

◆ ಗದುಗಿನ ಹಡಗಲಿ ಮಠದಲ್ಲಿ ಪಂ. ನಾಗಭೂಷಣ ಶಾಸ್ತ್ರಿಗಳೊಡನೆ ಕೂಡಿಕೊಂಡು [೧೪]ಅಖಿಲ ಭಾರತ ವೀರಶೈವ ವಿದ್ಯಾಪೀಠ ಎಂಬ ಸಂಸ್ಥೆಯನ್ನು ಸ್ಥಾಪಿಸಿದರು. ಈ ಸಂಸ್ಥೆಯ ಕಾರ್ಯದರ್ಶಿಯಾಗಿ ಕ.ಬ. ಅಂಗಡಿಯವರು ಸೇವೆಗೈದರು.

◆ ವೀರಶೈವ ವಿದ್ಯಾಪೀಠದ[೧೫] ಪರೀಕ್ಷೆಗೆ ಪಠ್ಯಪುಸ್ತಕಗಳನ್ನು ಶ್ರೀ ಕ.ಬ.ಅಂಗಡಿಯವರು ರಚಿಸಿಕೊಟ್ಟರಲ್ಲದೆ ಪರೀಕ್ಷೆಯ ವರ್ಗಗಳಿಗೆ ಪಾಠಗಳನ್ನು ಸಹ ಹೇಳುತ್ತಿದ್ದರು.

◆ ಇವರ ಆಡಳಿತ ಕ್ರಮ, ಬೋಧನೆ, ಸಮಾಜದಲ್ಲಿ ಪಡೆದ ಗೌರವ, ಸಾಂಘಿಕ ಚಟುವಟಿಕೆಗಳು, ಸಾಹಿತ್ಯ ಪ್ರಚಾರ, ಪಠ್ಯಪುಸ್ತಕಗಳ ಪ್ರಕಟಣೆ, ದೊಡ್ಡಾಟ, ನಾಟಕಗಳ ಬರವಣಿಗೆ ಹೀಗೆ ಬಹುಮುಖವಾದ ಪ್ರತಿಭೆಯನ್ನು ತಿಳಿದು ಶಿಕ್ಷಣ ಇಲಾಖೆಯವರು ಇವರನ್ನು ಅಸಿಸ್ಟಂಟ ಡೆಪ್ಯೂಟಿ ಎಜ್ಯುಕೇಶನ್ ಇನ್ಸಪೆಕ್ಟರನ್ನಾಗಿ ಆಯ್ಕೆ ಮಾಡಿದರು. ೧೯೪೪ರಲ್ಲಿ ಬೆಳಗಾವಿ ಜಿಲ್ಹೆಯ ಸವದತ್ತಿ ತಾಲ್ಲೂಕಿನ ಉಪಶಿಕ್ಷಣಾಧಿಕಾರಿಗಳಾಗಿ ಶಿಕ್ಷಣದ ಪ್ರಗತಿಗೆ ಪ್ರಯತ್ನಿಸಿದರು.

◆ವಿಜಾಪುರದಿಂದ ಮುಂಡರಗಿ ತಾಲ್ಲೂಕಿನ ಉಪಶಿಕ್ಷಣಾಧಿಕಾರಿಗಳೆಂದು ನಿಯುಕ್ತವಾದಾಗ ಸಮಾಜ ಶಿಕ್ಷಣಾಧಿಕಾರಿಗಳೆಂದು ಕೂಡ ಕಾರ್ಯನಿರ್ವಹಿಸಿದರು ಹಾಗೂ 'ಸಮಾಜ ಶಿಕ್ಷಣ ಮಾಸಪತ್ರಿಕೆ'ಯಲ್ಲಿ ಅನೇಕ ಲೇಖನಗಳನ್ನು ಬರೆದು ಸಮಾಜ ಶಿಕ್ಷಣದ ಪ್ರಚಾರದಲ್ಲಿ ಪಾಲ್ಗೊಂಡು ಜಿಲ್ಲೆಯಲ್ಲಿ ಸಾಕ್ಷರರ ಸಂಖ್ಯೆ ಹೆಚ್ಚಿಸಿದರು.

◆ ೧೯೫೯-೬೦ನೆಯ ಸಾಲಿನಲ್ಲಿ ಗದುಗಿನಲ್ಲಿ [೧೬]ಪಠ್ಯ ಪುಸ್ತಕ ರಚನಾ ಸಮಿತಿಯನ್ನು ನಿರ್ಮಿಸಿಕೊಂಡು ಹೊಸ ಅಭ್ಯಾಸ ಪತ್ರಿಕೆಗನುಸಾರವಾಗಿ ಪಠ್ಯಪುಸ್ತಕಗಳನ್ನು ಬರೆಯಿಸಿ ಸರಕಾರದ ಅನುಮತಿಗೆ ಕಳಿಸುವ ಕಾರ್ಯಕೈಗೊಂಡರು. ಅಲ್ಲದೆ ತಾವು ಸ್ವತಃ ಲೇಖಕರಾಗಿ ಪುಸ್ತಕಗಳನ್ನು ಬರೆದು ಸರಕಾರದ ಅನುಮತಿಗೆ ಕಳಿಸಿದರು. ಮುಂದೆ ತಾವೇ ಸ್ವತಃ

ಪ್ರಕಾಶಕರಾಗಿ ಅನೇಕ ಪುಸ್ತಕಗಳನ್ನು ಬರೆಯಿಸಿ ಅವು ಸರಕಾರದ ಮನ್ನಣೆ ಪಡೆದು ನಾಡಿನ ವಿವಿಧ ಜಿಲ್ಲೆಗಳಲ್ಲಿ ಪಠ್ಯ ಪುಸ್ತಕಗಳಾಗಿ ಬಳಕೆಗೆ ಬಂದವು.

◆ ೧೯೨೪-೨೬ರವರೆಗೆ ಗದುಗಿನ ಮುನ್ಸಿಪಲ್ ಹಾಯ್‌ಸ್ಕೂಲಿನಲ್ಲಿ ಕನ್ನಡ ಭಾಷಾ ಗೌರವ ಶಿಕ್ಷಕರಾಗಿ ನಿಯುಕ್ತರಾದರು.

◆ ಕರ್ನಾಟಕದ ಅಂದಿನ ಮುಖ್ಯಮಂತ್ರಿಯಾಗಿದ್ದ ಖೇರ ಅವರು ತಮ್ಮ ಸರಕಾರದಿಂದ ಹೊರಡಿಸಿದ್ದ ಶಾರೀರಿಕ ಶಿಕ್ಷಣದಲ್ಲಿ ಡ್ರೀಲ್, ಕವಾಯತು, ಲೇಝಿಮ್ ಅಭ್ಯಾಸಗಳಿಗೆ ಹೊಸ ಬಗೆಯ ಪದ ಪದ್ಯಗಳನ್ನು ರಚಿಸಿ, ಅವುಗಳಿಗೆ ಸಂಗೀತವನ್ನು ಅಳವಡಿಸಿ ಕೊಟ್ಟಿದ್ದರು. ಆ ಪದ ಪದ್ಯಗಳು ಶಾರೀರಿಕ ಶಿಕ್ಷಣದಲ್ಲಿ ಹೊಸ ಹುರುಪನ್ನು ನೀಡಿದ್ದವು.

## ೫.೩ ಸಾಹಿತ್ಯಕ ಸಾಧನೆಗಳು :

ಇವರ ಬದುಕು, ಬರಹದ ಮೂಲಕವೇ ಗುರುತಿಸಲ್ಪಡುವುದರಿಂದ ಅವರ ಸಾಹಿತ್ಯಕ ಹಿನ್ನೆಲೆಯಲ್ಲಿ ಸಾಧನೆಗಳನ್ನು ಗುರುತಿಸುವುದು ಅತ್ಯವಶ್ಯಕ. ಭಕ್ತ ಕವಿಯಾಗಿಯೇ ಗುರುತಿಸಿಕೊಳ್ಳುವ ಇವರಲ್ಲಿ ಮೊದಮೊದಲು ಸಾಹಿತ್ಯಕ ಒಲವು ಸಾಮಾಜಿಕವಾಗಿಯೇ ಚಿಗುರೊಡೆದದ್ದು. ನಂತರ ಅವರ ಅನುಭವ ಪರಿಪಕ್ವತೆಯ ಬದುಕು ಮತ್ತು ಶರಣರ ಒಡನಾಟದ ನೆಲೆಗಳಿಂದ ಅವರೊಬ್ಬ ಶರಣಕವಿಯಾಗಿ ರೂಪುಗೊಂಡರು. ಶರಣರ ಪಾರಿಭಾಷಿಕ ನೆಲೆಯಲ್ಲೇ ಜೀವನ ಪಥವನ್ನು ಸಾಗಿಸಿದರು.

◆ ಜಕ್ಕಲಿ ಗ್ರಾಮ ಅಂಗಡಿಯವರ ತಾಯಿಯ ತವರುಮನೆ. ಅಲ್ಲಿ ಇವರನ್ನು ಜಕ್ಕಲಿ ಮಾಸ್ತರರೆಂದೆ ಗುರುತಿಸಲಾಗುತ್ತದೆ. ಅಲ್ಲಿಂದಲೇ ಇವರ ಸಾಹಿತ್ಯದ ಒಡನಾಟ ಪ್ರಾರಂಭವಾಗುತ್ತದೆ. ಅಲ್ಲಿರುವಾಗ ದೊಡ್ಡಾಟ, ನಾಟಕಗಳನ್ನು ಬರೆದರು. ಅವುಗಳಲ್ಲಿ 'ಹನುಮಂತನಿಗೆ ಲಿಂಗಧಾರಣ'[೧೭], 'ಬೊಮ್ಮದ ಬಡಬಡಿಕೆಗಳು' ಪ್ರಮುಖವಾಗಿದ್ದು ಅವು ಅಂದಿನ ಜನರಲ್ಲಿ ವಿಚಾರ ಕ್ರಾಂತಿಯನ್ನೇ ಉಂಟು ಮಾಡಿದವು.

◆ ಹಾನಗಲ್ಲ ಕುಮಾರ ಶಿವಯೋಗಿಗಳ ಆದೇಶದ ಮೇರೆಗೆ ಗದುಗಿಗೆ ಬಂದ ಇವರು ಹಾನಗಲ್ಲ ಕುಮಾರ ಶಿವಯೋಗಿ[೧೮] ಶಿಕ್ಷಕರ ಸೇವಾಸಂಘ ಸ್ಥಾಪಿಸಿಕೊಂಡು ಅನೇಕ ಕಿರು ಪುಸ್ತಕಗಳ ಮೂಲಕ ಸಾಹಿತ್ಯ ಪ್ರಕಾಶನ ಮಾಡಿದರು. ಅವುಗಳಲ್ಲಿ 'ತಾಳಿ ಮಹತ್ವ',

‘ವಿಷಾಪಹರಣಲೀಲೆ’, ‘ಕೆಳದಿಯ ಚೆನ್ನಮ್ಮಾಜಿ’, ‘ಕಿತ್ತೂರ ಕೇಸರಿ’, ‘ಬೆಳವಡಿ ಮಲ್ಲಮ್ಮ’, ‘ಶಿವಪಾರಮ್ಯ ಅರ್ಥಾತ್ ಗುಗ್ಗುಳ’ ಎಂಬ ನಾಟಕ ಗ್ರಂಥಗಳನ್ನು ಬರೆದರು.

◆ ಕ್ರಿ.ಶ ೧೯೨೯ರ ಸುಮಾರಿಗೆ ಶರಣ ಸಂಗಪ್ಪ ಹುಬ್ಬಳ್ಳಿ ಅವರ ನೆರವಿನಿಂದ ‘ಕರ್ನಾಟಕ ಬಂಧು’[೧೯] ಪತ್ರಿಕೆಯ ಸಂಪಾದಕರಾಗಿ ಸೇವೆ ಸಲ್ಲಿಸಿದರು.

◆ ಬಸವ ಭಜನಾ ಮಾಲೆಯ ಮುಖಾಂತರ ‘ಬಡಿವಾರದ ಬಂಟ’[೨೦], ‘ಅನುಭವದೂಟ’, ‘ಅಕ್ಕನ ಚರಿತ್ರೆ’, ‘ಅಮರವಾಣಿ’ ಮೊದಲಾದ ಕಿರು ಹೊತ್ತಿಗೆಗಳು ಪ್ರಸಿದ್ಧಿ ಹೊಂದಿದವು.

◆ ೧೯೭೨ರವರೆಗೆ ವೀರಶೈವ ಸಾಹಿತ್ಯ ನಾಟಕಗಳನ್ನು ಬರೆದು ಸಾಹಿತ್ಯ ಸೇವೆಗೈದರು.

◆ ೧೯೩೩ ರಿಂದ ೧೯೪೨ ರವರೆಗೆ ಶಾಲೋಪಯೋಗಿ[೨೧] ಪುಸ್ತಕಗಳಾದ ‘ನಿಬಂಧ ಮಾಲೆ ಅರ್ಥಾತ್ ಪ್ರಬಂಧ ವಿಜಯ’, ‘ಗದ್ಯಪದ್ಯಾವಲಿ’ ಮತ್ತು ಕನ್ನಡ ಭಾಷೆಯಲ್ಲಿ ಅಪೂರ್ವವಾದ ಸಾಹಿತ್ಯವನ್ನೊಳಗೊಂಡ ‘ನಿಬಂಧ ಮಾಲೆ’ ಮುಂಬಯಿ ಕರ್ನಾಟಕದ ಎಲ್ಲ ಜಿಲ್ಲೆಗಳಲ್ಲಿ ಪಠ್ಯ ಪುಸ್ತಕವಾಗಿ ಮಂಜೂರಾಯಿತು. ಅದರಂತೆ ‘ಗದ್ಯಪದ್ಯಾವಲಿ’ ಕೂಡ ಮಂಜೂರಾಗಿ ಪ್ರಸಿದ್ಧರಾದರು.

◆ ೧೯೫೦ ರಿಂದ ಅಷ್ಟಕ–ಷಟ್ಕ ಮೊದಲಾದ ಭಕ್ತಿ ಉತ್ಕಟತೆಯ ಕಿರುಗ್ರಂಥಗಳನ್ನು ಬರೆದರು. ಅಷ್ಟಕ ಮತ್ತು ಷಟ್ಕ ಸಾಹಿತ್ಯ ಪ್ರಬೇಧಗಳು ಕನ್ನಡ ಸಾಹಿತ್ಯದಲ್ಲಿ ಕಂಡು ಬರುತ್ತವೆಯಾದರೂ ಅವುಗಳು ಅಪರೂಪವೆಂದೇ ಹೇಳಬೇಕು. ಅಂತಹ ಅಪರೂಪದ ಪ್ರಾಕಾರಗಳನ್ನು ಭಕ್ತಿ ನಿವೇದನೆಗೆ ಪ್ರಯೋಗಿಸಿಕೊಂಡಿರುವುದು ಒಂದು ಸಾಹಸವೇ.

◆ ಅವರು ಬರೆದ ಅಷ್ಟಕ ಷಟ್ಕಗಳಲ್ಲಿ ‘ಬಸವ ನೀಂ ಸಂರಕ್ಷಿಸೈ ಭಕ್ತರ’(ಅಷ್ಟಕ), ‘ಹಸನ ನುಡಿ ಮುತ್ತುಗಳೆಂಬ ಮಂಗಲ ಷಟ್ಕ’, ‘ಮಹಿಮರ್ರೈವರು’, ಶ್ರೀ ಮದಥಣಿ ಶಿವಯೋಗಿಂದ್ರ ನೀಂ ರಕ್ಷಿಸೈ’(ಅಷ್ಟಕ), ‘ಶ್ರೀ ಮುರಗೋಡ ಶಿವಯೋಗಿ ಶ್ರೀಗಂಧ ಪಾದುಕಾರ್ಪಣ ಸ್ತೋತ್ರಾಷ್ಟಕಂ’, ಶ್ರೀ ಮುರಗೊಡ ಶಿವಯೋಗಿ ಶ್ರೀಪಾದ ಸ್ತೋತ್ರಾಷ್ಟಕ’, ‘ಹಾವೇರಿ ಶಿವಬಸವ ಸ್ವಾಮಿ ಚರಣಕ್ಕೆ ಶರಣಾಷ್ಟಕಂ’ ಮೊದಲಾದವುಗಳು ಪ್ರಸಿದ್ಧಿಯನ್ನು ಪಡೆದಿವೆ ಮತ್ತು ಈ ಮೂಲಕ ವೀರಶೈವ ಸಾಹಿತ್ಯ ಪ್ರಚಾರಕ್ಕೆ ರಹದಾರಿಯಾದವು. ಕನ್ನಡದಲ್ಲಿ ನಶಿಸಿಹೋಗಬಹುದಾದ ಈ ಅಷ್ಟಕ–ಷಟ್ಕಗಳನ್ನು ಬಳಕೆಗೆ ತರುವುದರ ಮೂಲಕ ಅವುಗಳನ್ನು ಜೀವಂತವಾಗಿಡುವ ಪ್ರಯತ್ನ ಮಾಡಿದರು.

◆ ೧೯೫೫ ರಿಂದ ಪಠ್ಯ ಪುಸ್ತಕ ಸಮಿತಿಯನ್ನು ರಚಿಸಿಕೊಂಡು ಮೈಸೂರು ರಾಜ್ಯದ ವಿದ್ಯಾ ಇಲಾಖೆಗೆ ಪಠ್ಯಪುಸ್ತಕಗಳನ್ನು ರಚಿಸಿದರು. ಆ ಮೂಲಕ ಹಲವಾರು ಸಾಹಿತ್ಯ, ವಿಜ್ಞಾನ, ಗಣಿತ, ಭಾಷಾಶಾಸ್ತ್ರಗಳ ಪುಸ್ತಕಗಳನ್ನು ರಚಿಸಿದರು.

◆ ೧೯೭೨ ರಿಂದ ಶ್ರೀ ಕ.ಬ.ಅಂಗಡಿಯವರ ಸಾಹಿತ್ಯ ರಚನೆ ಪುರಾಣಗಳತ್ತ ಹೊರಳಿದೆ. 'ಉರಗಾದ್ರಿ ಕರಿಬಸವ ಶಿವಯೋಗಿ ಲೀಲೆ', 'ಶ್ರೀ ಮುರಗೋಡ ಮಹಾಂತ ಶಿವಯೋಗೀಶ್ವರ ಚರಿತಾಮೃತಂ', 'ಕಾಯಕಯೋಗಿ ಶ್ರೀ ರುದ್ರಮುನಿಸ್ವಾಮಿ ಚರಿತ್ರೆ', 'ಜೇವರಗಿ ಷಣ್ಮುಖ ಶಿವಯೋಗಿಗಳ ಅಪೂರ್ಣವಾದ ಪುರಾಣ ಸಮಾಪ್ತಿ', 'ಶರಣ ಬಸವೇಶ್ವರ ಚರಿತ್ರೆ', 'ಮೃಡಗಿರಿ ಅನ್ನದಾನೀಶ್ವರ ಲೀಲಾಮೃತಂ' ಪುರಾಣಗಳನ್ನು ರಚಿಸಿದ್ದಾರೆ. ಈ ಪುರಾಣಗಳು ಅನೇಕ ವಿದ್ವಜ್ಜನರ ಹಾಗೂ ಮಹಾಸ್ವಾಮಿಗಳ ಮೆಚ್ಚುಗೆಗೆ ಪಾತ್ರವಾಗಿವೆ.ಒಟ್ಟಾರೆಯಾಗಿ ಶ್ರೀ ಕ.ಬ.ಅಂಗಡಿಯವರ ಸಾಹಿತ್ಯ ರಚನೆಯಲ್ಲಿ ಕೆಲವು ಹಂತಗಳನ್ನು ಕಾಣಬಹುದು.

೧೯೨೬ರವರೆಗೆ ದೊಡ್ಡಾಟ, ನಾಟಕ, ಚುಟುಕು ಪದ, ಪದ್ಯಗಳು, ಲಾವಣಿಗಳನ್ನು ರಚಿಸಿರುವುದು.

೧೯೨೯ರಿಂದ ಬಸವ ಭಜನಾ ಮಾಲೆಯ ಕಿರುಗ್ರಂಥಗಳನ್ನು ರಚಿಸಿದುದು.

೧೯೩೦ರಲ್ಲಿ 'ಕರ್ನಾಟಕ ಬಂಧು' ಪತ್ರಿಕೆಯ ಸಂಪಾದಕರಾಗಿ ಸೇವೆ ಸಲ್ಲಿಸಿದುದು.

೧೯೩೩ ರಿಂದ ೧೯೩೪ರವರೆಗೆ ಶಾಲಾ ಪಠ್ಯ ಪುಸ್ತಕಗಳ ರಚನೆಯಲ್ಲಿ ತೊಡಗಿಕೊಂಡುದುದು.

೧೯೫೦ ರಿಂದ ಅಷ್ಟಕ-ಷಟ್ಕಗಳನ್ನು ರಚಿಸಿದುದು.

೧೯೭೨ ರಿಂದ ಪುರಾಣ ಕೃತಿಗಳ ರಚನೆಯಲ್ಲಿ ತೊಡಗಿಕೊಂಡುದುದು.

ಈ ರೀತಿಯಾಗಿ ಅನುಭವ ಮತ್ತು ಅನುಭಾವದ ಪಕ್ವತೆಯಿಂದ ವಯದ ಹಿರಿಮೆಯಿಂದ ಸಾಹಿತ್ಯ ರಚನೆಯಲ್ಲಿ ಹಂತ ಹಂತವಾಗಿ ಮೂಡಿಬಂದಿವೆ.

◆ ಕನ್ನಡವನ್ನು ಶಾಸ್ತ್ರೀಯ ಸ್ಥಾನಮಾನಗಳಲ್ಲಿ ನೋಡುವ ಈ ದಿನಗಳಲ್ಲಿ ಈ ಭಾಷೆಯನ್ನು ಇನ್ನೂ ಹೆಚ್ಚು ವೈಜ್ಞಾನಿಕವಾಗಿ, ತಾಂತ್ರಿಕವಾಗಿ, ವ್ಯವಹಾರಿಕವಾಗಿ ಬಲಿಷ್ಠತೆಯಿಂದ ಬೆಳೆಸಲು ಹಲವಾರು ಯೋಜನೆಗಳನ್ನು ಹಾಕಿಕೊಂಡಿರುವುದು ಕಾಣುವ ಸತ್ಯ. ಇವರು ತಮ್ಮ

ಕಾಲಾವಧಿಯಲ್ಲಿ ಶಿಕ್ಷಣಾಧಿಕಾರಿಗಳಾಗಿ ಕಾರ್ಯನಿರ್ವಹಿಸುವ ಯೋಗ ದೊರೆತಾಗ ಅದನ್ನು ಕನ್ನಡ ಭಾಷೆಯ ವಿಸ್ತೃತ ಬೆಳವಣಿಗೆಗೆ ಬಳಸಿಕೊಂಡರು. ತಾವೊಬ್ಬ ಸೃಜನಶೀಲ ಬರಹಗಾರರಾಗಿ ವೈಜ್ಞಾನಿಕ, ತಾಂತ್ರಿಕ, ವ್ಯವಹಾರಿಕ ಕ್ಷೇತ್ರಗಳಲ್ಲಿ ಶಾಸ್ತ್ರೋಕ್ತವಾಗಿ ಸಂವಹನ ಸಮರ್ಥವಾಗಿ ಕನ್ನಡವನ್ನು ಬಳಸುವ ಮತ್ತು ನಿಜವಾದ, ಅರ್ಥವತ್ತಾದ ಕನ್ನಡ ಪದಗಳ ಬಳಕೆಯನ್ನು ಜಾರಿಗೆ ತಂದರು. ತಮ್ಮ ಕೃತಿಗಳಲ್ಲಿ ಕೆಲವು ವಿಶಿಷ್ಟ ಪದಗಳ ಬಳಕೆಯನ್ನು ಮಾಡಿದರು. ಸಾಧನ ಸಂಪದ ( ನೋಟ್ ಬುಕ್, ಎಕ್ಸರ್ಸೈಜ್), ಸ್ತಂಭಾಲೇಖನ ( ಗ್ರಾಫ್ ಬುಕ್), ಮಾರ್ಗದರ್ಶಿಕೆ (ಗೈಡ್), ದಿನದರ್ಶಿಕೆ( ಕ್ಯಾಲೆಂಡರ್) ಅಥವಾ ತೂಗು ಪಂಚಾಂಗ ಇತ್ಯಾದಿಗಳು. ಈ ಪದಗಳ ಬಳಕೆ ಅವರಲ್ಲಿದ್ದ ಕನ್ನಡದ ವಿದ್ವತ್ತತೆಯನ್ನು ಮತ್ತು ಪರಭಾಷೆಗಳೊಂದಿಗಿನ ನಿಕಟತೆಯನ್ನು ಪ್ರತಿಬಿಂಬಿಸುತ್ತವೆ. ಈ ವಿಷಯವನ್ನು ನಾವು ಅವರ ಕೃತಿಗಳಾದ 'ನಿಬಂಧ ಮಾಲೆ ಅಥವಾ ಪ್ರಬಂಧ ವಿಜಯ', 'ಗದ್ಯ ಪದ್ಯಾವಲಿ' ಗಳಲ್ಲಿ ವಿಶೇಷವಾಗಿ ನೋಡಬಹುದು.

### ೫.೪ ಧಾರ್ಮಿಕ ಸಾಧನೆಗಳು :

ಅವರ ಸಾಧನೆಗಳ ಹಿನ್ನೆಲೆಯಲ್ಲಿ ಸಾರ್ವತ್ರಿಕತೆ ಕಂಡು ಬಂದರೂ ವೀರಶೈವ ತತ್ತ್ವಾನುಷ್ಠಾನಗಳಿಗೆ ಮಹತ್ವ ನೀಡಿರುವ ಹಿನ್ನೆಲೆಯಲ್ಲಿ 'ಧಾರ್ಮಿಕ' ಎನ್ನುವ ಶಬ್ದ ಬಳಕೆಯಾಗುವುದು ಇಲ್ಲಿ ಅನಿವಾರ್ಯ. ೧೨ನೆಯ ಶತಮಾನದ ಬಸವಾದಿ ಶರಣರ ಚಿಂತನೆಗಳಲ್ಲಿ 'ಜಾತಿ'ಗೆ ಜಾಗವಿಲ್ಲ. ಆದರೆ 'ಧರ್ಮ' ಎನ್ನುವ ಪರಿಕಲ್ಪನೆ 'ಜಾತಿ'ಗೆ ಜೋತು ಬಿದ್ದಿರುವ ಇಂದಿನ ದಿನಗಳಲ್ಲಿ 'ಧಾರ್ಮಿಕ' ಶಬ್ದ ತನ್ನ ಅರ್ಥವನ್ನು ಸಂಕುಚಿತಗೊಂಡಂತಿದೆ. ಹೀಗಾಗಿ ಇವರ ಕೃತಿಗಳ ಅಧ್ಯಯನ ಮತ್ತು ಅವರ ಸಾಧನೆಗಳನ್ನು ಪರಿಶೀಲಿಸುವಾಗ ಆ ಸಂಕುಚಿತ ಪರಿಧಿಯನ್ನು ಸರಿಸಿ ವಿಶಾಲ ತಳಹದಿಯ ಮೇಲೆ ತುಲನೆ ಮಾಡಬೇಕಾಗುತ್ತದೆ. ವೀರಶೈವ-ಲಿಂಗಾಯತ ತತ್ತ್ವಗಳು ಸರ್ವಕಾಲೀಕವೂ, ಸಾರ್ವತ್ರಿಕವೂ ಎಂಬುದನ್ನು ಮನದಲ್ಲಿ ಇಟ್ಟುಕೊಂಡೇ ಕ.ಬ.ಅಂಗಡಿಯವರ ಸಾಧನೆಗಳನ್ನು ಧಾರ್ಮಿಕ ದೃಷ್ಟಿಕೋನದಿಂದ ನೋಡಲಾಗಿದೆ.

◆ ಬಸವ ತತ್ತ್ವಾನುಯಾಯಿಗಳಾಗಿದ್ದ ಇವರಲ್ಲಿ ಬಸವಾದಿ ಪ್ರಮಥರ ಆಚರಣೆಗಳು ಮೈಗೂಡಿಕೊಂಡಿದ್ದವು. ಅವರ ಜೀವನದುದ್ದಕ್ಕೂ ಅವರಲ್ಲಿರುವ ಆಚಾರ ಶ್ರದ್ಧೆ, ಕಾಯಕದಲ್ಲಿ ನಿಷ್ಠೆ, ಶಿವಾನುಭವದಲ್ಲಿ ಆಸಕ್ತಿ, ಬಸವ ತತ್ತ್ವಾನುಸಂಧಾನದಲ್ಲಿರುವ ಪ್ರೇಮ ನಿಜಕ್ಕೂ ಅನ್ಯಾದೃಶ್ಯ[೨೨]

◆ ಮುರಗೋಡ ಮಹಾಂತ ಶಿವಯೋಗಿಗಳ ಪುರಾಣ, ಉರಗಾದ್ರಿ ಕರಿಬಸವೇಶ್ವರ ಪುರಾಣ, ಕಾಯಕಯೋಗಿ ರುದ್ರಮುನಿಸ್ವಾಮಿ ಚರಿತ್ರೆ, ಜೇವರಗಿ ಷಣ್ಮುಖ ಶಿವಯೋಗಿಗಳ ಅಪೂರ್ಣವಾದ ಪುರಾಣ ಸಮಾಪ್ತಿ, ಶರಣ ಬಸವೇಶ್ವರ ಚರಿತ್ರೆ, ಮೃಡಗಿರಿ ಅನ್ನದಾನೀಶ್ವರ ಲೀಲಾಮೃತಂ ಮೊದಲಾದ ಉತ್ಕೃಷ್ಟ ಗ್ರಂಥ ಕಾವ್ಯಗಳು ಪುರಾಣ ಸಾಹಿತ್ಯ ಪ್ರಪಂಚದಲ್ಲಿ ಉಲ್ಲೇಖನೀಯವಾಗಿವೆ.[೨೩]

◆ ಶಿವಶರಣರ ಶಿವಯೋಗಿಗಳವರ ಪುರಾಣಗಳನ್ನು ಬರೆದು ಶಿವಕವಿಗಳ ಕೀರ್ತಿಯನ್ನು ಸಂಪಾದಿಸಿದ್ದಾರೆ.[೨೪]

◆ ೧೯೨೯ರಲ್ಲಿ 'ಬಸವ ಭಜನಾ ಮಾಲೆ' ಯನ್ನು ಶರಣ ಸಂಗಪ್ಪನವರು ಹುಬ್ಬಳ್ಳಿಯವರ ಪೋಷಕತ್ವದಲ್ಲಿ ಆರಂಭಿಸಿ ವೀರಶೈವ ಧರ್ಮದ ತತ್ವಗಳ ಪ್ರಚಾರ ಕಾರ್ಯ ಮಾಡಿದರು.[೨೫]

◆ ಗೊಡಚಿ ಕ್ಷೇತ್ರ ಶ್ರೀ ಕ.ಬ.ಅಂಗಡಿಯವರ ಮನೆದೇವರಾದ ಕಾರಣ ಮತ್ತು ಗೊಡಚಿಯ ಹಿನ್ನೆಲೆಯಲ್ಲಿ ಬಸವಾದಿ ಶಿವಶರಣರ ತತ್ತ್ವಾನುಷ್ಠಾನಗಳಿರುವ ಕಾರಣ ಅಲ್ಲಿ ನಡೆಯುವ ಪ್ರತಿಷರ್ವದ ಜಾತ್ರೆಗೆ ಗೊಡಚಿ ಸೇವಾ ಸಂಘವನ್ನು ಕಟ್ಟಿಕೊಂಡು ೧೯೩೩ರಿಂದ ತಾವೇ ಆ ಸಂಘಟನೆಯ ಕಾರ್ಯಕರ್ತರಾಗಿ ಸೇವೆ ಸಲ್ಲಿಸಿದರು. ಹಾನಗಲ್ಲ ಶಿವಯೋಗಿಗಳು, ಮುರಗೋಡ ಮಹಾಂತ ಶಿವಯೋಗಿಗಳನ್ನು, ಅರಭಾವಿ ಶ್ರೀಗಳನ್ನು ಮತ್ತು ಇನ್ನಿತರ ಪ್ರಮುಖ ವೀರಶೈವ ಗುರು-ವಿರಕ್ತರನ್ನು ಕರೆದುಕೊಂಡು ಹೋಗಿ ಅಲ್ಲಿ ವೀರಶೈವ-ಲಿಂಗಾಯತ ಮತ ತತ್ತ್ವ ವಿವೇಚನೆಯನ್ನು ನಡೆಸುತ್ತಿದ್ದರು.[೨೬]

## ೫.೫ ಆರ್ಥಿಕ ಸಾಧನೆಗಳು :

◆ ಶಿಕ್ಷಕರ ಆರ್ಥಿಕ ಸುಧಾರಣೆಗಾಗಿ ಶಿಕ್ಷಣ ಖಾತೆಯ ಆಡಳಿತಗಾರರಿಗೆ ಶಿಕ್ಷಕರ ಸಂಕಷ್ಟಗಳನ್ನು ವಿವರಿಸಿ ಅವರ ಆರ್ಥಿಕ ತೊಂದರೆಯನ್ನು ನಿವಾರಿಸಲೋಸುಗ ಶಿಕ್ಷಕರ ಸಹಕಾರಿ ಸೊಸಾಯಿಟಿ ಸ್ಥಾಪಿಸಿದರು.

◆ ೧೯೩೩ ರಿಂದ ೧೯೪೩ ರವರೆಗೆ ಶಾಲೋಪಯೋಗಿ ಪುಸ್ತಕಗಳನ್ನು ಬರೆಯಲು ಪ್ರಾರಂಭಿಸಿದ ಕಾಲಾವಧಿ ಅವರ ಜೀವನದ ಅತ್ಯಂತ ಮೌಲ್ಯಯುತ ಮತ್ತು ಆರ್ಥಿಕವಾಗಿ ಸಧೃಡತೆಯನ್ನು ಸಾಧಿಸಿದ ಕಾಲಾವಧಿ. 'ಗದ್ಯಪದ್ಯಾವಲಿ', 'ನಿಬಂಧ ಮಾಲೆ' ಮುಂಬಯಿ

ಕರ್ನಾಟಕದ ಎಲ್ಲ ಜಿಲ್ಲೆಗಳಲ್ಲಿ ಪಠ್ಯಪುಸ್ತಕವಾಗಿ ಮಂಜೂರಾಗಿತ್ತು. ಈ ಪುಸ್ತಕಗಳು ಕಾಯಕ ತತ್ತ್ವಕ್ಕೆ ಪ್ರತಿಫಲ ನೀಡಿದ ಕೃತಿಗಳೆಂದರೆ ತಪ್ಪಾಗಲಾರದು.

◆ ಕನ್ನಡ ಮಾತನಾಡುವ ಪ್ರಾಂತ್ಯಗಳನ್ನು ಒಂದೆಡೆ ಸೇರಿಸಿ ನವ ಮೈಸೂರು ರಾಜ್ಯವೆಂದು ಘೋಷಿಸಿದಾಗ ಹೊಸ ಶಿಕ್ಷಣ ನೀತಿ ಜಾರಿಗೆ ಬಂದಿತು. ೧೯೫೯ ರಿಂದ ಹೊಸ ಶಿಕ್ಷಣ ನೀತಿಗೆ ಅನ್ವಯವಾಗಿ ಹೊಸ ಅಭ್ಯಾಸ ಪತ್ರಿಕೆಯು ರಾಜ್ಯದ ಪ್ರಾಥಮಿಕ ಮತ್ತು ಮಾಧ್ಯಮಿಕ ಶಾಲೆಗಳಲ್ಲಿ ಬಳಕೆಗೆ ಬಂದಾಗ 'ಪಠ್ಯ ಪುಸ್ತಕ ಸಮಿತಿ'ಯೊಂದನ್ನು ರಚಿಸಿಕೊಂಡು ಆ ಮೂಲಕ ಮೈಸೂರು ರಾಜ್ಯದ ವಿದ್ಯಾ ಇಲಾಖೆಗೆ ಪಠ್ಯ ಪುಸ್ತಕಗಳನ್ನು ರಚಿಸಿದರು. ಈ ಪ್ರಕ್ರಿಯೆಯಿಂದ ಅವರ ಆರ್ಥಿಕ ಸ್ಥಿತಿ-ಗತಿಗಳು ಉನ್ನತ ಮಟ್ಟಕ್ಕೇರಿದವು.

◆ ೧೯೬೨ರ ಸುಮಾರು ತಾವೇ ಪ್ರಕಾಶಕರಾಗಿ, ಸಂಪಾದಕರಾಗಿ ಹಲವಾರು ಪುಸ್ತಕಗಳನ್ನು ಹೊರತಂದು ತಮ್ಮೊಟ್ಟಿಗೆ ಯುವ ಲೇಖಕರ ಬಳಗವೊಂದನ್ನು ಹುಟ್ಟು ಹಾಕಿ, ಯುವ ಲೇಖಕರಲ್ಲಿಯೂ ಹೊಸ ಹುರುಪನ್ನು ಮೂಡಿಸಿದರು. ಅವರಲ್ಲಿ ಆರ್ಥಿಕ ಸ್ವಾವಲಂಬನೆಯ ಹಾದಿ ತೋರಿಸಿಕೊಟ್ಟರು.

◆ ತಮ್ಮ ನಿವೃತ್ತಿಯ ನಂತರ ೧೯೫೨ ರಲ್ಲಿ ತಾವು ಬರೆದ ಪುಸ್ತಕಗಳ ಮಾರಾಟ ಹಾಗೂ ಶಾಲೋಪಯೋಗಿ ಪುಸ್ತಕಗಳ ಮಾರಾಟ ಮಾಡಲು ೧೯೫೨ ರ ಅಕ್ಟೋಬರ ತಿಂಗಳಿನಲ್ಲಿ ವಿಜಯದಶಮಿಯ ದಿನ ಸ್ಟೇಶನ್ ರೋಡಿನಲ್ಲಿ 'ಜಯಬಸವ ಪುಸ್ತಕಾಲಯ' ಎಂಬ ಮಾರಾಟ ಮಳಿಗೆಯನ್ನು ಪ್ರಾರಂಭಿಸಿದರು. ಈ ಪುಸ್ತಕಾಲಯ ಅವರ ಅಭಿರುಚಿಯನ್ನು ಎತ್ತಿ ತೋರಿಸುತ್ತದೆ. ಇಲ್ಲಿ ಆರ್ಥಿಕ ಸಂಪಾದನೆಯೊಂದು ಉದ್ದೇಶವಾದರೂ ಅದರೊಂದಿಗೆ ತಾವು ನಡೆದು ಬಂದ ಕಾರ್ಯಕ್ಷೇತ್ರದ ಸಂಪರ್ಕ ನಿವೃತ್ತಿಯ ನಂತರವೂ ಹೊಂದಿರಬೇಕೆನ್ನುವ ತವಕವನ್ನು ಇಲ್ಲಿ ಕಾಣಬಹುದು. ಇದರೊಂದಿಗೆ ತನ್ನ ಕಾರ್ಯ ಚಟುವಟಿಕೆಗಳ ವಿಸ್ತರಣೆಯ ಭಾಗಕೂಡ ಆಗಿರುವುದು ಸ್ಪಷ್ಟ.

◆ ತದ ನಂತರ ೧೯೭೨ರಲ್ಲಿ ಶ್ರೀ ಮುರಗೋಡ ಮಹಾಂತ ಶಿವಯೋಗಿಗಳ ಅಮೃತ ಹಸ್ತದಿಂದ ಸ್ವಂತ ಕಟ್ಟಡ 'ಮಹಾಂತೇಶ ಕೃಪಾ'ವನ್ನು ಉಧ್ಘಾಟಿಸಿದರು. ಅಲ್ಲಿ 'ಜಯಬಸವ ಪುಸ್ತಕಾಲಯ'ವನ್ನು ಸ್ಥಳಾಂತರಿಸಿ, ಅದರೊಟ್ಟಿಗೆ 'ಮಹಾಂತೇಶ ಮುದ್ರಣ' ಎನ್ನುವ ಮುದ್ರಣಾಲಯವನ್ನು ಪ್ರಾರಂಭಿಸಿದರು. ಆ ಮೂಲಕ ಗದುಗಿನಲ್ಲಿ ಮುದ್ರಣಾಲಯಗಳ ಬೆಳವಣಿಗೆಗೆ ಪರೋಕ್ಷವಾಗಿ ಕಾರಣರಾದರು ಎಂದರೂ ತಪ್ಪಾಗಲಾರದು.

## ಅಡಿಟಿಪ್ಪಣಿಗಳು

೧. 'ಶರಣ' ಸಂಚಿಕೆ, ತೋಂಟದಾರ್ಯ ಶ್ರೀಗಳ ಆಶೀರ್ವಚನಗಳಿಂದ

೨. 'ಶರಣ' ಸಂಚಿಕೆ, ತೋಂಟದಾರ್ಯ ಶ್ರೀಗಳ ಆಶೀರ್ವಚನಗಳಿಂದ

೩. 'ಶರಣ' ಸಂಚಿಕೆ, ತೋಂಟದಾರ್ಯ ಶ್ರೀಗಳ ಆಶೀರ್ವಚನಗಳಿಂದ

೪. 'ಶರಣ' ಸಂಚಿಕೆ, ತೋಂಟದಾರ್ಯ ಶ್ರೀಗಳ ಆಶೀರ್ವಚನಗಳಿಂದ

೫. 'ಶರಣ' ಸಂಚಿಕೆ, ಪುಟ ೨೩.

೬. ಕ.ಬ.ಅಂಗಡಿಯವರ ಮಗ ಉಮೇಶ ಅಂಗಡಿಯವರ ಸಂದರ್ಶನದಿಂದ.

೭. 'ಶರಣ' ಸಂಚಿಕೆ, ಪುಟ ಕೌತಾಳ ವೀರಪ್ಪ, ಪುಟ ೬೭.

೮. 'ಶರಣ' ಸಂಚಿಕೆ, ತೋಂಟದಾರ್ಯ ಶ್ರೀಗಳ ಆಶೀರ್ವಚನಗಳಿಂದ

೯. ಅದೇ

೧೦. ಅದೇ

೧೧. 'ಶರಣ' ಸಂಚಿಕೆ, ಪುಟ್ಟರಾಜ ಗವಾಯಿಗಳ ಆಶಿರ್ವಚನಗಳಿಂದ

೧೨. 'ಶರಣ' ಸಂಚಿಕೆ, ಪುಟ ೨೩

೧೩. ಅದೇ

೧೪. ಅದೇ

೧೫. ಅದೇ, ಪುಟ ೨೪.

೧೬. ಅದೇ, ಪುಟ ೨೭.

೧೭. ಅದೇ, ಪುಟ ೨೭.

೧೮. ಅದೇ, ಪುಟ ೨೮.

೧೯. ಅದೇ, ಪುಟ ೨೮.

೨೦. ಅದೇ, ಪುಟ ೨೮.

೨೧. ಅದೇ, ಪುಟ ೨೮.

೨೨. 'ಶರಣ' ಸಂಚಿಕೆ, ತೋಂಟದಾರ್ಯ ಶ್ರೀಗಳ ಆಶೀರ್ವಚನಗಳಿಂದ

೨೩. ಅದೇ

೨೪. 'ಶರಣ' ಸಂಚಿಕೆ, ಪಂ. ಪುಟ್ಟರಾಜ ಗವಾಯಿಗಳ ಆಶೀರ್ವಚನದಿಂದ

೨೫. 'ಶರಣ' ಸಂಚಿಕೆ.

೨೬. 'ಶರಣ' ಸಂಚಿಕೆ, ಪುಟ ೨೫.

*****

ಅಧ್ಯಾಯ : ಆರು

# ಸಮಾರೋಪ

"ಎನ್ನೊಳು ನಿರಂಜನ ಜಗದ್ಗುರು

ಅನ್ನದಾನಿಯು ಕುಳಿತು ಕರುಣಿಸಿ

ತನ್ನ ಚರಿತವ ತಾನೆ ತಿಳುಹಿಸಿ ಬರೆಯ ಹಚ್ಚಿಹನು

ನನ್ನಿಯಿಂ ನಾನದನ ಗ್ರಹಿಸುತ

ಲನ್ನದಾನಿಯ ದಿವ್ಯ ಚರಿತೆಯ

ರನ್ನ ಮಾಲೆಯ ಹೆಣೆದು ಸಲಿಸಿಹೆನಿದನು ಗುರುಪದಕೆ"

ಎಂದು 'ಮೃಡಗಿರಿ ಶ್ರೀ ಅನ್ನದಾನೀಶ್ವರ ಲೀಲಾಮೃತ'ದಲ್ಲಿ ವಿನಯದಿಂದ ತಾವು ಮಾಡಿದ ಕಾರ್ಯವನ್ನು ದೇವರ ಸನ್ನಿದಿಗೆ ಅರ್ಪಿಸಿರುವ ಅಂಗಡಿಯವರು ಭಕ್ತಕವಿಗಳು. ಅವರ ಕುರಿತು "ಶರಣಕವಿ ಅಂಗಡಿ ಕರವೀರಪ್ಪನವರು : ಬದುಕು-ಬರಹ" ಎಂಬ ವಸ್ತುವನ್ನು ಮಹಾಪ್ರಬಂಧದ ರೂಪದಲ್ಲಿ ಮಂಡಿಸುತ್ತಿರುವುದು ನನಗೆ ಹೆಮ್ಮೆಯ ವಿಷಯ. ಬಸವಾದಿ ಶಿವಶರಣರ ಹಾದಿಯಲ್ಲಿ ನಡೆದ ಹಲವಾರು ಆಧುನಿಕ ಶರಣರು ಕನ್ನಡ ನಾಡಿನಲ್ಲಿ ದೊರೆಯುತ್ತಾರೆ. ೧೨ನೆಯ ಶತಮಾನದಿಂದ ಇಂದಿನವರೆಗೂ ಸಾಮಾಜಿಕ ಬದ್ಧತೆಗಳನ್ನು, ಧಾರ್ಮಿಕ ವಿವೇಚನೆಗಳನ್ನು ಮಾಡುತ್ತ ಕಾಲ ಕಾಲಕ್ಕೆ ಆ ವೈಚಾರಿಕತೆಗೆ ಹೊಸ ಆಯಾಮವನ್ನು ನೀಡುತ್ತಾ ಸಾಗಿದ್ದಾರೆ. ಆ ಸಾಲಿನಲ್ಲಿ ಉತ್ತರ ಕರ್ನಾಟಕದಲ್ಲಿ ವಿಶೇಷವಾಗಿ ಗದುಗಿನ ಸುತ್ತ ಮುತ್ತಲ ಪರಿಸರದಲ್ಲಿ ಕೇಳಿಬರುವ ಹೆಸರು ಕ.ಬ.ಅಂಗಡಿಯವರದು. ಶಿಕ್ಷಣಾಧಿಕಾರಿಗಳಾಗಿ ಉನ್ನತ ಹುದ್ದೆಯನ್ನು ಅಲಂಕರಿಸಿದ ಇವರು ತಮ್ಮ ಬದುಕನ್ನು ಬರಹದ ಮೂಲಕ ಅಭಿವ್ಯಕ್ತಿಸಿದ್ದಾರೆ. ಆ ಅಭಿವ್ಯಕ್ತಿಯಲ್ಲಿ ಬಸವಾದಿ ಶರಣರ ನೆಲೆಗಳನ್ನೇ ಮಾಧ್ಯಮವನ್ನಾಗಿಸಿಕೊಂಡು, ಆ ಶರಣರ ತತ್ವಗಳ ಪೂರ್ವಾಪರ ವಿವೇಚನೆಯಲ್ಲಿ ತೊಡಗಿಕೊಂಡು, ತಾವು ಸವಿಯುತ್ತ, ತಮ್ಮ ಸುತ್ತಲಿನ ಜನರ ಮುಂದಿಡುವತ್ತ ಯಶಸ್ವಿಯಾಗಿದ್ದಾರೆ.

ಶರಣರ ಪರಂಪರೆಯಲ್ಲಿ ಕನ್ನಡ ಸಾಹಿತ್ಯ ಹೆಚ್ಚು ಹುಲುಸಾಗಿ ಬೆಳೆದದ್ದು ಇತಿಹಾಸ. ಬಸವಾದಿ ಪ್ರಮಥರು ಬದುಕಿದ ಬದುಕು ನಡೆ-ನುಡಿಗಳ ಹದಭರಿತ ಬದುಕು. ಜಗತ್ತಿನ

ಬೇರೆ ಯಾವುದೇ ಭಾಗದಲ್ಲಿ ಈ ರೀತಿಯ ಸಮಭಾವ-ಸಮಚಿತ್ತ ಸಮಷ್ಟಿ ಪ್ರಭಾವದ ನೆಲೆಗಳು ಕಂಡು ಬರುವುದಿಲ್ಲ. ಕರ್ನಾಟಕದ ಪರಂಪರೆಯ ಇತಿಹಾಸ ಇನ್ನೂ ಮಸುಕಾಗಿ ಉಳಿದಿರುವುದೇ ಸತ್ಯ. ಇಂದು ನಾವು ಗುರುತಿಸಿರುವ ಇತಿಹಾಸದಲ್ಲಿ ಸತ್ಯಾಂಶಗಳು ಸಿಗುತ್ತಿರುವುದೇ ವಿರಳ. ಸಂಶೋಧನೆಗಳು ಸತ್ಯಗಳನ್ನು ಹೊರಗೆಡುವುವಂತಿರಬೇಕು. ಇಲ್ಲಿ ಚರಿತ್ರ ನಾಯಕರಾದ ಕ.ಬ.ಅಂಗಡಿಯವರು ಮಾಡಿರುವ ಮಹತ್ತರವಾದ ಕಾರ್ಯವನ್ನು ದಾಖಲಿಸಲು ಹಲವಾರು ಅಡತಡೆಗಳು ಕಂಡುಬರುತ್ತವೆ. ಇದಕ್ಕೆ ಮುಖ್ಯವಾದ ಕಾರಣ ಕಾಲದ ಅಂತರ ಮತ್ತು ಅವರ ಸಮಕಾಲೀನ ಉಲ್ಲೇಖದ ಕೊರತೆ. ಒಬ್ಬ ಸಾಮಾನ್ಯ ಮಾನವ ತನ್ನ ಕಾರ್ಯ ತತ್ಪರತೆಗಳ ಮೂಲಕ ಮಹಾ ಮಾನವನಾಗಿ ದೇವಾಂಶ ಸಂಭೂತನಾಗುವವನ ವ್ಯಕ್ತಿತ್ವ ಹೇಗಿರಬೇಕು ಎಂಬುದನ್ನು ನಾವು ಹಲವಾರು ಕಾರಣಿಕ ಪುರುಷರ ಜೀವನದಿಂದ ಕಂಡುಕೊಂಡದ್ದಿದೆ. ಅಂತಹ ಮಹಾಪುರುಷರ ಸಾಲಿನಲ್ಲಿ ಕ.ಬ.ಅಂಗಡಿಯವರೂ ಒಬ್ಬರು ಎನ್ನುವುದು ನನ್ನ ಅಭಿಮತ. ಹೀಗಾಗಿ ಈ ವ್ಯಕ್ತಿತ್ವವನ್ನು ಸಂಶೋಧನಾ ದೃಷ್ಟಿಯಿಂದ ಪರಾಮರ್ಶಿಸುವ ಕಾರ್ಯ ಇಲ್ಲಿ ನಡೆದು ಬಂದಿದೆ.

ಎಲೆ ಮರೆಯ ಕಾಯಾಗಿ ಯಾವುದೇ ಪ್ರಚಾರದ ಹಂಗಿಲ್ಲದೆ ತನ್ನನ್ನು ತಾನು ಬಸವಾದಿ ಶಿವಶರಣರ ಜೀವನದ ಅಚ್ಚಿನಲ್ಲಿ ಹೊಂದಿಸಿಕೊಳ್ಳತ್ತ ಸಾಗಿದ, ಇವರು ಬದುಕಿನಲ್ಲಿ ಲೌಕಿಕ-ಪಾರಮಾರ್ಥಿಕ ನೆಲೆಗಳೆರಡನ್ನೂ ಸಮಚಿತ್ತದಿಂದ ಸ್ವೀಕರಿಸಿದರು. ಸುಖ-ದುಃಖಗಳ ಸಮಪಾತದಲ್ಲಿ ಸವಿದ ಜೀವನವದು. ಭಕ್ತಿಯ ಮುಗ್ಧತೆಯಿಂದ ಆಗಾಧವಾದುದನ್ನೇ ಸಾಧಿಸಿದರೂ ಎಲ್ಲಿಯೂ ನಾನೆಂಬ ಅಹಂಕಾರವನ್ನು, ನನ್ನಿಂದಲೇ ಎನ್ನುವ ಮಮಕಾರವನ್ನೂ ಬಿತ್ತಿದವರೂ ಅಲ್ಲ, ಬೆಳೆದವರೂ ಅಲ್ಲ. ಹತ್ತರಲ್ಲಿ ಹನ್ನೊಂದಾದರೂ, ಆ ಹನ್ನೊಂದರಲ್ಲಿ ವೈಶಿಷ್ಟ್ಯತೆಯನ್ನು ಮೆರೆದುದು ಅವರ ಮಹತ್ವದ ಸಾಧನೆಗಳಲ್ಲಿ ಒಂದು. ಅವರ ಕಾರ್ಯ ಕ್ಷೇತ್ರವನ್ನು ಶರಣ ಸಾಹಿತ್ಯಕ್ಕೆ ಸೀಮಿತಗೊಳಿಸಿದರೂ ಅದು ಕನ್ನಡ ಸಮಾಜಕ್ಕೆ, ಧರ್ಮಕ್ಕೆ, ಕಾಯಕಕ್ಕೆ ಅಪಚಾರ ಮಾಡದಂತಾಗುತ್ತದಲ್ಲದೆ, ಮತ್ತು ಇನ್ನೊಂದು ದೃಷ್ಟಿಯಲ್ಲಿ ಒಂದು ಮಹತ್ವಾಕಾಂಕ್ಷಿ ವ್ಯಕ್ತಿತ್ವವನ್ನು ಅದಕ್ಕೆ ಸಿಗಬೇಕಾದ ಮಹತ್ವವನ್ನು ನೀಡದೇ ಹತ್ತಿಕ್ಕಿದ ಪಾಪ ಪ್ರಜ್ಞೆ ನಮ್ಮನ್ನು ಕಾಡುತ್ತದೆ. ಹೀಗಾಗಿ ಇವರ ಬದುಕು-ಬರಹಗಳು ಅಧ್ಯಯನಕ್ಕೊಳಪಟ್ಟು, ಅವರ ವೈಚಾರಿಕತೆಗೆ ಹೊಸ ದಾರಿ ದೊರೆಯಬೇಕಿದೆ. ಈ ದೃಷ್ಟಿಯಿಂದ ಇವರ ಅಧ್ಯಯನ ಮಹತ್ವ ಪಡೆದುಕೊಳ್ಳುತ್ತದೆ. ಹಳೆಯ ಮತ್ತು ಹೊಸ ಸಾಹಿತ್ಯ, ಚಿಂತನೆಗಳನ್ನು ಕೂಡಿಸಿಕೊಂಡು ಬದುಕಿನ ಮೌಲ್ಯಗಳನ್ನು ಪುನರ್ ಪರಿಶೀಲಿಸುವ ಅವರ ಕೃತಿಗಳು ಪರಂಪರೆಯ ದೃಷ್ಟಿಯಿಂದ ಅತ್ಯಂತ ಬೆಲೆಬಾಳುವಂತವುಗಳು. ಇವರ ಬದುಕು-ಬರಹದ ಮೂಲಕ ಸಂಶೋಧನೆ, ಸಾಹಿತ್ಯ, ಸಂಸ್ಕೃತಿ, ಧರ್ಮ, ಸಮನ್ವಯತೆ,

ದೇಶ, ಭಾಷೆ, ಐತಿಹಾಸಿಕತೆಗಳ ಮೇಲ್ಪರಿಚಯವಾಗುತ್ತದೆ. ಹೀಗಾಗಿ ಈ ಅಧ್ಯಯನ ಇಂದಿನ ತುರ್ತೆಂದರೂ ತಪ್ಪಲ್ಲ.

ಸಾಹಿತಿಯೊಬ್ಬ ಸಮಾಜದ ಮಧ್ಯೆದಲ್ಲಿ ಹುಟ್ಟಿ, ಅಲ್ಲಿಯ ವಸ್ತುವನ್ನೇ ತನ್ನ ರಚನೆಗೆ ಆಕರಗಳನ್ನಾಗಿ ತೆಗೆದುಕೊಂಡು ಸೃಜನಶೀಲತೆಯ ಪರಿಭಾಷೆಯಿಂದ ಹೊಸತನ್ನು ಸೃಷ್ಟಿಸುತ್ತಾನೆ. ತಾನು ಕಂಡುಂಡ ಅನುಭವಗಳಿಗೆ ಸೂಕ್ಷ್ಮವಾಗಿ ಸ್ಪಂದಿಸುತ್ತ ಸಮಾಜದ ಒಳ-ಹೊರಗಳನ್ನು ತಿದ್ದುತ್ತಾ, ತೀಡುತ್ತಾ ಹೋಗುತ್ತಾನೆ. ಹೀಗಾಗಿ ಅವನೊಬ್ಬ ಜವಾಬ್ದಾರಿಯುತ ಸಾಮಾಜಿಕ ಶಕ್ತಿಯಾಗಿ ಬೆಳೆಯುತ್ತಾನೆ. ತನ್ನ ಮುಂಬರುವ ಜನಾಂಗಕ್ಕೆ ತನ್ನ ಪ್ರಸ್ತುತತೆಯನ್ನು ಮತ್ತು ಅದರ ಮೌಲ್ಯವನ್ನು ಅರ್ಥೈಸುವವನಾಗುತ್ತಾನೆ. ಈ ಹಿನ್ನೆಲೆಯಲ್ಲಿ ಕ.ಬ.ಅಂಗಡಿಯವರ ಸಾಹಿತ್ಯಿಕ ಸೇವೆ ಗಣನೀಯವಾದುದು. ಇವರ ಬದುಕು ನಿತ್ಯ ನೂತನ ಸೃಷ್ಠಿಯಲ್ಲಿ ತೊಡಗುವುದರಿಂದ ಅವರ ಹೆಸರು ಚಿರಸ್ಥಾಯಿಯಾಗಿ ನಿಲ್ಲುತ್ತದೆ.

ಗದಗ ಜಿಲ್ಲೆಯ ರೋಣ ತಾಲ್ಲೂಕಿನ ಮೆಣಸಗಿ ಎಂಬ ಪುಟ್ಟ ಗ್ರಾಮದಲ್ಲಿ ಜನಿಸಿ, ಸಾಮಾನ್ಯ ಶಿಕ್ಷಕನಾಗಿ, ಶಿಕ್ಷಣಾಧಿಕಾರಿಗಳಾಗಿ ಅವರು ಚರಿಸಿ ಬಂದ ದಾರಿ ಈ ನೆಲಕ್ಕೊಂದು ಮಾದರಿ. ಸಮಾಜ, ದೇಶ, ಭಾಷೆ, ಸಮುದಾಯ, ಸಾಹಿತ್ಯ, ಶಿಕ್ಷಣ, ಸಂಶೋಧನೆಯ ಮಹತ್ತರ ಕ್ಷೇತ್ರಗಳಲ್ಲಿ ಸೇವೆಯನ್ನು ಸಲ್ಲಿಸಿ ಎಲೆಮರೆಯ ಕಾಯಾಗಿ 'ಕಾಯಕ'ಯೋಗಿಯಾಗಿ ನಿಂತ ಕ.ಬ.ಅಂಗಡಿಯವರು ನಿತ್ಯವೂ ಸ್ಮರಣಾರ್ಹರು. ಅವರ ಬದುಕಿನಲ್ಲಿ ಬರುವ ಹತ್ತು ಹಲವು ವ್ಯಕ್ತಿಗಳಿಗೆ, ಶಕ್ತಿಯಾಗಿ ಅವರ ಗೊತ್ತು ಗುರಿಗಳಿಗೆ ಕಾರಣವಾಗಿದ್ದಾರೆ. ಬಸವಾದಿ ಪ್ರಮಥರ ಜೀವನ-ಸಾಧನೆಯನ್ನು ತಮ್ಮೊಳಗೆ ಅಳವಡಿಸಿಕೊಳ್ಳಲು ಅನೇಕ ಪ್ರಸಂಗಗಳು ಕಾರಣವಾಗುತ್ತವೆ. ಮೃಡನಿಂದ ಕೊಡುಗೆಯಾಗಿ ಬಂದ ಜಢ ಜೀವ ಕಾಲಕ್ರಮೇಣ ಮೃದುವಾಗುತ್ತ ಪರಿಪೂರ್ಣನಾಗುತ್ತ ಶರಣತ್ವವನ್ನು ಪಡೆದುಕೊಳ್ಳಲು ಹಾತೊರೆಯುತ್ತಾರೆ. ಕ.ಬ.ಅಂಗಡಿಯವರ ಎಳೆಯ ಮನಸಿನಲ್ಲಿ ಬದುಕಿನ ಸಾರ್ಥಕತೆಯ ಕನಸುಗಳನ್ನು ಹಾನಗಲ್ಲ ಕುಮಾರಸ್ವಾಮಿಗಳು ಮೂಡಿಸುತ್ತಾರೆ. ಅವರ ಜೀವನದ ದಿಗ್ದೆಸೆಗಳು ಬದಲಾಗಲು ಕಾರಣಿಕರಾಗಿದ್ದಾರೆ. ಮುರಗೋಡ ಮಹಾಂತ ಶಿವಯೋಗಿಗಳು ಅನುಭಾವದ ಪರಮತೆಯನ್ನು ಪಡೆದುಕೊಳ್ಳಲು ಸಾಧನವಾಗಿದ್ದಾರೆ. ಹಲವಾರು ಸಂಘ, ಸಂಸ್ಥೆ, ಶಿವಾನುಭವ, ಸಾಹಿತ್ಯದ ವೇದಿಕೆಗಳನ್ನು ಹುಟ್ಟು ಹಾಕಿ ಸಮಾಜದ ಓರೆ-ಕೊರೆಗಳನ್ನು, ಸಾಹಿತ್ಯ ಸಂವೇದನೆಗಳ ಮೂಲಕ ತಿದ್ದಿ ತೀಡಿ ಮಾರ್ಗದರ್ಶನ ಮಾಡಿದ್ದಾರೆ. ವೀರಶೈವ ತತ್ವಗಳು ಇಂದಿನ ಯುವ ಜನತೆಯಲ್ಲಿ ಸತ್ಯ-ಶಿವ-ಸುಂದರದ ಭಾವತ್ರಯಗಳು ಅಂತರಂಗದ ಅರಿವು ಮೂಡಿಸುವ ಸಾಧನಗಳೆಂದು

ಸ್ವತಃ ತಾವೇ ಬದುಕಿ ಅದನ್ನು ಸಮಾಜಕ್ಕೂ ತೋರ್ಪಡಿಸಿದ್ದಾರೆ. ಸಂಸಾರಿಯಾಗಿದ್ದುಕೊಂಡು ಯಾವುದೇ ಗುರು-ವಿರಕ್ತರಿಗೂ ಸಮನಾಗಬಲ್ಲ ವ್ಯಕ್ತಿತ್ವವನ್ನು ಮೈಗೂಡಿಸಿಕೊಂಡವರಾಗಿದ್ದಾರೆ.

ಅವರ ಸಂಶೋಧನಾಸಕ್ತಿಯಿಂದ ಕಂಡುಕೊಂಡ ಹಲವಾರು ವಿಷಯಗಳನ್ನು ಈ ಅಧ್ಯಯನದಲ್ಲಿ ಬಿಚ್ಚಿಡುವ ಪ್ರಯತ್ನ ಮಾಡಲಾಗಿದೆ. ಬರವಣಿಗೆಯ ಎಲ್ಲ ಪ್ರಕಾರಗಳಲ್ಲೂ ಬಸವಾದಿ ಶರಣರ ಪ್ರಭಾವಕ್ಕೆ ಒಳಗಾದುದು ಸ್ಪಷ್ಟವಾಗಿ ಗುರುತಿಸಲಾಗಿದೆ. 'ಶರಣಕ್ಷೇತ್ರ ಗೊಡಚಿ ವಸ್ತು ಮಡಿವಾಳ ಮಾಚಿತಂದೆ' ಕೃತಿಯಲ್ಲಿ ಗೊಡಚಿ, ಅದರ ಸುತ್ತಮುತ್ತಲ ಪ್ರದೇಶದಲ್ಲಿ ಬಸವಾದಿ ಪ್ರಮಥರ ನೆಲೆಗಳಾದ, ಅಂಚಡಿ ಬಸಪ್ಪನ ಕಟ್ಟಿ, ರಣಬಾಜಿ ಮಡು, ಶರಣ ಶರಣೆಯರ ವೀರಗಲ್ಲುಗಳು, ಚೆನ್ನಬಸವಣ್ಣನ ಅನುಷ್ಠಾನ ಸ್ಥಾನ, ಶಿವಾನುಭವ ಮಂಟಪಾದಿಗಳು ಮುಂತಾದವುಗಳನ್ನು ಗುರುತಿಸಿದ್ದಾರೆ. 'ಮುತ್ತೈದೆಯರೈವರು' ಕೃತಿಯಲ್ಲಿ ಶರಣೆಯರೈವರಾದ ನೀಲಲೋಚನೆ, ಮಲ್ಲಿಗಮ್ಮ, ಅಕ್ಕಮಹಾದೇವಿ, ಮೋಳಿಗೆಯ ಮಹಾದೇವಮ್ಮ, ಆಯ್ದಕ್ಕಿ ಲಕ್ಕಮ್ಮ ಇವರ ಪಾತಿವೃತ್ಯ ಜೀವನ ಉತ್ಕೃಷ್ಟವಾದುದು ಎಂದು ವಿವೇಚನಾತ್ಮಕ ಬೆಳಕು ಚೆಲ್ಲಿದ್ದಾರೆ. ಮಡಿವಾಳ ಮಾಚಿ ತಂದೆಗೆ ಪುಣ್ಯಸ್ತ್ರೀ ಇರುವ ಬಗೆಗೆ ಮತ್ತು ಅವಳು 'ಮಲ್ಲಿಗಮ್ಮ' ಎಂದು ಈ ವಿಷಯಕ್ಕೆ ಅವರು ಕೆಲವು ಆಧಾರಗಳನ್ನು ನೀಡಿದ್ದಾರೆ. ಅವಳ ಕುರಿತು ಹೆಚ್ಚಿನ ಸಂಶೋಧನೆಯ ಅಗತ್ಯವನ್ನು ಒತ್ತಿ ಹೇಳಿದ್ದಾರೆ. ಈ ಎಲ್ಲ ವಿಷಯಗಳನ್ನು ಸಾದ್ಯಾಂತವಾಗಿ ಅಧ್ಯಯನದಲ್ಲಿ ವಿಶದಪಡಿಸಲಾಗಿದೆ.

ಕ.ಬ.ಅಂಗಡಿಯವರು ಬಹುಮುಖ ವಾಂಗ್ಮಿಗಳು. ಅವರನ್ನು ಅವರ ಮಹತ್ತರ ಪುರಾಣ ಕಾವ್ಯಗಳಿಂದಲೂ ಗುರುತಿಸಲಾಗುತ್ತದೆ. ಆಧುನಿಕ ಪುರಾಣಕಾರರ ಸಾಲಿನಲ್ಲಿ ಸಶಕ್ತವಾಗಿ ಅವರನ್ನು ಹೆಸರಿಸಬಹುದು. ಈ ಕುರಿತು ಡಾ.ವಿ.ಶಿವಾನಂದ, ಡಾ. ಸುಂಕಾಪುರ, ಡಾ. ತೋಂಟದ ಸಿದ್ಧಲಿಂಗ ಮಹಾಸ್ವಾಮಿಗಳು, ಡಾ. ವೀರಣ್ಣ ರಾಜೂರ, ಪ್ರೋ. ಉಮೇಶ ಅಂಗಡಿ, ಪ್ರೋ. ಚಂದ್ರಶೇಖರ ವಸ್ತದ, ಡಾ. ಸಂಗಮೇಶ ಹಂಡಗಿಯವರ, ಲಿಂ. ಪ್ರೋ ಮಹಾಲಿಂಗ ಯಾಳಗಿ ಅನುಭವಗಳು ಈ ವಿಷಯವನ್ನು ಪುಷ್ಟೀಕರಿಸುತ್ತವೆ. ಪುರಾಣ ರಚನೆಯ ಮೂಲಕ ಅಂಗಡಿಯವರು ಹಳೆತನದಲ್ಲಿ ಹೊಸತನ್ನು ಹುಡುಕುವ ಸಮರ್ಥ ಪ್ರಯತ್ನವನ್ನು ಗುರುತಿಸಲಾಗಿದೆ. ಅವರ ಕೃತಿಗಳಲ್ಲಿ ಪರಂಪರೆಯ ಸಾಹಿತ್ಯ ದೃಷ್ಟಿಯನ್ನು, ಸಮಾಜದ ಹಿತದೃಷ್ಟಿಯನ್ನು, ಧರ್ಮದೃಷ್ಟಿಯನ್ನು ಒರೆಹಚ್ಚುವ ಪ್ರಯತ್ನ ಮಾಡಲಾಗಿದೆ. ಅವರ ಕೃತಿಗಳಲ್ಲಿ ಕಾಣುವ ಇನ್ನೊಂದು ಮುಖ್ಯ ಅಂಶವೆಂದರೆ ವೀರಶೈವ ಸಮಾಜದ ಸಮಗ್ರತೆಯನ್ನು ಸಾಧಿಸುತ್ತಾ ಬರುವುದು. ಶತ

ಶತಮಾನಗಳ ವೀರಶೈವ ಸಮಾಜ-ಜೀವನ-ಧರ್ಮ-ಸಾಹಿತ್ಯಕ್ಕೆ ಸಂಬಂಧಪಟ್ಟ ಹಲವಾರು ಮಹಿಮರು ಅವರ ಕೃತಿಗಳಲ್ಲಿ ಸ್ಮರಣೆಗೊಳ್ಳುತ್ತಾರೆ ಜೊತೆಗೆ ಸರ್ವಕಾಲೀಕರೆನಿಸುತ್ತಾರೆ. ಆ ಮೂಲಕ ಸಹೃದಯ ಓದುಗರಲ್ಲಿ ವೀರಶೈವ ಸಮಾಜ-ಜೀವನದ ಬಗೆಗೆ ಅದಮ್ಯವಾದ ಪ್ರೀತಿ-ಅಭಿಮಾನಗಳು ಹುಟ್ಟಿಕೊಳ್ಳುವಂತೆ ಮಾಡುತ್ತಾರೆ. ಅದೇ ರೀತಿಯಾಗಿ ಪರಧರ್ಮ ಸಹಿಷ್ಣುತೆಯೂ ಮತ್ತು ಸರ್ವಧರ್ಮಸಮನ್ವಯವೂ ಕೂಡ ಅವರ ಕೃತಿಗಳಲ್ಲಿ ಬೆಳಕು ಕಾಣುತ್ತವೆ.

ಅವರ ಕೃತಿಗಳು ಬದುಕಿನ ಎಲ್ಲ ರಂಗಗಳನ್ನು ವಿಶ್ಲೇಷಿಸುತ್ತವೆ. ಆ ಕೃತಿಗಳು ಸಮಕಾಲೀನ ಬದುಕು-ಸಾಹಿತ್ಯ-ಇತಿಹಾಸವನ್ನು ದಾಖಲಿಸುವ ಕಾರ್ಯವನ್ನು ಮಾಡುತ್ತವೆ. ಮಹಿಳೆ, ಮಕ್ಕಳಿಗೆ ಬೇಕಾದ ವೈಚಾರಿಕ ವಿಷಯಗಳು ಇವರ ಕೃತಿಗಳಲ್ಲಿವೆ. ಅನ್ಯಾಯ-ಅಧರ್ಮ-ಅನೀತಿಗಳ ವಿರುದ್ಧ ಧ್ವನಿಯಿದೆ. ಬದುಕಿನ ಸಾರ್ಥಕತೆಗೆ ಆಧ್ಯಾತ್ಮದ ಅವಶ್ಯಕತೆಯನ್ನು ತಿಳಿಸಿಕೊಡುತ್ತವೆ.

ಶಿಕ್ಷಣವೆತ್ತ ಸಮಾಜ ನಿರ್ಮಾಣದಲ್ಲಿ ಸದ್ದು-ಗದ್ದಲವಿಲ್ಲದೆ ಅಂತರಂಗ ಬಹಿರಂಗವನ್ನು ಶುಚಿಯಾಗಿಸಿಕೊಳ್ಳುವ ಕಾರ್ಯವನ್ನು ಅಂಗಡಿಯವರು ಮಾಡಿದ್ದಾರೆ. ಅವರ ಬದುಕು-ಬರಹದ ಅಧ್ಯಯನದಿಂದ ಮುಖ್ಯವಾಗಿ ಕಂಡುಕೊಳ್ಳುವ ಸತ್ಯವೆಂದರೆ ಅವರೆಂದಿಗೂ ಕವಿಯಾಗಬೇಕು ಎಂದು ಕಾವ್ಯ ರಚಿಸಲಿಲ್ಲ, ನಾಟಕಕಾರನಾಗಬೇಕು ಎಂದು ನಾಟಕಗಳ ರಚಿಸಲಿಲ್ಲ, ಪುರಾಣಿಕನಾಗಬೇಕೆಂದು ಪುರಾಣ ರಚಿಸಲಿಲ್ಲ, ಶರಣನೆಂದೆನಿಸಿಕೊಳ್ಳಬೇಕೆಂದು ಸ್ತೋತ್ರಗೀತೆಗಳನ್ನು ಬರೆಯಲಿಲ್ಲ. ಈ ಎಲ್ಲ ಆಯಾಮಗಳನ್ನೂ ಅವರು ಬಳಸಿಕೊಂಡದ್ದು ಬಸವಾದಿ ಶರಣರ ನಡೆ-ನುಡಿ-ಬೆಡಗನ್ನು ಪ್ರಸ್ತುತ ಸಮಾಜದ ಮುಂದೆ ಸಾದರಪಡಿಸಬೇಕೆಂಬ ಅಭಿಲಾಶೆಯಿಂದ.

ಶಿಕ್ಷಣ ಕ್ಷೇತ್ರದಲ್ಲಿ ಪಠ್ಯಪುಸ್ತಕಗಳ ರಚನೆ, ಸ್ತ್ರೀ ಶಿಕ್ಷಣ ಜಾಗೃತಿ, ವೀರಶೈವ ಮಹಿಳೆಯರು ಮತ್ತು ಮಕ್ಕಳ ವ್ಯಕ್ತಿ ಚಿತ್ರಣವನ್ನು ಸಮಾಜಕ್ಕೆ ನೀಡುತ್ತ ವೀರಶೈವ-ಲಿಂಗಾಯತ ತತ್ವಗಳಲ್ಲಿ ಅಡಗಿರುವ ಅಂತಃಸತ್ವವನ್ನು ಬಹಿರಂಗಗೊಳಿಸುತ್ತ, ಶಿಕ್ಷಣವಿಲ್ಲದೆಯೇ ಸಾಧನೆಗೈದ ಮಹಿಳೆಯರಿಗೆ ಶಿಕ್ಷಣ ನೀಡಿದರೆ ಅವರಿಂದ ಸಮಾಜಕ್ಕೆ ಸಾಂಸ್ಕೃತಿಕ, ಧಾರ್ಮಿಕ, ಕೌಟುಂಬಿಕ ಹಂತಗಳಲ್ಲಿ ದೊಡ್ಡ ಮೊತ್ತದ ಲಾಭವಾಗುವುದನ್ನು ಗುರುತಿಸಿ ಆ ದಾರಿಯಲ್ಲಿ ಎಲ್ಲರನ್ನೂ ಕೊಂಡೊಯ್ಯಲು ಬೇಕಾದ ಪರಿಸರವನ್ನು ಉತ್ತರ ಕರ್ನಾಟಕದ ಭಾಗದಲ್ಲಿ ವಿಶೇಷವಾಗಿ ಮಾಡಿದ್ದನ್ನು ಗುರುತಿಸಲಾಗಿದೆ. ಇದು ವರ್ಗಪದ್ಧತಿಯ ಬೇರುಗಳನ್ನೇ ಬಿಸುಟ ಮಾನವೈಕತೆಯನ್ನು ಪ್ರತಿಪಾದಿಸುವಂತಾಯಿತು.

ಅನುಭಾವದಿಂದ ಬದುಕಿನ ಮಹತ್ತರವನ್ನು ಮತ್ತು ಎತ್ತರವನ್ನು ಕಂಡುಕೊಳ್ಳುವ ಅವರ ಸಾಧನೆಯನ್ನು ಗುರುತಿಸಲಾಗಿದೆ. ಅವರ ಕೃತಿಗಳ ಮೇಲೆ ಹೆಚ್ಚು ಬೆಳಕನ್ನು ಚೆಲ್ಲುವ ಪ್ರಯತ್ನ ಮಾಡಲಾಗಿದ್ದು, ಅವರ ಬೈಲಾಟಗಳನ್ನು, ನಾಟಕಗಳನ್ನು, ಅಷ್ಟಕಗಳನ್ನು, ಷಟ್ಕಗಳನ್ನು, ಕಿರುಗ್ರಂಥಗಳನ್ನು, ಪಠ್ಯಪುಸ್ತಕಗಳನ್ನು, ಪುರಾಣ ಗ್ರಂಥಗಳನ್ನು ಸಾಧ್ಯಾಂತವಾಗಿ ವಿವೇಚಿಸಲಾಗಿದೆ. ಆ ಮೂಲಕ ಸಮಕಾಲೀನ ಸಾಹಿತ್ಯ, ಜೀವನ, ಶಿಕ್ಷಣ ಇವುಗಳ ಮೇಲೆ ಕ್ಷಕಿರಣವನ್ನು ಬೀರಲಾಗಿದೆ.

ಹೊನಗುಡಿ ಚೌಕಿ, ಮಾನ್ವಿ ಚೌಕಿ, ಗದುಗು ಗದ್ದುಗೆಯೇ ? ಎನ್ನುವ ಅವರ ಬಿಡಿ ಲೇಖನಗಳ ಮೂಲಕ ವಿಷಯ ವೈವಿಧ್ಯತೆಯನ್ನು ಅವುಗಳ ಹೊಸತನವನ್ನು ಗುರುತಿಸಲಾಗಿದೆ. ಇವೆಲ್ಲವುಗಳು ಅವರ ಐತಿಹಾಸಿಕ ಮತ್ತು ಸಾಮಾಜಿಕ ಪ್ರಜ್ಞೆಗೆ ಹಿಡಿದ ಕೈಗನ್ನಡಿಗಳು. ಅವರೇ ತಮ್ಮ ಕೃತಿಗಳನ್ನು ಪಟ್ಟಿ ಮಾಡಿದಂತೆ 'ಕೆಳದಿಯ ಚೆನ್ನಮ್ಮಾಜಿ ನಾಟಕ', 'ಬೆಳವಡಿ ಮಲ್ಲಮ್ಮ ನಾಟಕ' ಮತ್ತು 'ಕಿತ್ತೂರ ಕೇಸರಿ ನಾಟಕ'ಗಳು ರಂಗಭೂಮಿಯಲ್ಲಿ ಪ್ರಯೋಗಿಸಲ್ಪಟ್ಟು ಯಶಸ್ವಿಯಾಗಿವೆ. ಇದು ಅವರಲ್ಲಿಯ ಸಾಹಿತಿಯೊಬ್ಬನನ್ನು ಮತ್ತು ಅವರಲ್ಲಿರುವ ಪ್ರತಿಭೆಯನ್ನು ಸಾದರಪಡಿಸಿದರೆ, ಇದೇ ವಿಷಯಗಳನ್ನಿಟ್ಟುಕೊಂಡು ಅವರು ರಚಿಸಿರುವ ಚಾರಿತ್ರಿಕ ಪುಸ್ತಿಕೆಗಳು ('ಕಿತ್ತೂರ ಚೆನ್ನಮ್ಮ', 'ಬೆಳವಡಿ ಮಲ್ಲಮ್ಮ', 'ಕೆಳದಿಯ ಚೆನ್ನಮ್ಮಾಜಿ ರಾಣಿ') ಅವರಲ್ಲಿದ್ದ ಶೈಕ್ಷಣಿಕ ತುಡಿತವನ್ನು ತೋರ್ಪಡಿಸುತ್ತದೆ. ಮಕ್ಕಳಲ್ಲಿ ಶೈಕ್ಷಣಿಕವಾಗಿ ಮನೋಸ್ಥೈರ್ಯವನ್ನು ತಂದುಕೊಡುವ ನಿಟ್ಟಿನಲ್ಲಿ ಸಾಕಷ್ಟು ದುಡಿದಿದ್ದಾರೆ.

ಕ.ಬ.ಅಂಗಡಿಯವರು ಶಿಕ್ಷಕರು, ಅಧಿಕಾರಿಗಳು, ಸಂಶೋಧಕರು. ಶಿಕ್ಷಣವನ್ನು ಸಮಾಜದ ಅಭ್ಯುದಯಕ್ಕೆ ಬಳಸಿಕೊಂಡ ಇವರು ಸರಕಾರಿ ಕೆಲಸವನ್ನು ದೇವರ ಕೆಲಸವೆಂದೆ ಮಾಡಿದರ್ರು. ಇವರು ಆಗರ್ಭ ಶ್ರೀಮಂತರಲ್ಲ ಆದರೆ ತಮ್ಮ ಸಾಧನೆ–ಬೋಧನೆಯಿಂದ ಸಮಾಜದಲ್ಲಿ ಉನ್ನತ ಸ್ಥಾನ ಮಾನಗಳನ್ನು ಪಡೆದರು. ಅವರು ಲೌಕಿಕ ಪಾರಮಾರ್ಥಿಕವನ್ನು ಬಳಸಿಕೊಂಡು ತಮ್ಮ ಬದುಕನ್ನು ರೂಪಿಸಿಕೊಳ್ಳುವುದರ ಜೊತೆಜೊತೆಗೆ ಉದಾತ್ತ ಮನಸ್ಸು, ಸೂಕ್ಷ್ಮಬುದ್ಧಿಶಕ್ತಿ, ಚಿಕಿತ್ಸಕ ಬುದ್ಧಿ, ಉತ್ತಮ ಆರೋಗ್ಯಭಾಗ್ಯ ಮತ್ತು ಆಯುಷ್ಯ ಹೊಂದುವುದರೊಂದಿಗೆ ಸಾಧನೆಗಳನ್ನು ಮಾಡಬಲ್ಲವರಿಗೆ ನಿದರ್ಶನವಾಗಿದೆ. ವೀರಶೈವ ಸಮಾಜದ ಪರಂಪರೆಯ ಕೊಂಡಿಯಾಗಿ ಕಾರ್ಯ ನಿರ್ವಹಿಸಿದ್ದಾರೆ. ತಮ್ಮ ಕಾಲಾವಧಿಯಲ್ಲಿ ಬಸವ ತತ್ವಗಳನ್ನು ಪಸರಿಸಿದ ಕೀರ್ತಿ ಅವರಿಗೆ ಸಲ್ಲುತ್ತದೆ.

ಕ.ಬ.ಅಂಗಡಿಯವರ ಸಮಗ್ರ ಸಾಹಿತ್ಯವನ್ನು ಸಮೀಕ್ಷಿಸಿದ ಮೇಲೆ, ಅವರ ಕಾಲಮಾನದ ಸಾಹಿತ್ಯ ಮತ್ತು ಆ ಸಾಹಿತ್ಯದಲ್ಲಿ ಅವರಿಗಿರುವ ಸ್ಥಾನಮಾನಗಳನ್ನು ಕುರಿತು ಆಲೋಚಿಸುವುದು ಅತ್ಯವಶ್ಯಕ. ಕ.ಬ.ಅಂಗಡಿಯರು ಬದುಕಿದ್ದು ೧೮೯೦ರಿಂದ ೧೯೮೬ರವರೆಗೆ ಅಂದರೆ ಸರಿಯಾಗಿ ೯೬ವರ್ಷಗಳು. ಅದರಲ್ಲಿ ಅವರ ಬರವಣಿಗೆಯ ಕಾರ್ಯಗಳನ್ನು ಪ್ರಾರಂಭಿಸಿದ್ದು, ೧೯೧೬-೧೭ರಲ್ಲಿ. ಅಂದರೆ ಸುಮಾರು ೬೯-೭೦ವರ್ಷಗಳ ಸುಧೀರ್ಘ ಬರವಣಿಗೆ ಅವರದಾಗಿದೆ. ಈ ಕಾಲಮಾನ ಸ್ವಾತಂತ್ರ್ಯಪೂರ್ವಕ್ಕೂ ಸಲ್ಲುತ್ತದೆ, ಸ್ವಾತಂತ್ರ್ಯದ ಪರ್ವ ದಿನಗಳಲ್ಲೂ ಸಲ್ಲುತ್ತದೆ, ಸ್ವಾತಂತ್ರ್ಯ ನಂತರದ ಹೊಸ ಕನಸುಗಳನ್ನು ಕಟ್ಟಿಕೊಂಡ ನವಭಾರತದ ಕಾಲಮಾನಕ್ಕೂ ಸಲ್ಲುತ್ತದೆ. ಇಂಗ್ಲೀಷ ಸಾಹಿತ್ಯದ ಪರಮತೆಯನ್ನು ಅರಿತುಕೊಂಡು ಕನ್ನಡಕ್ಕೆ ಹೊಸತಸನವನ್ನು ತಂದುಕೊಡುವ ಸಾಹಿತ್ಯ ಭರವಸೆಯ ಸಂಧಿ ಕಾಲದಲ್ಲೂ ಅವರ ಕಾಲಮಾನ ಸಲ್ಲುತ್ತದೆ. ನವೋದಯದ ಹೊಸ ಆಯಾಮಗಳನ್ನು ಮನಸಾರೆ ಸ್ವಾಗತಿಸಿದ ಕಾಲದಲ್ಲಿ ಅವರ ಸಾಹಿತ್ಯ ಕೃಷಿ ಕಂಡು ಬರುತ್ತದೆ. ಅದೇ ಕಾಲದಲ್ಲಿ ನಮ್ಮ ಶಾಸ್ತ್ರೀಯ ಕಾವ್ಯಪ್ರಕಾರಗಳನ್ನು ಉಳಿಸಿಕೊಳ್ಳುವ ಮತ್ತು ಅವುಗಳಿಗೆ ಹೊಸತನವನ್ನು ಲೇಪಿಸುವಲ್ಲಿ ನಿರಂತರವಾದ ಕಾರ್ಯ ಸಾಗಿತ್ತು. ಆ ಕಾರ್ಯದ ಮುಂಚೂಣಿಯಲ್ಲಿ ಕ.ಬ.ಅಂಗಡಿವರು ನಿಲ್ಲುತ್ತಾರೆ. ಹಳೆಯ ವಿಷಯ ವಿವೇಚನೆಗಳಲ್ಲಿ ಹೊಸತನವನ್ನು, ಹಳೆಯ ಪ್ರಕಾರಗಳಲ್ಲಿ ಹೊಸ ಆಶಯವನ್ನು ಬಿತ್ತುವಲ್ಲಿ ಅವರ ಕಾರ್ಯ ಗಣನೀಯವಾದುದು.

ನವ್ಯ-ನವೋದಯ-ಪ್ರಗತಿಶೀಲ ಯುಗಗಳ ನಡುವೆ ಪರಂಪರೆಯ ದೃಷ್ಟಿಯಿಂದ ವೀರಶೈವ ಸಮಾಜದ ಜಾಗ್ರತೆಗಾಗಿ ಬಸವಾದಿ ಶರಣರ ತತ್ವಾಚರಣೆಗಳನ್ನು ಪುನಃ ಜೀವಂತವಾಗಿಸುವ ಮಹತ್ ಕಾರ್ಯ ಕ.ಬ.ಅಂಗಡಿಯವರಿಂದ ನಡೆಯಿತು. ಲಾವಣಿ, ಅಷ್ಟಕ, ಷಟ್ಕ, ಸ್ತೋತ್ರ, ಕಿರುಗ್ರಂಥಗಳು, ಪಠ್ಯಪುಸ್ತಕಗಳು, ಪುರಾಣಗಳನ್ನು ಬರೆಯುವವರೆಗೂ ಅವರ ಸಾಹಿತ್ಯ ರಚನೆ ಅವ್ಯಾಹತವಾಗಿ ನಡೆದು ಬಂದಿದೆ. ಕ.ಬ.ಅಂಗಡಿಯವರನ್ನು ನಾವು ಸಾಧಕರೆಂದು, ಭಕ್ತಕವಿಯೆಂದೂ, ಆಧುನಿಕ ಪುರಾಣಕಾರರೆಂದೂ, ಅನುಭಾವಿಯೆಂದು, ಶರಣಕವಿಯೆಂದು ಗುರುತಿಸಬಹುದು. ಇವರು ರಚಿಸಿದ ಲಾವಣಿ ಅಂದಿನ ಹತ್ತಿ ಬೆಳೆಗಾರರ ಸಂಕಷ್ಟಕ್ಕೆ ಧ್ವನಿಯಾಯಿತು. ಅದೇ ರೀತಿ ಅವರ ನಾಟಕಗಳು ನಿತ್ಯ ಜೀವನದ ದಂದುಗದಲ್ಲಿ ತೊಡಗಿದ ಶ್ರೀಸಾಮಾನ್ಯನ ಮನಸ್ಸನ್ನು ಪ್ರವೇಶಿಸಿ, ಹೃದಯವನ್ನರಳಿಸಬಲ್ಲ ಮತ್ತು ಅವರನ್ನು ಸತ್ಯದೆಡೆಗೆ ಹೊರಳಿಸಬಲ್ಲ ಸಾಹಿತ್ಯ ದೃಶ್ಯಕಾವ್ಯವಾಗಿದೆ. ಈ ಸತ್ಯವನ್ನು ಕಂಡ ಇವರು ಹಲವಾರು ನಾಟಕಗಳನ್ನು ಬರೆದು ಅಂದಿನ ಸಮಾಜದ ನೂರಾರು ಕಷ್ಟ-ಕ್ಲಿಷ್ಟತೆಗಳಿಗೆ ಪರಿಹಾರವನ್ನಿತ್ತಿದ್ದಾರೆ.

ಅವರ ಚಿಂತನೆಯ ಚಿಗುರು ಹೀಗೆ ಸಾಹಿತ್ಯದ ವಿವಿಧ ಮುಖಗಳಲ್ಲಿ ಗರಿಗೆದರಿದಂತೆ ಸಂವಹನ ಮಾಧ್ಯಮದ ಇಂದಿನ ಯಶಸ್ವಿ ಮತ್ತು ಪರಿಣಾಮಕಾರಿಯಾದ ಕುಡಿಯಂತಿರುವ ಪ್ರತಿಕಾ ಮಾಧ್ಯಮ ಮತ್ತು ಪತ್ರಿಕಾ ವ್ಯವಸಾಯದಲ್ಲೂ ಶ್ರೀ ಕ.ಬಂಗಡಿಯವರು ತಮ್ಮ ಮುದ್ರೆಯನ್ನೊತ್ತಿದ್ದಾರೆ. ಅಂದಿನ ತಿ.ರು.ನೇಸ್ವಿ (ನವಯುಗ), ಚನ್ನಬಸವಯ್ಯ(ಕರ್ನಾಟಕ ಬಂಧು), ಮೊಹರೆ ಹನುಮಂತರಾಯರು (ಸಂಯುಕ್ತ ಕರ್ನಾಟಕ) ಇವರ ಹೊತೆಯಲ್ಲಿ ಅಬಾಧಿತ ಸ್ನೇಹವನ್ನು ಇರಿಸಿಕೊಂಡು, ಸ್ನೇಹದ ಫಲವೆನ್ನುವಂತೆ ಕೆಲಕಾಲ ಆ ಪತ್ರಿಕೆಗಳ ನಡೆ-ಮುನ್ನಡೆಗೆ ಕಾರಣರೂ ಆಗಿದ್ದಾರೆ.

ಆ ಕಾಲದಲ್ಲಿ ಭಾವಗೀತೆಗಳು, ಪ್ರೇಮಗೀತೆಗಳು, ಕೌಟುಂಬಿಕ ಗೀತೆಗಳು, ಸಾಮಾಜಿಕ ಗೀತೆಗಳು, ದೇಶ ಮತ್ತು ಭಾಷಾಭಿಮಾನ ಹೊಮ್ಮಿಸುವ ಗೀತೆಗಳು ಹೆಚ್ಚು ಪ್ರಚಲಿತವಿದ್ದರೂ ಈ ಎಲ್ಲವುಗಳನ್ನೂ ಅಪ್ಪಿಕೊಂಡು ತಮ್ಮದಾದ ಹೊಸ ಬಗೆಯನ್ನು ಜೀವಂತವಾಗಿಟ್ಟುಕೊಂಡರು. ಅವರ ಸಮಕಾಲೀನರಾದ ತುಪ್ಪದ ಬಸವರಾಜರು ಹೇಳುವಂತೆ "Plain living, high thinking" ಅವರ ಜೀವನದ ಸಾರವಾಗಿತ್ತು.

ಇದೇ ಕಾಲದ ಮಧುರಚೆನ್ನರು, ಕಾಶೀನಾಥ ಶಾಸ್ತ್ರಿಗಳು, ನಾಗಭೂಷಣ ಶಾಸ್ತ್ರಿಗಳು, ಕಣಗಲಿನಾಥ ಶಾಸ್ತ್ರಿಗಳು, ಮಹಾಂತೇಶ ಶಾಸ್ತ್ರೀಗಳು, ನಲವಡಿ ಶ್ರೀಕಂಠಶಾಸ್ತ್ರಿಗಳು, ದ್ಯಾಂಪುರ ಚೆನ್ನಕವಿಗಳು, ಪುಟ್ಟರಾಜ ಗವಾಯಿಗಳು ಮುಂತಾದವರು ಅವರ ಸಮಕಾಲೀನರಾಗಿ ಸಾಹಿತ್ಯ ಸೇವೆಯಲ್ಲಿ ತಲ್ಲೀನರಾಗಿದ್ದವರು. ಇವರೆಲ್ಲರ ನಡುವೆಯೂ ತಮ್ಮ ಬದುಕು ಮತ್ತು ಬರಹಗಳಿಂದ ವಿಭಿನ್ನವಾಗಿ ನಿಲ್ಲುವವರು ಕ.ಬ.ಅಂಗಡಿಯವರು. ಮಧುರಚೆನ್ನರು ಮತ್ತು ಅಂಗಡಿಯವರ ಬದುಕಿನ ಹೊಳಹುಗಳು ಒಂದೊಮ್ಮೆ ಒಂದಾಗಿ ಕಂಡರೂ, ಮತ್ತೊಮ್ಮೆ ಅವರ ಆಕರ ಸ್ವೀಕಾರಗಳಲ್ಲಿ ಭಿನ್ನತೆಯು ಕಂಡು ಬರುತ್ತದೆ. ಇವರಿಬ್ಬರದೂ ಆಧ್ಯಾತ್ಮಿಕ ನಿಲುವುಗಳ ಸಾಹಿತ್ಯ. ಇಬ್ಬರೂ ಸಮಕಾಲೀನರು. ಮಧುರಚೆನ್ನರು ಅರವಿಂದರ ತತ್ವ ನಿಲುವುಗಳನ್ನು ಸಮರ್ಥಿಸಿದರೆ, ಕ.ಬ.ಅಂಗಡಿಯವರು ಬಸವಾದಿ ಪ್ರಮಥರ ನಿಲುವುಗಳನ್ನು ಸಮರ್ಥಿಸುತ್ತಾರೆ. ಅಚಲ ನಿಲುವುಗಳಿಂದ ಆರೋಗ್ಯ ಮತ್ತು ಆಧ್ಯಾತ್ಮವನ್ನು ಬರವಣಿಗೆಯ ಮೂಲಕ ಸಾಧಿಸಿಕೊಂಡರೆ, ಮಧುರಚೆನ್ನರು ಅನಾರೋಗ್ಯದ ನಡುವೆಯೂ ಆಧ್ಯಾತ್ಮದ ಹಸಿವಿನಿಂದ ಬಳಲಿದ್ದಾರೆ.

ಗದುಗಿನಲ್ಲಿ ಸಮಾನ ಮನಸ್ಕರಾಗಿ 'ಅಖಿಲ ಭಾರತ ವೀರಶೈವ ವಿದ್ಯಾಪೀಠ'ವನ್ನು, 'ಅನುಭವಮಂಟಪ ಗ್ರಂಥಮಾಲೆ'ಯನ್ನು, ಅನೇಕ ಶಿವಾನುಭವ ಗೋಷ್ಠಿಗಳನ್ನು ಸಹಭಾಗಿತ್ವದಲ್ಲಿ ನಡೆಸಿದ ಅಂಗಡಿಯವರು ಮತ್ತು ನಾಗಭೂಷಣ ಶಾಸ್ತ್ರಿಗಳು

ಸಮಕಾಲೀನರಾಗಿಯೂ ಬೆಳೆದು ಬಂದವರು. ಪ್ರವಚನಗಳನ್ನು ನಡೆಸಿಕೊಡುವುದು ಜಂಗಮರ ಮುಖ್ಯ ಕಾಯಕವಾಗಿ ಕಂಡು ಬಂದ ಆ ದಿನಗಳಲ್ಲಿ ವೀರಶೈವ-ಲಿಂಗಾಯತ ಸಮಾಜದ ಪ್ರಮುಖ ಗುರು-ವಿರಕ್ತರ ಆಶ್ರಯ ಪಡೆದ ನಾಗಭೂಷಣ ಶಾಸ್ತ್ರಿಗಳು ಧಾರವಾಡದ ಮುರುಘಾಮಠದಲ್ಲಿ ನೆಲೆ ನಿಂತು ಸಾಹಿತ್ಯಿಕ ಸಾಧನೆಯಲ್ಲಿ ತಮ್ಮ ಜೀವನವನ್ನು ಮುಡಿಪಾಗಿಟ್ಟರು. ಆದರೆ ಕ.ಬ.ಅಂಗಡಿಯವರ ಸಾಹಿತ್ಯಿಕ ಮತ್ತು ಆಧ್ಯಾತ್ಮಿ ನಿಲುವುಗಳು ಬದಲಾದ ಕಾರಣ ಬರೀ ಪ್ರವಚನಕಾರರಾಗಿ ಉಳಿಯದೇ ಉಪನ್ಯಾಸಕರಾಗಿ, ಶಿಕ್ಷಣಾಧಿಕಾರಿಗಳಾಗಿ ಸಮಾಜದ ಉಳಿದ ಅನನ್ಯ ವರ್ಗಗಳನ್ನೂ ಗಣನೆಗೆ ತೆಗೆದುಕೊಂಡು ಸಾಮಾಜಿಕ ಬದಲಾವಣೆಗೆ ಕಾರಣರಾಗುತ್ತಾರೆ.

ಕ.ಬ.ಅಂಗಡಿಯವರಿಗೆ ಕನ್ನಡ ಸಾಹಿತ್ಯ ಮತ್ತು ವೀರಶೈವ ಸಾಹಿತ್ಯದಲ್ಲಿ ತಮ್ಮದೆ ಆದ ವಿಶಿಷ್ಟ ಸ್ಥಾನ ಲಭ್ಯವಿದೆ. ಈ ಸಂದರ್ಭದಲ್ಲಿ ಮುಂದೆ ನಡೆಸಬಹುದಾದ ಅಧ್ಯಯನವನ್ನು ತಿಳಿಸುವುದು ಅವಶ್ಯ. ಕ.ಬ.ಅಂಗಡಿಯವರ ವ್ಯಕ್ತಿ ಚಿತ್ರಣವನ್ನು ಇನ್ನೂ ಬೇರೆ ಬೇರೆ ದೃಷಿಕೋನಗಳಿಂದ ಮಿಮರ್ಶಿಸಿದರೆ ಅವರಲ್ಲಿಯ ಸತ್ವಯುತ ಸಾಹಿತ್ಯ, ಶಿಕ್ಷಣ ಮತ್ತು ಸಮಾಜ ನಿರ್ಮಾಣದ ಅಡಿಪಾಯಗಳನ್ನು ಹುಡುಕಿ ತೆಗೆಯಬಹುದು. ಅವರ ಕೃತಿಗಳ ತೌಲನಿಕ ಅಧ್ಯಯನವನ್ನು ಕೈಗೊಳ್ಳಲು ಸಾಕಷ್ಟು ಅವಕಾಶವಿದೆ. ಅವರ ಸಂಶೋಧನಾ ಲೇಖನಗಳನ್ನು ವಿಮರ್ಶಿಸಿ, ಆ ಮೂಲಕ ಕೆಲವು ಐತಿಹಾಸಿಕ ವಿಷಯಗಳತ್ತ ಬೆಳಕು ಹರಿಸಬಹುದು. ಆಧ್ಯಾತ್ಮಕವಾಗಿ ಬಸವಾದಿ ಶರಣರ ತತ್ವಗಳ ಮತ್ತು ಕ.ಬ.ಅಂಗಡಿಯವರ ಬದುಕನ್ನು ಸಮೀಕರಿಸಬಹುದಾಗಿದೆ. ಅವರ ಅಷ್ಟಕ-ಷಟ್ಕ-ಪುರಾಣದಲ್ಲಿ ಕಂಡು ಬರುವ ವಚನಗಳನ್ನು ವಿವೇಚಿಸಬಹುದಾಗಿದೆ. ಬರಹ-ಬದುಕುಗಳು ಒಂದನ್ನೊಂದು ಹೇಗೆ ವಿಕಸನಗೊಳಿಸುತ್ತವೆ ಎನ್ನುವ ತಾತ್ವಿಕ ವಿವೇಚನೆಯಲ್ಲಿ ತೊಡಗಿಕೊಳ್ಳಬಹುದು.

ಮಸುಕಾಗಿರುವ ಇತಿಹಾಸದಲ್ಲಿ ಪ್ರೌಢದೇವರಾಯನ ಉದಾಹರಣೆ ನಮಗೆ ಸಿಗುತ್ತದೆ. ವೀರಶೈವ ಸಾಹಿತ್ಯ-ಸಂಸ್ಕೃತಿ-ಬದುಕುಗಳಿಗೆ ಸ್ಪಂದಿಸಿದ ಪ್ರೌಢದೇವರಾಯನನ್ನು ನಾವು ನೆನೆಯುವುದೇ ವಿರಳ. ಅವನಿಗೆ ಸಲ್ಲಬೇಕಾದ ಗೌರವ, ಮಾನ್ಯತೆಯನ್ನು ನಾವು ನೀಡಿಲ್ಲವೆಂಬುದು ವಿಶಾದನೀಯ. ಅದೇ ರೀತಿಯಾಗಿ ಶಿಕ್ಷಣ ಕ್ಷೇತ್ರಕ್ಕೆ, ವೀರಶೈವ-ಲಿಂಗಾಯತ ಸಾಹಿತ್ಯ, ಸಂಸ್ಕೃತಿ, ಪರಂಪರೆಗೆ, ಸಮಾಜಕ್ಕೆ ಅಚ್ಚಳಿಯದ ಸೇವೆಯನ್ನು ನೀಡಿದ ಕ.ಬ.ಅಂಗಡಿಯವರನ್ನು ಉತ್ತರ ಕರ್ನಾಟಕದ ಸಾಹಿತ್ಯ ಮನಸ್ಸುಗಳು, ಶೈಕ್ಷಣಿಕ

ಪ್ರತಿನಿಧಿಗಳು ದೂರವಿಟ್ಟಿರುವುದು ದುರ್ದೈವವೆ. ತಡವಾದರೂ ಈ ಮೂಲಕವಾದರೂ ಅವರ ವ್ಯಕ್ತಿತ್ವ-ಶಕ್ತಿ-ಮಹತ್ವದ ಅನಾವರಣವಾಗುತ್ತಿದೆ ಅದೇ ಸಂತಸ.

ಪರಿಶುದ್ಧ ಆಚಾರ-ವಿಚಾರಗಳಿಂದ, ನಡೆ-ನುಡಿಗಳಿಂದ ಮಹಾನ್ ಸಾಧನೆಯನ್ನು ತಮ್ಮ ಬದುಕಿನುದ್ದಕ್ಕೂ ಪರಿಶ್ರಮದಿಂದ ಹೇಗೆ ಸಾಧಿಸಬಹುದೆಂಬುದಕ್ಕೆ ಕ.ಬ.ಅಂಗಡಿಯವರ ಜೀವನ-ಸಾಧನೆಗೇ ಸಾಕ್ಷಿಯಾಗಿ ನಿಲ್ಲುತ್ತವೆ. ಇಂತಹ ಮಹಾಪುರುಷರ ಬದುಕನ್ನು, ಸಾಧನೆಗಳನ್ನು 'ಶರಣಕವಿ ಶ್ರೀ ಅಂಗಡಿ ಕರವೀರಪ್ಪನವರು : ಬದುಕು-ಬರಹ' ಎಂಬ ಮಹಾಪ್ರಬಂಧದ ಮುಖೇನ ಅಂಗಡಿಯವರನ್ನು ಸಾಹಿತ್ಯಿಕವಾಗಿ ನಾಡವರಿಗೆ ತಿಳಿಸಿಕೊಡಲು ನಡೆಸಿದ ಒಂದು ಪ್ರಾಮಾಣಿಕ ಪ್ರಯತ್ನವಾಗಿದೆ ಎಂದು ಹೇಳಬಯಸುತ್ತೇನೆ.

ವೀರಶೈವ ಸಮಾಜ ಕ.ಬ.ಅಂಗಡಿಯವರಿಗೆ ಅತ್ಯಂತ ಚಿರಋಣಿಯಾಗಿದೆ. ಮಹಾ ಮಾನವತಾವಾದಿ, ಧೀಮಂತ ವ್ಯಕ್ತಿ, ಪೂಜನೀಯರಾದ ಕ.ಬ.ಅಂಗಡಿಯವರು ಮರೆಯಲಾರದ ಮತ್ತು ಮರೆಯಬಾರದ ಮಹಾವ್ಯಕ್ತಿ ಮತ್ತು ಮಹಾಶಕ್ತಿ.

*****

# ಶ್ರೀ ಕ.ಬ.ಅಂಗಡಿಯವರ ವಂಶಾವಳಿ



**ಶ್ರೀ ಕ.ಬ.ಅಂಗಡಿಯವರ ಜೀವನದ ಮುಖ್ಯ ಘಟನೆಗಳು :**

| | |
|---|---|
| ೧೮೯೭ | ಜನನ |
| ೧೯೧೨ | ಮುಲ್ಕಿ ಪರೀಕ್ಷೆ ಪಾಸಾದದ್ದು |
| ೧೯೧೨-೧೯೧೪ | ಶಿವಯೋಗ ಮಂದಿರದಲ್ಲಿ ಅಭ್ಯಾಸ |
| ೧೯೧೫-೧೯೧೬ | ಪ್ರವೇಶ ಪರೀಕ್ಷೆ |
| ೧೯೧೬-೧೯೧೯ | ಪ್ರಥಮ, ದ್ವಿತಿಯ, ತೃತೀತ ವರ್ಷಗಳ ತರಬೇತಿ |
| ೧೯೨೦-೧೯೨೧ | ನರೇಗಲ್ಲದಲ್ಲಿ ಶಿಕ್ಷಕರಾದದ್ದು |
| ೧೯೨೧ | ಗದುಗಿಗೆ ಶಿಕ್ಷಕರಾಗಿ ಬಂದದ್ದು ಮತ್ತು ಮದುವೆಯಾದದ್ದು |
| ೧೯೨೩ | ಹಾನಗಲ್ಲ ಕುಮಾರ ಶಿವಯೋಗಿ ಸೇವಾ ಶಿಕ್ಷಕ ಸಂಘ ಸ್ಥಾಪನೆ |
| ೧೯೨೪ | ಮ್ಯಾಟ್ರಿಕ್ ಪರೀಕ್ಷೆ ಪಾಸಾದದ್ದು |
| ೧೯೨೪-೨೬ | ಮುನಸಿಪಲ್ ಹೈಸ್ಕೂಲಿನಲ್ಲಿ ಕನ್ನಡ ಭಾಷಾ ಗೌರವ ಶಿಕ್ಷಕರಾದದ್ದು |
| ೧೯೨೬-೨೭ | ಪ್ರಿವ್ಹಿಯಸ್ ಪರೀಕ್ಷೆಗಾಗಿ ಧಾರವಾಡದ ಮುರುಘಾಮಠಕ್ಕೆ |
| ೧೯೨೯ | ಬಸವ ಭಜನಾ ಮಾಲೆ |
| ೧೯೩೦ | ಕರ್ನಾಟಕ ಬಂಧು ಪತ್ರಿಕೆಯ ಸಂಪಾದಕರಾದದ್ದು, ನಿಬಂಧಮಾಲೆ ಪ್ರಕಟವಾದದ್ದು |
| ೧೯೩೧ | ಗದ್ಯಪದ್ಯಾವಲಿ ಪಠ್ಯವಾದದ್ದು |
| ೧೯೪೨ | ಸ್ವಂತದ 'ಬಸವ ಭುವನ' ನೂತನ ಗೃಹಪ್ರವೇಶ |
| ೧೯೪೪ | ಉಪಶಿಕ್ಷಣಾಧಿಕಾರಿಗಳಾಗಿ ನೇಮಕವಾದದ್ದು |
| ೧೯೫೦ | ಅಷ್ಟಕ, ಷಟ್ಕಗಳ ರಚನೆ |
| ೧೯೫೨ | ಜುಲೈ ೭, ಶಿಕ್ಷಕ ಇಲಾಖೆಯಿಂದ ನಿವೃತ್ತಿ |
| ೧೯೫೨ | ವಿಜಯದಶಮಿಯಂದು 'ಜಯಬಸವ' ಪುಸ್ತಕಾಲಯ ಸ್ಥಾಪನೆ |
| ೧೯೬೦-೬೬ | ಪಠ್ಯಪುಸ್ತಕಗಳ ಪ್ರಕಾಶಕರಾಗಿ ಸೇವೆ |
| ೧೯೭೨ | ಮುರಗೋಡ ಮಹಾಂತ ಶಿವಯೋಗಿಗಳ ಅಮೃತ ಹಸ್ತದಿಂದ 'ಮಹಾಂತಕೃಪಾ' ಸ್ವಂತ ಅಂಗಡಿಯ ಪ್ರಾರಂಭ. |
| ೧೯೭೨ | ಪುರಾಣಗಳ ಪ್ರಕಟನೆ ಆರಂಭ |
| ೧೯೨೭ | ಎಂಭತ್ತನೆಯ ವರ್ಷದ ಜಯಂತ್ಯುತ್ಸವ |
| ೧೯೮೬ | ಲಿಂಗೈಕ್ಯರಾದುದು. |

# ಕ.ಬ.ಅಂಗಡಿಯವರ ಕೃತಿಗಳ ಸಂಕ್ಷಿಪ್ತ ಪರಿಚಯ

**ಲಾವಣಿಗಳು :** ಗದುಗಿನ ಹತ್ತಿ ಬೆಳೆಗಾರರ ಸಂಕಷ್ಟಕ್ಕೆ ಸಂದಿಸುವ ಲಾವಣಿ

**ಬೈಲಾಟಗಳು :** ೧) ಹನುಮಂತನಗೆ ಲಿಂಗಧಾರಣ ೨)ಬೊಮ್ಮನ ಬಡಬಡಿಕೆ

**ನಾಟಕಗಳು :**

**೧) ಘನಮಹಿಮರು**

**ಪುಟಗಳು** : ೪೮ ( ಮೊದಲ ೪೮ ಪುಟಗಳು ಮಾತ್ರ ಲಭ್ಯವಾಗಿವೆ)

**೨) ಕೆಳದಿಯ ಚೆನ್ನಮ್ಮಾಜಿ**

**ಪ್ರಕಟಣೆ** : ಹಾನಗಲ್ಲ ಕುಮಾರ ಶಿವಯೋಗಿ ಶಿಕ್ಷಕ ಸೇವಾ ಸಂಘದ ಪ್ರಕಟಣೆ.

**೩) ಕಿತ್ತೂರ ಕೇಸರಿ**

**ಪ್ರಕಟಣೆ** : ಹಾನಗಲ್ಲ ಕುಮಾರ ಶಿವಯೋಗಿ ಶಿಕ್ಷಕ ಸೇವಾ ಸಂಘದ ಮೂಲಕ ಪ್ರಕಟಣೆ.

**೪) ಬೆಳವಡಿ ಮಲ್ಲಮ್ಮ**

**ಪ್ರಕಟಣೆ** : ಹಾನಗಲ್ಲ ಕುಮಾರ ಶಿವಯೋಗಿ ಶಿಕ್ಷಕ ಸೇವಾ ಸಂಘದ ಮೂಲಕ ಪ್ರಕಟಣೆ

**೫) ಶಿವ ಪಾರಮ್ಯ ಅರ್ಥಾತ್ ಗುಗ್ಗುಳ**

**೬) ಜಕ್ಕಲಿಯ ಶರಣರ ನಾಟಕ**

**ಅಷ್ಟಕ-ಷಟ್ಕಗಳು :**

**೧) ಶರಣಾರ್ಥಿ ಅಷ್ಟಕವು**

**ಮುದ್ರಣವಾದ ವರ್ಷ** : ೧೯೬೭

೨)ಅರಭಾವಿ ಚಿದಾರಣ್ಯ ಪುಣ್ಯಕ್ಷೇತ್ರ ದುರದುಂಡಿ ನವಮಹಾಂತ ಶಿವಯೋಗಿ ಸ್ತೋತ್ರಾಷ್ಟಕಂ

ಪ್ರಕಾಶಕರು : ವೀರಪ್ಪ ಲಕ್ಷ್ಮಪ್ಪ ಅಂಗಡಿ, ಕಾಂಟ್ರ್ಯಾಕ್ಟರರು, ಗದಗ.

ಪುಟಗಳು : ೬ + ೨

೩) ಮೃತ್ಯುಂಜಯನ ಪೊತ್ತು ತೇರು ಸಾಗುತಿದೆ.

ಮುದ್ರಣವಾದ ವರ್ಷ : ೧೯೬೭

೪) ಬಸವೇಶ್ವರಾಷ್ಟಕಂ ೧

ಪ್ರಕಟನೆ : ಹರ್ಷ ಗ್ರಾಫಿಕ್ಸ, ಗದಗ

೫) ಬಸವೇಶ್ವರಾಷ್ಟಕಂ ೨

ಪ್ರಕಟನೆ : ಹರ್ಷ ಗ್ರಾಫಿಕ್ಸ, ಗದಗ

೬) ನೂರೆಂಟು ಜಯಬಸವ ನಾಮಾವಳಿ

ಮುದ್ರಣವಾದ ವರ್ಷ : ೧೯೬

೭) ಸ್ತೋತ್ರ ಹಾಗೂ ಸ್ವಾಗತ ಗೀತೆಗಳು

ಪ್ರಕಾಶಕನ : ಗೊಡಚಿ ಕ್ಷೇತ್ರ ಸೇವಾ ಸಂಘ

ಮುದ್ರಣ : ಚಿಕ್ಕವೀರೇಶ್ವರ ಮುದ್ರಣ, ನರಗುಂದ

ಹಾಡಿದವರು : ಶರಣ ನಾಗಪ್ಪ ಬಾಳಿಕಾಯಿ

೮) ಶ್ರೀ ಸಿದ್ಧಲಿಂಗನನು ಕಂಡೆನಾ

ರಚಿಸಿದ ವರ್ಷ : ೧೯೭೪

೯)ಪದ್ಯ : ಮಂಗಲ ಪದ್ಯ

ರಚಿಸಿದ ವರ್ಷ : ೧೯೬೨

## ೧೦) ನವಕ : ಬಸವ ಶರಣಾರ್ಥಿ ನವಕ ಮಾಲೆ

**ಸಂಪಾದಕರು :** ಶ್ರೀ ಎಸ್. ಕೆ ಅಂಗಡಿ

**ಸಹಾಯಕ ಸಂಪಾದಕರು :** ಸಿ.ಪಿ.ಮಳಿಮಠ ಮತ್ತು ಎಂ.ವಿ.ತುಪ್ಪದ

**ಪ್ರಕಾಶಕರು :** ಶ್ರೀ ಬಸವೇಶ್ವರ ಅಷ್ಟಶತಮಾನೋತ್ಸವ ಸಮಿತಿ ಹಾವೇರಿ

**ಸ್ತೋತ್ರ :** ಅನ್ನದಾನಿ ಮೃಡಗಿರಿ ಜಗದ್ಗುರು

## ೧೧) ಲೇಖನ : ನಾಮಾವಳಿಗಳ ಪಠಣ ಗುರುತ್ವ

# ಕಿರುಗ್ರಂಥಗಳು

## ೧) ತಾಳಿ ಮಹತ್ವ

**ಪ್ರಕಟಣೆ :** ಹಾನಗಲ್ಲ ಕುಮಾರ ಶಿವಯೋಗಿ ಶಿಕ್ಷಕರ ಸೇವಾ ಸಂಘದ ಮೂಲಕ ಪ್ರಕಟವಾಗಿದೆ.

## ೨) ವಿಷಾಪಹರಣಲೀಲೆ

**ಪ್ರಕಟನೆ :** ಹಾನಗಲ್ಲ ಕುಮಾರ ಶಿವಯೋಗಿ ಶಿಕ್ಷಕರ ಸೇವಾ ಸಂಘದ ಮೂಲಕ ಪ್ರಕಟವಾಗಿದೆ.

## ೩) ಶ್ರೀ ಬಸವೇಶ್ವರ ಭಜನಾ ಮಾಲಾ

**ಪ್ರಕಾಶಕರು :** ಶ್ರೀಯುತ ಸಂಗಪ್ಪ ಅಯ್ಯಪ್ಪ ಹುಬ್ಬಳ್ಳಿ

**ಮುದ್ರಣವಾದ ವರ್ಷ :** ೧೯೨೯

**ಬೆಲೆ :** ೫ ಅಣೆ

**ಪುಟಗಳು :** ೧೬ ಪುಟಗಳು

## ೪) ಬಡಿವಾರದ ಬಂಟ

**ಪ್ರಕಟಣೆಗಳು :** ಬಸವ ಭಜನಾ ಮಾಲೆಯ ಮೂಲಕ ಪ್ರಕಟಣೆಯಾಗಿದೆ.

೫) ಅನುಭವದೂಟ

ಪ್ರಕಟಣೆ : ಬಸವ ಭಜನಾ ಮಾಲೆಯ ಮೂಲಕ ಪ್ರಕಟಣೆಯಾಗಿದೆ.

ಪ್ರಕಾಶಕರು : ಜಯಬಸವ ಪುಸ್ತಕಾಲಯದ ಒಡೆಯರು

ಪ್ರಕಾಶನ ಸ್ಥಳ : ಜಯಬಸವ ಪುಸ್ತಕಾಲಯ, ಗದಗ

ಮುದ್ರಣ : ಶ್ರೀ ಸಿದ್ಧಲಿಂಗವಿಜಯ ಮುದ್ರಣ, ಗದಗ

ಮುದ್ರಣವಾದ ವರ್ಷ : ೧೯೫೪

ಪುಟಗಳು : ೨೩

ಬೆಲೆ : ೬ ಆಣೆ

೬) ಅಕ್ಕನ ಚರಿತ್ರೆ

ಪ್ರಕಾಶಕರು : ಜಯಬಸವ ಪುಸ್ತಕಾಲಯದ ಒಡೆಯರು

ಪ್ರಕಾಶನ ಸ್ಥಳ : ಜಯಬಸವ ಪುಸ್ತಕಾಲಯ

ಮುದ್ರಕರು : ಸಿದ್ಧಲಿಂಗ ವಿಜಯ ಮುದ್ರಣ, ಗದಗ

ಮುದ್ರಣವಾದ ವರ್ಷ : ೧೯೫೪

ಪುಟಗಳು : ೪೨

ಬೆಲೆ : ೦-೬-೦

೭) ಅಮರವಾಣಿ

ಪ್ರಕಾಶಕರು : ಜಯಬಸವ ಪುಸ್ತಕಾಲಯದ ಒಡೆಯರು

ಪ್ರಕಾಶನ ಸ್ಥಳ : ಜಯಬಸವ ಪುಸ್ತಕಾಲಯ

ಮುದ್ರಕರು : ಪಂಡಿತ ನಾಗಭೂಷಣ ಶಾಸ್ತ್ರಿಗಳು, ಸಿದ್ಧಲಿಂಗ ವಿಜಯ ಮುದ್ರಣ, ಗದಗ

ಮುದ್ರಣವಾದ ವರ್ಷ : ೧೯೫೪

ಪುಟಗಳು : ೬೦

ಬೆಲೆ : ೦-೮-೦

**೮) ಅಣ್ಣನ ದಾರಿತೋರಿದ ಕಾರಣಿಕ ಶಿವಯೋಗಿ ಹಾನಗಲ್ಲ ಕುಮಾರಸ್ವಾಮಿ**

**ಪ್ರಕಾಶಕರು :** ವೀರಶೈವ ಪ್ರಗತಿಶೀಲ ಯುವಕ ಸಂಘ, ಗದಗ-ಬೆಟಗೇರಿ

**ಭಕ್ತಿಸೇವೆ :** ೧೭೭ನೆಯ ಸೋಮವಾರದ ಶಿವಾನುಭವ ಸೇವೆ ಶ್ರೀ ಎಸ್.ಬಿ.ಕಲ್ಯಾಣಿ, ಸಿಟಿ ಸರ್ವೆಯರ್, ಹುಬ್ಬಳ್ಳಿ

**ಮುದ್ರಣ :** ಪ್ರಭು ಪ್ರಿಂಟಿಂಗ್ ಪ್ರೆಸ್, ಗದಗ

**ಮುದ್ರಣವಾದ ವರ್ಷ :** ೧೯೭೬

**ಪುಟಗಳು :** ೨೪

**ಬೆಲೆ :** ೦-೪೦

**೯) ಮುರಗೋಡ ಮಹಾಂತಜ್ಜನವರ ಮಹಿಮೆ**

**ಪ್ರಕಾಶಕರು :** ವೀರಶೈವ ಪ್ರಗತಿಶೀಲ ಯುವಕ ಸಂಘ, ಗದಗ-ಬೆಟಗೇರಿ

**ಭಕ್ತಿಸೇವೆ :** ಶ್ರೀ ಜಿ.ಎಸ್.ಮಾನ್ವಿ, ಸಂಸ್ಥಾಪಕರು, ವೀರಶೈವ ಪ್ರಗತಿಶೀಲ ಯುವಕ ಸಂಘ, ಗದಗ-ಬೆಟಗೇರಿ

**ಮುದ್ರಣ :** ಪ್ರಭು ಪ್ರಿಂಟಿಂಗ್ ಪ್ರೆಸ್, ಗದಗ

**ಮುದ್ರಣವಾದ ವರ್ಷ :** ೧೯೭೩

**ಪುಟಗಳು :** ೫೫ + ೬

**ಬೆಲೆ :** ೨೫ ಪೈಸೆ

**೧೦)ಮುರಗೋಡ ಮಹಾಂತ ಶಿವಯೋಗಿಗಳ ನಡೆ-ನುಡಿ-ಬೆಡಗಿನ ಮಾಲೆ**

**ಪ್ರಕಾಶಕರು :** ವೀರಶೈವ ಪ್ರಗತಿಶೀಲ ಯುವಕ ಸಂಘ, ಗದಗ-ಬೆಟಗೇರಿ

**ಭಕ್ತಿ ಸೇವೆ :** ಶ್ರೀ ಎ.ಟಿ. ಬುಳ್ಳಾ ಹಾಗು ಅವರ ಪುತ್ರ ಶ್ರೀ ಎಚ್. ಎ.ಬುಳ್ಳಾ

**ಮುದ್ರಣ :** ಪ್ರಭು ಪ್ರಿಂಟಿಂಗ್ ಪ್ರೆಸ್, ಜ. ತೋಂಟದಾರ್ಯ ಮಠದ ಹತ್ತಿರ, ಗದಗ.

**ಮುದ್ರಣವಾದ ವರ್ಷ** : ೧೯೭೪

**ಪುಟಗಳು** : ೩೨ + ೮

**ಬೆಲೆ** : ೨೫ ಪೈಸೆ

## ೧೧) ಮುತ್ತೈದೆಯರೈವರು

**ಪ್ರಕಾಶಕರೈದೆಯರು** : ಸುಶೀಲಕ್ಕ ತಿಪ್ಪಣ್ಣ ಪವಾಡಶೆಟ್ಟರ, ಚೆನ್ನಮ್ಮ ಕರವೀರಪ್ಪ ಅಂಗಡಿ, ಪಾರ್ವತಮ್ಮ ಕಳಕಪ್ಪ ಗೋಲಪ್ಪನವರ, ಚನ್ನಬಸವ್ವ ವೀರಪ್ಪ ಸೊನ್ನದ, ಚನ್ನಬಸವ್ವ ಗುರುಸಿದ್ಧಪ್ಪ ಹುಣಸಿಮರದ, ಶಾಂತಕ್ಕ ಶಿವಪುತ್ರಪ್ಪ ಕಲ್ಯಾಣಿ, ಬಸವಣ್ಣೆವ್ವ ಚನ್ನವೀರಪ್ಪ ನರಗುಂದ

**ಸ್ವಾಮ್ಯ** : ಲೇಖಕರದು

**ಮೊದಲ ಮುದ್ರಣ** : ೧೦೦೦

**ಮುದ್ರಣ** : ಮಹಾಂತೇಶ ಮುದ್ರಣ, ಗದಗ

**ಮುದ್ರಣವಾದ ವರ್ಷ** : ೧೯೮೨

**ಪುಟಗಳು** : ೪೮ + ೮

**ಬೆಲೆ** : ೩:೦೦

**ಅಧಿಕೃತ ಮಾರಾಟಗಾರರು** : ಜಯಬಸವ ಪುಸ್ತಕಾಲಯ, ಗದಗ

## ೧೨) ಶ್ರೀ ಶರಣ ಕ್ಷೇತ್ರ ಗೊಡಚಿವಸ್ತು ಮಡಿವಾಳ ಮಾಚಿತಂದೆ

**ಪ್ರಕಾಶನ** : ಶ್ರೀ ಗೊಡಚಿ ವೀರಭದ್ರೇಶ್ವರ ಕ್ಷೇತ್ರ ಸೇವಾಸಂಘ, ಗೊಡಚಿ

**ಮೊದಲ ಮುದ್ರಣ** : ಹೊಸ್ತಿಲು ಹುಣ್ಣಿವೆ, ೧೯೮೧

**ಪ್ರತಿಗಳು** : ೧೦೦೦

**ಒಡೆತನ** : ಲೇಖಕರಿಗೆ

ಬಿಡುಗಡೆ : ಪರಮ ಪೂಜ್ಯ ಶ್ರೀ ಜಗದ್ಗುರು ಅನ್ನದಾನಿ ಮಹಾಸ್ವಾಮಿಗಳ ಹಸ್ತಪರುಷದಿಂದ ೧೯೮೧ನೇ ಡಿಶೆಂಬರ ಹೊಸ್ತಿಲುಹುಣ್ಣಿವೆಯ ದಿವಸ, ಶ್ರೀಕ್ಷೇತ್ರ ಗೊಡಚಿಯಲ್ಲಿ.

ಮುದ್ರಣ : ಮಹಾಂತೇಶ ಮುದ್ರಣ, ಗದಗ

ಪುಟಗಳು : ೮೦ + ೨೮

ಬೆಲೆ : ೫ : ೦೦

## ೧೩. ಸುಮನ ಸಂಹಿತೆ – ಜಂಗಮ ತತ್ತ್ವರೋಚಿ ರೂಪಕ

ಪ್ರಕಾಶಕರು : ವೀರಶೈವ ಪ್ರಗತಿಶೀಲ ಯುವಕ ಸಂಘ, ಗದಗ-ಬೆಟಗೇರಿ

ಸಚೇತಕರು : ಶ್ರೀ ಶಿವಾನುಭವ ಶರಣೆಯರು

ಭಕ್ತಿಸೇವೆ : ಶ್ರೀಯುತ ಕೆ.ಜಿ.ಗೋಲಪ್ಪನವರು, ಹೊಸಳ್ಳಿ

ಮೊದಲ ಮುದ್ರಣ : ೧೦೦೦

ಮುದ್ರಕರು : ದಿ ಮುನ್ಸಿ ಪ್ರಿಂಟಿಂಗ್ ವರ್ಕ್ಸ, ಗದಗ

ಮುದ್ರಣವಾದ ವರ್ಷ : ೧೯೭೮

ಪುಟಗಳು : ೨೦ + ೧೨

ಬೆಲೆ : ೦-೩೦

## ೧೪) ಕರ್ಮಯೋಗಿ ಸಿದ್ಧರಾಮಪ್ಪನವರು ಅಂದಾನಪ್ಪನವರು ಮಾನ್ವಿ

ಪ್ರಕಾಶಕರು : ಶ್ರೀ ಗಂಗಾಧರಪ್ಪ ಸಿದ್ಧಲಿಂಗಪ್ಪ ಮಾನವಿ, ಗದಗ

ಪ್ರಥಮ ಮುದ್ರಣ : ೧೦೦೦

ಮುದ್ರಣ : ಪ್ರಭು ಪ್ರಿಂಟಿಂಗ್ ಪ್ರೆಸ್, ಗದಗ.

ಮುದ್ರಣವಾದ ವರ್ಷ : ೧೯೭೪

ಪುಟಗಳು : ೧೧೧ + ೨೨

ಬೆಲೆ : ೦-೫೦

## ಪಠ್ಯ ಪುಸ್ತಕಗಳು

### ೧)ನಿಬಂಧ ಮಾಲೆ (ಸಚಿತ್ರ ನಿಬಂಧಮಾಲೆ ಅರ್ಥಾತ್ ಪ್ರಬಂಧ ವಿಜಯ)

ಮುಂಬಯಿ ವಿದ್ಯಾಖಾತೆಯಿಂದ ೫,೬,೭ನಯ ಇಯತ್ತೆಗಳಿಗಾಗಿ ಮಂಜೂರಾದುದು. ಬೆಳೆಯಿಸಿದ ಈದನೆಯ ಆವೃತ್ತಿಯ ಪುನರ್ಮುದ್ರಣ

**ಪ್ರಕಾಶಕರು :** ಶ್ರೀ ಎಸ್.ಬಿ.ಕಲ್ಯಾಣಿ, ಗದಗ

**ಪ್ರಕಾಶನ ಸ್ಥಳ :** ಜಯಬಸವ ಪುಸ್ತಕಾಲಯ

**ಪುಸ್ತಕದೊಡೆಯರು :** ಶ್ರೀ ಷ.ಕ.ಅಂಗಡಿ, ಬಿ.ಇ. ಸಿವ್ಹಿಲ್

**ಮುದ್ರಣವಾದ ವರ್ಷ :** ೧೯೫೪

**ಪುಟಗಳು :** ೩೩೭

**ಬೆಲೆ :** ೨-೨-೦

### ೨) ಗದ್ಯಪದ್ಯಾವಲಿ

### ೩) ಸಾಹಸಿ ಸುಭಾಸ ಬೋಸ

**ಪ್ರಕಾಶಕರು :** ಶ್ರೀ ಕೆ.ಬಿ.ಅಂಗಡಿ, ಜಯಬಸವ ಪುಸ್ತಕಾಲಯ, ಗದಗ

**ತೃತಿಯ ಮುದ್ರಣ :** ೨೦೦೦

**ಕಾಗದ :** ೨೦" ೩೦" ಪೌಂಡು ; ೨೬ ಟಟಾಗರ ಪೇಪರ ಮಿಲ್, ಲಿಂ,

**ಕವಚ :** ೨೦" ೩೦"; ೬೦ ಪೌಂಡು.

**ಮುದ್ರಣ :** ಭಾಂಡಗೆ ಪ್ರಿಂಟಿಂಗ್ ಪ್ರೆಸ್, ಗದಗ ರವಿ ಪ್ರಿಂಟರ್ಸ, ಗದಗ ಮೋಹನ ಪ್ರಿಂಟಿಂಗ ಪ್ರೆಸ್, ಗದಗ

**ಮುದ್ರಣವಾದ ವರ್ಷ :** ೧೯೬೩

**ಪುಟಗಳು :** ೯೪ + ೪

**ಬೆಲೆ :** ೦-೮೫

**೪) ಕೃತಿಯ ಹೆಸರು : ಸಾಹಸ ವೀರ ಸುಭಾಶ್ಚಂದ್ರ ಬೋಸ**

**ಪರಿಷ್ಕರಿಸಿದವರು** : ಪ್ರೊ. ಉಮೇಶ ಅಂಗಡಿ, ಎಂ.ಎ, ಉಪನ್ಯಾಸಕರು, ಜಗದ್ಗುರು ತೋಂಟದಾರ್ಯ ಮಹಾವಿದ್ಯಾಲಯ, ಗದಗ

**ಹಕ್ಕು** : ಕಾಯ್ದಿರಿಸಿದೆ.

**ಮೊದಲ ಮುದ್ರಣ** : ೫೦೦

**ಪ್ರಕಾಶಕರು** : ಶ್ರೀ ಉಮೇಶ ಅಂಗಡಿ ಎಂ.ಎ, ಟ್ಯಾಗೋರ ರಸ್ತೆ, ಗದಗ

**ಮುದ್ರಕರು** : ಮಹಾಂತೇಶ ಮುದ್ರಣ, ಗದಗ

**ಪುಟಗಳು** : ೯೪ + ೪

**ಬೆಲೆ** : ೪:೦೦

**೫) ಮುತ್ತು ( ಮೋತಿಲಾಲ ನೆಹರು)**

ಮೈಸೂರು ಸರಕಾರದ ಹೊಸ ಅಭ್ಯಾಸ ಪತ್ರಿಕೆಗನುಸಾರವಾಗಿ ೮ನೆಯ ಮತ್ತು ೯ನೆಯ ತರಗತಿಗೆ

**ಪ್ರಕಾಶಕರು** : ಜಯಬಸವ ಪುಸ್ತಕಾಲಯ, ಗದಗ

**ಮುದ್ರಣವಾದ ವರ್ಷ** : ೧೯೬೪

**ಪುಟಗಳು** : ೯೬ + ೪

**ಬೆಲೆ** : ೧:೦೦

**೬) ಜವಾಹರಲಾಲ ನೆಹರು**

೯ನೆಯ ಇಯತ್ತೆಗಾಗಿ ನಿಯುಕ್ತವಾದ ಪಠ್ಯಪುಸ್ತಕ.

**೭)ಕನ್ನಡ ಸುಬೋಧ ವ್ಯಾಕರಣ**

ನವ ಮೈಸೂರು ಸರಕಾರದ ೪೪/೬೫-೬೬/೧೮-೩-೧೯೬೫ನೆಯ ಪ್ರಕಾರ ಹಾಯರ ಸೆಕೆಂಡರಿಗೆ ತರಗತಿಗೆ ೨೦ ಜಿಲ್ಹೆಗಳಿಗೂ ಪಠ್ಯಪುಸ್ತಕವೆಂದು ಮಾನ್ಯತೆ ಪಡೆದಿದೆ.

**ಪ್ರಕಾಶಕರು** : ಕೆ.ಬಿ.ಅಂಗಡಿ, ಜಯಬಸವ ಪುಸ್ತಕಾಲಯ, ಗದಗ.

**ಮುದ್ರಣವಾದ ವರ್ಷ :** ೧೯೬೫

**ಪುಟಗಳು :** ೧೨೪ + ४

**ಬೆಲೆ :** ೦.೯೯

**ತರಗತಿ :** ೯ನೆಯ ತರಗತಿಗಾಗಿ

**ಭಾಗ :** ರಾಜ್ಯದ ೨೦ ಜಿಲ್ಲೆಗಳಿಗಾಗಿ

**ಪ್ರತಿಗಳು :** ೨೦೦೦

**ಕಾಗದ :** ಡಬಲ್‌ಕ್ರೌನ್ ೨೦" ३೦"; ೨೬ಎಲ್. ಬಿ, ಮೈಸೂರು ಪೇಪರ ಮಿಲ್ಸ ಲಿ,.

**ಸ್ಟಿಚಿಂಗ್ :** ವಾಯರಸ್ಟಿಚಿಂಗ್

**ಟೈಪ್ :** ೧೨ ಪಾಯಿಂಟ್

**ಮುದ್ರಕರು :** ರವಿ ಪ್ರಿಂಟರ್ಸ, ಗದಗ ಮತ್ತು ಭಾಂಡಗೆ ಪ್ರೆಸ್, ಗದಗ

## ಪುರಾಣ ಗ್ರಂಥಗಳು

### ೧) ಮುರಗೋಡ ಮಹಾಂತ ಶಿವಯೋಗೀಶ್ವರ ಚರಿತಾಮೃತಂ

**ಪ್ರಕಾಶಕರು :** ಶ್ರೀ ಮ.ನಿ.ಪ್ರ.ಸ್ವಮಹಾಂತಸ್ವಾಮಿಗಳು, ಮುರುಘಾಮಠ, ಮೃತ್ಯುಂಜಯ ನಗರ, ಧಾರವಾಡ.

**ಪ್ರಕಾಶನ ಸ್ಥಳ :** ಮುರಗೋಡ ದುರದುಂಡೀಶ್ವರ ಮಹಾಂತೇಶ ಮಠ, ಕರ್ತೃ ಗದ್ದುಗೆ.

**ಪ್ರಥಮ ಮುದ್ರಣ :** ೧೦೦೦

**ಮುದ್ರಣ :** ಪ್ರಭು ಪ್ರಿಂಟಿಂಗ್ ಪ್ರೆಸ್, ಬಸವೇಶ್ವರ ರೋಡ, ಗದಗ.

**ಮುದ್ರಣವಾದ ವರ್ಷ :** ೧೯೭೩

**ಪುಟಗಳು :** ೨೩೬ + ೧೦

**ಬೆಲೆ :** ೫ :೦೦

## ೨) ಉರಗಾದ್ರಿ ಗವಿಮಠ ಶ್ರೀಗುರು ಕರಿಬಸವಯೋಗಿ ಲೀಲೆ

**ಪ್ರಕಾಶಕರು** : ಅಣ್ಣಿಗೇರಿ ಚಿಂದೋಡಿ ಬಂಧುಗಳು, ಸಿ.ವಿ.ಬಂಗಾರೇಶ ಮತ್ತು ಸಿ.ಎಲ್.ಚಂದ್ರಧರ, ಹಳೆಪೇಟ, ಡಾವಣಗೆರೆ.

**ಪ್ರಕಾಶನದ ಸ್ಥಳ** : ಶ್ರೀ ಕರಿಬಸವ ದಾಸೋಹ ಮಂದಿರ, ಹಳೆಪೇಟ, ಡಾವಣಗೆರೆ.

**ಮೊದಲ ಮುದ್ರಣ** : ೨೫೦

**ಬೆಲೆ** : ೬:೦೦ ರೂ

**ಮುದ್ರಕರು** : ಪ್ರಭು ಪ್ರಿಂಟಿಂಗ್ ಪ್ರೆಸ್, ಬಸವೇಶ್ವರ ರೋಡ ಗದಗ.

**ಮುದ್ರಣವಾದ ವರ್ಷ** : ೧೯೭೨

**ಪುಟಗಳು** : ೨೧೦

**ಬೆಲೆ** : ೬:೦೦ ರೂ.

## ೩) ಮೃಡಗಿರಿ ಶ್ರೀ ಅನ್ನದಾನೀಶ್ವರ ಲೀಲಾಮೃತ

**ಪ್ರಕಾಶಕರು** : ಶ್ರೀ ಅನ್ನದಾನೀಶ್ವರ ಮಹಾಸ್ವಾಮಿಗಳು, ಮುಂಡರಗಿ

## ೪) ಕಾಯಕಯೋಗಿ ಶ್ರೀ ರುದ್ರಮುನಿ ಶಿವಯೋಗೀಶ ಚರಿತಾಮೃತಂ

**ಪ್ರಕಾಶಕರು** : ಶ್ರೀ ಮ.ನಿ.ಪ್ರ. ರುದ್ರಮುನಿಸ್ವಾಮಿಗಳ ಸಲಹಾಮಂಡಲ, ಕಪನಳ್ಳಿ-ಕಾಳೇನಹಳ್ಳಿ ಶಿವಯೋಗಮಂದಿರ

**ಮೊದಲ ಮುದ್ರಣ** : ೧೦೦೦

**ಮುದ್ರಣ** : ಪ್ರಭು ಪ್ರಿಂಟಿಂಗ್ ಪ್ರೆಸ್, ಗದಗ

**ಮುನ್ನುಡಿ** : ಶ್ರೀ ತೋಂಟದ ಸಿದ್ಧಲಿಂಗ ಮಹಾಸ್ವಾಮಿಗಳು, ಸಂಸ್ಥಾನಮಠ, ಡಂಬಳ-ಗದಗ ಹಾಗೂ ಶ್ರೀ ಹಾನಗಲ್ಲ ಸದಾಶಿವ ಮಹಾಸ್ವಾಮಿಗವರು, ಶಿವಯೋಗ ಮಂದಿರ

**ಶುಭಾಶಯ** : ಶ್ರೀ ಮ.ನಿ.ಪ್ರ.ಕೊಟ್ಟೂರ ಸ್ವಾಮೀಜಿ, ಶ್ರೀಶಾಂತಲಿಂಗೇಶ್ವರ ಸಂಸ್ಥಾನಮಠ, ನಿಂಬಾಳ-ದುಧನಿ

**ನಲ್ನುಡಿ** : ಡಾ. ವಿ.ಶಿವಾನಂದ, ಕರ್ನಾಟಕ ವಿಶ್ವವಿದ್ಯಾನಿಲಯ, ಸ್ನಾತಕೋತ್ತರ ಕೇಂದ್ರ, ಕಲಬುರ್ಗಿ

**ಅರ್ಪಣಂ** : ಈ ಕೃತಿಯನ್ನು ಪೂಜ್ಯ ಶ್ರೀ ರುದ್ರಮುನಿ ಸ್ವಾಮಿ ಹಾಗೂ ಶ್ರೀ ಹಾನಗಲ್ಲ ಸದಾಶಿವ ಮಹಾಸ್ವಾಮಿಗಳಿಗೆ ಅರ್ಪಿಸಿದ್ದಾರೆ.

### ೫) ಶರಣ ಬಸವೇಶ್ವರ ಚರಿತೆ

**ವಿವರಣೆ** : ಈ ಚರಿತ್ರೆ ಉಪಲಬ್ದವಿದ್ದು, ಅಪ್ರಕಟಿತ ಹಸ್ತಪ್ರತಿ ರೂಪದಲ್ಲಿದೆ.

### ೬) ಜೇವರಗಿ ಷಣ್ಮುಖ ಶಿವಯೋಗಿಗಳ ಅಪೂರ್ಣವಾದ ಪುರಾಣ ಸಮಾಪ್ತಿ

**ವಿವರಣೆ** : ಜೇವರಗಿಯ ಶ್ರೀ ಷಣ್ಮುಖ ಶಿವಯೋಗಿಗಳ ಅಪೂರ್ಣವಾದ ಪುರಾಣವನ್ನು ಸಮಾಪ್ತಿ ಮಾಡಿದ್ದಾರೆ. ಇಲ್ಲಿ ನೂರಕ್ಕಿಂತಲೂ ಅಧಿಕ ಪದ್ಯಗಳನ್ನು ಭಾಮಿನಿಯಲ್ಲಿ ಬರೆದಿರುತ್ತಾರೆ. ಈ ಕೃತಿಯು ಅನುಪಲಬ್ಧವಾಗಿದೆ.

### ೭) ಅವರಾಧಿ ಶ್ರೀ ಫಲಹಾರಸ್ವಾಮಿ ಪುರಾಣ :

**ವಿವರಣೆ** : ಶ್ರೀ ಕ.ಬ.ಅಂಗಡಿಯವರು ರಚಿಸಿರುವ 'ಅವರಾದಿಯ ಶ್ರೀ ಫಲಹಾರಸ್ವಾಮಿ'ಗಳ ಪುರಾಣವು ಪ್ರಕಟಗೊಂಡ ಬಗೆಗೆ ಯಾವುದೇ ಮಾಹಿತಿ ಸಿಗುವುದಿಲ್ಲ. ಆದರೆ ಅವರ ಹಸ್ತಪ್ರತಿಯ ರೂಪದಲ್ಲಿ ಈ ಪುರಾಣ ಉಪಲಬ್ಧವಿದೆ.

### ೮) ಹೊಸಳ್ಳಿ ಬೂಧಿಮಹಾಂತ ಚರಿತೆ

**ವಿವರಣೆ** : ಗದುಗಿನ ಹೊಸಳ್ಳಿ ಗ್ರಾಮದ ಹೆಸರನ್ನು ಆಧ್ಯಾತ್ಮಿಕ ಪರಿಸರದಲ್ಲಿ ಅನನ್ಯವಾಗಿ ಬೆಳಗಿದವರು ಏಳನೂರಾ ಐವತ್ತು ವರ್ಷ ಬಾಳಿ ಬದುಕಿದ ಶ್ರೀ ಬೂದಿ ಮಹಾಂತಸ್ವಾಮಿಗಳು. ಅವರ ಕುರಿತು ಶ್ರೀ ಕ.ಬ.ಅಂಗಡಿಯವರು ಪುರಾಣವನ್ನು ರಚಿಸಿರುತ್ತಾರೆ.

### ೯) ಮೆಣಸಗಿಯ ಶ್ರೀ ಲಿಂಗಬಸವೇಶ್ವರ ಚರಿತಾಮೃತ :

**ವಿವರಣೆ** : ಶ್ರೀ ಕ.ಬ.ಅಂಗಡಿಯವರ ಹುಟ್ಟೂರಾದ ಮೆಣಸಗಿಯ ಜಾಗ್ರತ ಸ್ಥಳ ಶ್ರೀ ಲಿಂಗಬಸವೇಶ್ವರ ಮಠ. ಆ ಮಠದ ಪ್ರಭಾವ ಶ್ರೀ ಕ.ಬ.ಅಂಗಡಿಯವರ ಮೇಲಾಗಿದೆ. ಈ ಕೃತಿಯ ರಚನೆಗಾಗಿ ಶ್ರೀ ಕ.ಬ.ಅಂಗಡಿಯವರು ಎಲ್ಲ ವಿವರಣಾತ್ಮಕ ವಿಷಯಗಳನ್ನು ಕ್ರೂಢೀಕರಿಸಿದ್ದರೆಂದು ತಿಳಿದು ಬರುತ್ತದೆ. ಹಸ್ತಪ್ರತಿಯ ರೂಪದಲ್ಲಿ ಈ ಕೃತಿ

ಅಪೂರ್ಣವಾಗಿದೆ ಎನ್ನಲಾಗಿದೆ. ಈ ಕೃತಿಯ ರಚನೆಯ ಕಾಲಾವಧಿಯಲ್ಲಿಯೇ ಶ್ರೀ ಕ.ಬ.ಅಂಗಡಿಯವರು ಲಿಂಗೈಕ್ಯರಾದರು ಎಂದು ನಂಬಲಾಗಿದೆ. ಈ ಕೃತಿಯು ಲಭ್ಯವಾದಲ್ಲಿ ಈ ಬಗ್ಗೆ ಹೆಚ್ಚಿನ ವಿಷಯಗಳು ತಿಳಿದುಬರುತ್ತವೆ.

## ಕ.ಬ.ಅಂಗಡಿಯವರ ಸಂಪಾದಿತ ಕೃತಿಗಳು

### ೧) ಅನುಭಾವಿಗಳ ಭಾವಗೀತೆಗಳು

**ಪ್ರಕಾಶಕರು :** ಪಂ.ನಾಗಭೂಷಣ ಶಾಸ್ತ್ರಿಗಳು

**ಪ್ರಕಾಶನ ಸ್ಥಳ :** ಶ್ರೀ ಅನ್ನದಾನಿ ಸ್ವಾಮಿಗಳ ಮಠ, ಗದಗ

**ಮುದ್ರಣ :** ಶ್ರೀ ರುದ್ರವಿಲಾಸ ಪ್ರಿಂಟಿಂಗ್ ಪ್ರೆಸ್, ಗದಗ

**ಬೆಲೆ :** ೫ ಅಣೆ

**ಮುನ್ನುಡಿ :** ಪಂ. ನಾಗಭೂಷಣ ಶಾಸ್ತ್ರಿಗಳು

**ಅಭಿನಂದನ :** ಅನುಭವ ಗ್ರಂಥಮಾಲಾ, ಸಂಪಾದಕ ಮಂಡಲ, ಗದಗ

**ಹೃದ್ಗತ :** ಶ್ರೀ ಎಸ್.ವ್ಹಿ.ಕಲ್ಮಠ

ವಿಷಯ ವಸ್ತು : ಈ ಕೃತಿಯಲ್ಲಿ ಹಲವಾರು ಅನುಭಾವಿಗಳ ಅನುಭಾವ ಗೀತೆಗಳನ್ನು ಕ್ರೂಡೀಲರಿಸಿದ್ದಾರೆ. ಒಟ್ಟು ೨೫ ಅನುಭಾವ ಗೀತೆಗಳನ್ನು ಈ ಕೃತಿಯನ್ನು ನೋಡಬಹುದು.

### ೨) ಧರ್ಮಾಚಾರ

**ಪ್ರಧಾನ ಸಹಾಯಕರು :** ತ್ಯಾಗವೀರ ಶ್ರೀಮಾನ್ ವೀರಣ್ಣನವರು ಬಸರೀಗಿಡದ

**ಪ್ರಕಾಶಕರು :** ಪಂ. ನಾಗಭೂಷಣ ಶಾಸ್ತ್ರಿಗಳು

**ಪ್ರಕಾಶನ ಸ್ಥಳ :** ಹಾಲಕೆರೆ ಶ್ರೀ.ಮ. ಅನ್ನದಾನಿ ಸ್ವಾಮಿಗಳ ಮಠ, ಗದಗ

**ಮುದ್ರಣ :** ಶಂಕರನಾರಾಯಣೀ ಮುದ್ರಣ ಮಂದಿರ, ಗದಗ

**ಮುನ್ನುಡಿ :** ಪಂ. ನಾಗಭೂಷಣ ಶಾಸ್ತ್ರಿಗಳು

**ಅಭಿನಂದನ :** ಅನುಭವಮಂಟಪ ಗ್ರಂಥಮಾಲಾ, ಗದಗ

**ವಿಷಯ ವಸ್ತು :** ಈ ಕೃತಿಯಲ್ಲಿ ವೀರಶೈವ ತತ್ವಾಚಾರಗಳ ೩೫ ನುಡಿಗಳನ್ನು ಸಾದರಪಡಿಸಿದ್ದಾರೆ.

### ೩) ಶಿವಾನುಭವ ಸುಮನ

**ಪುಟಗಳು :** ೪೦ +

**ಮುನ್ನುಡಿ :** ಶ್ರೀ ತೋಂಟದ ಸಿದ್ಧಲಿಂಗ ಮಹಾಸ್ವಾಮಿಗಳು ಸಂಸ್ಥಾನಮಠ, ಡಂಬಳ-ಗದಗ ಅವರ ಆಶೀರ್ವಚನ

**ವಿಷಯ ವಸ್ತು :** ಈ ಕೃತಿಯಲ್ಲಿ ೨೯ ಗೀತೆಗಳಿದ್ದು, ಅವುಗಳೆಲ್ಲವೂ ವೀರಶೈವ ತತ್ವಾನುಚರಣೆಯ ಗುರು-ಲಿಂಗ-ಜಂಗಮ-ಪ್ರಸಾದ-ಪಾದೋದಕ-ರುದ್ರಾಕ್ಷಿ ಇವುಗಳ ಶ್ರೇಷ್ಠತೆಯನ್ನು ಸಾರುತ್ತವೆ.

### ೪) ಗಣಸಹಸ್ರ-ಜಯಬಸವ-ಸಿದ್ಧಲಿಂಗಶ್ರೀಗುರು ನಾಮಾವಳಿತ್ರಯ

**ಪ್ರಕಾಶನ :** ವೀರಶೈವ ಪ್ರಗತಿಶೀಲ ಯುವಕ ಸಂಘ, ಗದಗ-ಬೆಟಗೇರಿ

**ಮುದ್ರಣವಾದ ವರ್ಷ :** ೧೯೭೬

**ಬೆಲೆ :** ೫೦ ಪೈ

### ೫) ವೀರಶೈವ ತತ್ವಪ್ರವೇಶ

**ವಿವರಣೆ :** ಈ ಕೃತಿ ಅಖಿಲ ಭಾರತ ವೀರಶೈವ ವಿದ್ಯಾಪೀಠವು ನಡೆಸುತ್ತಿದ್ದ ಪರೀಕ್ಷೆಗಳಿಗೆ ಪಠ್ಯವಾಗಿತ್ತು. ಈ ಕೃತಿ ಅನುಭವ ಮಂಟಪ ಗ್ರಂಥ ಮಾಲೆಯ ೩ನೆಯ ಕೃತಿಯಾಗಿದೆ.

**ಮುದ್ರಣ ಸ್ಥಲ :** ಶಂಕರನಾರಾಯಣೀ ಮುದ್ರಣಾಲಯ, ಗದಗ

**ಪ್ರಕಾಶನ ಸ್ಥಳ :** ಶ್ರೀ ಅನ್ನದಾನಿ ಸ್ವಾಮಿಗಳ ಮಠ.

**ಮುದ್ರಣವಾದ ವರ್ಷ :** ೧೯೪೪

**ಬೆಲೆ :** ೦-೩-೦ ಆ.

**೬) ಕೃತಿಯ ಹೆಸರು : ವಚನ ಮಧು**

**ವಿವರಣೆ** : ಈ ಕೃತಿ ಅಖಿಲ ಭಾರತ ವೀರಶೈವ ವಿದ್ಯಾಪೀಠವು ನಡೆಸುತ್ತಿದ್ದ ಪರೀಕ್ಷೆಗಳಿಗೆ ಪಠ್ಯವಾಗಿತ್ತು. ಈ ಕೃತಿ ಅನುಭವ ಮಂಟಪ ಗ್ರಂಥ ಮಾಲೆಯ ೪ನೆಯ ಕೃತಿಯಾಗಿದೆ.

**ಮುದ್ರಣಕರು** : ವೀಣೇಕರ ಶಿವಪ್ಪನವರು

**ಮುದ್ರಣಾಲಯ** : ಶಿವಾನಂದ ಮುದ್ರಣಾಲಯ, ಗದಗ

**ಪ್ರಕಾಶಕರು** : ಪಂ. ನಾಗಭೂಷಣ ಶಾಸ್ತ್ರಿಗಳು

**ಪ್ರಕಾಶನ ಸ್ಥಳ** : ಶ್ರೀ ಮ.ನಿ. ಅನ್ನದಾನಿ ಸ್ವಾಮಿಗಳ ಮಠ, ಗದಗ

**ಮುದ್ರಣವಾದ ವರ್ಷ** : ೧೯೪೪

**ಬೆಲೆ** : ೪ ಆಣೆ

## ಬಿಡಿ – ಲೇಖನಗಳು :

**೧) ಲೇಖನದ ಹೆಸರು** : ಗದುಗಿನ ಹೊನ್ನಗುಡಿಶ್ವರ ಚವಕಿ

ಈ ಲೇಖನವು ಸುಪ್ರಸಿದ್ಧ ಮತ್ತು ಬೃಹತ್ ಕೃತಿಯಾದ 'ನಮ್ಮ ಗದಗ ಬೆಟಗೇರಿ'ಯಲ್ಲಿ ದೊರೆಯುತ್ತದೆ. ಗದಗ ನಗರಪ್ರದೇಶ ತನ್ನ ಒಳಗಡೆ ಹಲವಾರು ಸಾಹಿತ್ಯಿಕ, ಸಾಂಸ್ಕೃತಿಕ ಸಂಪತ್ತನ್ನು ಹೊಂದಿದೆ. ವೀರಶೈವ ಸಂಸ್ಕೃತಿ, ಸಂಸ್ಕಾರಗಳ ನೆಲೆಯಾಗಿ ಕಂಡು ಬರುವ 'ಚೌಕಿ'ಗಳು ಇತಿಹಾಸದ ಕುರುಹುಗಳಾಗಿ ನಿಂತಿವೆ. ಆ ಕುರಿತು ಕ.ಬ.ಅಂಗಡಿಯವರು ಸಂಶೋಧನಾತ್ಮಕ ವೈವಾರಿಕತೆಯಿಂದ ಇವುಗಳನ್ನು ಬರೆದಿದ್ದಾರೆ.

**೨) ಲೇಖನದ ಹೆಸರು** : ಗದುಗು ಗದ್ದುಗೆಯೇ ?

ಈ ಕೃತಿಯು ಗದಗ ನಗರದ ಹೆಸರನ್ನು ಕುರಿತ ವಿಶ್ಲೇಷಣೆಯನ್ನು ಮಾಡುತ್ತದೆ. ಗದಗ ಎಂಬ ಹೆಸರಿನ ಬಗೆಗೆ ಬೇರೆ ಬೇರೆಯವರ ವಿವೇಚನೆಗಳನ್ನು ಇಟ್ಟುಕೊಂಡು ಅವರು ತಮ್ಮದೇ ಆದ ಆಧ್ಯಾತ್ಮಿಕ ದೃಷ್ಟಿಕೋನದಿಂದ ಈ ಲೇಖನವನ್ನು ಬರೆದಿದ್ದಾರೆ. ಇಲ್ಲಿ ಅವರ ಸಂಶೋಧಕ ಜ್ಞಾನ ಹೆಚ್ಚು ಕಾರ್ಯ ನಿರತವಾಗಿದೆ.

## ಕ.ಬ.ಅಂಗಡಿಯವರನ್ನು ಕುರಿತು ಅನ್ಯರು ಬರೆದ ಕೃತಿಗಳು, ಲೇಖನಗಳು

೮೦ ವರ್ಷದ ಅತ್ಯಮೂಲ್ಯ ಜೀವನ ಸಾಧನೆಯ ಸ್ಮರಣಾರ್ಥ ಶ್ರೀ ಅಂಗಡಿ ಕರವೀರಪ್ಪನವರ ಸತ್ಕಾರ ಸಮಿತಿ ಹೊರತಂದ ಸ್ಮರಣ ಸಂಚಿಕೆ 'ಶರಣ' ಸಂಚಿಕೆಯ ಲೇಖನಗಳು

☞ತೋಂಟದ ಸಿದ್ಧಲಿಂಗ ಮಹಾಸ್ವಾಮಿಗಳು, ಗದಗ ಅವರ ಆಶೀರ್ವಚನ

☞ಜಗದ್ಗುರು ಅನ್ನದಾನೀಶ್ವರ ಮಹಾಸ್ವಾಮಿಗಳು, ಮುಂಡರಗಿ ಅವರ ಆಶೀರ್ವಚನ

☞ಸದಾಶಿವ ಮಹಾಸ್ವಾಮಿಗಳು, ಶಿವಯೋಗ ಮಂದಿರ, ಹಾನಗಲ್ಲ ಅವರ ಆಶೀರ್ವಚನ

☞ನೀಲಕಂಠ ಮಹಾಸ್ವಾಮಿಗಳು, ದುರದುಂಡೀಶ್ವರ ಮಠ, ಮುರಗೋಡ ಅವರ ಆಶೀರ್ವಚನ

☞ರುದ್ರಮುನಿಸ್ವಾಮಿಗಳು, ಶಿವಯೋಗ ಮಂದಿರ, ಕಾಳೇನಹಳ್ಳಿ ಅವರ ಆಶೀರ್ವಚನ

☞ಶಿವಲಿಂಗಸ್ವಾಮಿಗಳು, ಹುಕ್ಕೇರಿ ಮಠ, ಹಾವೇರಿ ಅವರ ಆಶೀರ್ವಚನ

☞ಪಂ. ಪುಟ್ಟರಾಜ ಕವಿಗವಾಯಿಗಳು, ವೀರೇಶ್ವರ ಪುಣ್ಯಾಶ್ರಮ, ಗದಗ ಅವರ ಆಶೀರ್ವಚನ

☞ ಕ.ಬ.ಅಂಗಡಿಯವರ ಜೀವನ ಚರಿತ್ರೆ– ಶ್ರೀ ವಿ.ವಿ.ಗಡಾದ

☞ 'ಅಖಿಲ ಭಾರತ ವೀರಶೈವ ವಿದ್ಯಾಪೀಠವು ಶ್ರೀಮಾನ್ ಕ.ಬ.ಅಂಗಡಿಯವರು' – ಪಂ. ನಾಗಭೂಷಣ ಶಾಸ್ತ್ರಿಗಳು

☞ ' ಶ್ರೀ ಶಿವಾನುಭವವೂ ಅಂಗಡಿ ಮಾಸ್ತರರೂ'– ಬಸವೇಶ್ವರ ತುಪ್ಪದ

☞ 'ಶುಭ ಚಿಂತನ'–ಪ್ರೊ. ಸ.ಸ.ಮಾಳವಾಡ

☞ 'ಶ್ರೀಯುತ ಕರವೀರಪ್ಪ ಬಸಪ್ಪ ಅಂಗಡಿ ಅವರ ವ್ಯಕ್ತಿತ್ವ' – ಡಾ. ಎಮ್.ಎಸ್. ಸುಂಕಾಪೂರ

☞ 'ಶ್ರೀ ಅಂಗಡಿಯವರು : ನಾನು ಕಂಡಂತೆ' – ಡಾ. ಮಲ್ಲಿಕಾರ್ಜುನ ಲಠ್ಠೆ

☞ 'ಭಕ್ತ ಕವಿ' – ಡಾ. ಸಂಗಮೇಶ ಹಂಡಗಿ

☞ 'ಸಜ್ಜನಿಕೆಯ ಸಾಕಾರ ಮೂರ್ತಿ' – ಎಸ್.ಜಿ.ಹುಬ್ಬಳ್ಳಿ

☞'ಗುರುತನಕ್ಕೆ ಗೌರವತಂದ ಕರ್ಮವೀರ ಕರವೀರಪ್ಪನವರು' ಬಿ.ಎಸ್.ಶಿವಶಿಂಪಿಗೇರ

☞ 'ಶ್ರೀ ಕೆ.ಬಿ.ಅಂಗಡಿಯವರಲ್ಲಿ ನಾವು ಕಂಡದ್ದು' – ಶ್ರೀ ಕೌತಾಳ ವೀರಪ್ಪ

☞ 'ನಾನು ಕಂಡ ಕರವೀರಪ್ಪನವರು' – ಶ್ರೀ ಆರ್.ಎಸ್.ಹರ್ಲಾಪೂರ

☞ 'ಆತ್ಮೀಯ ಬಂಧು ಅಂಗಡಿ ಕರವೀರಪ್ಪನವರು'–ಶ್ರೀ ಕೆ.ಜಿ.ಗೋಲಪ್ಪನವರ

☞ 'ಸಾತ್ವಿಕ ಜೀವಿಗಳಾದ ಶ್ರೀ ಅಂಗಡಿ ಗುರುಗಳು'– ಶ್ರೀ ವಿಶ್ವನಾಥ ಬುಳ್ಳಾ

☞ 'ಆದರ್ಶ ಜೀವನ' – ಶ್ರೀ ಸಿದ್ಧಲಿಂಗಯ್ಯ ಹೊಸಮಠ, ಗದಗ

☞ 'ಶ್ರೀ ಹಾನಗಲ್ಲ ಕುಮಾರ ಸೇವಾ ಶಿಕ್ಷಕ ಸಂಘ ಹಾಗೂ ಶರಣ ಅಂಗಡಿಯವರು'– ಶ್ರೀ ಫ.ತೋ.ಕಲ್ಯಾಣಶ್ರೇಷ್ಠಿ

☞'ಆದರ್ಶ ಗುರುವರ್ಯ ಶ್ರೀ ಕರವೀರಾರ್ಯ' – ಶ್ರೀ ಸಿ.ಎನ್.ಪಾಟೀಲ

☞'ಶ್ರೀ ಮುರಗೋಡ 'ಮಹಾಂತಜ್ಜ' ಅವರೂ ಅಂಗಡಿ ಸಾಹೇಬರೂ'– ಶ್ರೀ ವಿ.ಚೆ.ಕುಬಸದ, ಮುರಗೋಡ

☞'ಸ್ವ–ಗ್ರಾಮದ ಆತ್ಮೀಯ ಬಂಧು ಶ್ರೀ ಕ.ಬ.ಅಂಗಡಿಯವರು'– ಶ್ರೀ ಪಾಂಡುರಂಗ ತಮ್ಮಾಜಿ ಕುಲಕರ್ಣಿ, ಮೆಣಸಗಿ

☞ 'ಮನೆತನದ ಮಹಾಮರ'– ಶ್ರೀ ಶಿವಲಿಂಗಪ್ಪ ವಾಲಿ, ಗದಗ

☞ "ಪರಂಪರೆ'ಯ ಕಣ್ಣಿನಲ್ಲಿ ಕರವೀರಪ್ಪನವರು'–ಡಾ. ವಿ.ಶಿವಾನಂದ, ಕಲಬುರ್ಗಿ

☞ 'ಶಿವಾನುಭವಿ ಕರವೀರಪ್ಪನವರು' –ಕು. ರತ್ನಾ ಪಾಟೀಲ, ಗದಗ

☞ 'ನಮ್ಮ ಜಕ್ಕಲಿಯ ಮಾಸ್ತರರು'– ಜಕ್ಕಲಿ ಗ್ರಾಮದ ಅಭಿಮಾನಿಗಳು, ಜಕ್ಕಲಿ

☞ 'ಶುಭ ಕೋರಿಕೆ' – ಶ್ರೀ ಚಂದ್ರಶೇಖರಪ್ಪ ಮುನವಳ್ಳಿ, ಗದಗ

☞ 'ಶ್ರೀ ಗೊಡಚಿ ಕ್ಷೇತ್ರವೂ ಕರವೀರಪ್ಪನವರೂ' – ಶ್ರೀ ಆರ್.ಜಿ.ಹೊಸಕೇರಿ

☞ತೋಂಟದಾರ್ಯ ಮಠ ಹೊರತಂದ 'ಸಾವಿರ ಶಿವಾನುಭವ' ಕೃತಿ

☞ಅಂದಾನೆಪ್ಪ ವಿಭೂತಿ ಅವರು ಬರೆದ 'ಮೆಲುಕು' ಕೃತಿ

☞ವೆಂಕಟಾಪುರ ಶರಣರು ಬರೆದ 'ಶಿವಾನುಭವಿಗಳು' ಕೃತಿ

☞ಡಾ. ಶ್ರೀಮತಿ ಅನುಸೂಯಾ ದೇವಾಂಗ ಮಠ ಅವರ ಮಹಾಪ್ರಬಂಧ ' ಗದುಗಿನ

ಪರಿಸರದ ಆಧುನಿಕ ಪುರಾಣಕಾರರು'

☞ರಶ್ಮಿ-ಸುರೇಶ ಅವರು ಬರೆದ ಗದುಗಿನಲ್ಲಿ ನಡೆದ ೭೬ಕನ್ನಡ ಸಾಹಿತ್ಯ ಸಮ್ಮೇಳನದ ಸ್ಮರಣ ಸಂಚಿಕೆ 'ಬೆಳುವೊಲ'ದ ಲೇಖನ

☞ಡಾ. ಆರ್.ಸಿ.ಹೀರೆಮಠ ಅವರ ಅಭಿನಂದನಾ ಕೃತಿ 'ಬೆಳುವಲ' ಕೃತಿ

☞ ನಾಗಭೂಷಣ ಶಾಸ್ತ್ರಿಗಳ ಅಭಿನಂದನಾ ಕೃತಿ 'ನಾಡಭೂಷಣ' ಕೃತಿ

☞ ವಿ.ವಿ.ಗಡಾದ ಅವರ ಅಭಿನಂದನಾ ಕೃತಿ 'ಶಿಕ್ಷಣಸಿರಿ' ಕೃತಿ

☞ ಹ.ರಾ.ಕಿದಿಯೂರ ಅವರ ಸಂಪಾದನಾ ಕೃತಿ 'ನಮ್ಮ ಗದುಗು-ಬೆಟಗೇರಿ' ಗ್ರಂಥ.

☞ಕ.ಬ.ಅಂಗಡಿಯವರ ಮಗನಾದ ಶ್ರೀ ಉಮೇಶ ಅಂಗಡಿಯವರ ಅಪ್ರಕಟಿತ ಚೌಪದಗಳು.

☞ಮಹಾಲಿಂಗ ಯಾಳಗಿ ಅವರು ಉತ್ತರ ಕರ್ನಾಟಕದ ಜನಪ್ರಿಯ ದಿನಪತ್ರಿಕೆ ನವೋದಯದಲ್ಲಿ ಬರೆದ 'ಗದುಗಿನ ಶರಣಕವಿ ಶ್ರೀ ಅಂಗಡಿ ಕರವೀರಪ್ಪನವರು' ಲೇಖನ

☞ರಶ್ಮಿ-ಸುರೇಶ ಅವರು ಉತ್ತರ ಕರ್ನಾಟಕದ ಜನಪ್ರಿಯ ದಿನಪತ್ರಿಕೆ 'ಕಿತ್ತೂರ ಕರ್ನಾಟಕ'ಕ್ಕೆ ಬರೆದ 'ಗದುಗಿನ ಶರಣಕವಿ ಶ್ರೀ ಅಂಗಡಿ ಕರವೀರಪ್ಪನವರು' ಲೇಖನ

☞ಡಾ. ಸಂಗಮೇಶ ಹಂಡಗಿಯವರ 'ಬೆಳಕು ಬೀರಿದವರು' ಕೃತಿ.

## ಕ.ಬ.ಅಂಗಡಿಯವರ ಸಾಹಿತ್ಯ ಕೃಷಿ :

### ಬೈಲಾಟಗಳು

೧) ಹನುಮಂತನಿಗೆ ಲಿಂಗಧಾರಣೆ

೨) ಬೊಮ್ಮನ ಬಡಬಡಿಕೆ

### ನಾಟಕಗಳು

೧) ಕೆಳದಿಯ ಚೆನ್ನಮ್ಮಾಜಿ

೨) ಕಿತ್ತೂರ ಕೇಸರಿ

೩) ಬೆಳದಡಿ ಮಲ್ಲಮ್ಮ

೪) ಶಿವಪಾರಮ್ಯ ಅರ್ಥಾತ ಗುಗ್ಗಳ

೫) ಜಕ್ಕಲಿಯ ಶರಣರ ನಾಟಕಗಳು

೬) ಘನಮಹಿಮರು

೭) ಬಿಲ್ಲೀ ಕಾಗದ

೮) ಚೆನ್ನಮ್ಮನ ದಂಡಿ

### ಅಷ್ಟಕ- ಷಟ್ಕಗಳು

೧) ಮೃತ್ಯುಂಜಯನ ಪೊತ್ತು ತೇರು ಸಾಗುತಿದೆ (ಅಷ್ಟಕ)

೨) ಬಸವೇಶ್ವರಾಷ್ಟಕ ೧ ಮತ್ತು ೨

೩) ಅರಭಾವಿ ಚಿದಾರಣ್ಯ ಪುಣ್ಯಕ್ಷೇತ್ರ ದುರದುಂಡಿ ನವಮಹಾಂತ ಶಿವಯೋಗಿ ಸ್ತೋತ್ರಾಷ್ಟಕಂ

೪) ಹಾನಗಲ್ಲ ಕುಮಾರ ಶಿವಯೋಗಿ ಸ್ತೋತ್ರಾಷ್ಟಕಂ

೫) ಗಣಸಹಸ್ರ ಪ್ರಭಾಪುಂಜ ಮಹಾಂತ ಪ್ರಭು ಸ್ತೋತ್ರಾಷಟ್ಕಂ

೬) ಶ್ರೀ ಮದಥಣಿ ಶಿವಯೋಗಿಂದ್ರ ನೀಂ ರಕ್ಷಿಸೈ (ಅಷ್ಟಕ)

೭) ಹಸನ ನುಡಿ ಮುತ್ತುಗಳೆಂಬ ಮಂಗಲ ಷಟ್ಕ

೮) ಶ್ರೀ ಮುರಗೋಡ ಶಿವಯೋಗಿ ಶ್ರೀಪಾದ ಸ್ತೋತ್ರಾಷ್ಟಕಂ

೯) ಶ್ರೀ ಮುರಗೋಡ ಶಿವಯೋಗಿ ಶ್ರೀಗಂಧ ಪಾದುಕಾರ್ಪಣ ಸ್ತೋತ್ರಾಷ್ಟಕಂ

೧೦) ಸಹಸ್ರ ಬಿಲ್ವಾರ್ಪಣ ಪಾದ ಪೂಜಾಷ್ಟಕ

೧೧)ಹಾವೇರಿ ಶಿವಬಸವ ಸ್ವಾಮಿ ಚರಣಕ್ಕೆ ಶರಣಾಷ್ಟಕಂ

೧೨)ನೀಡು ಕೃಪಾಘನ ಮಂಗಲಗೀತೆ

**ಕಿರು ಗ್ರಂಥಗಳು**

೧) ತಾಳಿ ಮಹತ್ವ

೨) ವಿಷಾಪಹರಣಲೀಲೆ

೩) ಬಸವ ಭಜನಾ ಮಾಲೆ

೪) ಬಡಿವಾರದ ಬಂಟ

೫) ಅನುಭವದೂಟ

೬) ಅಕ್ಕನ ಚರಿತ್ರೆ

೭) ಅಮರವಾಣಿ

೮) ಜಯ ಬಸವ ನೂರೆಂಟು ನಾಮಾವಳಿ

೯) ಅಣ್ಣನವರ ಬೆಳಗಿನ ಪೂಜೆಯನ್ನು ಸ್ಮರಿಸಿ ಸ್ತೋತ್ರ

೧೦) ಕಾರಣಿಕ ಶಿವಯೋಗಿ ಹಾನಗಲ್ಲ ಕುಮಾರ ಮಹಾಸ್ವಾಮಿ

೧೧)ಮುರಗೋಡ ಮಹಾಂತಜ್ಜನವರ ಮಹಿಮೆ

೧೨)ಮುರಗೋಡ ಮಹಾಂತಸ್ವಾಮಿ ನಡೆ-ನುಡಿ ಬೆಡಗಿನ ಮಾಲೆ

೧೩)ನಾಮಾವಳಿತ್ರಯ

೧೪)ಮುತ್ತೈದೆಯರೈವರು

೧೫)ಶ್ರೀಕ್ಷೇತ್ರ ಗೊಡಚಿ ವಸ್ತು : ಮಡಿವಾಳ ಮಾಚಿತಂದೆ

**ಪಠ್ಯಪುಸ್ತಕಗಳು**

೧) ನಿಬಂಧ ಮಾಲೆ

೨) ಗದ್ಯ ಪದ್ಯಾವಲಿ

೩) ಸಾಹಸಿ ಸುಭಾಸ ಬೋಸ

೪) ಮೋತಿಲಾಲ ನೆಹರು

೫) ಜವಾಹರಲಾಲ ನೆಹರು

೬) ಸುಬೋಧ ವ್ಯಾಕರಣ

**ಪುರಾಣ ಗ್ರಂಥಗಳು**

೧) ಉರಗಾದ್ರಿ ಕರಿಬಸವ ಶಿವಯೋಗಿ ಲೀಲೆ.

೨) ಮುರಗೋಡ ಮಹಾಂತ ಶಿವಯೋಗಿಶ್ವರ ಚರಿತಾಮೃತಂ

೩) ಕಾಯಕಯೋಗಿ ಶ್ರೀ ರುದ್ರಮುನಿಸ್ವಾಮಿ ಚರಿತ್ರೆ

೪) ಜೇವರಗಿ ಷಣ್ಮುಖ ಶಿವಯೋಗಿಗಳ ಅಪೂರ್ಣವಾದ ಪುರಾಣ ಸಮಾಪ್ತಿ

೫) ಶರಣ ಬಸವೇಶ್ವರ ಚರಿತ್ರೆ

೬) ಮೃಡಗಿರಿ ಅನ್ನದಾನೀಶ್ವರ ಲೀಲಾಮೃತಂ

೭) ಫಲಹಾರೇಶ್ವರ ಚರಿತ್ರೆ

೮) ಹೊಸಳ್ಳಿ ಬೂದಿ ಮಹಾಂತ ಚರಿತಾಮೃತಂ

೯) ಮೆಣಸಗಿಯ ಲಿಂಗಬಸವೇಶ್ವರ ಚರಿತಾಮೃತಂ

**ಸಂಪಾದಿತ ಕೃತಿಗಳು :**

೧) ಅನುಭಾವಿಗಳ ಭಾವಗೀತೆಗಳು

೨) ಸರ್ವಜ್ಞನ ವಚನಸಂಗ್ರಹ

೩) ವಚನಮಧು

೪) ವೀರಶೈವ ತತ್ವಪ್ರವೇಶ

೫) ವೀರಶೈವ ತತ್ವಾದರ್ಶ

೬) ಜಗದ್ವಿಭೂತಿಗಳಲ್ಲಿ ಬಸವಣ್ಣನವರ ಸ್ಥಾನ

೭) ಧರ್ಮಾಚಾರ

೮) ಶಿವಾನುಭವ ಸುಮನ

೯) ಗಣಸಹಸ್ರ–ಜಯಬಸವ–ಸಿದ್ಧಲಿಂಗಶ್ರೀಗುರು ನಾಮಾವಳಿ

# ಗ್ರಂಥ ಋಣ

೧) 'ಬೆಳ್ವೊಲ', ಡಾ. ಆರ್.ಸಿ.ಹಿರೇಮಠ ಅವರ ಅಭಿವಂದನ ಗ್ರಂಥ, ಸಂ–ಡಾ.ಎಂಎಸ್.ಸುಂಕಾಪುರ, ಡಾ.ಎಂ.ಎಂ.ಕಲಬುರ್ಗಿ, ಡಾ.ಆರ್.ಸಿ.ಹಿರೇಮಠ ಸನ್ಮಾನ ಸಮಿತಿ, ಕನ್ನಡ ವಿಶ್ವವಿದ್ಯಾಲಯ, ಧಾರವಾಡ. ಪ್ರ–೧೯೮೧

೨) 'ನಿರಂಜನ', ಸಂ–ಎ.ಎಸ್.ಹೂಗಾರ ಮತ್ತು ಎಚ್.ಪಿ.ಹುಲ್ಯಾಳ, ಶ್ರೀ ನಿರಾಭಾರ ಜಗದ್ಗುರು ಪಟ್ಟಾಧಿಕಾರ ಮಹೋತ್ಸವ ಸಮಿತಿ, ಶ್ರೀ ತೋಂಟದಾರ್ಯ ಸಂಸ್ಥಾನಮಠ, ಗದಗ–ಬೆಟಗೇರಿ. ಪ್ರ–೧೯೭೪

೩) 'ಶರಣ', ಶ್ರೀ ಅಂಗಡಿ ಕರವೀರಪ್ಪನವರ ಎಂಬತ್ತನೆಯ ವರ್ಷದ ಸವಿನೆನಪಿನ ಸಂಚಿಕೆ, ಸಂ–ಶ್ರೀ ವಿ.ವಿ.ಗಡಾದ, ಅಂಗಡಿ ಕರವೀರಪ್ಪನವರ ಸತ್ಕಾರ ಸಮಿತಿ, ಗದಗ. ಪ್ರ–೧೯೭೬

೪) 'ಶಿಕ್ಷಣ ಸಿರಿ', ಶ್ರೀ ವಿ.ವಿ.ಗಡಾದ ಅಭಿವಂದನ ಗ್ರಂಥ, ಸಂ–ಶಿವಶಂಕರ ಹಿರೇಮಠ, ಅನ್ನದಾನಿ ಹಿರೇಮಠ, ರಾಮಚಂದ್ರ ಪಾಟೀಲ, ಶ್ರೀ ಜಗದ್ಗುರು ತೋಂಟದಾರ್ಯಮಠ, ಗದಗ ಹಾಗೂ ಶ್ರೀ ವಿ.ವಿ.ಗಡಾದ ಅಭಿವಂದನ ಸಮಿತಿ, ಗದಗ, ಪ್ರ–೨೦೦೪.

೫) 'ಶಿಕ್ಷಣ ಮತ್ತು ಜೀವನ ಮೌಲ್ಯಗಳು' ಲೇ–ಪಾ.ವೆಂ.ಆಚಾರ್ಯ, ಮಾನವಿಕ ಕರ್ಣಾಟಕ ಸಂಪುಟ ೮, ಸಂಚಿಕೆ ೩, ಮೈಸೂರು ವಿಶ್ವವಿದ್ಯಾನಿಲಯ, ಪ್ರ–೧೯೬೮

೬) 'ಶಿಕ್ಷಣ ಮತ್ತು ಆಧಾರಗಳು ಮತ್ತು ಪ್ರಥಮ ತತ್ವಗಳು', ಸಂ– ಡಾ.ವಿ.ಕೆ.ಜವಳಿ, ಕ.ವಿ.ವಿ,ಧಾರವಾಡ, ೧೯೭೧.

೭) 'ಬೆಳಗು', ಶಿವಯೋಗ ಮಂದಿರ ಸುವರ್ಣ ಮಹೋತ್ಸವ ಸ್ಮಾರಕ ಗ್ರಂಥ, ಸ್ವರ್ಣ ಮಹೋತ್ಸವ ಸಮಿತಿ, ಪ್ರ–೧೯೬೦

೮) 'ಶಿವಯೋಗ ಮಂದಿರ' ಜ್ಞಾನದಾಸೋಹ ಮಣಿಮಾಲೆ–೪೨, ಲೇ–ಡಾ. ಅನ್ನದಾನೀಶ್ವರ ಮಹಾಶಿವಯೋಗಿಗಳು, ಶ್ರೀ ಸಿದ್ಧಗಂಗಾ ಪ್ರಕಾಶನ, ತುಮಕೂರು

೯) 'ಸಿದ್ಧಗಂಗಾಶ್ರೀ', ಅಭಿನಂದನಾ ಗ್ರಂಥ', ಡಾ. ಶಿವಕುಮಾರ ಸ್ವಾಮಿಗಳ ಅಭಿವಂದನಾ ಸಮಿತಿ, ತುಮಕೂರು

೧೦) 'ಅನುಭಾವಿ' ಶ್ರೀ ಅನ್ನದಾನೀಶ್ವರ ಮಹಾಸ್ವಾಮಿಗಳು, ಮುಂಡರಗಿ ಇವರ ಅಭಿನಂದನ ಗ್ರಂಥ, ಸಂ–ಆರ್.ಎಸ್.ಪೋಲೀಸಪಾಟೀಲ ಮತ್ತು ಬಿ.ಎಸ್.ಪಾಟೀಲ,

ಅನ್ನದಾನೀಶ್ವರ ಸಂಸ್ಥಾನಮಠ, ಮುಂಡರಗಿ 'ಶರಣ ಸಾಹಿತ್ಯ ಸಂಸ್ಕೃತಿ ಕೆಲವು ಅಧ್ಯಯನಗಳು',
ಲೇ-ಡಾ.ಸಿ.ನಾಗಭೂಷಣ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

೧೧)'ನಾಡಭೂಷಣ', ಪಂ. ನಾಗಭೂಷಣ ಶಾಸ್ತ್ರಿಗಳವರ ಅಮೃತ ಮಹೋತ್ಸವದ ಅಭಿನಂದನ ಗ್ರಂಥ,
ಸಂ-ಡಾ. ವಸಂತ ಪಾಟೀಲ ಮತ್ತು ಪ್ರೊ. ಎಸ್.ಎಸ್.ಭೂಸರಡ್ಡಿ,ಅಭಿನಂದನ ಸಮಿತಿ, ಮುರುಘಾಮಠ,
ಮೃತ್ಯುಂಜಯ ನಗರ ಧಾರವಾಡ. ಪ್ರ-೧೯೮೨

೧೨)'ಜ್ಞಾನದೇಗುಲ', ಡಾ. ಪಂ. ಪುಟ್ಟರಾಜ ಗವಾಯಿಗಳವರ ಅಭಿನಂದನ ಗ್ರಂಥ,
ಸಂ- ವಿ.ಬಿ.ಹಿರೇಮಠ, ಪ್ರ-೧೯೮೯

೧೩)'ಪ್ರಸಾದ', ೪೩ನೆಯ ಕನ್ನಡ ಸಾಹಿತ್ಯ ಸಮ್ಮೇಲನಾಂಕ, ಗದಗ-ಬೆಟಗೇರಿ,
ಸಂ- ಜಯರಾಮಾಚಾರ್ಯ ಮಳಗಿ ವೈದ್ಯ, ಪ್ರ-೧೯೬೧.

೧೪)'ಬೆಳ್ವೊಲ ಬೆಳಕು', ಸ್ಮರಣ ಸಂಚಿಕೆ,
ಅಖಿಲ ಭಾರತ ೭೬ನೆಯ ಕನ್ನಡ ಸಾಹಿತ್ಯ ಸಮ್ಮೇಳನ, ಗದಗ,
ಸಂ- ಡಾ. ಬ.ಸೋ.ಗೊರವರ ಮತ್ತು ಡಾ. ಅರ್ಜುನ ಗೊಳಸಂಗಿ, ಪ್ರ-೨೦೧೦.

೧೫)'ನಮ್ಮ ಗದಗ-ಬೆಟಗೇರಿ', ಗದಗ-ಬೆಟಗೇರಿ ನಗರದ ವಿವರವಾದ ಇತಿಹಾಸ- ಮಾಹಿತಿ ಗ್ರಂಥ,
ಸಂ-ಹ.ರಾ.ಕಿದಿಯೂರ, ಡೈಎಕಟರಿ ಪಬ್ಲಿಶರ್ಸ, ಗದಗ. ಪ್ರ-೧೯೭೫

೧೬)'ಮಧುರಚೆನ್ನ-ಜೀವನ ಹಾಗೂ ಕೃತಿಗಳ ಸಮೀಕ್ಷೆ', ಲೇ- ಡಾ.ಜಿ.ಎಸ್.ಕಾಪಸೆ,
ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ. ಪ್ರ-೧೯೭೬

೧೭)'ವಚನ ಗುಮ್ಮಟ', ಡಾ. ಫ.ಗು.ಹಳಕಟ್ಟಿಯವರ ಜೀವನ ಮತ್ತು ಸಾಹಿತ್ಯ.
ಲೇ-ಡಾ. ಬಿ.ಎಂ.ಪಾಟೀಲ, ಹಿತಚಿಂತಕ ಪ್ರಕಾಶನ, ಮಹಾಲಿಂಗಪುರ. ಪ್ರ-೨೦೦೬

೧೮)'ಡಾ. ಪುಟ್ಟರಾಜ ಗವಾಯಿಗಳು : ಜೀವನ-ಸಾಹಿತ್ಯ',
ಲೇ- ಡಾ. ಎಸ್.ಎನ್. ವೆಂಟಕಾಪೂರ. ಪ್ರ-೨೦೧೦.

೧೯)'ಪಂ.ನಾಗಭೂಷಣ ಶಾಸ್ತ್ರಿಗಳು', ಜೀವನ-ಸಾಹಿತ್ಯ, ಡಾ.ಡಿ.ಎಂ.ಹಿರೇಮಠ

೨೦) 'ಡೆಪ್ಯೂಟಿ ಚೆನ್ನಬಸಪ್ಪನವರು: ಜೀವನ -ಸಾಧನೆ', ಡಾ. ಬಾಳಣ್ಣ ಸಿಗೀಹಳ್ಳಿ

೨೧) 'ಸಿರಸಂಗಿ ಸಂಸ್ಥಾನ : ಒಂದು ಅಧ್ಯಯನ', ಡಾ. ವಿರುಪಾಕ್ಷ ಬಡಿಗೇರ ವೀರಶೈವ ಅಧ್ಯಯನ ಸಂಸ್ಥೆ, ತೋಂಟದಾರ್ಯ ಸಂಸ್ಥಾನಮಠ, ಗದಗ

೨೨) 'ವೀರಶೈವ ಪುರಾಣಗಳು: ಒಂದು ಅಧ್ಯಯನ', ಡಾ. ಎಸ್.ವಿದ್ಯಾಶಂಕರ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ಪ್ರ-೧೯೮೨

೨೩) 'ಅಂತರಂಗದ ರತ್ನ', ಗುರುಲಿಂಗ ಕಾಪಸೆ ಅಭಿನಂದನ ಗ್ರಂಥ, ಸಂ-ಎನ್.ಜಿ.ಕರೂರ, ಡಾ.ಗುರುಲಿಂಗ ಕಾಪಸೆ ಅಭಿನಂದನ ಸಮಿತಿ, ಹಲಸಂಗಿ-ಧಾರವಾಡ, ಪ್ರ-೨೦೦೧

೨೪) 'ಜಾನಪದ ಸಂಪದ', ಡಾ. ಎಂ.ಎಸ್.ಸುಂಕಾಪುರ ಅಭಿನಂದನ ಗ್ರಂಥ,ಸಂ-ಡಾ. ಮಲ್ಲಿಕಾರ್ಜುನ ಶಿ. ಲಠ್ಠೆ,

೨೫) 'ಗೌರವ', ಪ್ರೋ ಎಸ್.ಎಸ್.ಭೂಸನೂರಮಠ ಅಭಿನಂದನ ಗ್ರಂಥ, ವೀರಶೈವ ಅಧ್ಯಯನ ಸಂಸ್ಥೆ, ಜಗದ್ಗುರು ತೋಂಟದಾರ್ಯ ಸಂಸ್ಥಾನಮಠ, ಗದಗ ಪ್ರ-೧೯೮೬.

೨೬) 'ಸಮನ್ವಯ', ಲಿಂ. ಬಸವಲಿಂಗ ಮಹಾಸ್ವಾಮಿಗಳು, ಗವಿಮಠ, ನವಿಲುಗುಂದ ಅವರ ಕುರಿತು ಸಂಸ್ಮರಣ ಸಂಪುಟ ಸಂ-ಡಾ. ಸಂಗಮೇಶ ಹಂಡಗಿ ಮತ್ತು ಶ್ರೀ ಜಿ.ಎಂ. ಉಮಾಪತಿಶಾಸ್ತ್ರಿ, ಶ್ರೀ ಸಿದ್ಧಲಿಂಗೇಶ್ವರ ಪ್ರಕಾಶನ, ಗವಿಮಠ, ನವಿಲುಗುಂದ. ಪ್ರ-೧೯೯೫

೨೭) 'ಮೆಲುಕು', ವ್ಯಕ್ತಿಗಳ ಬದುಕಿನ ಚಿತ್ರಣ, ಲೇ-ಅಂದಾನಪ್ಪ ವಿಭೂತಿ, ಕವಿತಾ ಪ್ರಕಾಶನ, ಗದಗ. ಪ್ರ-೨೦೦೩

೨೮) 'ಬೆಳಕು ಬೀರಿದವರು', ಲೇ-ಡಾ. ಸಂಗಮೇಶ ಹಂಡಗಿ, ಸಾಹಿತ್ಯ ಸಂಗಮ ಪ್ರಕಾಶನ, ಹುಬ್ಬಳ್ಳಿ,ಪ್ರ-೨೦೧೧

೨೯) 'ಶಿವಾನುಭವಿಗಳು', ಪ್ರಾತಃಕಾಲ ಶಿವಾನುಭವ ಸಂಘದ ಸದಸ್ಯರ ಪರಿಚಯ, ಲೇ-ಬಸವರಾಜ ವೆಂಕಟಾಪುರ, ಪ್ರಾತಃಕಾಲ ಶಿವಾನುಭವ ಸಂಘ, ಶ್ರೀ ತೋಂಟದಾರ್ಯಮಠ, ಗದಗ.ಪ್ರ-೨೦೦೮

೩೦) 'ನಲವಡಿ ಶ್ರೀಕಂಠಶಾಸ್ತ್ರಿಗಳ ಜೀವನ ಮತ್ತು ಕೃತಿಗಳು', ಲೇ-ಡಾ. ಮೃತ್ಯುಂಜಯ ಹೊರಕೇರಿ ನಲವಡಿ ಶ್ರೀಕಂಠಶಾಸ್ತ್ರಿ ಸ್ಮಾರಕ ಪ್ರತಿಷ್ಠಾನ, ನಲವಡಿ. ಪ್ರ-೧೯೯೧

೩೧) 'ಮಹಾಮಹಿಮ ಸದ್ಗುರು ಆರ್ಢಾಳ ಶ್ರೀ ರುದ್ರಸ್ವಾಮಿಗಳ ಚರಿತಾಮೃತಂ', ಲೇ-ಪಂ.ವೀರಬಸವ ಶಾಸ್ತ್ರಿಗಳು, ಶ್ರೀ ರುದ್ರಸ್ವಾಮಿಗಳವರ ಪುರಾಣ ಸಮಿತಿ, ಆರ್ಢಾಳ ಹಾಗೂ ಹೇರೂರ ಸದ್ಭಕ್ತ ಮಂಡಳಿ, ಪ್ರ-೧೯೮೩

೩೨) 'ಅರವತ್ತರ ಐಸಿರಿ', ಪ್ರಗತಿಶೀಲ ಯುವಕಸಂಘ, ಗದಗ-ಬೆಟಗೇರಿ, ೧೯೭೪.

೩೩) 'ಅಷ್ಟಕಗಳು', ಸಂ-ಭೋಜರಾಜ ಪಾಟೀಲ,ಶಿವಬಸವ ಪ್ರಕಾಶನ, ಹಾವೇರಿ. ಪ್ರ-೧೯೭೩

೩೪) 'ಎನ್. ಜಿ. ಜಾಡಗೌಡರ, ಜೀವನ ಹಾಗೂ ಸಾಹಿತ್ಯ', ಲೇ-ಡಾ. ರಾಜೇಂದ್ರ ಎಸ್. ಗಡಾದ,
ಸಂಗಮ ಪ್ರಕಾಶನ, ಗದಗ. ಪ್ರ-೨೦೦೬

೩೫) 'ಶಾಸನಗಳಲ್ಲಿ ಶಿವಶರಣರು', ಲೇ- ಡಾ.ಎಂ.ಎಂ. ಕಲಬುರ್ಗಿ,ವೀರಶೈವ ಅಧ್ಯಯನ ಸಂಸ್ಥೆ,
ಶ್ರೀ ತೋಂಟದಾರ್ಯ ಸಂಸ್ಥಾನಮಠ, ಡಂಬಳ-ಗದಗ

೩೬) 'ಅಖಿಲ ಭಾರತ ವೀರಶೈವ ಮಹಾಸಭೆಯ ಅಧ್ಯಕ್ಷರುಗಳ ಭಾಷಣ ಸಂಗ್ರಹ ಗ್ರಂಥ',
ಪ್ರ-ಕೆ.ಎಂ.ಶಿವಲಿಂಗಯ್ಯ, ಪ್ರಧಾನ ಕಾರ್ಯದರ್ಶಿ, ೨೦ನೆಯ ಮಹಾಧಿವೇಶನ ಸ್ವಾಗತ ಸಮಿತಿ,
ಅಖಿಲ ಭಾರತ ವೀರಶೈವ ಮಹಾಸಭೆಯ ೨೦ನೆಯ ಮಹಾಧಿವೇಶನ ಸ್ವಾಗತ ಸಮಿತಿ, ಮೈಸೂರು

೩೭) 'ಸಾಹಿತ್ಯಸಂಬಂಧ' ವಿಮರ್ಶಾತ್ಮಕ ಲೇಖನಗಳ ಸಂಗ್ರಹ, ಲೇ-ಗುರುಲಿಂಗ ಕಾಪಸೆ, ಸುಂದರ ಪ್ರಕಾಶನ,
ಧಾರವಾಡ. ಪ್ರ- ೧೯೮೮

೩೮) 'ಸಮೀಕ್ಷೆ', ಸ್ಮರಣ ಸಂಪುಟ, ಸಂ- ಚಂದ್ರಶೇಖರ ವಸ್ತ್ರದ, ಸ್ವಾಗತ ಸಮಿತಿ, ಅಖಿಲ ಭಾರತ ೭೬ನೆಯ
ಕನ್ನಡ ಸಹಿತ್ಯ ಸಮ್ಮೇಳನ, ಗದಗ ಜಿಲ್ಲಾ ಸಾಹಿತ್ಯ ಪರಿಷತ್ತು, ಗದಗ ಪ್ರ-೨೦೦೦.

೩೯) 'ಸಾವಿರ ಶಿವಾನುಭವ', ವೀರಶೈವ ಪ್ರಗತಿಶೀಲ ಯುವಕ ಸಂಘ, ಗದಗ-ಬೆಟಗೇರಿ
ಶ್ರೀ ತೋಂಟದಾರ್ಯ ಸಂಸ್ಥಾನಮಠ, ಡಂಬಳ-ಗದಗ

೪೦) 'ಶಿವಾನುಭವ ರಜತ ಸಂಪುಟ-೧೯೯', ವೀರಶೈವ ಪ್ರಗತಿಶೀಲ ಯುವಕ ಸಂಘ, ಗದಗ-ಬೆಟಗೇರಿ
ಶ್ರೀ ತೋಂಟದಾರ್ಯ ಸಂಸ್ಥಾನಮಠ, ಡಂಬಳ-ಗದಗ, ಸಂ- ಶ್ರೀ ಎಚ್.ವಿ.ಶಾನಭೋಗರ, ಪ್ರ- ೧೯೯

೪೧) 'ನಾಟಕಗಳು', ಕಾಲಕಾಲೇಶ್ವರ ಲೀಲೆ, ಚೆನ್ನಮ್ಮನ ದಂಡಿ, ಗಂಗೆ ಬಂದಳು ಶಿವನ ಜಡೆಗೆ,
ಮಹಾಸತಿ ಅನುಸೂಯಾ, ಶರಣೆ ಶ್ರೀ ದಾನಮ್ಮದೇವಿ ಲೇ-ಶ್ರೀಮತಿ ರತ್ನಾ ಎಸ್. ಅಂಗಡಿ,
ಶಿವಯೋಗಿ ಪ್ರಕಾಶನ, ಧಾರವಾಡ, ಪ-೨೦೦೯

೪೨) 'ಕನ್ನಡ ಲಾವಣಿಗಳು' ಡಾ. ಶ್ರೀಕಂಠ ಕೂಡಿಗೆ, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾಲಯ,೧೯೯.

೪೩) 'ಜೀವನ ಜೋಕಾಲಿ', ಸಂ-ಡಾ. ಎಂ.ಎಸ್.ಸುಂಕಾಪುರ, ಕ.ವಿ.ವಿ, ಧಾರವಾಡ, ೧೯೭೪

೪೪) ಶ್ರೀ ಕಿರೀಟೇಶ್ವರ ಪುರಾಣ, ಸಂ- ಡಾ. ವಿ.ಶಿವಾನಂದ, ಜಗದ್ಗುರು ಕಿರಿಟೇಶ್ವರ ಗ್ರಂಥ ಪ್ರಕಾಶನ, ೧೯೬

೪೫) 'ಶ್ರೀ ಬಾಲಲೀಲಾ ಮಹಾಂತೇಶ್ವರ ಪುರಾಣ', ಚೆನ್ನಕವಿಗಳು,

ಶ್ರೀ ಬಾಲಲೀಲಾ ಮಹಾಂತ ಶಿವಯೋಗಿಶ್ವರ ಗ್ರಂಥಮಾಲೆ-೫, ೧೯೪೭

೪೬) 'ಹಾಲಕೆರೆಯ ಶ್ರೀ ಅನ್ನದಾನೀಶ್ವರ ಮಹಾಪುರಾಣ ಪದ್ಯಾನುವಾದ',

ಅನುವಾದಕರು : ಡಾ. ಅಭಿನವ ಕುಮಾರಸ್ವಾಮಿಗಳು, ಡಾ.ಎಸ್. ಶಿವಾನಂದ, ಶ್ರೀ ಅನ್ನದಾನೀಶ್ವರ

ವಿದ್ಯಾವರ್ತಕ ಸಂಘ, ಗದಗ, ೨೦೧೧.

೪೭) 'ಶ್ರೀ ಬೂದೀಶ್ವರರ ಮಹಾಪುರಾಣ', ಲೇ-ಲಿಂ. ಖಾನಯ್ಯನವರು ಹಿರೇಮಠ, ಚಿಕೇನಕೊಪ್ಪ,

ಶ್ರೀ ಬೂದೀಶ್ವರ ಗ್ರಂಥ ಪ್ರಕಾಶನ, ಹೊಸಹಳ್ಳಿ ಪ್ರ-೨೦೦೭

೪೮) 'ಹಠಯೋಗಿ ಶ್ರೀ ವೀರಪ್ಪಜ್ಜನವರ ಪುರಾಣ', ಲೇ-ಶ್ರೀ ಕುಮಾರದೇವರು ಬೂದಿಸ್ವಾಮಿ ಹಿರೇಮಠ,

ಅಂತೂರ-ಬೆಂತೂರ, ಶ್ರೀ ಹಠಯೋಗಿ ಸಾಹಿತ್ಯ ಪ್ರಕಾಶನ, ನರೇಗಲ್ಲ, ಪ್ರ-೨೦೦೮.

೪೯) 'ರಜಕ ರತ್ನ ಮಾಚಿತಂದೆ', ಜ.ಚ.ನಿ, ಶ್ರೀಶೈಲ ಜಗದ್ಗುರು ನಿಡುಮಾಮಿಡಿ ಪುಸ್ತಕ ಭಂಡಾರ,

ಬೆಂಗಳೂರು, ೧೯೭೦

೫೦) ವೀರಶೈವ ಧರ್ಮ: ಭಾರತೀಯ ಸಂಸ್ಕೃತಿ, ಡಾ. ಎಂ. ಚಿದಾನಂದಮೂರ್ತಿ, ಮಿಂಚು ಪ್ರಕಾಶನ,

ಬೆಂಗಳೂರು, ೨೦೦೦.

೫೧)'ನಿರುಪಮ ಜ್ಞಾನೈಕ ನಿಧಿ ಮಡಿವಳ ಮಾಚಿತಂದೆ', ಪಂ. ಬಿ.ನಂಜುಂಡಯ್ಯ,

ಕರ್ನಾಟಕ ಸಾಹಿತ್ಯ ವಿಶಾರದ ತಿಪಟೂರು, ೧೯೭೩.

೫೨)'ವೀರಶೈವದ ಹುಟ್ಟು ಬೆಳವಣಿಗೆ', ಪ್ರೋ ಸಿ.ಸಿ.ಬಸವನಾಳ, ಸಾಹಿತ್ಯ ಸಮಿತಿ,

ಲಿಂಗಾಯತ ವಿಧ್ಯಾಭಿವೃದ್ಧಿ ಸಂಸ್ಥೆ, ಧಾರವಾಡ, ೧೯೭೭

೪೩)'ಅನುಭಾವಿಗಳ ಕ್ರಾಂತಿ', ವೀರಶೈವ ಅಧ್ಯಯನ ಸಂಸ್ಥೆ,

ಶ್ರೀ ಜಗದ್ಗರು ತೋಂಟದಾರ್ಯ ಸಂಸ್ಥಾನಮಠ, ಡಂಬಳ-ಗದಗ, ೧೯೯೯.

೪೪) 'ಶಿವಾನುಭವ ಪತ್ರಿಕೆ', ಸಂ-ಫ.ಗು.ಹಳಕಟ್ಟಿ ಮತ್ತು ಎಂ.ಎಂ. ಕಲಬುರ್ಗಿ,

ವೀರಶೈವ ಅಧ್ಯಯನ ಅಕಾಡೆಮಿ, ಶ್ರೀ ನಾಗನೂರು ರುದ್ರಾಕ್ಷಿ ಮಠ, ಬೆಳಗಾವಿ.

೫೫) ಕರ್ನಾಟಕ ಲಿಂಗಾಯತ ಎಜ್ಯುಕೇಶನ್ ಸೊಸಾಯಿಟಿ ಬೆಳಗಾವಿ ಮತ್ತು ಇದರ
ಶಿಕ್ಷಣ ಸಂಸ್ಥೆಗಳು-ಪ್ರಕಾಶಕರು : ವಿ.ವಿ.ಪಾಟೀಲ

೫೬)'ಭೀಮ ಕವಿಯ ಬಸವ ಪುರಾಣ', ಸಂ-ಡಾ. ಎಸ್. ವಿದ್ಯಾಶಂಕರ, ಹಂಪಿ ನಗರ, ಬೆಂಗಳೂರು, ೨೦೦೮.

೫೭) 'ಸೆಂಟ್ರಲ್ ಸ್ಕೂಲ್ ಶತಮಾನೋತ್ಸವ' ಸ್ಮರಣ ಸಂಚಿಕೆ.

೫೮) ವೀರಶೈವ ಅಧ್ಯಯನ ಸಂಸ್ಥೆಯ- ಜ. ತೋಂಟದಾರ್ಯ ಸಂಸ್ಥಾನಮಠ, ಗದಗ
ವೀರಶೈವ ಪುಣ್ಯಪುರುಷ ಸಾಹಿತ್ಯ ರತ್ನಮಾಲೆಯ ಕೃತಿಗಳು.

೧) ಹಾನಗಲ್ಲ ಕುಮಾರ ಶಿವಯೋಗಿಗಳು- ಲೇ. ಡಾ.ಜ.ಚ.ನಿ-೧೯೮೧

೨) ಶ್ರೀ ಹಾನಗಲ್ಲ ನಮ್ಮ ಗುರು ಕುಮಾರ ಶಿವಯೋಗಿಗಳು-ಲೇ. ಪಂ.ಪುಟ್ಟರಾಜ ಗವಾಯಿಗಳು,ಪ್ರ-೧೯೭೩

೩) ಸಿರಸಂಗಿ ಲಿಂಗರಾಜರು- ಲೇ. ಡಾ.ದೇವೇಂದ್ರಕುಮಾರ ಹಕಾರಿ

೪) ಅರಟಾಳರುದ್ರಗೌಡರು- ಲೇ.ಎಸ್.ಎಂ.ಅಂಗಡಿ

೫) ಕುಬಸದ ಶಿವಪ್ಪನವರು-ಲೇ. ಜ್ಞಾನದೇವ ದೊಡ್ಡಮೇಟಿ, ಪ್ರ-೧೯೯೭

೬) ನಾಗಭೂಷಣ ಶಾಸ್ತ್ರಿಗಳು-ಲೇ. ಎಚ್.ಎಸ್.ಪಾಟೀಲ

೭) ಮೃತ್ಯುಂಜಯಪ್ಪಗಳು ಲೇ-ಡಾ.ಆರ್.ಸಿ.ಹಿರೇಮಠ

೮) ಮುರಗೋಡ ಮಹಾಂತ ಶಿವಯೋಗಿಗಳು-ಲೇ. ಸಂಗಮೇಶ ಸವದತ್ತಿಮಠ, ೧೯೮೧

೯) ಬಸರಿಗಿಡದ ವೀರಪ್ಪನವರು-ಶಾಂರತಸ, ೨೦೦೦

೧೦) ಪಂ.ವೈ ನಾಗೇಶಶಾಸ್ತ್ರಿಗಳು

೫೯) ಬಸವಪಥ ಸಂಚಿಕೆ : ಸಪ್ಟೆಂಬರ ೧೯೮, ಫೆಬ್ರವರಿ ೧೯೮೯, ಜೂನ್ ೧೯೯೨, ಮಾರ್ಚ ೧೯೯೩,
ಜುಲೈ ೧೯೯೩, ಅಗಷ್ಟ ೧೯೯೪, ಅಗಷ್ಟ ೧೯೯೫, ಮಾರ್ಚ ೧೯೯೭

ಕರ್ನಾಟಕ ಭಾರತಿ : ಸ್ವಾತಂತ್ರ್ಯೋತ್ಸವ ಸಂಚಿಕೆ ೧೯೭೮

**ಪತ್ರಿಕೆಗಳು :**

ಸಾವಧಾನ,ಶಿವಾನುಭವ ಪತ್ರಿಕೆ, ನವೋದಯ, ನಾಗರಿಕ, ಕಿತ್ತೂರ ಕರ್ನಾಟಕ

ಶರಣಕವಿ ಅಂಗಡಿ ಕರವೀರಪ್ಪನವರಿಂದ ವಿರಚಿತ

## ಬಸವೇಶ್ವರಾಷ್ಟಕಂ

ಶಿವಪೂಜಾರತ ಮೋದಹಸ್ತಯುಗತಾಂ ಕ್ಷೇತ್ರಾಶೆಯಿಂ ಪಾದವುಂ ।
ಶಿವಸಂದರ್ಶನ ತೃಪ್ತನೇತ್ರ, ಹೃದಯಂ ಪಂಚಾಕ್ಷರಾಮೋದದಿಂ ॥
ಶಿವಶಬ್ದಾಮೃತ ಲೋಲಕರ್ಣ, ಶಿರವುಂ ಭಕ್ತಾಳಿ ಸಂಸೇವೆಯಿಂ ।
ತವೆ ನಿನ್ನಂಗಗಳಿರ್ಪುವಯ್ಯ ಬಸವ ನೀಂ ರಕ್ಷಿಸೈ ಭಕ್ತರಾ ! ॥1॥

ಗುರುಸೇವಾತನು ಲಿಂಗಭಕ್ತಿಮನವುಂ ಮಾಹೇಶ್ವರಪ್ರೀತಿಗಂ ।
ಗುರುಸಂಪದ್ವಿನಿಯೋಗ, ಪಾದಜಲದಿಂ ಮೇಣ್ ಸುಪ್ರಸಾದಾಶೆಯಿಂ ॥
ಸ್ಮರಿಸುತ್ತಂ ಶಿವಮಂತ್ರ ಮೂಲವಿಭವಂ ಭಸ್ಮಾಂಕ ಫಾಲೋತ್ತಮಂ ।
ವರರುದ್ರಾಕ್ಷಿಯ ಮಾಲೆಯಾಂತ ಬಸವ ನೀಂ ರಕ್ಷಿಸೈ ಭಕ್ತರಾ ! ॥2॥

ಶಿವಧರ್ಮೋನ್ನತಿಗಾಗಿ ಮೃತ್ಯುಭುವನಂ ಸಾರ್ದುತ್ತಮಾಪೇಕ್ಷೆಯಿಂ ।
ಭವಬಾಧಾಹರ ವೀರಶೈವ ವಿಧಿಯಂ ತಾಳ್ದೆಲ್ಲ ಧರ್ಮಾಂಗವಂ ॥
ಸವಿಸುತ್ತಂ ತವಬೋಧದಿಂದೆ ಜನವಂ ಸನ್ಮಾರ್ಗಸಾಚಾರದೊಳ್ ॥
ನವವಿಸ್ಫೂರ್ತಿತರನ್ನು ಗೈದಬಸವ ನೀಂ ರಕ್ಷಿಸೈ ಭಕ್ತರಾ ! ॥3॥

ನೃಪಚಾಲುಕ್ಯನ ಮಂತ್ರಿ ಕಾರ್ಯಭರಮಂ ಶೀರ್ಷಾಗ್ರದೊಳ್ ತಾಳುತುಂ ।
ಕೃಪೆಯಿಂದಂ ಪೊರೆಯುತ್ತ ಸರ್ವಜನವಂ ಸಾನಂದ ಸಾಮ್ರಾಜ್ಯದೊಳ್ ॥
ತಪವಂಗೈಯಲು ರಾಜನೀತಿ ಪಥವಂ ಸದ್ಧಾರ್ಮಿಕಾಮೋದವಂ ।
ನೃಪಗಂ ಮೇಣ್ ಜನತಾಳಿಗಿತ್ತ ಬಸವ ನೀಂ ರಕ್ಷಿಸೈ ಭಕ್ತರಾ ! ॥4॥

ತಿಳಿದೆಲ್ಲರ್ ತಮಗಾಗಿ ಹತ್ತಿ ಬೆಳೆಯಿಂ ನೂಲುತ್ತೆ ವಸ್ತ್ರಂಗಳಂ ।
ನಲಿಯುತ್ತಂ ತೆಗೆದೆಲ್ಲ ಕಾಳುಕಡಿಯಿಂ ನುಣ್ಣಿಣ್ಣಮೇಲಾಟದಿಂ ।
ಬಲುಪೊಕ್ಕಟ್ಟಿನ ಕಾರ್ಯಕಾಗಿ ಧನವಂ ಈಯಲ್ ಸ್ವದೇಶೇಳ್ಗೆಯುಂ ।
ತಿಳಿ ನೀವೆಂದುರೆ ಸಾರಿಪೇಳ್ದ ಬಸವ ನೀಂ ರಕ್ಷಿಸೈ ಭಕ್ತರಾ ! ॥5॥

ವರವೇದಾಗಮ ಶಾಸ್ತ್ರಸಾರ ಸುಖದೊಳ್ ನೀಂ ತೃಪ್ತಿಗೊಂಡಿರ್ದೊಡಂ ।
ಧರೆಯೆಲ್ಲಂ ಘನಮೋದದಿಂದಲರಿಯಲ್ ವೇದಾಂತ ತತ್ವಾರ್ಥವ ॥
ನ್ನುರೆ ಕರ್ನಾಟಕ ಭಾಷೆಯಲ್ಲಿ ಒಸೆದೀಯಲ್ ಮಾತೃಭಾಷಾಪ್ರವೀ ।
ಣರ ತೇಜೋ ರವಿಯಾದೆ ನೀಂ ಬಸವ ಸಂರಕ್ಷಿಸೈ ಭಕ್ತರಾ ! ॥6॥
ಪರಿಪೂತಂ ಚಿರಶಾಂತಿ-ದಾತವಿನುತಂ ಸಂತೋಷ ಸಂಪೂರಿತಂ ।
ಸ್ಥಿರಕಾಯಂ ಲಯಮಾಯೆ ಕಾಮವಿಲಯಂ ಸದ್ಭಕ್ತಿಗೇಯಂ ವಲಂ ।
ಹರರೂಪಂ, ಭವತಾಪ ಲೋಪಜನಪಂ ತ್ರೈಲೋಕ್ಯ ಸಂಶೋಭಿಪಂ ।
ಗುರುನಾಥಂ ಬುಧಲೋಕ ಶಾಂತ ಬಸವ ನೀಂ ರಕ್ಷಿಸೈ ಭಕ್ತರಾ ! ॥7॥

ಭವನಾಶಂ ಶಿವಭಕ್ತಿ ಕೋಶನನಿಶಂ ಹೃನ್ನ್ಯಸ್ತ ಶೈವಾಕ್ಷರಂ ।
ನವನೀತಂ ಘನಮೋದ ಚಾರುಚರಿತಂ ಶ್ರೀಲೋಲ ಸಂಕೀರ್ತಿತಂ ।
ಶಿವಲೋಲಂ ಸದಮೋಘಕೀರ್ತಿಧವಲಂ ಷಡ್ವರ್ಗಶೂಲಂ ವಲಂ ।
ಧ್ರುವರೂಪಂ ಪರಿತಾಪಚಾಪ ಬಸವ ನೀಂ ರಕ್ಷಿಸೈ ಭಕ್ತರಾ ! ॥8॥

ಬಸವತನಯ

# ಬಸವೇಶ್ವರಾಷ್ಟಕಂ : 2

ಧರ್ಮಗ್ಲಾನಿರಮೋಘಭಕ್ತಿ ಸುಖಸಾಮ್ರಾಜ್ಯೇ ವಿವೇಕಾದಿ ಸಂ ।
ಸ್ತುತ್ಯಾಚಾರ ವಿಯೋಗ ವೃತ್ತಿರಖಿಲಾಲಸ್ಯಾವಿವೇಕಂ ಚದು ।
ಪಾಪಾತ್ಮಾನಾಂ ಗತಿರುದ್ಭವಸ್ಯ ಸಮಯೇ ಧರ್ಮಾವತಾರಪ್ರಭೋ ।
ಶ್ರೀಮತ್‌ಷಟ್‌ಸ್ಥಲಸಾರ ವೀರಬಸವ ಮಾಂ ಪಾಹಿರೇ ಸರ್ವದಾ ॥1॥

ಮಾದಾಂಬಾವರ ಗರ್ಭಪೂತ ಕರಣಂ ವಿದ್ಯಾವಿಚಾರಪ್ರಭುಂ ।
ಶ್ರೀಮನ್‌ಮಾದರಸಸ್ಯ ವಂಶತಿಲಕಂ ಹೃನ್ನ್ಯಸ್ತ ಶೈವಾಕ್ಷರಂ ।
ಲಿಂಗೀಧರ್ಮ ವಿತಾನಶಾಸ್ತ್ರವಿಬುಧಂ ಶೈವಾಬ್ಧಿಚಂದ್ರೋದಯಂ ।
ಶ್ರೀಮತ್‌ಷಟ್‌ಸ್ಥಲಸಾರ ವೀರಬಸವಂ ವಂದೇ ಸದಾಹಂ ವಿಭುಂ ॥2॥

ಸೇವಾಧರ್ಮರತಂ ಗುರೌ ವಿನಯಭಕ್ತಿರ್ಲಿಂಗ ವಿನ್ಯಸ್ತಹೃತ್ ।
ಭವ್ಯಾಂಗಂ ಶಿವಯೋಗ ಜಂಗಮಪದೇ ದ್ರವ್ಯವ್ಯಯೇ ಭಾಸುರಂ ।
ದಿವ್ಯಜ್ಞಾನ ಪದೇಷು ನಿತ್ಯಗಮನಂ ಧರ್ಮಾಂಬರಾಚ್ಛಾದನಂ ।
ಶ್ರೀಮತ್‌ಷಟ್‌ಸ್ಥಲಸಾರ ವೀರ ಬಸವಂ ವಂದೇ ಸದಾಹಂ ವಿಭುಂ ॥3॥

ವಾಚ್ಯೇಸಜ್ಜನ ಕೀರ್ತನಂ ಪ್ರತಿದಿನಂ ನೇತ್ರೇಚಸಂದರ್ಶನಂ ।
ಜಿಹ್ವೇ ಶ್ರೀ ಶಿವನಾಮಧಾಮಪಠಣಂ ಕರ್ಣೇಚ ಶೈವಧ್ವನಿಂ ।
ಘ್ರಾಣೇ ಶ್ರೀಶಿವಪಾದ ಪುಷ್ಪವಿಲಸತ್ ಗಂಧಂ ಚ ಸಂಪೂರಿತಂ ।
ಶ್ರೀಮತ್‌ಷಟ್‌ಸ್ಥಲಸಾರ ವೀರ ಬಸವಂ ವಂದೇ ಸದಾಹಂ ವಿಭುಂ ॥4॥

ಯೋಗಾಂಗಂ ಗುರುಲಿಂಗ ಜಂಗಮ ವಿಭೂನಾಂ ದ್ಯೋತಮಾರ್ಗೇಸದಾ ।
ತ್ಯಾಗಾಂಗಂ ವರಭೂತಿಮಂತ್ರ ಗಿರೀಶಾಕ್ಷಿಣಾಂ ವಿನೂತ್ನೇಪಥೇ ।
ಭೋಗಾಂಗಂ ಪರಮಪ್ರಸಾದ ವಿಮಲಶ್ರೀಪಾದ ಪೂತೋದಕೇ ।
ಶ್ರೀಮತ್‌ಷಟ್‌ಸ್ಥಲಸಾರ ವೀರ ಬಸವಂ ವಂದೇ ಸದಾಹಂ ವಿಭುಂ ॥5॥

ತ್ರೈಪುಂಢ್ರಾಣಿಚ ಮಂತ್ರಪೂತ ಭಸಿತಾನಿ ಶ್ರೀ ಲಲಾಟಸ್ಥಲೇ ।
ರುದ್ರಾಕ್ಷಂ ವಿಲಸತ್‌ಸೃಜಂಚ ಶಿವಚಿಲ್ಲಿಂಗಂ ಸುಕಂಠಸ್ಥಲೇ ।
ಸರ್ವಾಂಗೇ ಕಮನೀಯವಿಶ್ರುತ ಗುಣಾನಾಂಸಂಘಮಾಲಾಧೃತಂ ।
ಶ್ರೀಮತ್‌ಷಟ್‌ಸ್ಥಲಸಾರ ವೀರ ಬಸವಂ ವಂದೇ ಸದಾಹಂ ವಿಭುಂ ॥6॥

ಪಂಚಾಚಾರ ಸುಯೋಗ ಭೋಗನಿರತಂ ಮಾಹೇಶ್ವರಾಚ್ಛಾದನಂ ।
ಶ್ರೇಷ್ಠಾಷ್ಟಾವರಣಾಂಗಲಿಂಗ ವಿಭವಂ ಭಕ್ತ್ಯಾಗುರೋಃ ಸೇವಕಂ ।
ಚೇಷ್ಟಪ್ರಾಣ ಸುಭಾವಲಿಂಗ ಸುಖಸಂಪತ್ ಲೋಲ ಚಿನ್ಮಂದಿರಂ ।
ಶ್ರೀಮತ್‌ಷಟ್‌ಸ್ಥಲಸಾರ ವೀರ ಬಸವಂ ವಂದೇ ಸದಾಹಂ ವಿಭುಂ ॥7॥

ಪಾಪಧ್ವಾಂತ ದಿವಾಕರಂಚ ಭವತಃ ತತ್ವೇಽರಿಣಾಮಂತಕಂ ।
ಭಾಷಾದೇಶ ಸುಸೇವ್ಯಭಾವ ನಿರತಾನಾಮಗ್ರಗಣ್ಯಂ ಸದಾ ।
ಸದ್ಧರ್ಮೇಚರ ಸಂತಸಂಘ ವಲಯಂ ನಾಸ್ತಿತ್ವಸಂಹಾರಕಂ ।
ಶ್ರೀಮತ್‌ಷಟ್‌ಸ್ಥಲಸಾರ ವೀರ ಬಸವಂ ವಂದೇ ಸದಾಹಂ ವಿಭುಂ ॥8॥

ಲಿಂಗೀಧರ್ಮ ವಿಶಿಷ್ಟ ವಂಶಪದ ಸಂಭೂತೇನ ಸದ್ಧರ್ಮಸಂ ।
ಸ್ತುತ್ಯಾಚಾರ ಧುರೀಣ ಪಿತೃ ಬಸವಾನಂದಾಬ್ಧಿ ಚಂದ್ರೇಣ ಭಾ ॥
ಸ್ವನ್ಮಾರ್ಗೇ ರಮಮಾಣ ಪುತ್ರಕರವೀರೇಣಪ್ರಣೀತಾಷ್ಟಕಂ ।
ಶ್ರೀಮತ್‌ಷಟ್‌ಸ್ಥಲಸಾರ ವೀರ ಬಸವಾಚಾರ್ಯಾಯ ಭಕ್ತ್ಯಾರ್ಪಿತಂ ॥

ಈ ಅಷ್ಟಕವನ್ನು ದಿನಾಲು ಉದಯಾಸ್ತ ಸಮಯದಲ್ಲಿ ಪಠಣ ಮಾಡಿದವರಿಗೆ ಸಕಲ ಸೌಖ್ಯಂಗಳು ಲಭಿಸುವವು.

ಪ್ರಕಟಣೆ : ಹರ್ಷ ಗ್ರಾಫಿಕ್ಸ್, ಗದಗ-582 101





ಧಾರವಾಡ ಮೃತ್ಯುಂಜಯ ನಗರದ ಶ್ರೀ ಮುರುಘಾಮಠದಲ್ಲಿ ದಿನಾಂಕ ೧೪—೨—೧೯೬೭ ನೆಯ ಮಂಗಳವಾರ ನಡೆಯಲಿರುವ ಶ್ರೀಮದಥಣೀ **ಶಿವಯೋಗಿ**ಗಳವರ

**ರಥೋತ್ಸವ ಸುಪ್ರಸಂಗದಲ್ಲಿ**

## ಶ್ರೀ. ನಿ. ಪ್ರ. ಸ್ವ. ಲಿಂಗೈಕ್ಯ ಮೃತ್ಯುಂಜಯ ಮಹಾಸ್ವಾಮಿಗಳ ನೆನೆದು

**“ಮೃತ್ಯುಂಜಯನ ಪೊತ್ತ ತೇರು ಸಾಗುತಿದೆ”**

ಎಂಬ **ಅಷ್ಟಕವು**

ತೇರು ಸಾಗುತಿದೆ ಶ್ರೀಮದಥಣೀ ಶಿವಯೋಗಿ
ಚಾರು ಮುರುಘೇಂದ್ರ ಶಿವಭಕ್ತಿರಸಮಯ ಯೋಗಿ ||ತೇರು||

**ಚರಸಾರ್ವಭೌಮ** ಚಿನ್ಮಲಾದ್ರಿನಾಥನಾ
ವರಕೃಪಾಲಯದೊಳು ಶ್ರೀಮದಥಣೀಯೋಗಿ
ಪರಜಂಗಮಾರ್ಯನಾಶೀರ್ವಾದ **ಮೊತ್ತ**ದಿಂ
ಗುರುತನವ ಪೊತ್ತಾತ ಮೃತ್ಯುಂಜಯನ ಪೊತ್ತ....೧

**ಕಿರಿದೆಲ್ಲ** ಕಡೆಯಿಂದೆ ತಂದು ಕಡುಬಡವರನು
ಕರೆತಂದು ಲಿಂಗವಜ್ಞನ ಮಾಡಿಸುಣಿಸುತ್ತೆ
ಪರಮ ದಾಸೋಹ ಭಾವದ ಸಿಲವಿನೊಳು ನಿಲಿಸಿ.
**ಗರುವರರ** [illegible] ಮೃತ್ಯುಂಜಯನ ಪೊತ್ತ....೨

ಮರ್ತ್ಯಕ್ಕೆ ಮೈಗೊಟ್ಟ ಹಾವೇರಿ ಪೇಟೆಯದು
ವ್ಯರ್ಥವಾ ಸಣ್ಣಾಗಿ ಮಣ್ಣಾಗಿ ಕೆಡದಂತೆ
ಭೃತ್ಯಭಾವವತಳೆದು ಜ್ಞಾನದಾಗರದ
**ಕರ್ತೃಪದ**ದೆಡಕಿಟ್ಟ ಮೃತ್ಯುಂಜಯನ ಪೊತ್ತ ...೩

ಶಿವಶರಣ ತತ್ವಪ್ರಕಾಶ ಪ್ರಭಾಕರನು
ಶಿವಮಂಗಲ ರವಕಾನಂದ ಹೃಚ್ಚಂದಿರನು
ಶಿವಸಂಕಥಾಲಾಪ ಸಂತೃಪ್ತ ಮತಿಯುತನು
ಇವನೀ ಶಿವಾನುಭವಿ ಮೃತ್ಯುಂಜಯನ ಪೊತ್ತ....೪

ಅನುಭಾವಿಗಳ ತತ್ವಸಂದೇಶ ವಾಹಕನು
ಚಿನುಮಯಾತ್ಮಕ ಲಿಂಗತನುತಾನಾದವನು
ಘನಮಹಿಮರೆಲ್ಲರ್ಗೆ ತಾ ಪ್ರಸನ್ನಂದಿರನು
ದಿನವಿಡೀ ಸ್ತೋತ್ರಾರ್ಹ ಮೃತ್ಯುಂಜಯನ ಪೊತ್ತ ....೫

ಕನ್ನಡವು ಈ ಜಗದ ತತ್ವಗಳ ಖನಿಯಿಹುದು
ಕನ್ನಡಕೆ ಕನ್ನಡಿಯು ಶರಣ ವಚನಾಮೃತವು
**ತನ್ನವರ** ಗ್ರಂಥಗಳ ಶೋಧಿಸಲು ಹಚ್ಚಿದನು
ನನ್ನಿಯಿಂದೀ ಮಹಿಮ ಮೃತ್ಯುಂಜಯನ ಪೊತ್ತ...೬

ನೆಲಸಿದ**ಪುರಾತನರ ಮಂದಿರದ** ಮಧ್ಯದೊಳು
ನಲವಿನಾ ಮೃತ್ಯುಂಜಯಪ್ಪನ **ಸೂಕ್ಷ್ಮಾಂಗ**
ಚೆಲುವಿನಾ ಚಿಲ್ಲಿಂಗ ಮುರುಘೇಂದ್ರ ಸೇವೆಯನು
ಒಲವಿಂದ ಮಾಡುತಿಹ ಮೃತ್ಯುಂಜಯನ ಪೊತ್ತ....೭

ಪರಮಗುರು ತಾನಯ್ಯ ಬಸವಣ್ಣನವತಾರ
ಹರಸನುಯ ಚಂದ್ರಿಕಾನಂದಮಯ ಸಂಸಾರ
ಚಿರಸುಖಾಪೇಕ್ಷಿತ ಸುಭಕ್ತಜನ ಮಂದಾರ
ಕರಸೇರಸಿಟ್ಟಿಹ ಮೃತ್ಯುಂಜಯನ ಪೊತ್ತ....೮

**ಅಡಿ ಟಿಪ್ಪಣಿ:** ಚರಸಾರ್ವಭೌಮ–ಚಿತ್ರದುರ್ಗದ ಜಗದ್ಗುರು; ಮೊತ್ತ-ಧನ; ಕಿರಿದು-ಭಿಕ್ಷೆಬೇಡಿ; ಸಿಲವು–ಬೋರ್ಡಿಂಗು; ಗರುವರರ-ಪದವೀಧರರ, ಕೀರ್ತಿಪರರ; ಕರ್ತೃಪದ-ಕಮ್ಮಟಶಾಲೆ; ತನ್ನವರ–ಶರಣರ; ಪುರಾತನರ ಮಂದಿರ–೬೩ ಪುರಾತನರ ಹೆಸರಿನ ವಿದ್ಯಾರ್ಥಿಗಳ ಕೋಣೆ; ಸೂಕ್ಷ್ಮಾಂಗ–ಲಿಂಗತನು (ಗದ್ದುಗೆ); ಕರಸೇರ-ಅಷ್ಟಕ ಕರ್ತೃ, ಬೋರ್ಡಿಂಗಿನ ಹಳೆಯ ವಿದ್ಯಾರ್ಥಿ.

ಶಿವಯೋಗಿ ಕೃಪಾಪಾತ್ರರು,
**ಗದುಗಿನ ಅಂಗಡಿ ಕರವೀರಪ್ಪ ಮತ್ತು ಅವರ**
**ಪುತ್ರ-ಪೌತ್ರರು.**

ಕ.ಬ.ಅಂಗಡಿಯವರು ರಚಿಸಿದ ಅಷ್ಟಕ

|| ಶ್ರೀ ಗುರುವಿಗೆ ಶರಣು ||





ಧಾರವಾಡ ಜಿಲ್ಲೆಯ ಹಾವೇರಿ ಹುಕ್ಕೇರಿ ಮಠದ ಶ್ರೀ ಬಸವ ಶಿವಾನುಭವ ಮಂಟಪದಲ್ಲಿ ನಡೆದ

# ' ಶ್ರೀ ಬಸವ ಮಹಾಪುರಾಣದ '

೨೧—೧—೧೯೬೬ ನೆಯ ಶನಿವಾರ ದಿನ ನಡೆದ ಮಂಗಲ ಮಹೋತ್ಸವದ ಸ್ಮಾರಕಕ್ಕಾಗಿ

## ಲಿಂಗೈಕ್ಯ ಶ್ರೀ ನಿ. ಪ್ರ. ಸ್ವ. ಶಿವಬಸವ ಶಿವಯೋಗಿಗಳ ಸ್ಮರಿಸಿ

ಅವರ ಪಾದಾರವಿಂದಕ್ಕೆ ಸಲ್ಲಿಸಿದ ಶರಣಾರ್ಥಿ ಅಷ್ಟಕವು.

ಶಿವಬಸವ ಶಿವಯೋಗಿ ತವಪದಕೆ ಶರಣಾರ್ಥಿ
ಭವರೋಗವೈದ್ಯನವ ಪರಿಹರಿಸು ಸಂದೂರ್ತಿ || ಪ ||

ಶಿವಬಸವ ನೀಬಸವ ಬಸವನೇ ಶಿವಬಸವ
ಶಿವನಿಷ್ಠೆಯೊಳು ಬಸವನಂತಿರ್ಪ ಶಿವಬಸವ
ಶಿವಯೋಗ ನಿದ್ರೆಯೊಳಗನಿಮಿಷನು ಶಿವಬಸವ
ಶಿವಲಿಂಗ ರೂಪದಿಂದಿರ್ಪಂಗೆ ಶರಣಾರ್ಥಿ || ೧ ||

ಅಲ್ಲಮನ ವೈರಾಗ್ಯ ದರ್ಶಕನು ಶಿವಬಸವ
ಬಲ್ಲಿದಗಣಾಚಾರ ನೈಷ್ಠಿಕನು ಶಿವಬಸವ
ಸಲ್ಲಲಿತ ಶಿವತತ್ತ್ವ ಸಂದೀಪ ಶಿವಬಸವ
ಧಾತ್ರಿಯೊಳು ಶರಣಾರ್ಥಿ ತವಪದಕೆ ಶಿವಬಸವ || ೨ ||

ಹಾನಗಲ್ ಶಿವಯೋಗಿ ಕಮ್ಮಟಕೆ ನೀಧುರ್ಯ
ಸ್ವಾನುಭಕ್ತಸ್ತೋಮ ಹೃನ್ಮಂದಿರದ ಸೂರ್ಯ
ಜ್ಞಾನಕ್ರಿಯಾ ಭಕ್ತಿಮಾರ್ಗರತ ಚರವರ್ಯ
ನಿನಗೀ ಶರಣಾರ್ಥಿಯಮ್ಮಯ್ಯ ಗುರುವರ್ಯ || ೩ ||

ತುಂಬಿಹುದು ತವನೈಜ ಶಾಂತಿಯಿಂ ಭಾರತವು
ನಂಬಿಯಾ ಬೆಳಕಿನೊಳು ನಡೆವುದೀ ಕನ್ನಡವು
ತುಂಬಿಹುದದರ ನಡುಗೆ ಹಾವೇರಿ ಪುರಜನವು
ಇಂಬುಗೊಡಲೆಮ್ಮ ಶರಣಾರ್ಥಿಗೆ ತವಪದವು || ೪ ||

ದೊಕ್ಕಿದಾ ಕೋಟಿಯಿಂದೆ ನಿನ್ನನ್ನೆ ಹುಡುಕುತ್ತ
ತಿಕ್ಕಿದದು ಲೋಕಮುಖಿ ಕನ್ನಡಿಗರಾಟುತ್ತ
ಮುಕ್ಕಣ್ಣ ಬಿಲ್ವದದೊಳು ನಿನ್ನದು ವಿರಕ್ತ
ಇಕ್ಕುವೆವು ನಿನ್ನ ಶ್ರೀಪಾದಕ್ಕೆ ಶರಣಾರ್ಥಿ || ೫ ||

ಅಮವು ಆಶುತ್ತಗಳು ಬರಲೊಡನೆ ಜನಕೋಟಿ
ಘನಮಹಿಮ ನೀನೆಂದು ಸಾಷ್ಟಾಂಗವನು ನೀಡಿ
ಮನ (ವಯ) ದಿಂದಲಂಗಾರಬಿಳದು ಸಂತಸಗೂಡಿ
ಧ್ಯಾನಿಪರನೋಡಿ ಶರಣಾರ್ಥಿ ಗೈವೆವು ಪಾಡಿ || ೬ ||

ಹುಕ್ಕೇರಿ ಮಠದಯ್ಯ ನಮ್ಮಯ್ಯ ಶಿವಬಸವ
ಒಕ್ಕುಮಿಕ್ಕುದನು ನೀ ನೀಡಯ್ಯ ಶಿವಬಸವ
ಅಕ್ಕರದ ಆಶಿಷವ ಕೋರುವೆವು ಶಿವಬಸವ
ತಕ್ಕೊಳ್ಳಿ ನಮ್ಮದೀ ಶರಣಾರ್ಥಿ ಶಿವಬಸವ || ೭ ||

ಕರುಣಾರಸ ಸಂಸಾರ ಶರಣಜನ ಮಂದಾರ
ವರವೀರಶೈವಮಠ ಸೌಭಾಗ್ಯವಾಸರ
ಹರಸುಮಾಯ ಚಂದ್ರಿಕಾನಂದ ಸುಖಸಂಸಾರ
ಕರವೀರ ಸಂತತಿಯ ಶರಣಾರ್ಥಿಗಾಧಾರ || ೮ ||

ಅಡಿ ಟಿಪ್ಪಣಿ : ಶಿವಲಿಂಗ– ಈಗಿನ ಸ್ವಾಮಿಗಳು. ಕಮ್ಮಟ– ಶಿವಯೋಗ ಮಂದಿರ. ಕನ್ನಡವು– ಕರ್ನಾಟಕವು
ಲೋಕಮುಖಿ– ವಿಶ್ವಬಂಧು, ಚರಜಂಗಮ. ಒಕ್ಕುಮಿಕ್ಕುದ– ಪ್ರಸಾದ.

ಹಾವೇರಿ.
ಮಕರ ಸಂಕ್ರಮಣ
೧೪—೧—೧೯೬೬

ಗುರುಪಾದ ಶರಣಾಗತರು,
ಗದಗ ಅಂಗಡಿ ಕರವೀರಪ್ಪ ಮತ್ತು ಅವರ
ಪುತ್ರ - ಪೌತ್ರರು.

# ಬಸವ ಶರಣಾರ್ಥಿ ನವಕ ಮಾಲೆ

ಶಿವ ಸಮಯ ಬೆಳಗಿನೊಳು ಗುರುಬಸವ ಶರಣೆಂಬೆ
ಶಿವಶರಣ ಹೃನ್ಮಂದಿರದ ಬೆಳಕು ನೀನೆಂಬೆ

ಬೆಳಗಿನೊಳು ಬೇಗೆದ್ದು ಮಿಂದು ಮಡಿಯನ್ನುಟ್ಟು
ತಿಳಿಮನದಿ ಶಿವಲಾಂಛನಂಗಳಿಗೆ ಮೈಗೊಟ್ಟು
ಥಳಿಲನೆಯೆ ತವಪಾದ ದರುಶನಕೆ ತಪವಿಟ್ಟು
ಬಳಿಸಾರ್ದ ಶರಣರನ್ನು ನೋಡಯ್ಯ ಕೃಪೆಯಿಟ್ಟು

ಅಕ್ಕರೆಯ ಆದರವ ತೋರುವಾ ನಾಗಮ್ಮ
ಕಕ್ಕುಲತೆಯಿಂ ಕರೆವ ತಾಯಿ ತಾ ನಾಗಮ್ಮ
ಚೊಕ್ಕ ಶಿವಭಕ್ತಿರಸ ಭಾವದಾ ನೀಲಮ್ಮ
ಮಿಕ್ಕುದೇಂ! ಶರಣೆಂಬೆ ಈ ತಾಯಿ ಬಳಗಕ್ಕೆ

..ಡುತಡಿ ಮಹಾದೇವಿ ಸುಜ್ಞಾನಿ ಲಿಂಗಮ್ಮ
ನ್ನುಡಭಕ್ತೆ ದುಗ್ಗಲಾ ತಾಯಿಯಾ ಕಲ್ಲವ್ವೆ
ಸಡಗರದ ಚಂಗಳೆಯು ಕದರಿ ರೇಮವ್ವೆಯರ
ರಿಡುವರೀ ಮನ್ನಣೆಗೆ ಶರಣಾರ್ಥಿ ಗುರುಬಸವ

ನೊರೆಹಾಲ ತಂದಿಟ್ಟು ನಮಿಸುತ್ತ ನಿಂತಿಹರು
ಸರಿಗೊಳಿಸಿ ಹೂ ಪತ್ರಿಗಳ ತಂದು ವಂದಿಪರು
ಸುರುಚಿರಸುಗಂಧ ಧೂಪಾರತಿಯ ಬೆಳಗುವರು
ಗುರುಬಸವ ನಿನ್ನದೀ ಶಿವಪೂಜೆ ನಡೆದಿರಲು

ಶರಣಾರ್ಥಿ ಕಿನ್ನರಿಯ ನುಡಿಸುತಿಹ ಬೊಮ್ಮಂಗೆ
ಶರಣಾರ್ಥಿ ಮಡಿಮನದ ಶರಣಮಡಿವಾಳಂಗೆ
ಶರಣಾರ್ಥಿ ವಚನಗಳನುಗ್ಗಡಿಪ ಚೆಂಬಂಗೆ
ಶರಣಾರ್ಥಿ ಗುರುಬಸವ ನಿನ್ನದೀಬಳಗಕ್ಕೆ

ಕ.ಬ.ಅಂಗಡಿಯವರು ರಚಿಸಿದ ನವಕಮಾಲೆ

॥ ಶ್ರೀ ವೀರಭದ್ರ ಪ್ರಸನ್ನ ॥

## ಶ್ರೀ ಗೊಡಚಿ ಶಿವಾನುಭವ ಮಂಟಪದಲ್ಲಿ
## ದಿನಾಂಕ ೧೫-೧೨-೧೯೭೮ರಂದು ನಡೆಯಲಿದ್ದ
# ಸ್ತೋತ್ರ ಹಾಗೂ ಸ್ವಾಗತಗೀತೆಗಳು

ಸ್ತೋತ್ರ:

ಮಡಿವಾಳ ಪ್ರಭು ನಾಮದಿಂದೆ ಧರೆಯೊಳ್ ಶ್ರೀಪಟ್ಟಸ್ಥಲಜ್ಞಾನದಾ
ಗುಡಿಯನ್ನೇರಿಸಿ ಸತ್ಯ ಶುದ್ಧ ಸುಗಣಾಚಾರ ವ್ರತಾಧಾರದಿಂ
ನಿಡು ಸಂರಕ್ಷಣೆಯನ್ನು ನಿತ್ಯಶರಣಾಗೀರ್ಯಯುತ್ತುಂ ನೀನಿರ್ದಯ್ಯೆ
ಗೊಡಚೀ ರುದ್ರನೆ ರಕ್ಷಿಸಯ್ಯ ನಿರುತಂ ದಕ್ಷಾಧ್ವರಧ್ವಂಸಿಯೇ

ಸ್ವಾಗತಗೀತೆ

ಶರಣು ಬನ್ನಿರಿ ಶರಣು ಬನ್ನಿರಿ
ಶರಣು ಪೂಜ್ಯರ ಪಾದಕೆ|
ಶರಣು ಮಾನ್ಯರ ಭಕ್ತಿ ಹೃದಯಕೆ
ಶರಣು ಶರಣ್ಯ ಬನ್ನಿರಿ....ಪಲ್ಲ

ಮುದ್ದುವೀರನ ತಾಣವಿದುವೇ
ತಂದೆ ಮಡಿವಳ ತಪಸಿನ |
ಸಿದ್ಧಿ ಸ್ಮಾರಕವಾಗಿ ತೋರ್ಪುದು
ಬನ್ನಿ ಶರಣರೆ ನೋಡಿರಿ ॥೧॥

ಕ್ಷೇತ್ರದೆದುರಿಗೆ ಆದಿಗಂಬರ
ಮೂರ್ತಿಮಂದಿರವೆಮ್ಮಗೆ |
ಸ್ತೋತ್ರ ಚರಿತಾ ನಾಗಲಾಂಬೆಯ
ಪಾತ್ರ ದರ್ಶನವೀವುದು ॥೨॥

ಕೂಗು ಬಸವನ ಗುಡಿಯು ನಿಂತಿದೆ
ಬರುವಗಂಡಾಂತರವನು |
ಭರದಿ ಕೂಗಿಂ ಶರಣ ಬಳಗಕೆ
ಅರುಹಿ ನೀಡುದು ರಕ್ಷಣೆ ॥೩॥

ಬನ್ನಿನೋಡಿರಿ ಅಡಿವೆಪ್ಪಗೌಡರ
ಹೊಲದಿ ಹೊರಟಿದೆ 'ಬೆಳಗುವ |
ಚನ್ನಬಸವನ ಲಿಂಗ ಪೂಜೆಯು
ಭಕ್ತ ಘಟ್ಟಿಯ ಗೂಡದು ॥೪॥

ಗೊಡಚಿ ವೀರಭದ್ರನನ್ನು ಕುರಿತು ಕ.ಬ.ಅಂಗಡಿಯವರು ರಚಿಸಿದ ಸ್ತೋತ್ರ ಮತ್ತು ಸ್ವಾಗತ ಗೀತೆ

|| ಶ್ರೀಗುರು ಬಸವಲಿಂಗಾಯನಮಃ



# ನೂರೆಂಟು ಜಯಬಸವ ನಾಮಾವಳಿ

**ಹಾವೇರಿಯಲ್ಲಿ ನಡೆಯುವ ಶ್ರೀ ಬಸವೇಶ್ವರ ಅಷ್ಟಶತಮಾನೋತ್ಸವದ ಕಾಲಕ್ಕೆ ಪ್ರಕಟ. ಸಿದ್ಧ**

**ದಿನಾಂಕ ೨೬-೪-೧೯೬೮**



ಜಯಬಸವ ನಾಮಾವಳಿಯು ಪಠಿಸಿದವರ್ಗೆ ಕೊರಡು
ಕೊನರುವುದು; ಬರಡು ಹಯನವುದು.

ಜಯಬಸವ ನಾಮವನು ಪಠಿಸಲ್ಕೆ ಮನದಿಂದೆ
ಭಯದೂರ ಭವದೂರ ತಾವಕ್ಕು ನಿಜದಿಂದೆ ||ಶ್ರೀ||

ತುತ್ತುಗಾಣದೆ ಧರೆಯು ಜನರಿರಲು ಜಯಬಸವ
ಕತ್ತಿ ತ್ರದಂತಿರಲು ಶರಣಜನ ಜಯಬಸವ
ಸುತ್ತಲೂ ಕತ್ತಲೆಯು ಮುತ್ತಿರಲು ಜಯಬಸವ
ಎತ್ತಿಹಿಡಿಯಲು ಧರ್ಮ ನೀ ಬಂದೆ ಜಯಬಸವ

ಜ್ಞಾನಸಾಹಿತ್ಯದಿಂ ಬಹುಜನರು ಜಯಬಸವ
ಹೀನಗತಿಯೊಳುಬಾಳ ನಡೆಸಿರಲು ಜಯಬಸವ
ದೀನೋದ್ಧರಣ ಭಾವದಿಂದೆ ನೀ ಜಯಬಸವ
ಜ್ಞಾನಜ್ಯೋತಿಯನಿತ್ತು ರಕ್ಷಿಸಿದೆ ಜಯಬಸವ

ಪರಮಾತ್ಮ ಕರುಣಿಸಿದ ದೇಹವನು, ಜಯಬಸವ
ಪರಮಾತ್ಮ ಸಂತೃಪ್ತಿಗೊಳುವಂತೆ, ಜಯಬಸವ
ನಿರುತದಿಂ ದುಡಿತದೊಳು ತೊಡಗಿಸಲು ಜಯಬಸವ
ಪರತರದ ಫಲವೀವ ಕಾಯಕವು ಜಯಬಸವ

ಕಾಯಕದಿ ನಿರತನಿರೆ ಗುರುಪೂಜೆ ಜಯಬಸವ
ಕಾಯಕದಿ ನಿರತನಿರೆ ಶಿವಪೂಜೆ ಜಯಬಸವ.
ಕಾಯಕದಿ ನಿರತನಿರೆ ಜನಸೇವೆ ಜಯಬಸವ
ಕಾಯಕವೆ ಕೈಲಾಸವದರಿಂದೆ ಜಯಬಸವ

ಮಾನಿತಾಚಾರದಿಂ ನಡೆಯಿರಲು ಜಯಬಸವ
ಮಾನಿನಿ ಮಹಾದೇವಿಯಲ್ಲದಲೆ ಜಯಬಸವ
ಮಾನವ ಮಹಾದೇವನಹುದಹುದು ಜಯಬಸವ
ಸ್ವಾನುಭವದೀ ನುಡಿಗಳಮರವೈ ಜಯಬಸವ

ಆ ಲೋಕ ಪದವನ್ನು ಪಡೆಯಲ್ಕೆ, ಜಯಬಸವ
ಈ ಲೋಕ ಭೀಕ್ಷ್ಯಗಳು ಬಲ್ಲಿದರು ಜಯಬಸವ
ಆ ಲೋಕದಾಪರಿವೆ ತಾನೇಕೆ ಜಯಬಸವ ?
ಈ ಲೋಕ ಕೈಲಾಸವಾಗಿರಲು ಜಯಬಸವ !

ಪರಶಿವನ ಚಿತ್ಕಲೆಯು ನೀನಯ್ಯ ಜಯಬಸವ
ಕರುನಾಡು ನಿನಗಾಯ್ತು ಜನ್ಮಭೂ ಜಯಬಸವ
ಅರುಣೋದಯದ ಬೆಳಕು ಬೆಳಗಿತ್ತೈ ಜಯಬಸವ
ಗುರುತಿಸಿತು ಶರಣಜನ ನಿನ್ನಿರವ ಜಯಬಸವ

ದಯವಿರದ ಧರ್ಮವದು ತಾನೆಲ್ಲಿ ಜಯಬಸವ ?
ದಯಬೇಕು ಪ್ರಾಣಿಯೆಲ್ಲಕ್ಕೆ ತಾ ಜಯಬಸವ
ದಯವದುವೆ ಧರ್ಮಕ್ಕೆ ಮೂಲವೈ ಜಯಬಸವ
ದಯವಿಲ್ಲದವರನೊಲ್ಲನಾ ಶಿವನು ಜಯಬಸವ

ಕಾಯಕವು ಸ್ತ್ರೀ-ಪುರುಷವರ್ಗಕ್ಕೆ ಜಯಬಸವ
ಕಾಯಕವು ಗುರುವಿಂಗೆ ಶಿಷ್ಯಂಗೆ ಜಯಬಸವ
ಕಾಯಕವು ಪ್ರಭುವಿಂಗೆ ಪ್ರಜರಿಂಗೆ ಜಯಬಸವ
ಕಾಯಕವು ಸಂಸ್ಕೃತಿಯ ಲಕ್ಷಣವು ಜಯಬಸವ

ಕಾಯಕವು ಸಾಮಾಜಿಕದ ಸೊಬಗು ಜಯಬಸವ
ಕಾಯಕವು ದೇಶೀಯ ಸಿರಿಮೆರಗು ಜಯಬಸವ
ಕಾಯಕವು ಸುಖ.ಸೌಖ್ಯದಾಧಾರ ಜಯಬಸವ
ಕಾಯಕದ ಜೀವನವೆ ಸಂಸಾರ ಜಯಬಸವ

ಬಳಸದಿರು ಹುಸಿನುಡಿಯನೆಂದೆಂದು ಜಯಬಸವ
ಕಳಬೇಡ ಕೊಲಬೇಡವೆಂತೆಂದು ಜಯಬಸವ
ಅಳಿಯಾಶೆದೋರದಿರೆ ಸಹಜವೈ ! ಜಯಬಸ
ಒಳಹೊರಗು ಶುದ್ಧ ತಾನೆಂದೊರೆದೆ ! ।

ಪರಧನವನೊಲ್ಲೆಂಬ ಛಲಬೇಕು; ಜ
ಪರಸತಿಯನೊಲ್ಲೆಂಬ ಛಲಬೇಕು;
ಪರದೈವವೊಲ್ಲೆಂಬ ಛಲಬೇಕು; ಜ
ಶರಣಂಗೆ ಶಿವಕಳೆಯ ಛಲಬೇಕು; ಜ

**ಕ.ಬ.ಅಂಗಡಿಯವರು ರಚಿಸಿದ ಜಯಬಸವ ನಾಮಾವಳಿ**

# ಜಗದನ್ನದಾನಿ ಮೃಡಗಿರಿ ಜಗದ್ಗುರು

ಲೇಖಕರು : ಶ್ರೀ ಶರಣ ಕರವೀರಪ್ಪನವರು, ಬ. ಅಂಗಡಿ ಗದಗ.

ಸ್ತೋತ್ರ

ಮೃಡಗಿರೀ ಅನ್ನದಾನೀಶ ನೀ ಶಿವಕಾಯ
ಸಡಗರದಿ ನಿನ್ನಡಿಗೆ ಬಾಗುವೆನು ಗುರುರಾಯ ‖ ಪ ‖
ಹನ್ನೆರಡು ವರ್ಷಾಯ್ತು ನೀ ಬಂದು ಗುರುರಾಯ
ನಿನ್ನಲ್ಲಿ ಬೆಳಗುತಿದೆ ಶಿವಕಳೆಯು ಚಿತಮಾಯ
ಚಿನ್ನದಂತೀಗಿರುವೆ ಜಡಭಾವ ಹತಕಾಯ
ಬನ್ನ ಬಡುವೆಮ್ಮನ್ನು ಗಡಕಾಯೊ ಮಾರಾಯ ‖ ೧ ‖
ಶರಣಸತಿ ಲಿಂಗಪತಿ ಎಂಬುದನ ನೀ ಕಲಿಸಿ
ಕರೆಕರೆದು ದೀನರಿಗೆ ನೀಡುದನ ನೀ ತಿಳಿಸಿ
ಹಸನಮಾರ್ಗದೊಳಗೆಮ್ಮನ್ನು ನೀ ನಿರಗಲಿಸಿ
ಪೊರೆದೆಯ್ಯೆ ನಮ್ಮ ಬಳಗವನು ನೀ ದಯವೆರಸಿ ‖ ೨ ‖
ಗುರುಪುತ್ರರಿವರೆಲ್ಲ ಕೂಡಿಹರು ಇಂದಿಲಿ
ಚರಣ ಸೇವೆಗೈವ ಮನ ಹಿಡಿದಿಹರು ತಮ್ಮಲ್ಲಿ
ತರತರದ ಭಕ್ತಿ ಕುಸುಮವಿಡುವರು ಪದದಲ್ಲಿ
ವರಹಸ್ತ ನಿನ್ನದಿರಲೈಯಮ್ಮ ತಲೆಯಲ್ಲಿ ‖ ೩ ‖
ವೀರಶೈವಾಮೃತವನುಣಿಸುತ್ತ ಶಿವಯೋಗಿ
ಚಾರು ಚರಕುಲ ಸಾರ್ವಭೌಮನೇ ನೀನಾಗಿ
ಸಾರ ಕಾಯಕ ತತ್ವ ಭಕ್ತರುನ್ನತಿಗಾಗಿ
ದಾರಿದುಳಿವಾ ನಿನಗೆ ನಮಿಸುವೆನು ಶಿರಬಾಗಿ ‖ ೪ ‖
ಇನ್ನೆಂಟು ಸಲವಿಂತು ಈ ಅನ್ನದಾನಿಂಗೆ
ಚಿನ್ನದಂತಹ ಕಾಲ ಸೂಕುವ ಸುಸಂಭ್ರಮದ
ಹನ್ನೆರಡು ವರ್ಷಗಳ ಪಟ್ಟಗಳು ಬರಲೆಂದು
ನನ್ನಿಯಿಂ ಬೇಡುವೆನು ಮೂಲನ್ನದಾನಿಯನು ‖ ೫ ‖
ಆ ಪರತತ್ವವು ಜಗದ್ಧಿತಾರ್ಥವಾಗಿ
"ಶಾಂತೋ ಮಹಾಂತೋ ನಿವಸಂತಿ ಸಂತಃ
ವಸಂತವಲ್ಲೋಕ ಹಿತಾರ್ಥಂ ಚರಂತಃ"

## ಗದುಗಿನ—

# ಶ್ರೀ ಹೊನ್ನಗುಡೀಶ್ವರ ಚವಕಿ

ಲೇಖಕರು : ಶ್ರೀ ಕರವೀರಪ್ಪ ಅಂಗಡಿ.

ವ್ಯಾಪಾರೋದ್ಯಮ ಒಕ್ಕಲುತನ ಹಾಗೂ ಜನವಸತಿಗಳಿಂದ ಕರ್ನಾಟಕ ರಾಜ್ಯದಲ್ಲಿ ಗದಗ-ಬೆಟಗೇರಿ ಅವಳಿ ನಗರವು ಗಣ್ಯಸ್ಥಾನವನ್ನು ಪಡೆದಿರುವದಿಷ್ಟೇ ಅಲ್ಲ, ಪ್ರಾಚೀನ ಕಾಲದಿಂದ ಈ ವರೆಗೆ ಕ್ಷೇತ್ರಸ್ಥಾನವಾಗಿ ಹೆಸರು ಪಡೆದಿದೆ.

ತ್ರಿಕೂಟೇಶ್ವರ, ವೀರನಾರಾಯಣ, ಸರಸ್ವತಿ ಮತ್ತು ಕಂದೇವ ಮೊದಲಾದ ಪವಿತ್ರ ಪೂಜ್ಯ ದೇವಾಲಯಗಳು ಪ್ರಾಚೀನ ಕಾಲದ ಶಿಲ್ಪ ಹಾಗೂ ವಾಸ್ತುಕಲೆಗಳಿಂದಲೂ ಆ ಕಾಲದ ಸಾಹಿತ್ಯ ಸಂಸ್ಕೃತಿ ದ್ಯೋತಕ, ಐತಿಹಾಸಿಕ ಚಾರಿತ್ರ್ಯಗಳಿಂದಲೂ ಮಹೋನ್ನತ ಸ್ಥಿತಿಯನ್ನು ಹೊತ್ತು ವಿಮರ್ಶಕರಿಗೆ ಇಂದಿಗೂ ಆದರ್ಶಪ್ರಾಯವಾಗಿವೆ.

ಹೀಗೆಯೇ ಮಧ್ಯಕಾಲದ ಗುಡಿಗೋಪುರಗಳೂ ಮಹಾಮಹಿಮರು ಎಡೆಯೂರ ಸಿದ್ಧಲಿಂಗನ ಪರಂಪರೆಯನ್ನು ಜಗಕೆತ್ತಿ ತೋರ್ಪ ಶ್ರೀ ಜ. ಗು. ತೋಂಟದಾರ್ಯ ಮಠವೂ ಅಲ್ಲದೆ ಇತರೇತರ ಮಠಮಾನ್ಯಗಳೂ ಮಹಿಮರ ನಿವಾಸ ಸ್ಥಾನಗಳಾಗಿದ್ದ ಪೂಜ್ಯ ಚೌಕಿಗಳೂ ಮಸೀದೆ ಬಸ್ತಿಗಳೂ ಈ ಮಹಾನಗರದ ಭವ್ಯತೆಗೆ ಕಾರಣವಾಗಿದ್ದು ಕೆಲಕೆಲವು ಮಹತ್ವದ ಐತಿಹಾಸಿಕ ಘಟನೆಗಳ ಕಾರಣದಿಂದಾಗಿ ಈ ನಗರದಲ್ಲಿ ವಾಸ್ತವಗೊಂಡ ಆದರ್ಶ ಮನೆತನಗಳ ಚರಿತ್ರೆಯನ್ನು ಇತಿಹಾಸಕಾರರಿಗೆ ಒದಗಿಸುವವೂ ಆಗಿವೆ. ಇವುಗಳಲ್ಲಿ ಹೊಸಗುಡಿಯವರ ಚೌಕಿ, ಮಾನವಿಯವರ ಮಠ, ಹುಬ್ಬಳ್ಳಿಯವರ ಚೌಕಿ, ಮತ್ತು ನಾಲ್ವಾಡದವರ ಚೌಕಿಗಳು ಇತ್ಯಾದಿ. ಇವು ಒಂದೊಂದು ಬಗೆಯಾಗಿ ತಮ್ಮದಾದೊಂದು ಐತಿಹಾಸಿಕ ಸಂಗತಿಯನ್ನು ಹೊತ್ತು ನಿಂತಿವೆ.

ಎಲೆಯ ಮರೆಗಿದ್ದ ಫಲದಂತೆ "ಹೊಸಗುಡಿಯವರ ಚೌಕಿ" ಗದುಗು ಕ್ಷೇತ್ರವೃಕ್ಷದಲ್ಲಿ ಎಲ್ಲಿದೆ? ಯಾವ ಕಾಲದಿಂದ ಯಾರಿಂದ ಹೇಗೆ ಅಸ್ತಿತ್ವದಲ್ಲಿ ಬಂದಿದೆ? ಈ ನಗರದಲ್ಲಿ "ಹೊಸಗುಡಿ" ಎಂಬ ಅಡ್ಡ ಹೆಸರಿನ ಮನೆತನಗಳುಂಟು. ಈ ಮನೆಗಳಿಗೂ ಈ ಚೌಕಿಗೂ ಏನಾದರೊಂದು ಸಂಬಂಧವಿರಬಹುದೇ? ಇದ್ದುದಾದರೆ ಅದರ ಐತಿಹ್ಯವೇನು? ಇತ್ಯಾದಿ ಪ್ರಶ್ನೆಗಳು ವಿಮರ್ಶಕರ ದೃಷ್ಟಿಯಲ್ಲಿ ಬರದಿರಲಾರವು. ಸೂಕ್ಷ್ಮವಾಗಿ ವಿಮರ್ಶಿಸಿದರೆ ಈ ಚೌಕಿಗೂ ಹೊಸಗುಡಿಯವರ ಮನೆತನಕ್ಕೂ ಸಂಬಂಧವಿದೆ. ಆದುದರಿಂದ ಅದನ್ನು ವಿವರಿಸುವದೇ ಪ್ರಸ್ತುತ ಲೇಖನದ ಉದ್ದೇಶವಾಗಿದೆ.

ರಕ್ಕಸ ತಂಗಡಗಿ (ತಾಳಿಕೋಟಿ) ಕಾಳಗದ ಕಾರಣದಿಂದಾಗಿ ವಿಜಯನಗರ ಸಾಮ್ರಾಜ್ಯದ ಪತನವುಂಟಾಗಲು ಕೃಷ್ಣಾನದಿಯ ದಂಡೆಯ ಉತ್ತರದ ಆ ಭಾಗದ ಹಿಂದೂ ಸಮಾಜಕ್ಕೆ ನೆಮ್ಮದಿ ಸಿಕ್ಕದಾಯಿತು. ಪ್ರತಿಷ್ಠಿತ ಮನೆತನದವರಿಗೂ ವ್ಯಾಪಾರುದ್ಯಮದಾರರಿಗೂ ನಿಂತು ಬಾಳಿ ಬದುಕಲು ಅನುವು ಇಲ್ಲದಂತಾಯಿತು. ಆಗ ಅವರು ದಿಕ್ಕುಗಾಣದೆ ಕೃಷ್ಣಾನದಿಯ ದಕ್ಷಿಣಪ್ರದೇಶದತ್ತ ವಲಸೆಹೋಗಿ ಅಲ್ಲಲ್ಲಿ ನಿಂತುಕೊಂಡು ಬಾಳು ಸಾಗಿಸಿದ್ದು ಐತಿಹಾಸಿಕ ಸಂಗತಿಯಾಯಿತು. ಈ ಗದಗ-ಬೆಟಗೇರಿಯ ಹೊಸಗುಡಿಯವರ ಮನೆತನದವರೂ ಆಗ ಅದೇ ಕಾರಣದಿಂದ ಗುಳೇಕಿತ್ತು ಇಲ್ಲಿಗೆ ಬಂದು ನೆಲಸಿದವರು.

ಆಗಿನ ಅಲ್ಲಿನ ಮನೆತನದ ಹಿರಿಯರಾದ ದೊಡ್ಡ ಬಸಪ್ಪ, ಸಣ್ಣಬಸಪ್ಪ, ಸೋಮಪ್ಪ ಹಾಗೂ ಪರಪ್ಪ ಇವರು ತಮ್ಮ ಸಹೋದರಿಯಾದ ನೀಲಗಂಗವ್ವನೊಡನೆ ಅಲ್ಲಿಂದ ಹೊರಟು ತಂಗಡಗಿ ನೀಲಮ್ಮನಕ್ಷೇತ್ರಕ್ಕೆ ಬಂದು ಆ ಮಹಾತಾಯಿಯ ಅಮಲೈಕ್ಯಭಾವದ ಬೆಳಕಿನಲ್ಲಿ ಮನದುಂಬಿ ಭಕ್ತಿಯಿಂ ಪೂಜಿಸಿ ಸಂತಸಗೊಂಡು ಸಂಗಮನಾಥನತ್ತ ತೆರಳಿದರು. ಆಗ ಎದುರಿಗೆ ತುಂಬಿ ಹರಿಯುವ ಕೃಷ್ಣಾನದಿಯನ್ನು ಕಂಡು ದಾಟುವ ಬಗೆಗೆ ಚಿಂತನ ಮಾಡುತ್ತಿರಲು ಪತಿವ್ರತಾ ಶಿರೋಮಣಿಯಾದ ಅವರ ಸಹೋದರಿ ನೀಲಗಂಗಮ್ಮನು ತನ್ನ ಸ್ನಾನಾದಿ ಶಿವಪೂಜಾವಿಧಿಯನ್ನು ತೀರಿಸಿ, ನದಿಯ ಗಂಗೆಯನ್ನು ಪೂಜಿಸಿ, ಆಕೆಗೆ ಆರುತಿಯನ್ನು ಮಾಡಿದಳು. ತೃಪ್ತಿಗೊಂಡ ಗಂಗಾಮಾತೆ ಅವರಿಗೆ ದಾಟಲನುವಾಗುವಂತೆ ಪಾತ್ರವನ್ನು ಕಿರಿದಾಗಿಸಿದಳು. ಅನಂತರ ಅವರೆಲ್ಲರೂ ಗಂಗೆಗೆ ನಮಸ್ಕರಿಸಿ ದಾಟಿ ಶ್ರೀ ಸಂಗಮನಾಥ ಕ್ಷೇತ್ರವನ್ನು ಬಳಸಿದರು. ಸಂಗಮನಾಥನ ದರ್ಶನಗೊಂಡ ಅವರು ಅನನ್ಯ ಭಕ್ತಿಯಿಂದ ಆತನನ್ನು ಪೂಜಿಸಿ, ಪ್ರಾರ್ಥಿಸಿ ತಮ್ಮ ಭವಿಷ್ಯತ್ತಿನ ಬಗ್ಗೆ ಚಿಂತಿಸುತ್ತ ಸಂಗನಬಸವಣ್ಣನೇ ಗತಿಯೆನ್ನುತ್ತ ಮುಂದೆತ್ತ ಸಾಗಿ ವಸತಿಗೊಂಡು ಬಾಳನೌಕೆಯನ್ನು ನೂಕಬೇಕೆಂಬ ಭಾವದಲ್ಲಿಯೇ ಮುಳುಗಿ ಆತನ ಸನ್ನಿಧಿಯಲ್ಲಿ ಸ್ವಲ್ಪ ದಿನಗಳೆಯಲು ಒಂದು ದಿನ ಅವರ ಕನಸಿನಲ್ಲಿ ಗದುಗಿನತ್ತ ಸಾಗಬಹುದೆಂಬ ಭಾವದ ಛಾಯೆಯು ಮೂಡಿತು, ಅದು ಅವರಿಗೆ ಸಂತಸವನ್ನಿತ್ತಿತು.

ತಮಗೆ ಶುಭವೆಂದೆನಿಸಿದುದೊಂದು ದಿನ ಅವರು ಸಂಗಮನಾಥನನ್ನು ಮನದಣಿ ಪ್ರಾರ್ಥಿಸಿ ಸೇವೆ ಸಲ್ಲಿಸಿ

# ಗದುಗು ಗದ್ದಿಗೆಯೋ ?

ಲೇಖಕರು: ಶ್ರೀ ಕೆ.ಬಿ. ಅಂಗಡಿ Rtd. A.D.E.I.
[illegible], ಗದಗ

ಶರಣರು, ಸಂತರು, ಫಕೀರರು ಹಾಗೂ ದಾಸವರ್ಯರು ಹಾಡಿದ ಅವರ ವಚನಗಳಲ್ಲಿ ಒಂದೊಂದು ಮಹತ್ವದ ಸಂಗತಿಗಳ ಬಗ್ಗೆ ಮುನ್ಸೂಚನೆಯಾಗಿ ತೋರುವ ವಿಷಯಗಳು ಮೂಡಿ ಬಂದು ಸರ್ವರ ಮನವನ್ನು ತಮ್ಮತ್ತ ಸೆಳೆದುದು ಕಂಡು ಬಂದಿದೆ. ಅಂತಹ ಕಾಲಜ್ಞಾನ ವಚನಗಳನ್ನು ಈಗಲೂ ಜನರು ಬಹಳಷ್ಟು ಒಂದೊಂದು ಪ್ರಸಂಗದಲ್ಲಿ ನೆನೆದು, ಅವುಗಳ ಆಗು-ಹೋಗುಗಳನ್ನು ಕಂಡು ತಿಳಿಯಬಯಸುತ್ತಾರೆ.

ಅಂತಹವುಗಳಲ್ಲಿ "........ಧಾರವಾಡ ದಾರಿಯಾಗಿ, ಹುಬ್ಬಳ್ಳಿಯಲ್ಲಿ ಹುದುಗಿಯಾಗಿ, ಗದುಗು ಗದ್ದುಗೆಯಾಗಿ ಲಕ್ಕುಂಡಿಯಲ್ಲಿ ಲೆಕ್ಕವಾಗಬೇಕೆಂಬ ಒಂದು ಕಾಲಜ್ಞಾನ ವಚನವು ಶರಣ ಸಾಹಿತ್ಯ ಪ್ರಪಂಚದಲ್ಲಿ ಕಂಡು ಬರುತ್ತದೆ.

ಶರಣರ ವಚನಗಳು ತ್ರಿಕಾಲಾಬಾಧಿತ ಸತ್ಯ ಸಂಗತಿಗಳಿಂದ ಆಯಾ ಕಾಲಗಳ ಸ್ಥಿತಿಯನ್ನು ಸೂಚಿಸುವ ಸಾಹಿತ್ಯವನ್ನು ಹೊತ್ತು ನಿಂತಿಹವು.

ಈಗ ಈ ಕಾಲಜ್ಞಾನ ವಚನವನ್ನು ನಮ್ಮ ದೃಷ್ಟಿಕೋನದಲ್ಲಿ ತಂದು ವಿಶ್ಲೇಷಿಸಿದಾಗ, "ಯಾವುದೇ ಕಾಲದಲ್ಲಿ, ಒಂದು ವಿಷಯವು ತೋರಿ ಬರಲು ಧಾರವಾಡವು ದಾರಿ (ಕಾರಣ) ಯಾಗುತ್ತದೆ. ಆ ಬಗ್ಗೆ ಹುಬ್ಬಳ್ಳಿಯಲ್ಲಿ ಘರ್ಷಣೆಯಾಗಿ, ತೊಡಕು ಒಡಕುಗಳುಂಟಾಗಿ ತೋರಿ ಬಂದರೂ, ಅವೆಲ್ಲವೂ ಗದುಗಿನಲ್ಲಿ ತಜ್ಞರ ಮುಂದೆ ಬಂದು, ವಿಮರ್ಶೆಗೊಂಡು, ಸಮುಸ್ಥಿತಿಯನ್ನು ಹೊಂದಿ ಆಮೇಲೆ ಅವುಗಳ ರೂಪ-ರೇಷೆಗಳು ರಚಿಸಲ್ಪಟ್ಟು ಒಂದು ಸ್ಥಿತಿಗೆ ತಂದಾಗ, ಲಕ್ಕುಂಡಿಯಲ್ಲಿ ಗುಪ್ತ ಸಮಾಲೋಚನ ಮಂಡಲವು ನೆರೆದು, ಸರ್ವ ಸಮ್ಮತವಾದ ಒಂದು ಸೂತ್ರವನ್ನು ಹೊರಗೆಡಹುವುದು" ಎಂಬ ಈ ಅರ್ಥದ ಕಲ್ಪನೆಯು ನಮ್ಮ ಮುಂದೆ ನಿಲ್ಲುವುದು.

ಈ ಕಾಲಜ್ಞಾನ ವಚನಕ್ಕೇನೇ "....ಉತ್ತರದಿಂದ ವೀರ ಬಸವಂತನೇಬೊಬ್ಬ ಕ್ರಾಂತಿಕಾರನು ಬಂದಾಗ, ಧಾರವಾಡ ದಾರಿಯಾಗಿ....... ಲಕ್ಕುಂಡಿಯಲ್ಲಿ ಲೆಕ್ಕವಾಗಿ....ನಾಲಿಭಾಂಡಾರ ಹಂಪೆಯಲ್ಲಿ ತೆರೆಯುವದು...." ಹೀಗೆ ಹಲವರು ತಮ್ಮ ಅಭಿಪ್ರಾಯವನ್ನು ಸೂಚಿಸುವರು. ಯಾರ ನಿರ್ಣಯವೇನೇ ಇದ್ದರೂ ಅವರವರ ನಿರ್ಣಯವು ಅವರಿಗೆ ! ಈಗ ನಾವು ನಮ್ಮದಾದ ವಿಶ್ಲೇಷಣೆಯಿಂದ ಕಂಡು ಬಂದ ಗದುಗು ಗದ್ದಿಗೆಯೋ ? ಎಂಬ ವಿಷಯದ ಬಗ್ಗೆ ವಿವರಣೆಯನ್ನು ನೀಡುವುದು ಈ ಲೇಖನದ ಗುರಿಯು.

ಪ್ರಾಚೀನಾರ್ವಾಚೀನ ಕಾಲಗಳ ಭೌಗೋಲಿಕ ತಜ್ಞರ ಅಭಿಮತದಂತೆ, ಭೂ ಸೃಷ್ಟಿಗೆ ಮೊದಲು ಭಾರತವೂ ಅದರಲ್ಲೂ ಕರುನಾಡು (ಕರ್ನಾಟಕ) ಮೊದಲಿನ ಸೃಷ್ಟಿಯಾಗಿದೆ. ಅನಂತರ ಜ್ವಾಲಾಮುಖಿಗಳ ಕಾರಣದಿಂದಾಗಿ, ಆಗಾಗ ಪರ್ವತಗಳೂ ಬೆಟ್ಟಗಳೂ ಉಂಟಾಗಿ, ಈಗಿನ ಸ್ಥಿತಿಯಲ್ಲಿ ಭಾರತವು ಇದೆ. ಭಾರತ ಮಾತೆಯು ತನ್ನ ಹೃದ್ರಂಗವನ್ನೇ ಕನ್ನಡಮ್ಮನಿಗೆ ಮೀಸಲಿಟ್ಟಿದ್ದಾಳೆಂದರೂ ಸಲ್ಲುವದು.

ನಾವು ವಿಮಾನದಲ್ಲಿ ಕುಳಿತು, ಮೇಲಕ್ಕೇರಿ ಹದವರಿತು, ಕನ್ನಡ ನಾಡಿನ ಮಧ್ಯವನ್ನು ಗುರುತಿಸಲು ನಿಂತು, ನಿರೀಕ್ಷಿಸಿದರೆ, ಈ ನಾಡಿನ ಹೃದಯ ಭೂಮಿ ಬೈಲು ನಾಡೆಂದೂ ಅದರ ಮಧ್ಯಪೀಠವೇ ಕ್ರತು (ಗದುಗು) ಪುರಾವೃತ ಕ್ಷೇತ್ರವೇ ಬೆಳವಲ ನಾಡೆಂದೂ ಗೋಚರವಾಗದಿರದು. ಇದೇ ಕನ್ನಡನಾಡ ಭೂಮಿಯಲ್ಲಿ ಕಪ್ಪು ವರ್ಣದ ನೆಲವೇ ಹೆಚ್ಚಿದ್ದು, ಅದರಲ್ಲೂ ಬೆಳವಲನಾಡಿನ ಎರೆಯ ಮಣ್ಣು ಕಸ್ತೂರಿ ಎಂದೆನಿಸಿ ತನ್ನ ಕಂಪನ್ನೂ ಫಲಸುಗಳ ಇಂಪನ್ನೂ ಕೊಡುವುದೆಂಬ ವಿಷಯವನ್ನು ಇಲ್ಲಿ ಸ್ಮರಿಸದಿರಲಾಗದು ! ಈ ಬೆಳವಲನಾಡಿನ ಗಣ್ಯ-ಪುಣ್ಯಪುರವೇ **ಗದುಗು** !

ಹೀಗೂ ಹೇಳಬಹುದು, ಕರ್ನಾಟಕ ರಾಣಿಯು ಭುವನೇಶ್ವರೀ ರೂಪವನ್ನು ತಾಳಿ, ಬೈಲು ನಾಡೆಂಬೊಂದು ಸುಂದರವಾದ ಅಟ್ಟವನ್ನು ಹಾಕಿ, ಮಧ್ಯದಲ್ಲಿ **ಗದುಗು** ಎಂಬುನ್ನತಾಸನವನ್ನು ರಚಿಸಿ, ಅದರ ಮೇಲೆ ಕುಳಿತು— ಪಂಪಾಪತಿಬೆಟ್ಟ, ಜಂಬುನಾಥನ ಬೆಟ್ಟ, ಕಪೋತೇಶ್ವರ ಬೆಟ್ಟ, ನಂದಿವರ ಬೆಟ್ಟ, ಬೂದನಗುಡ್ಡ, ರೇಣುಕಾದ್ರಿ, ಮುರಗೋಡಾದ್ರಿ, ಸೊಗಲ ಸಂಗಮೇಶ್ವರ ಬೆಟ್ಟ, ಮುನವಳ್ಳಿ ಪಂಚಲಿಂಗೇಶ್ವರ ಬೆಟ್ಟ, ಮಲವಿನಾಶಿನಿ ರಾಮತೀರ್ಥ ಬೆಟ್ಟ, ಬದಾಮಿ ಬನಶಂಕರೀ ಬೆಟ್ಟ ಹಾಗೂ ಕಾಲಕಾಲೇಶ್ವರ ಬೆಟ್ಟ- ಈ ಪರ್ವತಕ್ಷೇತ್ರ ಸ್ಥಾನಗತ ಶಿವ-ಶಕ್ತಿಯರಿಗೆ ತನ್ನ ವಂದನೆಗಳನ್ನು ಸಲ್ಲಿಸುತ್ತಿರುವಾಗ, ತನಗಾಗಿ ಇಂತಹ ಪುಣ್ಯಭೂಮಿಯನ್ನು ದಯಪಾಲಿಸಿದ [illegible] ಭಾರತಾಂಬೆಗೆ ತನ್ನ ಶರಣರನ್ನು ಸಲ್ಲಿಸುತ್ತಿರುವಳೆಂದು ಯಾರಿಗಾದರೂ ಹೊಳೆಯದಿರದು. ಇದರಿಂದಾಗಿ ಗದುಗಿನ ನೈಸರ್ಗಿಕ ಗುರುತ್ವವನ್ನು ನಾವು ಗುರುತಿಸಬಹುದು.

## ಕ.ಬಿ.ಅಂಗಡಿಯವರು ರಚಿಸಿದ ಪಠ್ಯಪುಸ್ತಕಗಳು ಮುಂಬೈ ಸರಕಾರ ಮತ್ತು ಮೈಸೂರು ಸರಕಾರದಿಂದ ಮಾನ್ಯತೆ ಪಡೆದ ಉಲ್ಲೇಖಗಳು

| | | | | |
|---|---|---|---|---|
| ೧೫೩ | ಗದ್ಯ ಪದ್ಯಾವಳಿ ಸನ್ ೧೯೪೦ | ವಿದ್ಯಾವಿಲಾಸ ಬು.ಕ್ ಡಿಪೋ ಗದಗ | ೦-೧೪-೦ | ಸದರ |

| | | | | |
|---|---|---|---|---|
| ೧೫ | ಕನ್ನಡ ಭಾಷಾಭ್ಯಾಸ ೧ ನೆಯ ಅ. ೧೯೪೩ | ಸದರ | ೦-೧೪-೦ | ಪ್ರಾ. ಶಾ. ವಿ. ವಾ. |
| ೧೬ | ಐವರು ಶಿಕ್ಷಣ ಸುಧಾರಕರು | ಸಿ. ಬಿ. ಹರಿಹರ, ತೋಂಟದಾರ್ಯ | ೦—೫-೦ | ಪ್ರಾ. ಮಾ. ಟ್ರೇ. ವಿ. ಶಿ. ವಾ. |

| | | | | | | |
|---|---|---|---|---|---|---|
| ೧೬ | ನಿಬಂಧಮಾಲೆ<br>೨ನೆ. ಆ. ೧೯೩೬ | ಮ. ಕರವೀರಪ್ಪ<br>ಬಸವಪ್ಪ ಅಂಗಡಿ<br>ಟೀಚರ ಕ. ಶಾಳಾ<br>ಗದಗ | ಆರ್. ಆರ್.<br>ಕಾಮಲಾಪೂರ<br>ಗದಗ | ೦-೧೨-೦ | ಪ್ರಾ. ಶಾ. ಗಳ<br>ಶಿ. ರ. L | ಸದರ 1763 |

| | | | | |
|---|---|---|---|---|
| | | | | ಪಠ್ಯಪುಸ್ತಕ |
| ೯೮ | ಗದ್ಯಪದ್ಯಾವಳಿ ಮೂರನೆಯ ಆವೃತ್ತಿ ೧೯೪೧ | ವಿದ್ಯಾವಿಲಾಸ ಬುಕ್ ಡಿಪೋ ಗದಗ | ೦-೧೫-೦ | ಮಾ. ಟ್ರೇ. ಪಠ್ಯಪುಸ್ತಕ |
| ೯೯ | ಧಾರವಾಡ ಜಿಲ್ಲೆಯ ಭೂಗೋಲು | | | |

| | | | | | |
|---|---|---|---|---|---|
| | | | ರೋಡ, ಅಹಮ್ಮದನಗರ | | |
| ೩೬. | ಗದ್ಯ ಪದ್ಯಾವಳಿ | ಶ್ರೀ. ಕೆ. ಬಿ. ಅಂಗಡಿ | ಜಯಬಸವ ಪುಸ್ತಕಾಲಯ, ಗದಗ | ೧—೪—೦ | ಪ್ರಾ. ಶಾ. ಗಳ ಮೇಲಿನ ವರ್ಗಗಳಿಗೆ ಪುರವಣಿ ವಾಚಕ |

| | | | | | |
|---|---|---|---|---|---|
| ೩೦ | ಪದ್ಯಾವಳಿ (೧ನೆ ಆ. ೧೯೩೯) | ಕೇ. ಬೀ. ಅಂಗಡಿ | ಕೇ. ಬೀ. ಅಂಗಡಿ<br>ಹೆ. ಮಾ. ಸೇ. ಸ್ಕೂ. ಗದಗ | ೦—೬—೦ | ಪ್ರಾ. ಮಾ. ವಿ. ಶಿ.<br>ವಾಚನಾಲಯ |

'ಜೀವನ ಶಿಕ್ಷಣ' ಪತ್ರಿಕೆಗಳಿಂದ ಈ ಉಲ್ಲೇಖಗಳನ್ನು ಕ್ರೋಢೀಕರಿಸಲಾಗಿದೆ.



ಮುರಗೋಡ ಮಹಾಂತ ಶಿವಯೋಗಿಗಳು ಪರಿಷ್ಕರಿಸಲು ನೀಡಿದ
ಬಸವ ನಾಮಾವಳಿಯ ಹಸ್ತಪ್ರತಿ



ಶ್ರೀ ಮುರಗೋಡ ಮಹಾಂತ ಶಿವಯೋಗಿಗಳು ಪರಿಸ್ಕರಿಸಲು
ನೀಡಿದ ಗಣಸಹಸ್ರ ಮಾಲೆಯ ಹಸ್ತಪ್ರತಿ

೧ ಶ್ರೀ ಮಹಾದೇವಸ್ವಾಮಿಗಳು ಸರ್ಪಭೂಷಣಮಠ, ಬೆಂಗಳೂರ
೨ ರಾವಬ. ಎಫ್. ಜಿ. ಹಳಕಟ್ಟಿ, ಬಿ. ಎ., ಎಲ್ ಎಲ್. ಬಿ.
ವಿಜಾಪುರ
೩ ಶ್ರೀಮಾನ್ ಕೆ. ಡಿ. ಬ್ಯಾಳಿ, ಬಿ. ಎ., ಬಿ. ಟಿ. ವಿಜಾಪುರ
೪ „ ಮಂಜಪ್ಪನವರು ಹರ್ಡೇಕರ, ಆಲಮಟ್ಟಿ
೫ „ ಎಸ್. ಎಸ್ ವಾಳವಾಡ, ಎಮ್. ಎ.,
ಪ್ರೊಫೆಸರ, ಕರ್ನಾಟಕ ಕಾಲೇಜ, ಧಾರವಾಡ
೬ „ ಎಸ್. ಎಸ್. ಭೂಸನೂರಮಠ, ಎಮ್. ಎ.,
ಪ್ರೊಫೆಸರ, ಲಿಂಗರಾಜ ಕಾಲೇಜ, ಬೆಳಗಾವ
೭ ಪಂ. ಚಂದ್ರಶೇಖರ ಶಾಸ್ತ್ರಿಗಳು, ವ್ಯಾಕರಣತೀರ್ಥ
ಯಾದಗಿರಿ
೮ „ ನಾಗಭೂಷಣ ಶಾಸ್ತ್ರಿಗಳು, ಗದಗ
೯ ಶ್ರೀ. ಕೆ. ಎಚ್. ಓಲಿ, ಬಿ. ಎ., ಬಿ. ಟಿ. ಗದಗ
೧೦ „ ಕೆ. ಬಿ. ಅಂಗಡಿ, ಶಿಕ್ಷಕರು ಗದಗ
೧೧ „ ಎಸ್. ವ್ಹಿ. ಕಲ್ಲಮಠ ಎಮ್. ಎ., ಬಿ. ಟಿ. ಗದಗ
೧೨ „ ಸಂ. ಸಿ. ಕಲ್ಲೂರ, ಕನ್ನಡ ವಿದ್ವಾನ್

*S. V. Kulmath,*
ಅಧ್ಯಕ್ಷ

# ವೀರಶೈವ ಸಂಸ್ಕೃತಿ ಪ್ರಕಾಶಕ ಸಮಿತಿ, ಗದಗ.

೧೯೪೫ ನೇ ಇಸ್ವಿಯ

## ಸಾಹಿತ್ಯ ಪರೀಕ್ಷೆಯ ಪಠ್ಯಪುಸ್ತಕಗಳ

# ಪತ್ರಿಕೆಯು



ಬಸವಾವತಾರ ಸಂ. ೮೧೯

ತಾ. ೩೦-೧೦ ೧೯೮೦ ಗುರುವಾರ

ಶ್ರೀ ಹಾಲಕೆರೆ ಅನ್ನದಾನೀಶ್ವರ ಸಂಸ್ಥಾನ ಮಠ ಗದಗ
ವೀರಶೈವ ಸಂಸ್ಕೃತಿ ಪ್ರಕಾಶಕ ಸಮಿತಿ ಗದಗ. ಬೆಟಗೇರಿ ಇವರ
ಸ್ಮಾರಕವಾಗಿ.

ಶ್ರೀ ಮನ್ ಮಹಾರಾಜ ನಿರಂಜನ ಜಗದ್ಗುರು ತೋಂಟದ
ಸಿದ್ಧಲಿಂಗ ಮಹಾಸ್ವಾಮಿಗಳವರ ದಿವ್ಯ ಸಾನ್ನಿಧ್ಯದಲ್ಲಿ

ಶ್ರೀ. ನಿ. ಪ್ರ. ಹಾಲಕೆರೆ ಪ್ರಭು ರಾಜೇಂದ್ರ ಮಹಾಸ್ವಾಮಿಗಳ
ಅಪ್ಪಣೆಯ ಮೇರೆಗೆ

ದಿನಾಂಕ: ೧೩-೧೧-೧೯೮೦ ನೇ ಗುರುವಾರದಿಂದ ದಿ ೧೭-೧೧-೧೯೮೦ ನೇ ಸೋಮವಾರದವರೆಗೆ (ಆಚರಣೆಗೆ) ಕಾರ್ಯಕ್ರಮಗಳ ವಿವರ

(೧) ದಿ. ೧೩ ಗುರುವಾರ ಬೆಳಗ್ಗೆ ೯-೦೦ ಕ್ಕೆ ಪ್ರಾರಂಭ
ಶ್ರೀ ಷಟ್‌ಸ್ಥಲ ಧ್ವಜಾರೋಹಣ
ಸಾಯಂಕಾಲ ೭ ಕ್ಕೆ ವೇ। ನಾಗಭೂಷಣ ಶಾಸ್ತ್ರಿಗಳವರಿಂದ
"ಶ್ರೀ ಬಸವ ದರ್ಶನಂ" ಪ್ರವಚನ.

ಶ್ರೀ ಕೆ. ಬಿ. ಅಂಗಡಿ ಅವರ ಉಪನ್ಯಾಸ.

(೨) ದಿ. ೧೪ ಶುಕ್ರವಾರ ಶ್ರೀ ಬಸವ ದರ್ಶನಂ ಪ್ರವಚನ
ವೇ। ನಾ। ಶಾಸ್ತ್ರಿಗಳು.
ಶ್ರೀ ಕೆ. ವಿ. ಬಾಳೆಕಾಯಿ.

(3) ದಿ. ೧೫ ಶನಿವಾರ ಶ್ರೀ ಬಸವ ದರ್ಶನಂ
ಶ್ರೀ. ಎಸ್. ಎಸ್. ಅಂಗಡಿ ಶಿಕ್ಷಕ.

೪. ದಿ. ೧೬ ರವಿವಾರ ಶ್ರೀ ಬಸವ ದರ್ಶನಂ.
ಶ್ರೀ. ಎಸ್. ಟಿ. ಪಾಟೀಲ. ಪ್ರೊ. ಜೆ. ಟಿ. ಕಾಲೇಜ
ಶ್ರೀ. ವೀರಪ್ಪ ಕೌತಾಳ. ಸಂ। ಜನಪ್ರಕಾಶ ಪತ್ರ, ನೇಗಿನಹಾಳ

೫. ದಿ. ೧೭ ಚಂದ್ರವಾರ ಶ್ರೀ ಬಸವ ದರ್ಶನಂ
ಅಕ್ಕನ ಬಳಗದವರು ಶ್ರೀ ನಾಗಮ್ಮ ಸಂಶಿಮಠ
ಮುಕ್ತಾಯ. ಶ್ರೀಗಳ ಆಶೀರ್ವಚನ.

ಕ.ಬ.ಅಂಗಡಿಯವರು ಶಿವಾನುಭವಗಳಲ್ಲಿ ನೀಡುತ್ತಿದ್ದ ಉಪನ್ಯಾಸಗಳ ಉಲ್ಲೇಖ

# ಪ್ರಾತಃಕಾಲ ಶಿವಾನುಭವ ಸಂಘ, ಗದಗ

ಗದಗ-ಬೆಟಗೇರಿ ನಗರದ ಮಧ್ಯವರ್ತಿ ಬಸವೇಶ್ವರ ನಗರದ (ಶಹಪೂರ ಪೇಟ) ಶ್ರೀ ಹಡಗಲಿಮಠದಲ್ಲಿ ಪ್ರತಿಷ್ಠಿತ ನಾಗರಿಕರ ಸಭೆಯಲ್ಲಿ ಪಂ. ನಾಗಭೂಷಣ ಶಾಸ್ತ್ರಿಗಳವರಿಂದ ದಿನಾಂಕ ೧೭-೧೦-೧೯೩೪ ರ ವಿಜಯದಶಮಿ ದಿನದಂದು "ಪ್ರಾತಃಕಾಲ ಶಿವಾನುಭವ ಸಂಘ"ವು ಸ್ಥಾಪನ ಯಾಯಿತು. ಧಾರ್ಮಿಕ ರಂಗದಲ್ಲಿ ವಿಶೇಷವಾಗಿ 'ಲಿಂಗಾಯತ' ತತ್ವಗಳನ್ನು ಸಾರುವ ಮತ್ತು ಕಾರ್ಯರೂಪದಲ್ಲಿ ತರುವಂತೆ ಕಾರ್ಯಕ್ರಮಗಳನ್ನು ಹಾಕಿಕೊಳ್ಳಲಾಯಿತು.

ಪ್ರಾತಃಕಾಲ ಮತ್ತು ಸಾಯಂಕಾಲ ನಿತ್ಯವು ಪುರಾಣ ಪ್ರವಚನಗಳನ್ನು ಪಂ. ನಾಗಭೂಷಣ ಶಾಸ್ತ್ರಿಗಳು ೨೬ ವರ್ಷಗಳ ಕಾಲ ಹೇಳುತ್ತ ಬಂದರು. ಅವರಿಗೆ ಧಾರವಾಡ ಕರ್ನಾಟಕ ವಿಶ್ವವಿದ್ಯಾಲಯವು ಶರಣರ ವಚನಗಳ ಅನ್ವೇಷಣೆ ಮಾಡುವುದಕ್ಕಾಗಿ ಆಮಂತ್ರಿಸಿ ಗೌರವಿಸಿತು.

ಬಳ್ಳಾರಿ ಗುರುಸಿದ್ದಪ್ಪನವರು, ಕ. ಬ. ಅಂಗಡಿಯವರು, ಮರಿಗೌಡರ, ರುದ್ರಯ್ಯನವರು ಮಾಳೇಕೊಪ್ಪಮಠ, ಗುರುಸಿದ್ದಪ್ಪನವರು ಹುಣಸಿಮರದ, ಅಡಿವೆಪ್ಪನವರು ತುಪ್ಪದ -ಮೊದಲಾದವರು ಈ ಸಂಸ್ಥೆಯಲ್ಲಿ ಪರಿಶ್ರಮವಹಿಸಿ ದುಡಿದಿದ್ದಾರೆ.

ಪಂ. ನಾಗಭೂಷಣ ಶಾಸ್ತ್ರಿಗಳವರು ಧಾರವಾಡಕ್ಕೆ ಹೋದ ಮೇಲೆ ಹಡಗಲಿಮಠದಿಂದ ಸಂಘವು ಸ್ಥಳಾಂತರಗೊಂಡಿತು. ೧೯೬೦ ರಿಂದ ೧೯೬೭ರ ವರೆಗೆ ಹಾಳಕೇರಿ ಮಠದಲ್ಲಿ, ೧೯೬೭ ರಿಂದ ೧೯೭೪ ರ ವರೆಗೆ ವೀರೇಶ್ವರ ಪುಣ್ಯಾಶ್ರಮದಲ್ಲಿ ಶಿವಾನುಭವಗಳು ಮತ್ತು ಪ್ರವಚನಗಳು ನಡೆದು ೧೯೭೪ ರಿಂದ ಇಂದಿನವರೆಗೂ ಜಗದ್ಗುರು ತೋಂಟದಾರ್ಯ ಮಠದಲ್ಲಿ ಶಾಶ್ವತವಾಗಿ ಆಶ್ರಯ ದೊರೆತು ಪೂಜ್ಯ ಜಗದ್ಗುರುಗಳವರ ಆಶೀರ್ವಾದದಿಂದ ನಿತ್ಯವೂ ಶಿವಾನುಭವಗಳು ನಡೆದು ಬಂದಿವೆ.

ಪಂ. ಸಿದ್ಧಲಿಂಗಯ್ಯ ಶಾಸ್ತ್ರಿಗಳು, ವೇ. ಪಂಚಾಕ್ಷರಯ್ಯ [illegible] ಅವರು ಪ್ರವಚನ ಮಾಡಿರುವರು. ಇದೀಗ ಪೂಜ್ಯ ಬಸ[illegible] ಸ್ವಾಮಿಗಳವರು ಜ್ಞಾನ ದಾಸೋಹಿಗಳಾಗಿದ್ದಾರೆ. ಶ್ರೀ ಸದಾಶಿವ [illegible]ಗಣ್ಣ ವರ[illegible] ೧೯೯೪ ರಿಂದ ಸಂಘದ ಅಧ್ಯಕ್ಷರಾಗಿ ಕಾರ್ಯನಿರ್ವಹಿಸುತ್ತಿದ್ದಾರೆ. ಹೀಗೆ ಸಂಘವು ೬೭ ವರ್ಷಗಳ ಕಾಲ ಸುದೀರ್ಘವಾಗಿ ಲಿಂಗವಂತ ಧರ್ಮದ ತತ್ವ ಪ್ರಸಾರ ಮಾಡುತ್ತಲಿದೆ. ಪೂಜ್ಯರ ಕೃಪಾಶೀರ್ವಾದದಲ್ಲಿ ನಿರಂತರವಾಗಿ ಮುನ್ನಡೆಯಲೆಂದು ಹಾರೈಸಲಾಗಿದೆ.

| | | | |
|---|---|---|---|
| [illegible] | [illegible] | ಶ್ರೀ [illegible] | ಶ್ರೀ ಹಡಗಲಿ [illegible] |
| [illegible] | ಶ್ರೀ. ಅಮರೇಶ ಕೆ. ಅಂಗಡಿ<br>ಶ್ರೀ ಸಿ. ಎಸ್. ಮುತ್ತಿನಪೆಂಡಿಮಠ | ಶ್ರೀ ವೀರಭದ್ರಪ್ಪ ಅಂ. ಮುರಗಿ<br>ಗುಪ್ತ ದಾಸಿಗಳು | [illegible]<br>ಸನ್ಮಾನ |
| [illegible] | ಶ್ರೀ. ದೇವೇಂದ್ರಕುಮಾರ [illegible]<br>ಶ್ರೀ [illegible] | [illegible] | |
| [illegible] | ಶ್ರೀ ರುದ್ರಯ್ಯನವರು ಮಾಳೆಕೊಪ್ಪ ಮಠ<br>ಶ್ರೀ ಗುರುಶಾಂತ ಶಾಸ್ತ್ರಿಗಳು, ಮುದೇನೂರ<br>ಕ. ಬ. ಅಂಗಡಿ ಮಾಸ್ತರ | ಶ್ರೀ ಶಂಕರಪ್ಪ ಬಿ. ಸಿದ್ದಾಪೂರ<br>ಶ್ರೀ ವೀರಭದ್ರಯ್ಯ ರು. ಗಿರಿಮಠ | —<br>— |
| [illegible] | ಶ್ರೀ ಕ. ಬ. ಅಂಗಡಿ | ಶ್ರೀ ಎಸ್. ಬಿ. [illegible] | ಉಪನ್ಯಾಸ |
| [illegible] | [illegible] ಡಾ. ಎಂ. [illegible]<br>ಶ್ರೀ. ಜಿ. ಎಂ. [illegible] | [illegible] ಮಹಿಳಾ ಸಂಘ | — |
| [illegible] | [illegible]<br>ಶ್ರೀ ಬಸವಂತಪ್ಪ ಪ. ಮಂದಾನಿ<br>ಪೂಜ್ಯ ಶ್ರೀ ಸದಾಶಿವ ಸ್ವಾಮಿಗಳು [illegible]<br>[illegible]<br>ಪೂಜ್ಯ ಶ್ರೀ ಶಿವಲಿಂಗೇಶ್ವರ ಸ್ವಾಮಿಗಳು, ಹಾವೇರಿ | ಶ್ರೀ ಅಂದಾನಪ್ಪ ಕೆ. [illegible] | "ಪೂಜ್ಯ [illegible] ನವರ [illegible]" [illegible] ಬಿಡುಗಡೆ |
| [illegible] | [illegible]<br>ಶ್ರೀಮತಿ ಸರೋಜಾದೇವಿ ಬೆಂಗಳೂರು<br>ಶ್ರೀ ಪಿ.ಬಿ. ದುತ್ತರಗಿ ನಾಟಕ ರತ್ನ<br>ಶ್ರೀ [illegible] | | |
| [illegible] | ಶ್ರೀ ಕ.ಬ. ಅಂಗಡಿ | ಸಂಘದ ವತಿಯಿಂದ | ಸನ್ಮಾನ |
| [illegible] | [illegible] | ಶ್ರೀ [illegible] | |
| [illegible] | ಶ್ರೀ ಕ. ಬ. ಅಂಗಡಿ ಮಾಸ್ತರ | ಶ್ರೀಮತಿ [illegible] | ಬಸವಣ್ಣನವರ ಚಿತ್ರಗಳ ಬಿಡುಗಡೆ<br>[illegible] ಬಗ್ಗೆ ಉಪನ್ಯಾಸ |
| [illegible] | ಶ್ರೀ ಬಸವರಾಜ ತುಪ್ಪದ,<br>ಶ್ರೀ [illegible],<br>ಶ್ರೀ ಕ. ಬ. ಅಂಗಡಿ,<br>ಡಾ. ವೃ. ಶಿವಾನಂದ | ಶ್ರೀ ಬಸಪ್ಪ [illegible] | 'ಧರ್ಮರತ್ನಗಳು' ಕೃತಿ ಬಿಡುಗಡೆ |
| [illegible] | ಡಾ. ವೃ. ಶಿವಾನಂದ ಉಪನ್ಯಾಸ | ಶ್ರೀ [illegible] | |



ರೋಣ ತಾಲೂಕಿನ ಮೆಣಸಗಿ ಗ್ರಾಮದವರು ಮೂರನೆಯ ವರ್ಗದ ಶಿಕ್ಷಕ ತರಬೇತಿ, ಇಂಟರ ಆರ್ಟ್ಸವರೆಗೆ ಇಂಗ್ಲೀಷ ಅಭ್ಯಾಸ ಮಾಡಿದವರು; ಅನೇಕ ಪುರಾಣಗಳ, ಶೈಕ್ಷಣಿಕ ಪುಸ್ತಕಗಳ ಗ್ರಂಥಕರ್ತರು ಲಿಂಗೈಕ್ಯ ಶ್ರೀ ಕ. ಬ. ಅಂಗಡಿ ಮಾಸ್ತರ ಶರಣ ಕವಿಗಳಾದ ಇವರು ನಿವೃತ್ತಿ ಶಾಲಾ ತಪಾಸಣಾಧಿಕಾರಿಗಳೂ ಆಗಿದ್ದರು. ನಗರದ ಜಯ ಪುಸ್ತಕಾಲಯದ ಒಡೆಯರಾದ ಇವರು ಮುರುಗೋಡ ಮಹಾಂತ ಶಿವಯೋಗಿಗಳಲ್ಲಿ ಅನನ್ಯ ಭಕ್ತಿ ಹೊಂದಿದ್ದರು.

**ತೋಂಟದಾರ್ಯ ಮಠದ ೧೦೦೦ ಶಿವಾನುಭವ ಕಾರ್ಯಕ್ರಮದಲ್ಲಿ 'ಸಾವಿರ ಶಿವಾನುಭವ' ಎನ್ನುವ ಕೃತಿಯಲ್ಲಿ 'ಕನಸು ಕಂಡವರು' ಎಂಬ ಶೀರ್ಷಿಕೆಯಡಿ ಕ.ಬ.ಅಮಗಡಿಯವರನ್ನು ನೆನೆಯುತ್ತಾರೆ.**

ಶ್ರೀ ಗುರು ಬಸವಲಿಂಗಾಯನಮಃ

ಶ್ರೀ ಮ.ನಿ.ಪ್ರ. ಸಿದ್ಧಲಿಂಗಸ್ವಾಮಿಗಳು ತೋಂಟದಾರ್ಯ ಸಂಸ್ಥಾನಮಠ ಡಂಬಳ ಮತ್ತು ಗದಗ ಅವರ ಸನ್ನಿಧಾನದಲ್ಲಿ ಜರುಗುವ

— — —

ಶ್ರೀಮಾನ್ ಕರವೀರಪ್ಪ ಬಸಪ್ಪ ಅಂಗಡಿ, ನಿವೃತ್ತ ಉಪವಿದ್ಯಾಧಿಕಾರಿಗಳು ಗದಗ ಅವರ 80 ವರ್ಷಗಳ ತುಂಬು ಜೀವನದ ಸವಿನೆನಪಿಗಾಗಿ ಸತ್ಕಾರ ಮಾಡುವ ನಿಮಿತ್ಯ ದಿನಾಂಕ:-24-9-1[illegible]/ರಂದು ಸರ್ವ ಸದಸ್ಯರ ಸಭೆಯಲ್ಲಿ ಕೆಳಗಿನಂತೆ ಸಮಿತಿ ರಚಿಸಲಾಗಿದೆ. ಅರಿಕೆ ಇರಲಿ. ಸತ್ಕಾರ ದಿನಾಂಕ:— 8-11-1976 ಸೋಮವಾರ.

— — —

| | | | |
|---|---|---|---|
| 1) | ಸತ್ಕಾರ ಸಮಿತಿ | ಅಧ್ಯಕ್ಷರು | ಶ್ರೀ ಕೆ. ಪಿ. ಗದಗ |
| | | ಉಪಾಧ್ಯಕ್ಷರು | ,, ಬಿ. ಸಿ. [redacted] |
| | | ,, | ,, ಪಿ. ಡಿ. ಹುಯಿಲಗೋಳ |
| | | ಕಾರ್ಯದರ್ಶಿಗಳು | ,, ಟಿ. ಎಫ್. ಪವಾಡಶೆಟ್ಟರ |
| 2) | ಹಣಕಾಸು (ಆಯ— ವ್ಯಯ) | | ,, ಸಿದ್ದಪ್ಪ ರಾಚಪ್ಪ ಬಳಿಗಾರ |
| 3) | ಕಾರ್ಯಕ್ರಮ ವ್ಯವಸ್ಥೆ | | ,, ಎಸ್. ಎಸ್. ಗದಗ |
| | | | ,, ಸಿದ್ದಪ್ಪ ಬರಡಿ |
| | | | ,, ವಿರುಪಾಕ್ಷಪ್ಪ ಹನಮಸಾಗರ |
| | | | ,, ಎಸ್. ಎಸ್. ಬಗಲಿ |
| 4) | ಸ್ಮರಣ ಸಂಚಿಕೆ | | ,, ವಿ. ವಿ. ಗಡಾದ |
| | | | ,, ಎಸ್. ಬಿ. ಸಂಕನಗೌಡರ |
| | | | ,, ಎಸ್. ಎಮ್. ಬೆಲ್ಲದ. |

5) ಸತ್ಕಾರ ಸಮಿತಿ ಸದಸ್ಯರು:— ಸರ್ವಶ್ರೀ 1) ಎಸ್. ಎಮ್. ನಿಲುಗಲ 2) ಸಿದ್ದಪ್ಪ ಬರಡಿ (3) ವಿ. ಬಿ. ಹನಮಸಾಗರ (4) ಎಸ್. ಜಿ. ಕಟ್ಟಿ ಹುಬ್ಬಳ್ಳಿ 5) ಸು. ಎಸ್. ಮಾನ್ವಿ 6) ಎಸ್. ಆರ್. ಮಾನ್ವಿ 7) ಸಿ. ಜಿ. ಕೋಟಿ 8) ಎ. ಎಸ್. ಮಾನ್ವಿ 9) ಜಿ. ಎಸ್. ಮಾನ್ವಿ 10) ಎಸ್. ಎಸ್. ಗದಗ 11) ಸಿ. ಎಸ್. ಮುತ್ತಿನಪೆಂಡಿಮಠ 12) ವಿ. ವಿ. ಗಡಾದ 13) ಬಿ. ಎಮ್. ಚನ್ನಪ್ಪಗೌಡರ 14) ಎಫ್. ಸಿ. ಅಂಗಡಿ 15) ಸಿ. ಎಸ್. ಪಾಟೀಲ 16) ಎಸ್. ಬಿ. ಸಂಕನಗೌಡರ 17) ಎಸ್. ಎಸ್. ವ್ಯಾಪಾರಿಮನಿ, 18) ಆಯ್. ಜಿ. ಬೆಂಡಿಗೇರಿ ಅಂಡ ಸನ್ಸ 19) ಸಿದ್ದಪ್ಪ ಹುವಾಗ್ಗಲ 20) [illegible] ಬಳ್ಳಾ 21) ಆರ್. ಸಿ. ಹುಲಕೋಟಿ 22) ಸಿ. ಆರ್. ಮುನವಳ್ಳಿ 23) ಪಿ. ಎಸ್. ಸಂಶಿಮಠ 24) ಗುರುಸಿದ್ದಪ್ಪನವರು ಹುಣಶೀಮರದ ಮತ್ತು 25) ಬಿ. ವಿ. ಅಂಗಡಿ.

| | | |
|---|---|---|
| 6) | ನಿಧಿ ಸಂಗ್ರಹ ಸಮಿತಿ:— | ಶ್ರೀ ಎಮ್. ಎಸ್. ಮಾನ್ವಿ |
| | | ,, ಪಿ. ಡಿ. ಹುಯಿಲಗೋಳ |
| | | ,, ಎಸ್. ಆರ್. ಬಳಿಗಾರ. |
| | | ,, ವಿ. ಬಿ. ಹನಮಸಾಗರ. |
| | | ,, ಟಿ. ಎಫ್. ಪವಾಡಶೆಟ್ಟರ |

ಉಪಾಧ್ಯಕ್ಷರು   ಕಾರ್ಯದರ್ಶಿ   ಸತ್ಕಾರ ಸಮಿತಿ ಅಧ್ಯಕ್ಷರು

ಟಿ. ಎಫ್. ಪವಾಡಶೆಟ್ಟರ,

[illegible], ಗದಗ

# ೮೦ನೆಯ ಹುಟ್ಟು ಹಬ್ಬದ ಸುಸಮಯದಲ್ಲಿ ತೋಂಟದಾರ್ಯ ಮಠದಲ್ಲಿ ಸತ್ಕಾರ ಮಾಡಿದ ಕಾರ್ಯಕ್ರಮ ಕೈ ಡಿ

# ಕರವೀರಾಷ್ಟಕ



ಗೊಡಚಿ ವೀರನ ಅಣುಗ
ಬಸವಸುತನೈ ನೀನು ;
ಶಿವಯೋಗಮಂದಿರದಿ
ರಸಜೀವ ಭಾವಧೇನು ! ॥1॥

ಷಟ್‌ಸ್ಥಲದ ನಿಜಜ್ಞಾನಿ,
ವಟುವಾಗಿ ಮಂದಿರದಿ ;
ಸಜ್ಜನನು–ಸಂಪನ್ನ
ಶಿವಯೋಗ ಮನೆಮಾಡಿ ॥2॥

ಬಸವನುಡಿಯಲಿ ಜಿನಿವ
'ವಚನ' ಸುಧೆಯನು ಉಣಿಸಿ ;
ಬಸವನಡೆಯಲಿ ಫಲಿತ
'ಕಾಯಕ'ದ ಸಿರಿ ತೊಡಿಸಿ ॥3॥

"ಅಷ್ಟಾವರಣ ನಿಷ್ಠಾ
ಗರಿಷ್ಠನು" ನೀನಹುದು ;
ಪುಟ್ಟರಾಜರ ಕರಣ
ದೃಷ್ಟಿ– ಸೃಷ್ಟಿಗೆ ಸಂದು ! ॥4॥

ಮುರಗೋಡ ಶಿವಯೋಗಿ
ವರಪಾದದನುಚರನು ;
ಅರಭಾವಿ ಯತಿವರಗೆ
ಭಕ್ತವತ್ಸಲನಹನು ! ॥5॥

ಪರಮನರಮನೆ ಸಮನೆ
ಇರುವ 'ಗದ್ದುಗೆಪುರ'ದಿ
ಗಾಳಿ–ಗಂಧದ ಕೆಳೆಯ
ಮಕ್ಕಳೆದೆಯಲಿ ತೀಡಿ ॥6॥

ನೀನು ಮಾರ್ಗವು ನಮ್ಮ
ಮಾರ್ಗದರ್ಶಕನಿಂದು !
ಗೋಚರನಗೋಚರನು
ಅಂದಿಗಿಂದಿಗು ಎಂದು !! ॥7॥

'ಪುಣ್ಯಕಾಲ'ವು ಇಂದು
ಕರವೀರ ಸಂತತಿಗೆ ;
ಚಿರಶಾಂತಿ ಸಲೆಪ್ರಾಪ್ತಿ
ಅನುಸರಿಸಿ ತವಸ್ಮರಣೆ ! ॥8॥

– ಉಮೇಶ ಅಂಗಡಿ
ಕನ್ನಡ ವಿಶ್ರಾಂತ ಪ್ರಾಧ್ಯಾಪಕರು,
ಗದುಗು

೬ - ಜುಲೈ ೨೦೦೮

ಐದನೆಯ ಹಿರಿಯ ಗುರು ಆರ್. ಸಿ. ಸಿದ್ದನಗೌಡರು।
ಸಾಧು ಶ್ರೀ ಎಲ್.ಹೆಚ್. ಹೊಂಬಳ ಹಿರಿ ಗುರುಗಳು।
ಸಾದರ ಶ್ರೀ ಡಿ. ಕೆ. ರಂಗಾಪೂರ ಹಿರಿ ಗುರುಗಳು।
ಸಾಧಕ ಶ್ರೀ ಹಿರಿಯಗುರು ಕೆ. ಬಿ. ಅಂಗಡಿಯವರು ॥

ಕ.ಬ.ಅಂಗಡಿಯವರ ಕಿರಿಯ ಸಮಕಾಲೀನರಾದ ಜಾಡಗೌಡರು ಸೆಂಟ್ರಲ್ ಸ್ಕೂಲಿನ ಶತಮಾನೋತ್ಸವ ಸಂಚಿಕೆಗೆ ಬರೆದ ಪದ್ಯದಲ್ಲಿ ಕ.ಬ.ಅಂಗಡಿಯವರ ಉಲ್ಲೇಖ ಮತ್ತು ಅವರ ಶಿಕ್ಷಣ ಪ್ರೇಮದ ಬಗೆಗೆ ಅಭಿಮಾನವನ್ನು ವ್ಯಕ್ತಪಡಿಸಿದ್ದಾರೆ.

ಆಂ. ಶ್ರೀ ಕ. ಬ. ಅಂಗಡಿಯವರು

ವಿದ್ಯೆ ವಿನಯದ ಗಣಿಯು, ಸುಚರಿತ ಶರಣ
ಸಾಹಿತ್ಯ ಶಿಕ್ಷಣಕೆ ತುಂಬಿದನು ಹರಣ।
ಜೈಲಾಯ ನಾಟಕ ಪುರಾಣಗಳ ಬರೆದ
ಪತ್ರ ಪುಸ್ತಕ ರಚಿಸಿ ಕನ್ನಡದಿ ಮೆರೆದ!

— ಜಿ. ಎಸ್. ಅನ್ನದಾನಿ

ಕ.ಬ.ಅಂಗಡಿಯವರ ಶಿಷ್ಯರಾದ ಶ್ರೀ ಜಿ.ಎಸ್.ಅನ್ನದಾನಿ ಅವರು ಕ.ಬ.ಅಂಗಡಿಯವರ ಕುರಿತು ರಚಿಸಿದ ಚುಟುಕು

Regd. No. 2652
Belgaum. 30-3-54

ಗೊಡಚಿ ಸೇವಾ ಸಂಘದ ನೊಂದಣಿ ಸಂಖ್ಯೆ



ಭಾವಗೀತೆಗಳು- ಸಂಪಾದನಾ ಕೃತಿ




ಶಿವಾನುಭವ ಸುಮನ




ಧರ್ಮಾಚಾರ ಸಂಪಾದಿತ ಕೃತಿ




ವಚನಮಧು ಸಂಪಾದಿತ ಕೃತಿ




ಗಣಸಹಸ್ರ-ಜಯಬಸವ-ಸಿದ್ಧಲಿಂಗಶ್ರೀಗುರು ನಾಮಾವಲಿತ್ರಯ




ಮುರಗೋಡ ಮಹಾಂತ ಶಿವಯೋಗಿಗಳ ನಡೆ-ನುಡಿ-ಬೆಡಗಿನ ಮಾಲೆ




ವೀರಶೈವ ತತ್ವಪ್ರವೇಶ ಸಂಪಾದಿತ ಕೃತಿ

**೮. ವೀರಶೈವ ಪ್ರಗತಿಶೀಲ ಯುವಕ ಸಂಘದ ಕಿರುಹೊತ್ತಿಗೆಗಳು : (೧೯೭೦)**

ವೀರಶೈವ ಸಮಾಜದ ಸರ್ವತೋಮುಖ ಅಭಿವೃದ್ಧಿಗಾಗಿ ೧೯೭೦ ರಲ್ಲಿ ಸ್ಥಾಪಿತವಾದ ಈ ಸಂಘವು ಈ ವರೆಗೆ ಅನೇಕ ಮಹತ್ವದ ಕಾರ್ಯಗಳನ್ನು ಮಾಡಿದೆ. ಪ್ರತಿ ಸೋಮವಾರದಂದು ಶಿವಾನುಭವ ಕಾರ್ಯಕ್ರಮ ನಡೆಸುವದು, ಬಸವಾದಿ ಪ್ರಮುಖರ ವಚನ ಕಾರ್ಡುಗಳನ್ನು ಮುದ್ರಿಸಿ ಪ್ರಕಟಿಸುವದು, ಮತ್ತು ವೀರಶೈವ ಮಹಾತ್ಮರ ಚರಿತ್ರೆಗಳನ್ನು ಕಿರುಹೊತ್ತಿಗೆಗಳಲ್ಲಿ ಬರೆಯಿಸುವದು ಇವೇ ಮುಂತಾದ ಧಾರ್ಮಿಕ ಪ್ರಸಾರದ ಯೋಜನೆಗಳನ್ನು ಇದು ಹಮ್ಮಿಕೊಂಡಿದೆ. ಪತಿಷ್ಠಿತ ಮನೆತನದ ಶ್ರೀಮಂತ ಜಿ. ಎಸ್. ಮಾನ್ವಿ ಅವರು ಇದರ ಸಂಸ್ಥಾಪಕರೂ, ಸಂಚಾಲಕರೂ ಆಗಿದ್ದಾರೆ. ೧೯೭೫ರ ಸಾಲಿನಲ್ಲಿ ಶ್ರೀಮಾನ್ ಸಂಶಿಮಠರು ಈ ಸಂಘದಅಧ್ಯಕ್ಷರಾಗಿದ್ದು ಅನೇಕ ಪೂಜ್ಯರ ಹೊತ್ತಿಗೆಗಳನ್ನು ಪ್ರಕಟಿಸಿ ಧಾರ್ಮಿಕ ಸಾಹಿತ್ಯದ ಏಳ್ಗೆಗೆ ಕಾರಣರಾಗಿದ್ದಾರೆ. ಈ ವರೆಗೆ ಈ ಸಂಘವು ಪ್ರಕಟಿಸಿದ ಪುಸ್ತಕಗಳು ಇಂತಿವೆ. ೧) ನಮ್ಮ ಮಠ— ಶ್ರೀ ಗಡಾದ, ೨) ಶ್ರೀ ಎಡೆಯೂರ ಶ್ರೀ ಸಿದ್ಧಲಿಂಗೇಶ್ವರ ಸಹಸ್ರ ನಾಮಾವಳಿ- ಶ್ರೀ ಸಿದ್ಧವೀರ ಕವಿ ಸೊಕ್ಕೆ ೩) ನಮ್ಮಗುರು ಕುಮಾರ ಶಿವಯೋಗಿಗಳು. ಪಂ. ಪುಟ್ಟರಾಜ ಗವಾಯಿಗಳು ೪) ಬೂದೀಶ್ವರ ಸ್ವಾಮಿಗಳ ಜೀವನ ದರ್ಶನ ಮತ್ತು ನಾಮಾವಳಿ—ಶ್ರೀ ಕಲ್ಯಾಣಪ್ಪ ಬ್ಯಾಳಿ. ೫) ಮುರುಗೋಡ ಮಹಾಂತ ಸ್ವಾಮಿಗಳವರ ಮಹಿಮೆ- ಶ್ರೀ ಕೆ. ಬಿ. ಅಂಗಡಿ. ೬) ಗುಡ್ಡಾಪೂರ ದಾನಮ್ಮದೇವಿ ಚರಿತ್ರೆ- ಶ್ರೀ ಗಡಾದ ಗುರುಗಳು. ೭) ವೀರಶೈವ ಧರ್ಮದ ಹಿರಿಮೆ–ಶ್ರೀ ಸಿದ್ಧರಾಮದೇವರು ಸಿಂದಗಿ ೮) ಮೈಲಾರ ಬಸವಲಿಂಗ ಶರಣರ ತ್ರಿವಿಧಿ ೯) ವೀರಶೈವ ಧರ್ಮದ ತತ್ವಗಳು ೧೦) ಬಸವಣ್ಣನವರ ವಚನಾಮೃತ ಬಿಂದುಗಳು— ಪಂ. ನಾಗಭೂಷಣ ಶಾಸ್ತ್ರಿಗಳು ಇತ್ಯಾದಿ.

ಈ ಕೃತಿಗಳ ಬರವಣಿಗೆ ಬೋಧಪ್ರದವಾಗಿದ್ದು ಸರಳವಾಗಿರುವದರಿಂದ ಇವುಗಳ ಪ್ರಚಾರ ಹೆಚ್ಚಿದೆ. ಅತ್ಯಂತ ಕಡಮೆ ಬೆಲೆಯಲ್ಲಿ ಶ್ರೇಷ್ಠ ಸಾಹಿತ್ಯವನ್ನು ಒದಗಿಸುವುದು ಇವರ ಉದ್ದೇಶವಾಗಿದೆ. ಈ ಸಂಘದ ಯೋಜನೆಗಳು ವಿಚಾರ ಪೂರ್ಣವೂ ಪ್ರಗತಿಪರವೂ ಆಗಿದ್ದು ಈದೃಷ್ಟಿಯಿಂದ 'ವೀರಶೈವ ಪ್ರಗತಿಶೀಲ ಯುವಕ ಸಂಘಕ್ಕೆ' ಉಜ್ವಲ ಭವಿಷ್ಯವಿದೆ. ವೀರಶೈವ ಸಾಹಿತ್ಯದ ಅಮೂಲ್ಯ ತತ್ವಗಳು ವಚನಗಳಲ್ಲಿ ಅಡಕವಾಗಿವೆ. ಅವುಗಳ ಪ್ರಸಾರ ಈ ಸಂಘದಿಂದ ನಿರಂತರವಾಗಿ ನಡೆದಿದೆ. ಮುಖ್ಯವಾಗಿ ಇಂದಿನ ಕಾಲಮಾನದಲ್ಲಿಯ ವೀರಶೈವರಲ್ಲಿ ಗುರುವರ್ಗ. ವಿರಕ್ತ ವರ್ಗದವರ ಸಾಹಿತ್ಯವೆಲ್ಲ ಒಟ್ಟಾರೆ ಒಂದೇವೊಂದಾದ ವೀರಶೈವ ಸಾಹಿತ್ಯವೆಂಬುದನ್ನು ತಿಳಿಸಲು ವಚನ ಕಾರ್ಡುಗಳಲ್ಲಿ ಒಂದು ಕಡೆ ಶರಣರ ವಚನ ಇನ್ನೊಂದುಕಡೆ ಸಿದ್ಧಾಂತ ಶಿಖಾಮಣಿಯ ಶ್ಲೋಕಗಳನ್ನು ಅಚ್ಚು ಹಾಕಿಸಿ ಅಲ್ಲಿಯ ತತ್ವವನ್ನು ತಿಳಿಯಾದ ಭಾಷೆಯಲ್ಲಿ ಬರೆಯಿಸಿ ಮಾಡುತ್ತಿರುವ ಕಾರ್ಯ ನಿಜಕ್ಕೂ ಆದರ್ಶಪ್ರಾಯವಾಗಿದೆ. ಈ ಸಂಘವು ಆಧುನಿಕ ವೀರಶೈವ ಸಮಾಜ[illegible] ಅಸ್ತಿಭಾರವನ್ನು ವಿಶಾಲ ತಳಹದಿಯ ಮೇಲೆ ಹಾ[illegible]ವುದು ನಮಗೆ ಇದರಿಂದ ಸೂಚಿತವಾಗುತ್ತದೆ.

**೧. ಹಾನಗಲ್ಲು ಕುಮಾರ ಸ್ವಾಮಿಗಳ ಸೇವಾ ಸಂಘದ ಸಾಹಿತ್ಯ ಪ್ರಸಾರ (೧೯೨೫)**

ಈ ಶತಮಾನದ ಪೂರ್ವೋತ್ತರದಲ್ಲಿ ಗದುಗಿನ ವೀರಶೈವ ಸಾಹಿತ್ಯಸಂಸ್ಕೃತಿಪರವಾದ ಕಾರ್ಯಚಟುವಟಿಕೆಗಳು ಆರಂಭವಾದುದು ಮುಖ್ಯವಾಗಿ 'ಹಾನಗಲ್ಲು ಕುಮಾರಸ್ವಾಮಿಗಳ ಸೇವಾಸಂಘ'ದಿಂದ. ಇದರ ಸ್ಥಾಪಕರು ಈಗಿನ ನಿವೃತ್ತ ಉಪಶಿಕ್ಷಣಾಧಿಕಾರಿಗಳೂ ಜಯಬಸವಪುರಾಣದ ಒಡೆಯರೂ ಮೇಲಾಗಿ ಗಣ್ಯಕವಿಗಳೂ ಆದ ಶ್ರೀ ಕೆ. ಬಿ. ಅಂಗಡಿ ಅವರು. ರಾಚೋಟಿ ದೇವರಗುಡಿ ಆಗ ಸಂಘದ ಆಶ್ರಯ ಸ್ಥಳವಾಗಿತ್ತು. ಲಿಂಗೈಕ್ಯ ಹುಬ್ಬಳ್ಳಿ ಶಾಂತಪ್ಪನವರು ಇದರ ಪೋಷಕರಾಗಿದ್ದರು. ಧರ್ಮರಕ್ಷಣೆ, ಸಾಹಿತ್ಯ ಪೋಷಣೆ ಹಾಗೂ ಸಂಸ್ಕೃತಿ ಪ್ರಸಾರಗಳು ಈ ಸಂಘದ ಮುಖ್ಯ ಗುರಿಯಾಗಿದ್ದವು. ಶ್ರೀ ಕೆ. ಬಿ. ಅಂಗಡಿ ಅವರು ಇದೇ ಸಂಘದ ಆಶ್ರಯದಲ್ಲಿ (೧) ವಿಷಾಪಹರಣಲೀಲೆ (೨) ಹಾನಗಲ್ಲು ಕುಮಾರಸ್ವಾಮಿಗಳ ಚರಿತ್ರೆ ಹಾಗೂ (೩) ಮಂಗಲ ಗೀತೆಗಳನ್ನು ಬರೆದರು. ಕಾರಣಾಂತರಗಳಿಂದ ಈ ಸಂಘವು ನಿಂತುಹೋದರೂ, ಅದರದೇ ಶಾಖೆ, ಅದೇ ವ್ಯಕ್ತಿಗಳ ಅಂತಃಸ್ಫೂರ್ತಿಯಿಂದ ೩೦ ವರ್ಷಗಳ ತರುವಾಯದಲ್ಲಿ ಮತ್ತೆ 'ಅನುಭವ ಮಂಟಪ ಗ್ರಂಥಮಾಲೆ'ಯೆಂಬ ಹೆಸರಿನಿಂದ ಮುಂದುವರಿಯಿತು.

ಶ್ರೀ ಕೆ ಬಿ. ಅಂಗಡಿ : ಇವರು ಅರ್ಧ ಶತಮಾನ ಕಾಲದಿಂದಲೂ ಅನೇಕ ಕೃತಿಗಳನ್ನು ಕನ್ನಡಕ್ಕೆ ನೀಡಿದ್ದಾರೆ. ಶಿಕ್ಷಣ ಕ್ಷೇತ್ರದಲ್ಲಿ ಸೇವೆ ಸಲ್ಲಿಸುತ್ತಿರುವಾಗಲೇ ಬರೆದ 'ನಿಬಂಧ ಮಾಲೆ'(೧೯೫೪) ರಾವಸಾಹೇಬ ಶಿವಪ್ಪ ದುಂಡಪ್ಪ ಮಾನ್ವಿ ಅವರಿಗೆ ಅರ್ಪಿತವಾಗಿದ್ದು, ಇಂದಿಗೂ ಕನ್ನಡ ವಿದ್ಯಾರ್ಥಿಗಳಿಗೆ ಪ್ರಯೋಜಕವಾಗಿದೆ. ಹಾನಗಲ್ಲು ಕುಮಾರಸ್ವಾಮಿಗಳ, ಮುರಗೋಡ ಮಹಾಂತ ಸ್ವಾಮಿಗಳ, ದಿವ್ಯಸಂಪರ್ಕದಲ್ಲಿ ಶ್ರದ್ಧೆ, ನಿಷ್ಠೆಗಳನ್ನು ಬೆಳೆಸಿಕೊಂಡ ಶ್ರೀ ಕೆ. ಬಿ. ಅಂಗಡಿ ಅವರು ವಿಶೇಷತಃ

# ಕಾಯಕನಿಷ್ಠ ಶರಣ ಕರವೀರಪ್ಪನವರು ಅಂಗಡಿ

(ದಶವಾರ್ಷಿಕ ಪುಣ್ಯಸ್ಮರಣೆ ನಿಮಿತ್ತ)

ಹುಟ್ಟು-ಸಾವುಗಳು ಸಕಲರಿಗೂ ಸಾಮಾನ್ಯ. ಈ ಜನನ-ಮರಣಗಳ ಮಧ್ಯದಲ್ಲಿನ ಬದುಕು. ಈ ಬದುಕಿನ ಕಾಲದಲ್ಲಿ ಅದಕ್ಕೆ ಬೆಲೆ ಬರುವಂತೆ ಬಾಳುವುದು ಒಂದು ಕಲೆ. ಜೀವನ ಕಲೆಯನ್ನು ಶಿವಕಲೆಯನ್ನಾಗಿ ಮಾಡಿಕೊಂಡು 'ಲಿಂಗ' ಮುಟ್ಟುವಂತೆ ಜನ



ಅಹುದಹುದೆನ್ನುವಂತೆ ತಮ್ಮ ತೊಂಭತ್ತು ವರುಷಗಳ ಜೀವಮಾನವನ್ನು ಸಾರ್ಥಕಗೊಳಿಸಿಕೊಂಡವರು ಗದುಗಿನ ಪುಣ್ಯಪುರುಷರಲ್ಲಿ ಲಿಂ. ಕರವೀರಪ್ಪನವರು ಅಂಗಡಿಯವರು ಒಬ್ಬರು.

ಗದುಗಿನ ಧಾರ್ಮಿಕ, ಸಾಂಸ್ಕೃತಿಕ ಸಾಮಾಜಿಕ, ಶೈಕ್ಷಣಿಕ ಕ್ಷೇತ್ರಗಳಿಗೆ ತಮ್ಮ ಅನುಪಮ ಸೇವೆ ಸಲ್ಲಿಸಿ ಲಿಂಗೈಕ್ಯರಾಗಿ ಇಂದಿಗೆ ಹತ್ತು ವರ್ಷಗಳು ಸಂದಿದ್ದರೂ ಅವರು ನಡೆದು ಬಂದ ದಾರಿ. ಇಂದಿನ ವರೆಗೆ. ಮುಂದಿನ ವರೆಗೆ ಒಂದು ಆದರ್ಶ ಮಾರ್ಗದರ್ಶಿ. ಸಮಷ್ಟಿ ಬದುಕಿನೊಡನೆ ಜೀವನ ಬಾಳಿದ ಆ ಶರಣ ಜೀವನ ವೈಯಕ್ತಿಕವಲ್ಲ. ಸಾರ್ವಜನಿಕ ಜೀವನಕ್ಕೊಂದು ಮೌಲಿಕ ಅಲಂಕಾರ.

ಆದರ್ಶ ಶಿಕ್ಷಕ, ದಕ್ಷ ಅಧಿಕಾರಿ, ಸಹೃದಯ ಲೇಖಕ, ಸತ್ಯಶುದ್ಧ ಕಾಯಕ ಜೀವಿ, ನಿಸ್ಪೃಹ ಸಮಾಜ ಸೇವಕ, ಶಿವಾನುಭವಿ, ಸಂಸಾರದಲ್ಲಿದ್ದುಕೊಂಡೇ 'ಶರಣ'ರಾಗಿ ಬಾಳಿದ ಕರವೀರಪ್ಪನವರು ಜನಿಸಿದ್ದು ೭-೭-೧೮೯೭ರಲ್ಲಿ. ಮೆಣಸಗಿಯ ತಕ್ಕಡಿ ಅಂಗಡಿಯ ವ್ಯಾಪಾರಿಗಳಾಗಿದ್ದ ಬಸಪ್ಪ-ಬಸಮ್ಮ ದಂಪತಿಗಳಿಗೆ ಜನಿಸಿದ ನಾಲ್ವರು ಪುತ್ರರಲ್ಲಿ ದ್ವಿತೀಯರು ಕರವೀರಪ್ಪನವರು. ಗೊಡಚಿ ಶ್ರೀ ವೀರಭದ್ರೇಶ ಮನೆ ದೇವರು. ಆ ಕರವೀರಭದ್ರನ ಕೃಪಾಶೀರ್ವಾದದಿಂದ ಜನಿಸಿದ ಕೂಸಿಗೆ ಇಟ್ಟ ಹೆಸರು ಕರವೀರಪ್ಪ. ಈ ಕರವೀರಪ್ಪ ದಿಟ್ಟನಾಗಿ ಬದುಕಿನುದ್ದಕ್ಕೂ 'ಖರೇ ವೀರಪ್ಪ'ನಾಗಿ ಇಟ್ಟ ಹೆಸರನ್ನು ಸಾರ್ಥಕಗೊಳಿಸಿದ ಪುಣ್ಯ ಪುರುಷ.

ಬುದ್ಧಿ-ಸಿದ್ಧಿಗಳನ್ನು ಕರಗತ ಮಾಡಿಕೊಂಡ ಕರವೀರಪ್ಪನವರು ೧೯೧೨ರಲ್ಲಿ ಮುಲ್ಕೀ ಅತೀ ಹೆಚ್ಚಿನ ಗುಣಗಳನ್ನು ...

ಸಂಸ್ಕೃತಾಭ್ಯಾಸ, ವೀರಶೈವ ಧರ್ಮದ ಆಳವಾದ ಅಧ್ಯಯನ, ಕಟ್ಟು-ನಿಟ್ಟಿನ, ಆಚಾರ-ವಿಚಾರಗಳನ್ನು ಎರಡು ವರ್ಷಗಳ ಪರ್ಯಂತ ಪಡೆಯಬೇಕಾಯಿತು. ಹಾನಗಲ್ಲ ಶಿವಯೋಗಿಗಳು ಹಾಗೂ ಹಾವೇರಿ ಹುಕ್ಕೇರಿ ಮಠದ ಶಿವಬಸವ ಮಹಾಸ್ವಾಮಿಗಳು 'ಮಠ'ವೊಂದಕ್ಕೆ 'ಸ್ವಾಮಿ'ಯಾಗುವ ಅರ್ಹತೆಯನ್ನು ಕರವೀರಪ್ಪನವರು ಪಡೆದಿದ್ದರು. ಈ ಘಟದಿಂದ ಮಠಗಳಷ್ಟೇ ಅಲ್ಲ. ಸಮಾಜದೇಗುಲ ಬೆಳಗಬೇಕೆಂಬ ಸದುದ್ದೇಶದಿಂದ ಹೆಚ್ಚಿನ ವಿದ್ಯಾಭ್ಯಾಸ ಕೈಕೊಂಡು 'ಲೋಕ ಶಿಕ್ಷಕ' ನಾಗುವಂತೆ ಹರಸಿ ರೋಣ ಗುಲಗಂಜಿ ಮಠಕ್ಕೆ ಕಳಿಸಿದರು. ಮೂರು ವರ್ಷಗಳ ವರೆಗೆ ಅಲ್ಲಿದ್ದು ಸರಕಾರಿ ಶಿಕ್ಷಕ ತರಬೇತಿಯನ್ನು ಪಡೆದು ೧೯೨೦ರಲ್ಲಿ ಪರೇಗಲ್ಲಿನ ಸರಕಾರಿ ಶಾಲೆಯ ಶಿಕ್ಷಕರಾದರು. ಇದೇ ಸಂದರ್ಭದಲ್ಲಿ ಪ್ರಖ್ಯಾತ ಪುರುಷ ಕೋಡಿಕೊಪ್ಪದ 'ವೀರಪ್ಪಜ್ಜ'ನವರ ದರ್ಶನ ಭಾಗ್ಯ ಲಭಿಸಿತು. ಇಲ್ಲಿಯವರೆಗೆ ಕರವೀರಪ್ಪನವರಲ್ಲಿ ಸುಪ್ತವಾಗಿದ್ದ ಕವಿತ್ವ, ಜಾಗ್ರತಗೊಂಡು ಲಾವಣಿ, ಮಂಗಳಾರತಿ ಪದ, ಬೈಲಾಟಗಳ ರೂಪದಲ್ಲಿ ಪ್ರಕಟಗೊಂಡು ಜನ ಮನದಲ್ಲಿ ಕವಿಯಾಗಿ ಪ... ಪಡೆದವರು.

೧೯೨೧ರಲ್ಲಿ ಹಾನಗಲ್ಲ ಶಿವಯೋಗಿಗಳ ಅಪ್ಪಣೆಯಂತೆ ಗದುಗಿನಲ್ಲಿ ಶಿಕ್ಷಕ ವೃತ್ತಿಯನ್ನು ಕೈಕೊಳ್ಳುವವರೊಂದಿಗೆ ತಮ್ಮ ಗ್ರಾಮದ ಕಲ್ಯಾಣ ಮಠಪತಿಯವರ ಚೆನ್ನಮ್ಮನವರ ಕೈ ಹಿಡಿದು ಗೃಹಸ್ಥ ಜೀವನಕ್ಕೆ ಕಾಲಿರಿಸಿದರು. ಮತ್ತೆ ಹೆಚ್ಚಿನ ವ್ಯಾಸಂಗ ಮಾಡಬಯಸಿ ೧೯೨೪ರಲ್ಲಿ ಮ್ಯಾಟ್ರಿಕ್ ಪರೀಕ್ಷೆಯಲ್ಲಿ ತೇರ್ಗಡೆಯಾಗಿ ಗದಗ-ಬೆಟಗೇರಿ ಮುನಸಿಪಲ್ ಹೈಸ್ಕೂಲಿನಲ್ಲಿ ಕನ್ನಡ ಭಾಷೆಯ ಗೌರವ ಶಿಕ್ಷಕಸ್ಥಾನವನ್ನು ಪಡೆದರು. ಜ್ಞಾನಪಿಪಾಸುಗಳಾದ ಕರವೀರಪ್ಪನವರು ಕಾಲೇಜ ಶಿಕ್ಷಣ ಪಡೆಯಲು ಧಾರವಾಡ ಕರ್ನಾಟಕ ಕಾಲೇಜನ್ನು ಸೇರಿದಾಗ, ಲಿಂ. ಮೃತ್ಯುಂಜಯ ಮಹಾಸ್ವಾಮಿಗಳವರ ಮುರುಘಾಮಠ ಆಶ್ರಯ ನೀಡಿತಲ್ಲದೆ, ಅಲ್ಲಿಯ ಪ್ರಸಾದ ಕರವೀರಪ್ಪನವರನ್ನು ಪ್ರಸಾದ ಕಾಯಕರನ್ನಾಗಿ ಪರಿವರ್ತಿಸಿದರೆ, ಲಿಂ. ಮೃತ್ಯುಂಜಯಪ್ಪಗಳ ಸೇವಾ ಸಾನಿಧ್ಯ ಶರಣ ಸ್ಥಿತಿಗೇರಿಸಿತು.

ಈ ಮಧ್ಯದಲ್ಲಿ ಕರವೀರಪ್ಪನವರು ಅನೇಕ ಗ್ರಂಥಗಳನ್ನು ರಚಿಸಿದರಲ್ಲದೆ ಬಾಗಲಕೋಟೆಯ ವೇದಾಂತಿಗಳೆಂದು ಪ್ರಸಿದ್ಧರಾಗಿದ್ದ ಕಣಗಿ ಬಸವಲಿಂಗಪ್ಪ, ಹರ್ಡೇಕರ ಮಂಜಪ್ಪ, ಹಾಲಕೆರೆ ಪೂಜ್ಯ ಅನ್ನದಾನ ಮಹಾಸ್ವಾಮಿಗಳವರು, ಗದುಗಿನ ತೋಂಟದ ಜಗದ್ಗುರುಗಳ ಪ್ರಭಾವಲಯಕ್ಕೆ ...

... ಸಿ. ಅವುಗಳ ಮುಖಾಂತರ ವೀರಶೈವ ಧರ್ಮದ ಪ್ರಜ್ಞೆ ವೀರಶೈವರಲ್ಲಿ ಮೂಡುವಂತೆ ಮಾಡಿದರು. ಇದರೊಂದಿಗೆ ಈ ಒಂದು ಸಾಮಾಜಿಕ, ಧಾರ್ಮಿಕ ಕಾರ್ಯಗಳಲ್ಲಿ ಹಲವಾರು ಹಿರಿಯರು ಸಹಕರಿಸಿದರು. ಶಿಕ್ಷಕ ವೃತ್ತಿಯಲ್ಲಿ ಇರುವಾಗಲೇ ಕಿತ್ತೂರ ಚೆನ್ನಮ್ಮಾಜಿ, ಬೆಳವಡಿ ಮಲ್ಲಮ್ಮ, ಕಿತ್ತೂರ ಕೇಸರಿ ಮೊದಲಾದ ನಾಟಕಗಳನ್ನು ಬರೆದು ಸ್ತ್ರೀ ಶಕ್ತಿ ಸಾಹಸಗಳ ಪರಿಚಯ ಮಾಡಿಕೊಡುವದರೊಂದಿಗೆ ಮಕ್ಕಳಲ್ಲಿ ಧೈರ್ಯ, ಸಾಹಸ, ರಾಷ್ಟ್ರಪ್ರೇಮವನ್ನು ಹುಟ್ಟಿಸಲು ಸಾಹಸಿ ಸುಭಾಸ ಭೋಸ, ಜೋತಿಲಾಲ ನೆಹರೂ, ಜವಾಹರಲಾಲ ಅನುಭವದೂಟ, ಕಾಳಿ ಮಹಾತ್ಮೆ, ಗದ್ಯಪದ್ಯಾವಳಿ, ನಿಬಂಧಮಾಲೆ, ಸುಬೋಧ ವ್ಯಾಕರಣ ಮೊದಲಾದ ಪಠ್ಯಪುಸ್ತಕಗಳನ್ನು ರಚಿಸಿದರು.

ಶಿಕ್ಷಣ ಕ್ಷೇತ್ರಕ್ಕೆ ಬಹುಮುಖ ಸೇವೆ ಸಲ್ಲಿಸಿದ್ದನ್ನು ಕಂಡ ಶಿಕ್ಷಣ ಇಲಾಖೆ ಬೆಳಗಾವ ಜಿಲ್ಲೆಯ ಸವದತ್ತಿಗೆ ಉಪಶಿಕ್ಷಣಾಧಿಕಾರಿಯನ್ನಾಗಿ ನೇಮಿಸಿತು. ಈ ಹುದ್ದೆ ಬಂದೊಡನೆ ತಾವು ಹೋದಲ್ಲೆಲ್ಲ ಶಿಕ್ಷಣ ಕ್ರಾಂತಿಯನ್ನುಂಟು ಮಾಡಿದರಲ್ಲದೆ, ಆ ಭಾಗದ ಮಠಗಳು, ದೇವಾಲಯುಗಳು, ಕೋಟೆಕೊತ್ತಲಗಳ ಐತಿಹ್ಯ, ಸಂಶೋಧನೆ ಕೈಗೊಳ್ಳುತ್ತಿದ್ದು, ೧೯೪೪ ರಿಂದ ೧೯೫೨ ಜುಲೈ ೭ರಂದು ಶಿಕ್ಷಣ ಇಲಾಖೆಯಿಂದ ನಿವೃತ್ತಿ ಹೊಂದಿ, ವಿಜಯದಶಮಿಯಂದು ಜಯಬಸವ ಪುಸ್ತಕಾಲಯವನ್ನು ಸ್ಥಾಪಿಸಿ, ಅನೇಕ ಗ್ರಂಥಗಳನ್ನು ಪ್ರಕಾಶನಗೊಳಿಸಿದರು. ಅದೇ ಮುಂದೆ ಮಹಾಂತೇಶ ಮುದ್ರಣಕ್ಕೆ ನಾಂದಿ ಹಾಡಿತಲ್ಲದೆ ಅವರ ತೃತೀಯ ಪುತ್ರ ಬಸವರಾಜ ಸಮರ್ಥವಾಗಿ ಇಂದಿಗೂ ನಡೆಸಿಕೊಂಡು ಹೋಗುತ್ತಿದ್ದಾರೆ.

೧೯೪೪ ರಿಂದ ೧೯೫೨ರ ವರೆಗೆ ಉಪಶಿಕ್ಷಣಾಧಿಕಾರಿಗಳಾಗಿ ಸೇವೆ ಸಲ್ಲಿಸಿ ೧೯೫೨ ಜುಲೈ ೭ರಂದು ಮುಂಡರಗಿಯಲ್ಲಿ ನಿವೃತ್ತಿ ಹೊಂದಿದಾಗ ಲಿಂ. ಜಗದ್ಗುರು ಅನ್ನದಾನ ಮಹಾಸ್ವಾಮಿಗಳವರ ದಿವ್ಯ ಸನ್ನಿಧಿಯಲ್ಲಿ ಬೀಳ್ಕೊಡುವ ಸಮಾರಂಭ ಏರ್ಪಡಿಸಿದಾಗ, ಪೂಜ್ಯರ ಅಪ್ಪಣೆಯ ಮೇರೆಗೆ ಸಮಾಜ, ಶಿಕ್ಷಣ, ಧರ್ಮಗಳಿಗೆ ಬಂಗಾರದಂತ ಸೇವೆಯನ್ನು ಕೈಕೊಂಡ ಕರವೀರಪ್ಪನವರಿಗೆ ಶಿಕ್ಷಕ ಬಂಧುಗಳು ಈ ಬಂಗಾರದ ಮನುಷ್ಯನಿಗೆ ಬಂಗಾರದ ಲೆಕ್ಕಣಿಕೆಯನ್ನಿತ್ತು ಗೌರವಿಸಿದರು. ಆ ಸಂದರ್ಭದಲ್ಲಿ ಲಿಂ. ಜಗದ್ಗುರುಗಳವರು ಬಂಗಾರದ ಲೆಕ್ಕಣಿಕೆಯಿಂದ ಬಂಗಾರದಂಥ ಕೃತಿಗಳು ಮೂಡಲಿ ಎಂದು ಆಶೀರ್ವದಿಸಿದಂತೆ, ತಮ್ಮ ಇಳಿವಯಸ್ಸಿನಲ್ಲಿ 'ಊರಗಾದ್ರಿ,' 'ಕಿರಿಬಸವ ಶಿವಯೋಗಿ ಲೀಲೆ' ...

ಸಾಹಿತ್ಯದ ಮೌಲ್ಯವನ್ನು ಹೆಚ್ಚಿಸಿದರು. ಬೈಲಾಟ, ನಾಟಕ, ಅಷ್ಟಕ, ಷಟ್ಕ, ಕಿರುಗ್ರಂಥಗಳು, ಪಠ್ಯ ಪುಸ್ತಕಗಳು ಪುರಾಣಗಳು ಹೀಗೆ ನೂರಕ್ಕೂ ಹೆಚ್ಚು ಗ್ರಂಥಗಳನ್ನು ರಚಿಸಿದ ಶ್ರೇಯಸ್ಸು ಕರವೀರಪ್ಪನವರದು. ಸಂಶೋಧನೆ (ಪಿ.ಎಚ್.ಡಿ.) ಮಾಡಬಲ್ಲ ವಿದ್ಯಾರ್ಥಿಗಳಿಗೆ ಶರಣ ಕರವೀರಪ್ಪನವರ ಬದುಕು ಬರೆದ ಧಾರ್ಮಿಕ ಸೇವೆ-ಸಾಮಾಜಿಕ ಕಾರ್ಯಗಳು, ಸಾಂಸ್ಕೃತಿಕ ಸಿದ್ಧಾಂತಗಳು, ವೈಚಾರಿಕ ಮನೋಭಾವನೆಗಳು 'ವಸ್ತು' ಒದಗಿಸಬಲ್ಲವು.

ಕಾಯಕನಿಷ್ಠ ಕರವೀರಪ್ಪನವರ ಕಾರ್ಯದಕ್ಷತೆ, ಸಮಾಜಸೇವೆ, ಧಾರ್ಮಿಕ ರಂಗಕ್ಕೆ ಕೊಡುಗೆ, ಶೈಕ್ಷಣಿಕ ಸಾಧನೆ, ಸಾಹಿತ್ಯ ಸೇವೆಗಳನ್ನು ಮನಗಂಡ ಗದುಗಿನ ಮಹಾಜನ ಗದುಗಿನ ಶ್ರೀ ಜಗದ್ಗುರು ತೋಂಟದಾರ್ಯ ಸಂಸ್ಥಾನ ಮಠದಲ್ಲಿ ಪೂಜ್ಯ ಜಗದ್ಗುರುಗಳವರ ದಿವ್ಯ ಸನ್ನಿಧಿಯಲ್ಲಿ ಕರವೀರಪ್ಪನವರ ಎಂಭತ್ತನೆಯ ಜಯಂತ್ಯುತ್ಸವವನ್ನು ಆಚರಿಸಿ ಸತ್ಕರಿಸಿದ್ದಲ್ಲದೆ 'ಶರಣ' ಎಂಬ ಸನ್ಮಾನ ಗ್ರಂಥವನ್ನು ಸಮರ್ಪಿಸಿದರು. ನಾಡಿನ ನಾನಾ ಮಠಾಧೀಶರು, ಸಂಘ-ಸಂಸ್ಥೆಗಳವರು ಗೌರವಿಸಿದರು.

ಶ್ರೀ ಕರವೀರಪ್ಪನವರು ತಮ್ಮ ೯೦ನೆಯ ವರ್ಷದವರೆಗೆ ಬೆಳಗಿನ ಶಿವಾನುಭವ ಸಂಜೆ ಗದ್ದುಗೆ ದರ್ಶನ ಎಂದೂ ತಪ್ಪಿಸಲಿಲ್ಲ. ಜೋರೆ ಹೋಗುತ್ತಿದ್ದರೂ ಮೊಮ್ಮಕ್ಕಳ ಕೈಹಿಡಿದುಕೊಂಡು 'ದರ್ಶನ' ಶಿವಾನುಭವ ಕಾಯಕವನ್ನು ನಿಷ್ಠೆಯಿಂದ ಮಾಡಿದ್ದನ್ನು ಎಲ್ಲರೂ ಬಲ್ಲರು. ಇಂದು ಅಂಗಡಿ ವಂಶಸ್ಥರ ಶಿಷ್ಯಕೋಟಿ ನಾಡಿನುದ್ದಗಲಕ್ಕೂ ಹಬ್ಬಿಕೊಂಡಿದೆ. ಉನ್ನತ ಅಧಿಕಾರಿಗಳಾಗಿ, ವಿಶ್ವವಿದ್ಯಾಲಯಗಳ ಪ್ರಾಧ್ಯಾಪಕ, ಉಪಕುಲಪತಿಗಳಾಗಿ, ಗಣ್ಯ ವಕೀಲರಾಗಿ, ಪ್ರಖ್ಯಾತ ವೈದ್ಯರಾಗಿ, ವ್ಯಾಪಾರಿಗಳಾಗಿ ಅವರು ತೋರಿದ ಬೆಳಕಿನ ಹಾದಿಯಲ್ಲಿ ಮುನ್ನಡೆದಿದ್ದಾರೆ.

ತುಂಬು ಬಾಳನ್ನು ಬಾಳಿ, ಬದುಕಿನಲ್ಲಿ ಸುಖ-ದುಃಖಗಳನ್ನು ಸಮಾನತೆಯಿಂದ ಸ್ವೀಕರಿಸಿ ಕಾಯಕನಿಷ್ಠರಾಗಿ, ಸಮಾಜ ಲಿಂಗದ ಪೂಜೆಯನ್ನು ಮಾಡುತ್ತ ೬-೭-೧೯೮೬ ರಂದು ಲಿಂಗೈಕ್ಯರಾದರು. ಕಾಯಕತತ್ವ, ದಾಸೋಹಂಭಾವಗಳ ಜೀವಂತ ಪ್ರತೀಕದಂತೆ ಕಂಗೊಳಿಸುತ್ತಿದ್ದರು.

ಇಂಥ ಕ್ರಿಯಾಶೀಲ ಶರಣ ಕರವೀರಪ್ಪನವರು ಲಿಂಗೈಕ್ಯರಾಗಿ ಇಂದಿಗೆ ಹತ್ತು ಸಂವತ್ಸರಗಳು ಕಳೆದಿದ್ದರೂ ಅವರು ನಡೆಸಿಕೊಂಡು ಬಂದ ಕಾಯಕನಿಷ್ಠೆ, ಗುರು-ಲಿಂಗ-ಜಂಗಮರಲ್ಲಿ ಶ್ರದ್ಧೆ, ಸಾಮಾಜಿಕ ಕಳಕಳಿ, ಸೇವಾ ಮನೋಭಾವನೆಯ 'ಬೆಳಕು' ಎಲ್ಲೆಡೆಗೂ ಹಬ್ಬಿಕೊಂಡಿದೆ.

ಶ್ರೀ ಮಹಾಲಿಂಗ ಯಾಳಗಿಯವರು ಕ.ಬ.ಅಂಗಡಿಯವರ ೧೦ನೆಯ ಪಣ್ಯಸ್ಮರಣೆಯ ದಿನ ನಿಮಿತ್ಯ ನವೋದಯ ಕನ್ನಡ ದಿನಪತ್ರಿಕೆಗೆ ಬರೆದ ಲೇಖನ

**ಮರೆಯಲಾಗದವರು**

# ಗದುಗಿನ ಶರಣಕವಿ ಅಂಗಡಿ ಕರವೀರಪ್ಪನವರು

ಹುಟ್ಟು-ಸಾವು ಜಗದ ಎಲ್ಲ ಜೀವಿಗಳ ನಿಯಮ. ಆ ನಿಯಮದರಿಯಲ್ಲೇ ವಿಶಿಷ್ಟವಾಗಿ ಬದುಕಿ, ಮನುಷ್ಯ ಜನ್ಮಕ್ಕೆ ವಿಶೇಷತೆಗಳನ್ನು ನೀಡಿ ಹೋಗುವವರು ತೀರ ವಿರಳ. ಅಂತಹ ಅಪರೂಪದ ವ್ಯಕ್ತಿಗಳ ಅಗ್ರ ಪಂಕ್ತಿಯಲ್ಲಿ ನಮ್ಮ ಗದುಗಿನವರೇ ಆದ ಶರಣ ಕವಿ ಅಂಗಡಿ ಕರವೀರಪ್ಪನವರು ಒಬ್ಬರು. ಬದುಕಿದ ಕಾಲದಲ್ಲಿ ನಾಳಿಗೆ ಬೆಳೆ ಬರುವಂತೆ ಬದುಕಿನ ಅವರ ಜೀವನ ಸಂಸ್ಮರಣೀಯ. ಜೀವನ ಕಲೆಯನ್ನು ಶಿವನ ನೆಲೆಯನ್ನಾಗಿಸಿಕೊಂಡು 'ಲಿಂಗ' ಮೆಚ್ಚೆ ಅಹುದಹುದೆನ್ನುವಂತೆ ತಮ್ಮ ೭೦ ವರ್ಷಗಳ ಸಾರ್ಥಕ ಜೀವನವನ್ನು ವೀರಶೈವ ತತ್ವ-ನೆಲೆಗಳನ್ನು ಉಳಿಸಿಕೊಂಡುವಲ್ಲಿ ಮೀಸಲಾಗಿಸಿಕೊಂಡವರು.

ಆದರ್ಶ ಶಿಕ್ಷಕರಾಗಿ, ದಕ್ಷ ಅಧಿಕಾರಿಗಳಾಗಿ, ಸಹೃದಯ ಲೇಖಕರಾಗಿ, ಸತ್ಯ, ಶುದ್ಧ, ಕಾಯಕ ಜೀವಿಗಳಾಗಿ, ನಿಸ್ಪೃಹ ಸಮಾಜ ಸೇವಕರಾಗಿ, ಶಿವಾನುಭವಿಗಳಾಗಿ ಸಂಸಾರದಲ್ಲಿದ್ದುಕೊಂಡೇ 'ಶರಣ'ರಾಗಿ ಬಾಳಿದ ಅಂಗಡಿ ಕರವೀರಪ್ಪನವರು ಜನಿಸಿದ್ದು, ೨-೨-೧೯೦೮ರಲ್ಲಿ ಮೊಣಸಗಿಯ ಚಿಕ್ಕ ಕಟ್ಟಿ ಅಂಗಡಿಯಲ್ಲಿ ವ್ಯಾಪಾರಿಗಳಾದ ಬಸಪ್ಪ-ಬಸಮ್ಮ ದಂಪತಿಯ ದ್ವಿತೀಯ ಸುಪುತ್ರರಾಗಿ ಜನಿಸಿದರು. ೧೯೧೨ರಲ್ಲಿ ಮುಲ್ಕೀ ಪರೀಕ್ಷೆಯಲ್ಲಿ ಅತೀ ಹೆಚ್ಚಿನ ಅಂಕಗಳನ್ನು ಪಡೆದುಕೊಂಡು ಅದ್ವಿತೀಯರೆನಿಸಿದರು. ಹಾನಗಲ್ಲ ಶ್ರೀ ಕುಮಾರ ಶಿವಯೋಗಿಗಳ ಕೃಪಾದೃಷ್ಟಿ ಬಿದ್ದು ಶಿವಯೋಗ ಮಂದಿರವನ್ನು ಸೇರಿದರು. ಅಲ್ಲಿ ವಟುವಾಗಿ ಸಂಸ್ಕೃತಾಭ್ಯಾಸ, ವೀರಶೈವ ಧರ್ಮದ ಆಳ ಅಧ್ಯಯನವನ್ನು ಮಾಡುತ್ತ ತಲ್ಲೀನರಾದರು. ಶ್ರೀ ಹಾನಗಲ್ಲ ಕುಮಾರ ಶಿವಯೋಗಿಗಳು ಮತ್ತು ಹಾವೇರಿಯ ಹುಕ್ಕೇರಿ ಮಠದ ಶಿವಬಸವ ಸ್ವಾಮಿಗಳ ಅಭಿಪ್ರಾಯದಂತೆ 'ಲೋಕ ಶಿಕ್ಷಕ'ನಾಗಲು ಹೆಚ್ಚಿನ ವ್ಯಾಸಂಗಕ್ಕಾಗಿ ರೋಣದ ಗುಲಗಂಜಿ ಮಠಕ್ಕೆ ಬಂದರು. ೧೯೨೭ರಲ್ಲಿ ನರೇಗಲ್ಲಿನ ಸರಕಾರಿ ಶಾಲೆಯ ಶಿಕ್ಷಕರಾಗಿ ತಮ್ಮ ಶಿಕ್ಷಕ ವೃತ್ತಿಯನ್ನು ಪ್ರಾರಂಭಿಸಿದರು.

ಪವಾಡ ಪುರುಷ ಜೋಡಿಕೊಪ್ಪದ 'ವೀರಪ್ಪಜ್ಜ'ನವರ ದರ್ಶನ ಭಾಗ್ಯ ಈ ಸಮಯದಲ್ಲಿ ಅವರಿಗೆ ಲಭಿಸಿತು. ಅಲ್ಲಿಂದಲೇ ಅವರಲ್ಲಿ ಸುಪ್ತವಾಗಿದ್ದ ಕವಿ ಪ್ರಜ್ಞೆ ಜಾಗೃತಗೊಂಡು ಅನೇಕ ಲಾವಣಿ, ಮಂಗಳಾರತಿ ಪದ, ಬೈಲಾಟ, ನಾಟಕಗಳನ್ನು ರಚಿಸಿ ಜನಮನದಲ್ಲಿ ಕವಿಯಾಗಿ ನೆಲೆಗೊಂಡರು. ೧೯೩೧ ರಲ್ಲಿ ಹಾನಗಲ್ಲ ಕುಮಾರ ಶಿವಯೋಗಿಗಳ ಅಪ್ಪಣೆಯಂತೆ ಗದುಗಿಗೆ ಬಂದು ಶಿಕ್ಷಕ ವೃತ್ತಿಯನ್ನು ಕೈಗೊಂಡು ಮೊಣಸಗಿಯ ಕಲ್ಯಾಣಿಯವರ ಹೆಣ್ಣು ಮಗಳಾದ ಚೆನ್ನಮ್ಮನವರನ್ನು ಕೈಹಿಡಿದು ಸಂಸಾರ ಜೀವನಕ್ಕೆ ಕಾಲಿಟ್ಟರು. ಶಿಕ್ಷಣದ ದಾಹ ಅವರನ್ನು ಮತ್ತೆ ಮೆಟ್ರಿಕ್ ಮತ್ತು ಕಾಲೇಜು ಶಿಕ್ಷಣ ಪಡೆಯಲು ಅನುವು ಮಾಡಿಕೊಟ್ಟಿತು. ಧಾರವಾಡದಲ್ಲಿ ಕಾಲೇಜು ವ್ಯಾಸಂಗ ಮಾಡುವಾಗ ಲಿಂ. ಮೃತ್ಯುಂಜಯ ಮಹಾಸ್ವಾಮಿಗಳ ಮುರುಘಾಮಠ ಆಶ್ರಯ ನೀಡಿತಲ್ಲದೇ ಅಲ್ಲಿಯ ಪ್ರಸಾದ ಅವರನ್ನು ಕಾಯಕ ಪ್ರಸಾದಿಗಳನ್ನಾಗಿ ಪರಿವರ್ತಿಸಿತು. ಮೃತ್ಯುಂಜಯಪ್ಪಗಳ ಒಡನಾಟ, ಸೇವಾ ಸಾನಿಧ್ಯ ಅವರಲ್ಲಿ ಶರಣತ್ವವನ್ನು ಮೈಗೂಡಿಸಲಾಗಿತು. ಈ ಮಧ್ಯದಲ್ಲಿ ಅನೇಕ ಗ್ರಂಥಗಳನ್ನು ರಚಿಸಿದರಲ್ಲದೇ ದಾಗಿಲು ಕೋಟೆಯ ವೇದಾಂತಿಗಳೆಂದು ಪ್ರಸಿದ್ಧರಾದ ಕಾಗಿ ಬಸವಲಿಂಗಪ್ಪ, ಹರ್ಡೇಕರ್ ಮಂಜಪ್ಪನವರ, ನಾಗಭೂಷಣ ಶಾಸ್ತ್ರಿಗಳು, ಹಾಲಕೆರೆ ಪೂಜ್ಯ ಅನ್ನದಾನ ಮಹಾಸ್ವಾಮಿಗಳ, ಮುರಗೋಡ ಮಹಾಂತ ಶಿವಯೋಗಿಗಳ, ಜಗದ್ಗುರು ತೋಂಟದಾರ್ಯ ಶ್ರೀಗಳ ಪ್ರಭಾವಕ್ಕೆ ಸಿಲುಕಿ ಪರಿಪಕ್ವಗೊಂಡರು. ಅವರ ಜೀವನ ಕವಿಯನ್ನು ಶಿವಕವಿಯನ್ನಾಗಿಸಿದವು. ಆ ಮುಖೇನ ವೀರಶೈವ ಧರ್ಮ ಪ್ರಚಾರ ಹಾಗೂ ಕನ್ನಡ ನುಡಿಯ ಏಳ್ಗೆಗೆ ಕಾರಣರಾದರು.

ಶ್ರೀ ಕುಮಾರೇಶ್ವರ ಸೇವಾ ಶಿಕ್ಷಣ ಸಂಘ, ಅಖಿಲ ಭಾರತ ವೀರಶೈವ ವಿದ್ಯಾಪೀಠ, ನಿತ್ಯ ಶಿವಾನುಭವ ಪ್ರವಚನ, ಗೊಂಚಿ ಸೇವಾ ಸಂಘಗಳನ್ನು ಸ್ಥಾಪಿಸಿ ಅವುಗಳ ಮುಖಾಂತರ ಬಸವಾದಿ ಪ್ರಮಥರ ಆಶಯಗಳನ್ನು, ವೀರಶೈವ ಧರ್ಮಪ್ರಜ್ಞೆಯನ್ನು ಸಮಾಜದಲ್ಲಿ ಒಡಮೂಡಿಸುವಂತೆ ಮಾಡಿದರು. ೧೨ನೇ ಶತಮಾನದ ಗುರುತರ ಕಾಣಿಕೆಯನ್ನು ಒಡೆದು ಕಾಣುವಂತೆ ಮಾಡಿದರು.



ಸ್ವತಃ ತಾವೇ ಉಪಶಿಕ್ಷಣಾಧಿಕಾರಿಗಳಾಗಿ ಕೆಳದಿ ಚೆನ್ನಮ್ಮಾಜಿ, ಬೆಳವಡಿ ಮಲ್ಲಮ್ಮ, ಕಿತ್ತೂರ ಕೇಸರಿ ಮೊದಲಾದ ನಾಟಕಗಳನ್ನು ರಚಿಸಿ ಆ ಮೂಲಕ ಸಮಾಜದಲ್ಲಿ ಸ್ತ್ರೀಯರ ಆತ್ಮಬಲವರ್ಧನೆಗೆ ಶ್ರಮಿಸಿದರು. ಹೆಣ್ಣು ಮಕ್ಕಳ ಶಿಕ್ಷಣಕ್ಕೆ ಪರ್ಯಾಯವಾಗಿ ಶ್ರಮಿಸಿದರು. ಬದುಕು-ಮನೆ-ಸಮಾಜ ಇವುಗಳನ್ನು ಕಟ್ಟಲು ಸ್ತ್ರೀಯೊಬ್ಬಳ ಪಾತ್ರವನ್ನು ಗುರುತಿಸಿ ಆ ಮೂಲಕ ಸಮಾಜದ ಸುಂದರ ಕಟ್ಟಡ ನಿರ್ಮಾಣಕ್ಕೆ ಕೈಹಾಕಿದರು.

ಸಮಾಜದ ಇನ್ನೊಂದು ಶಕ್ತಿ ಮಕ್ಕಳು ಮತ್ತು ಯುವ ಜನತೆ. ಇವರನ್ನು ಗುರಿಯಾಗಿಸಿಕೊಂಡು ಸಾಹಸಿ ಸುಭಾಸಚಂದ್ರ ಬೋಸ್, ಮೋತಿಲಾಲ್ ನೆಹರು, ಜವಾಹರಲಾಲ ನೆಹರು, ಜೈಹಿಂದ್ ಎಂಬಂತಹ ರಾಷ್ಟ್ರನಾಯಕರ ಜೀವನ ಕಥನಗಳನ್ನು ಬರೆದು ಅವರಲ್ಲಿ ಧೈರ್ಯ, ಸಾಹಸ, ದೇಶಭಕ್ತಿ, ಭಾಷಾಭಿಮಾನಗಳನ್ನು ಕೈಗೊಂಡರು. ಡೆಪ್ಯುಟಿ ಚೆನ್ನಬಸಪ್ಪನವರ ಸರಿಸಮಾನ ಸಾಧನೆಗೈದ ಈ ಉತ್ತರ ಕರ್ನಾಟಕದ ಪ್ರತಿಭಾವಂತರರನ್ನು ಶಿಕ್ಷಣ ಇಲಾಖೆ ಬೆಳಗಾವಿ ಜಿಲ್ಲೆಯ ಸವದತ್ತಿಗೆ ಇವರನ್ನು ಉಪ ಶಿಕ್ಷಣಾಧಿಕಾರಿಗಳನ್ನಾಗಿ ನೇಮಿಸಿತು. ಇದರ ಪರಿಪೂರ್ಣ ಲಾಭ ಪಡೆದು ತಾವು ಹೋದಲ್ಲೆಲ್ಲ ಶಿಕ್ಷಣ ಕ್ರಾಂತಿ ಮಾಡಿದರು. ಆ ಭಾಗದ ಮಠಗಳು, ದೇವಾಲಯಗಳು, ಕೋಟೆಕೊತ್ತಲಗಳ ಐತಿಹ್ಯ, ಸಂಶೋಧನೆ ಕೈಗೊಂಡು ಸಾಹಿತ್ಯ ಮುಖೇನ ಅವುಗಳನ್ನು ಜೀವಂತವಾಗಿಡಲು ಶ್ರಮಿಸಿದರು. ಮುಕ್ತಿದೆಯರ್ಕನವರು, ಗೊಡಚಿ ಕ್ಷೇತ್ರ ವಸ್ತು ಮಡಿವಾಳ ಮಾಚಿ ತಂದೆ ಇವುಗಳು ಸಂಶೋಧನಾರ್ಹ ಕೃತಿಗಳಾಗಿವೆ.

೧೯೬೭ ಜುಲೈ ೨ರಂದು ನಿವೃತ್ತಿಹೊಂದಿದ ಇವರು ನಿವೃತ್ತಿ ನಂತರವೂ ಕ್ರಿಯಾಶೀಲ ಸೇವೆ ಮುಂದುವರೆಸಿದರು. ವಿಜಯದಶಮಿಯಂದು ಜಯಬಸವ ಪುಸ್ತಕಾಲಯ ನಂತರ ಮಹಾಂತೇಶ ಮುದ್ರಣವನ್ನು ಸ್ಥಾಪಿಸಿ ಅನೇಕ ಗ್ರಂಥಗಳನ್ನು ಪ್ರಕಾಶನಗೊಳಿಸಿದರು. ಇಂದಿಗೂ ಈ ಎರಡೂ ಅವರ ಮಹಾತ್ವಾಕಾಂಕ್ಷೆಗಳು ಗದುಗಿನ ತೋಂಟದ ಸಿದ್ಧಲಿಂಗ ಶ್ರೀಗಳ ಸನ್ನಿಧಿಯಲ್ಲಿ ಅವರ ಜೀವನದ ಕುರುಹುಗಳಾಗಿ ವೈಭವಿಸುತ್ತಿವೆ.

ನಿವೃತ್ತಿ ವೇಳೆ ಮುಂಡರಗಿಯ ಅಂದಿನ ಶ್ರೀಗಳು ತಮ್ಮ ಸಾನಿಧ್ಯದಲ್ಲಿ ಜೀಳ್ಗೊಡುವ ಸಭಾರಂಭ ಏರ್ಪಡಿಸಿ ಬಂಗಾರದ ಪೆನ್ನು ನೀಡಿ ಬಂಗಾರದಂತಹ ಕೃತಿಗಳು ನಿಮ್ಮಿಂದ ಸಮಾಜಕ್ಕೆ ಒದಗಲಿ ಎಂದು ಹಾರೈಸಿದ್ದರ ಫಲವೇ 'ವಿರುಪಾದ್ರಿ ಕರಿಬಸವ ಲೀಲೆ, ಮುರಗೋಡ ಮಹಾಂತ ಶಿವಯೋಗೀಶ್ವರರ ಚರಿತಾಮೃತ, ಶರಣ ಬಸವೇಶ್ವರ ಚರಿತ್ರೆ, ಕಾಯಕ ಶಿವಯೋಗಿ, ರುದ್ರಮುನಿ ಸ್ವಾಮಿ ಚರಿತ್ರೆ, ಜ. ಅನ್ನದಾನೀಶ್ವರ ಲೀಲಾಮೃತ, ಕಲಬುರ್ಗಿ ಶರಣ ಬಸವೇಶ್ವರ ಚರಿತಾಮೃತ, ಮಡಿವಾಳ ಮಾಚಿದೇವ, ಮುಕ್ತಿದೆಯರ್ಕನವರು ಎಂಬ ಹಲವಾರು ಗ್ರಂಥಗಳು ಮೂಡಿಬಂದವು. ಭಾಮಿನಿ ಷಟ್ಪದಿಯ ಸೊಬಗು ಆ ಮೂಲಕ ಕನ್ನಡ ಸಾಹಿತ್ಯದಲ್ಲಿ ತನ್ನ ಮೌಲ್ಯವನ್ನು ಹೆಚ್ಚಿಸಿಕೊಂಡರು.

ಬೈಲಾಟ, ನಾಟಕ, ಅಷ್ಟಕ, ಷಟ್ಕ, ಕಿರುಗ್ರಂಥಗಳು, ಪಠ್ಯ ಪುಸ್ತಕಗಳು, ಪುರಾಣಗಳು ಹೀಗೆ ನೂರಕ್ಕೂ ಹೆಚ್ಚು ಗ್ರಂಥಗಳನ್ನು ರಚಿಸಿದ ಕೀರ್ತಿ ಅಂಗಡಿ ಕರವೀರಪ್ಪನವರದು. ಅವರ ಜೀವನವೇ ಸಂಶೋಧನೆಗೆ ಒಳಪಡುವಷ್ಟು ಆಳ-ಅಂತರವಾಗಿದ್ದು, ಆ ಕಾರ್ಯವೂ ಕೂಡ ಸಾಗುತ್ತಲಿದೆ.

ಕಾಯಕನಿಷ್ಠ ಕರವೀರಪ್ಪನವರ ಕಾರ್ಯದಕ್ಷತೆ, ಸಮಾಜಸೇವೆ, ಧಾರ್ಮಿಕ ರಂಗಕ್ಕೆ ಕೊಡುಗೆ, ಶೈಕ್ಷಣಿಕ ಸಾಧನೆ, ಸಾಹಿತ್ಯ ಸೇವೆಗಳನ್ನು ಮನಗಂಡು ಗದುಗಿನ ಮಹಾಜನ ತೋಂಟದಾರ್ಯ ಮಠದಲ್ಲಿ ಶ್ರೀಗಳ ದಿವ್ಯ ಸಾನಿಧ್ಯದಲ್ಲಿ ಅವರ ೮೦ನೇ ಜಯಂತ್ಯೋತ್ಸವ ಆಚರಿಸಿ ಶರಣ ಎಂಬ ಸನ್ಮಾನ ಗ್ರಂಥವನ್ನು ಸಮರ್ಪಿಸಿತು. ನಾಡಿನ ನಾನಾ ಮಠಾಧೀಶರು, ಸಂಘ-ಸಂಸ್ಥೆಗಳು ಅವರನ್ನು ಗೌರವಿಸಿದವು.

ಪಟ್ಟರಾಜ ಗವಾಯಿಗಳು ಸಹ ಅಂಗಡಿ ಕರವೀರಪ್ಪನವರ ವ್ಯಕ್ತಿತ್ವಕ್ಕೆ ಮನಸೋತು, ಅಪ್ಪಾವರಣನಿಷ್ಠಾಗರಿಷ್ಠ ಎಂಬುದಾಗಿ ಕರಗಾದಲ್ಲಿ ನುಡಿದಿದ್ದಾರೆ. ಅಂಗಡಿ ಕರವೀರಪ್ಪನವರ ಶಿಷ್ಯಕೋಟಿ ನಾಡಿನುದ್ದಗಲಕ್ಕೂ ಇಂದು ಹರಡಿದೆ. ವಿಶ್ವವಿದ್ಯಾಲಯದ ಪ್ರಾಧ್ಯಾಪಕರಾಗಿ, ಉಪ ಕುಲಪತಿಗಳಾಗಿ, ವ್ಯಾಪಾರಿಗಳಾಗಿ, ವೈದ್ಯರಾಗಿ ವಕೀಲರಾಗಿ ಸಮಾಜದ ಹಲವಾರು ಕ್ಷೇತ್ರದಲ್ಲಿ ತಮ್ಮನ್ನು ತೊಡಗಿಸಿಕೊಂಡು, ತಮ್ಮ ಗುರುವಿನ ಆಸೆಯಂತೆ ಸಮಾಜ ವಿಕಾಸದಲ್ಲಿ ಪರೋಕ್ಷವಾಗಿ ತೊಡಗಿಸಿಕೊಂಡಿದ್ದಾರೆ.

ಶಿಕ್ಷಣ ಸಿರಿ ಎಂಬ ಅಭಿನಂದನಾ ಗ್ರಂಥದಲ್ಲಿ ಗಡಾದ ಗುರುಗಳು ಕರವೀರಪ್ಪನವರನ್ನು ತಮ್ಮ ಜೀವನ ಬದಲಾವಣೆಯ ಹರಿಕಾರರೆಂದೂ 'ಬೆಳುವಲ' ಎಂಬ ಅಭಿನಂದನಾ ಗ್ರಂಥದಲ್ಲಿ ಡಾ. ಆರ್.ಸಿ. ಹಿರೇಮಠ ತಮ್ಮ ಗುರುಗಳಾದ ಅಂಗಡಿ ಕರವೀರಪ್ಪನವರನ್ನು ಸ್ಮರಿಸುತ್ತಾರೆ. ತಾವು ಆ ಮಟ್ಟದಲ್ಲಿ ಬೆಳೆಯಲು ಅವರ ಆಶ್ರಯ ಪ್ರೀತಿ, ವಾತ್ಸಲ್ಯಗಳು ಕಾರಣ ಎಂಬು ದನ್ನು ಒತ್ತಿ ಹೇಳುತ್ತಾರೆ. ಶ್ರೀ ಮಲ್ಲಿಕಾರ್ಜುನ ಲಠ್ಠೆಯವರು, ಮಾಳವಾಡ ದಂಪತಿಗಳು, ಡಾ. ಪ್ರಿ. ಶಿವಾನಂದರು, ಡಾ. ಎಂ.ಎಂ. ಸುಂಕಾಪೂರ ಅವರು ಕೂಡ ಶ್ರೀ ಕರವೀರಪ್ಪನವರ ಶ್ರೇಷ್ಠ ಸಾಧನೆಯನ್ನು ಗುರುತಿಸಿದ್ದಾರೆ. ತಮ್ಮ ಬೆಳವಣಿಗೆಯಲ್ಲಿ ಶ್ರೀ ಕರವೀರಪ್ಪನವರ ಶ್ರಮವನ್ನು ಗುರುತಿಸುತ್ತಾರೆ.

ಈ ವಿವೇಚನೆಯನ್ನು ಗಮನಿಸಿದಾಗ ಶರಣಕವಿ ಅಂಗಡಿಯವರ ಬದುಕು ಇಂದಿನ ವೀರಶೈವ ಸಮಾಜಕ್ಕೆ ಸನ್ಮಾರ್ಗವಾಗಿರದೇ ಅವರ ಶೈಕ್ಷಣಿಕ, ಧಾರ್ಮಿಕ, ಸಾಹಿತ್ಯಿಕ, ಸೃಜನಶೀಲತೆ ನಮ್ಮ ಬದುಕಿನ ಇಂದು-ನಾಳೆಗಳಿಗೆ ಖಂಡಾ ಮಾರ್ಗದರ್ಶಿಯಾಗುವುದರಲ್ಲಿ ಎರಡು ಮಾತಿಲ್ಲ. ತಮ್ಮ ತುಂಬು ಜೀವನದಲ್ಲಿ ಶರಣತ್ವವನ್ನು ಪಡೆದು ೬-೭-೧೯೮೬ರಂದು ಮೃಡನಡೆಗೆ ಹೆಜ್ಜೆ ಹಾಕಿದರು. ಸಾಹಿತ್ಯದ ಈ ಮೇರು ರಸಋಷಿಯನ್ನು ಗದುಗು ಎಂದಿಗೂ ಮರೆಯಲು ಸಾಧ್ಯವಿಲ್ಲ. ಮರೆಯಬಾರದು ಕೂಡ. ಹಾಗೆ ಮಾಡಿದಲ್ಲಿ ಗದುಗಿನ ಶರಣಕವಿಯ ಸಾಹಿತ್ಯಿಕ ಸೇವೆ ಕನ್ನಡ ಸಾಹಿತ್ಯಕ್ಕೆ ಗಣನೀಯವಾಗಿದೆ ಸಲ್ಲುವುದು.

-ಶ್ರೀಮತಿ ರಶ್ಮಿ ಅಂಗಡಿ, ಗದಗ.

ಮರೆಯಲಾಗದವರು ಎಂಬ ಅಂಕಣಕ್ಕೆ ಶ್ರೀ ಕ.ಬ.ಅಂಗಡಿಯವರ ಬದುಕು ಮತ್ತು ಬರಹವನ್ನು ಕುರಿತು ರಶ್ಮಿ ಅಂಗಡಿಯವರು ಬರೆದ ಲೇಖನ



ಕ.ಬ.ಅಂಗಡಿಯವರು ಉಪಯೋಗಿಸುತ್ತಿದ್ದ ಶಬ್ದಕೋಶ



ಕ.ಬ.ಅಂಗಡಿಯವರು ಬಳಸಿದ ಸ್ವಾತಂತ್ರ್ಯೋತ್ಸವದ
ಸವಿನೆನೆ ನ ೧೯೪೮ರ ಕ್ಯಾಲೆಂಡರ



ತೋಂಟದಾರ್ಯ ಮಠದ ಶಿವಕುಮಾರ ಸ್ವಾಮಿಗಳ ಪಟ್ಟಾಧಿಕಾರದ ಸಂದರ್ಭದಲ್ಲಿ
ಶ್ರೀ ಕ.ಬ.ಅಂಗಡಿಯವರು



ಕ.ಬ.ಅಂಗಡಿಯವರ ಶಿಷ್ಯ, ಖ್ಯಾತ ಕಲಾವಿದ ಸಿ.ಎನ್. ಪಾಟೀಲ ಅವರು 80ನೆಯ ವರ್ಷಾಚರಣೆಯ ಸಂದರ್ಭದಲ್ಲಿ ಬರೆದ ಚಿತ್ರ



ಕ.ಬ.ಅಂಗಡಿಯವರ ಮನೆ ಬಸವ-ಭುವನದಲ್ಲಿ ನೆಲೆ ನಿಂತಿರುವ ಅವರ ಕಿರಿಯ ಮಗ ಉಮೇಶ ಅಂಗಡಿಯವರ ಪರಿವಾರ

## ಕ.ಬ.ಅಂಗಡಿಯವರ ಕಾರ್ಯನಿರತ ಸ್ಥಳಗಳು



ಗದುಗಿನ ತೋಂಟದಾರ್ಯ ಮಠ



ಗದುಗಿನ ಹಡಗಲಿ ಮಠ



ಗದುಗಿನ ಹಾಲಕೆರೆ ಮಠ (ಆನಂದಾಶ್ರಮ)



ಗದುಗಿನ ಅಕ್ಕನ ಬಳಗ



ಗದುಗಿನ ಪ್ಯಾಟಿ ವೀರಭದ್ರ ದೇವರ ಗುಡಿ



ಗದುಗಿನ ಒಕ್ಕಲಗೇರಿಯ ರಾಚೋಟಿ ವೀರಭದ್ರೇಶ್ವರ ದೇವಸ್ಥಾನ



ಗದುಗಿನ ಶಹಪುರಪೇಟೆಯ ವೀರಭದ್ರೇಶ್ವರ ದೇವಸ್ಥಾನ



ಗದುಗಿನ ಶಹಪುರಪೇಟೆಯ ಶಂಕರಲಿಂಗ ದೇವಸ್ಥಾನ



ಬೆಟಗೇರಿಯ ಅಂಬಾಭವಾನಿ ದೇವಸ್ಥಾನ



ಬೆಟಗೇರಿಯ ವೀರಭದ್ರ ದೇವಸ್ಥಾನ

# ಹೊರಗಿನ ಕಾರ್ಯಸ್ಥಳಗಳು



ಮುರಗೋಡ ಮಹಾಂತ ಮಠ, ಮುರಗೋಡ.



ಮುಂಡರಗಿಯ ಅನ್ನದಾನೀಶ್ವರ ಮಠ, ಮುಂಡರಗಿ.



ಮೆಣಸಗಿಯ ಲಿಂಗಬಸವೇಶ್ವರ ಮಠ, ಮೆಣಸಗಿ



ಕೋಡಿಕೊಪ್ಪದ ಹುಚ್ಚೀರಪ್ಪಜ್ಜನ ಮಠ, ಕೋಡಿಕೊಪ್ಪ



ನವಿಲುಗುಂದದ ಗವಿಮಠ, ನವಿಲುಗುಂದ



ರೋಣದ ಗುಲಗಂಜಿ ಮಠ, ರೋಣ



ಹೊಸಳ್ಳಿಯ ಬೂದಿಮಹಾಂತ ಮಠ, ಹೊಸಳ್ಳಿ



ಬೆಳಗಾವಿಯ ರುದಾಕ್ಷಿಮಠ, ಬೆಳಗಾವಿ



ಧಾರವಾಡದ ಮೃತ್ಯುಂಜಯ ಮಠ, ಧಾರವಾಡ



